॥ ಶ್ರೀಃ ॥

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

(ಸಂ. ೩೨)

# ಶ್ರೀ ಶಿವರಹಸ್ಯ

ಸಂಪುಟ ೧೬

ಅನುವಾದಕ

ಆಸ್ಥಾನ ವಿದ್ವಾನ್ ಎಚ್. ಗಂಗಾಧರಶಾಸ್ತ್ರೀ

ಧರ್ಮಪ್ರಕಾಶ ಡಿ. ಬನುಮಯ್ಯನವರ ಹೈಸ್ಕೂಲ್ ಅಧ್ಯಾಪಕ

ಮೈಸೂರು

K 294.5925
SSRS
V.16

ಮೈಸೂರು

ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

1949

|| ಶ್ರೀಃ ||

ಶ್ರೀ ಜಯಚಾಮರಾಜೇಂದ್ರಗ್ರಂಥರತ್ನಮಾಲಾ

(ಸಂ. ೩೨)

# ಶ್ರೀಶಿವರಹಸ್ಯ

ಸಂಪುಟ ೧೬



ಅನುವಾದಕ

ಆಸ್ಥಾನವಿದ್ವಾನ್ ಎಚ್. ಗಂಗಾಧರಶಾಸ್ತ್ರೀ

ಧರ್ಮಪ್ರಕಾಶ ಡಿ. ಬನುಮಯ್ಯನವರ ಹೈಸ್ಕೂಲು ಅಧ್ಯಾಪಕ

ಮೈಸೂರು



ಮೈಸೂರು

ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

1949

# ಮುನ್ನುಡಿ

ಶಿವರಹಸ್ಯದಲ್ಲಿ ಈ ಏಳನೆಯ ಅಂಶವು ಬಹು ವಿಸ್ತಾರವಾದುದು. ಸುಮಾರು ಹದಿನೈದುಸಾವಿರ ಶ್ಲೋಕಗಳನ್ನೊಳಗೊಂಡು, ಪೂರ್ವೋತ್ತರ ಭಾಗಗಳಾಗಿ ವಿಭಾಗಿಸಲ್ಪಟ್ಟಿದೆ. ಪೂರ್ವಭಾಗದಲ್ಲಿ ಅಧ್ಯಾಯಗಳ ಸಂಖ್ಯೆ ಕಮ್ಮಿಯಿದ್ದರೂ, ಕೆಲವು ಅಧ್ಯಾಯಗಳು ಸಹಸ್ರಾರು ಶ್ಲೋಕಗಳಿಂದ ತುಂಬಿವೆ. ಈ ಅಂಶಪೂರ್ತಿ ಕಾಶೀಕ್ಷೇತ್ರದ ಮಹಿಮೆ, ಅಲ್ಲಿರುವ ದೇವತಾ ಸ್ಥಾನಮಾನಗಳು, ಕಾಶಿಯಲ್ಲಿರುವ ಮಣಿಕರ್ಣಿಕೆಯೇ ಮೊದಲಾದ ತೀರ್ಥಗಳ ಉತ್ಪತ್ತಿಕ್ರಮ ಮತ್ತು ಪ್ರಾಶಸ್ತ್ಯ, ಕಾಶೀವಾಸದ ಶ್ರೇಷ್ಠತೆ, ಕಾಶೀಕ್ಷೇತ್ರವಾಸದ ನಿಯಮಗಳು, ಈ ವಿಷಯಗಳೇ ವಿಸ್ತಾರವಾಗಿ ವರ್ಣಿಸಲ್ಪಟ್ಟಿವೆ. ಮಾನವನು ತನ್ನ ಜೀವಮಾನದಲ್ಲಿ ಒಂದುಬಾರಿಯಾದರೂ ಕಾಶೀಕ್ಷೇತ್ರವನ್ನು ದರ್ಶನಮಾಡದಿದ್ದರೆ ಅವನ ಜನ್ಮವು ವ್ಯರ್ಥವೇ ಸರಿ ಎಂಬ ಭಾವವು ಈ ಗ್ರಂಥ ಭಾಗವನ್ನೋದುವುದರಿಂದ ತಿಳಿದುಬರುವುದು. ಕಾಶೀಯಾತ್ರೆಯನ್ನು ವಿಧಿವತ್ತಾಗಿ ನೆರವೇರಿಸುವ ಕ್ರಮ, ಭೈರವಾರ್ಚನೆಯಲ್ಲಿ ಹೆಚ್ಚು ಶ್ರದ್ಧೆವಹಿಸಬೇಕಾದ ಕಾರಣ, ಇವು ಇಲ್ಲಿ ವಿಶೇಷವಾಗಿ ಗಮನಿಸಬೇಕಾದ ಅಂಶಗಳು. ಹತ್ತನೆಯ ಅಧ್ಯಾಯದಲ್ಲಿ ಬ್ರಹ್ಮ, ವಿಷ್ಣುರಚಿತವಾದ ಶಿವಸ್ತೋತ್ರವು ಬಹ್ವರ್ಥಗರ್ಭಿತವಾಗಿ ಹೇಳಲ್ಪಟ್ಟಿರುವುದು. ಬ್ರಹ್ಮಕೃತವಾದ ಶಿವಸ್ತುತಿಯಲ್ಲಿ ರುದ್ರಾಧ್ಯಾಯದ ಸಾರವೂ, ವಿಷ್ಣುಕೃತವಾದ ಶಿವಸ್ತವದಲ್ಲಿ ಉಪನಿಷತ್ಸಾರವೂ ಅಡಕವಾಗಿದೆ. ಇನ್ನು ಶಿವರಾತ್ರೀವ್ರತ, ಕಾಲಾಷ್ಟಮೀವ್ರತ, ಪ್ರದೋಷಕಾಲದ ಶಿವಾರ್ಚನೆ ಇವು ಎಂದಿನಂತೆ ವಿಶೇಷ ಫಲಪ್ರದಗಳಾಗಿ ನಿರೂಪಿತಗಳಾಗಿವೆ. ಕಾಶೀಕ್ಷೇತ್ರದಲ್ಲಿ ವಿಶ್ವೇಶ್ವರಲಿಂಗದ ಅರ್ಚನೆಯಿಂದ ಎಷ್ಟು ಸುಕೃತವು ಲಬ್ಧವಾಗುವುದೋ ಅಷ್ಟೇ ಮಹಿಮಾದಿಗಳು ಕಾಲಭೈರವಾರ್ಚನೆಯಿಂದಲೂ ಲಭಿಸುವುದು ಎಂಬಂಶವು ನಮಗೆ ಈ ಗ್ರಂಥಭಾಗದಿಂದ ವಿಶೇಷವಾಗಿ ತಿಳಿದುಬರುವುದು. ಮಹೇಶ್ವರನು 'ಭಕ್ತವತ್ಸಲನು', 'ಲೋಕತ್ರಾಣಪರಾಯಣನು' ಎಂದು ಭಾವಿಸಿ ಸರ್ವರೂ ಸರ್ವೇಶ್ವರನ ಆರಾಧನೆಯಲ್ಲಿ ತೊಡಗಿ, ಅದರಿಂದ ಐಹಿಕಾಮುಷ್ಮಿಕ ಸೌಖ್ಯಗಳನ್ನು ಗಳಿಸಬೇಕೆಂಬುದೇ ಈ ಗ್ರಂಥಕಾರರ ಮುಖ್ಯೋದ್ದೇಶವಾಗಿದೆ.

ಆಸ್ತಿಕವೃಂದಕ್ಕೆ ಅತ್ಯವಶ್ಯಕವಾಗಿ ಬೇಕಾಗುವ ಇಂತಹ ಗ್ರಂಥರತ್ನಗಳ ಅನುವಾದ ಮತ್ತು ಮುದ್ರಣಾದಿ ಕಾರ್ಯಗಳಿಗೆ ಸರ್ವಸಹಾಯವನ್ನೂ ಒದಗಿಸಿ ನಡೆಸುತ್ತಿರುವ ನಮ್ಮನ್ನಾಳುವ ಶ್ರೀಮನ್ಮಹಾರಾಜ **ಶ್ರೀಜಯಚಾಮರಾಜ ಒಡೆಯರ್ ಬಹದ್ದೂರ್ ಜಿ.ಸಿ.ಬಿ., ಜಿ.ಸಿ.ಎಸ್.ಐ.,** ಮಹಾಪ್ರಭುಗಳವರಿಗೂ ಅವರ ಕುಟುಂಬವರ್ಗಕ್ಕೂ ಸರ್ವೇಶ್ವರನು ಆಯುರಾರೋಗ್ಯಸತ್ಸಂತಾನಾದಿಗಳನ್ನು ಕರುಣಿಸಿ ಸಲಹಲೆಂದು ನಾನು ಭಗವಂತನಲ್ಲಿ ಪ್ರಾರ್ಥಿಸುತ್ತೇನೆ.

ಶ್ರೀ ವಿರೋಧಿ ಸಂವತ್ಸರದ
ಜ್ಯೇಷ್ಠ ಕೃಷ್ಣ ಸಪ್ತಮೀ
ಶುಕ್ರವಾರ
ತಾ॥ 17—6—1949.

ಸಜ್ಜನವಿಧೇಯ,
**ಹೊನ್ನೇನಹಳ್ಳಿ ಗಂಗಾಧರಶಾಸ್ತ್ರೀ,**
ಆಸ್ಥಾನವಿದ್ವಾನ್, ಮೈಸೂರು.

# ಶ್ರೀಶಿವರಹಸ್ಯದ ಏಳನೆಯ ಅಂಶದ ಹನ್ನೊಂದು ಅಧ್ಯಾಯಗಳ ವಿಷಯಾನುಕ್ರಮಣಿಕಾ

### ಏಳನೆಯ ಅಧ್ಯಾಯ



### ಎಂಟನೆಯ ಅಧ್ಯಾಯ



### ಒಂಬತ್ತನೆಯ ಅಧ್ಯಾಯ



### ಹತ್ತನೆಯ ಅಧ್ಯಾಯ



### ಹನ್ನೊಂದನೆಯ ಅಧ್ಯಾಯ

॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಉಗ್ರಾಖ್ಯೇ

### ಸಪ್ತಮಾಂಶೇ ಪೂರ್ವಾರ್ಧೇ

## ಪ್ರಥಮೋಽಧ್ಯಾಯಃ

॥ ಋಷಯ ಊಚುಃ ॥

ಸೂತ ವೇದಾರ್ಥತತ್ತ್ವಜ್ಞ ಶಿವಧ್ಯಾನಪರಾಯಣ ।
ಮುಕ್ತ್ಯುಪಾಯಂ ವದಾಸ್ಮಭ್ಯೋ ಕೃಪಾಲೋ ಮುನಿಸತ್ತಮ ॥೧॥

ಕಃ ಸೇವ್ಯಃ ಸರ್ವದೇವೇಷು ಕೋ ವಾ ಜಪ್ಯೋ ಮನುಃ ಸದಾ ।
ಸ್ಥಾತವ್ಯಂ ಕುತ್ರ ವಾ ನಿತ್ಯಂ ಕಿಂ ವಾ ಸರ್ವಾರ್ಥಸಾಧಕಂ ॥೨॥

---

## ಶ್ರೀಶಿವರಹಸ್ಯದ ಏಳನೆಯ ಅಂಶದ ಪೂರ್ವಾರ್ಧದಲ್ಲಿ ಮೊದಲನೆಯ ಅಧ್ಯಾಯ

ವಾಜಶ್ರವಸರೇ ಮೊದಲಾದ ಮಹರ್ಷಿಗಳು ಸೂತಮಹಾಮುನಿಯನ್ನು ಕುರಿತು—"ವೇದಾರ್ಥಗಳ ಮರ್ಮವನ್ನು ಚೆನ್ನಾಗಿ ತಿಳಿದು, ಯಾವಾಗಲೂ ಆ ಪರಶಿವನ ಧ್ಯಾನದಲ್ಲಿಯೇ ತತ್ಪರನಾಗಿರುವ ಮುನಿಶ್ರೇಷ್ಠನಾದ ಓ ಸೂತಮುನಿಯೇ, ದಯಾಳುವಾದ ನೀನು, ನಮ್ಮ ಮೇಲೆ ದಯೆಯಿಟ್ಟು, ಸುಲಭವಾಗಿ ಮುಕ್ತಿ ದೊರೆಯುವ ಉಪಾಯವನ್ನು ತಿಳಿಸುವನಾಗು. ಎಲ್ಲಾ ದೇವತೆಗಳಲ್ಲಿಯೂ ವಿಶೇಷ ಪೂಜಾರ್ಹನಾದವನು ಯಾರು ? ಯಾವ ಮಂತ್ರವು ಜಪಿಸಲುಯೋಗ್ಯವಾದುದು ? ಯಾವ ಕ್ಷೇತ್ರದಲ್ಲಿ ಪ್ರತಿನಿತ್ಯವೂ ನೆಲಸುವುದರಿಂದ ಮಾನವನಿಗೆ ಶ್ರೇಯಸ್ಸುಂಟಾಗುವುದು ? ಮುನಿವರ್ಯನೇ, ಯಾವುದರಿಂದ ಸಕಲ ಇಷ್ಟಾರ್ಥಗಳೂ ಸಿದ್ಧಿಸುವುವು ? ಅದನ್ನು ನಮಗೆ ಅಪ್ಪಣೆಕೊಡಿಸಬೇಕು." ಎಂದು ಪ್ರಾರ್ಥಿಸಿದರು. ॥೧-೨॥

|| ಸೂತ ಉವಾಚ ||

ಧನ್ಯಾನ್ಮನ್ಯಾಮಹೇ ನೂನಮನನ್ಯಶರಣಾನ್ಮುನೀನ್ ।
ವನ್ಯಾಶಿನೋ ವನೇ ವಾಸಾನ್ನ್ಯಸ್ತಮನ್ಯೂನಕಲ್ಮಷಾನ್ ॥೩॥

ಭವದ್ಭಿಃ ಸರ್ವವೇದಾರ್ಥತತ್ವಂ ಜ್ಞಾತಮಕಲ್ಮಷೈಃ ।
ಪರಾತ್ಪರತರಃ ಶರ್ವಃ ಸರ್ವದಾ ಪೂಜ್ಯತೇ ಧಿಯಾ ॥೪॥

ಭವದ್ಭಿಃ ಸರ್ವವೇದಾರ್ಥೋ ಜ್ಞಾತ ಏವಾಸ್ತಿ ಯದ್ಯಪಿ ।
ತಥಾಪಿ ಕಿಂಚಿದ್ವಕ್ಷ್ಯಾಮಿ ಯಥಾಜ್ಞಾತಂ ಮಯಾ ತಥಾ ॥೫॥

ಪುರಾ ಕೈಲಾಸಶಿಖರೇ ಸುಖಾಸೀನಂ ಜಗತ್ಪ್ರಭುಂ ।
ವೇದಾಂತವೇದ್ಯಮೀಶಾನಂ ಶಂಕರಂ ಲೋಕಶಂಕರಂ ॥೬॥

ವಿಶ್ವತಶ್ಚಕ್ಷುಷಂ ದೇವಂ ವಿಶ್ವತೋ ಮುಖಮವ್ಯಯಂ ।
ವಿಶ್ವತೋಬಾಹುಮಾರಾಧ್ಯಂ ವಿಶ್ವತಃ ಪಾದಮೀಶ್ವರಂ ॥೭॥

---

ಆಗ ಸೂತಮಹರ್ಷಿಗಳು ಋಷಿಗಳಿಗೆ ಈ ರೀತಿ ನುಡಿದರು--ತಪಸ್ವಿಗಳೇ, ಕಾಡಿನಲ್ಲಿ ಬೆಳೆಯುವ ಗೆಡ್ಡೆಗೆಣಸು, ಹಣ್ಣುಹಂಪಲುಗಳನ್ನು ತಿಂದು, ಆ ಕಾಡಿನಲ್ಲಿಯೇ ಆನಂದದಿಂದ ತಪಸ್ಸನ್ನಾಚರಿಸುತ್ತಾ, ಸಕಲ ಪಾಪಗಳನ್ನು ಕಳೆದುಕೊಂಡು, ಪರಶಿವನನ್ನು ಬಿಟ್ಟು ಮತ್ತಾರನ್ನೂ ಆಶ್ರಯಿಸದೇ ಇರುವ ನೀವೇ ಧನ್ಯರು. ||೩||

ಎಲೈ ಋಷಿಗಳಿರಾ! ನಿಷ್ಕಲ್ಮಷಾಂತರಂಗವುಳ್ಳ ನೀವೆಲ್ಲರೂ ವೇದಾರ್ಥಗಳ ತತ್ವವೇನೆಂಬುದನ್ನು ತಿಳಿದೇ ಇರುವಿರಿ. ಅಲ್ಲದೇ ಶ್ರೇಷ್ಠರೆನಿಸಿದವರಲ್ಲಿಯೂ ಅತಿಶ್ರೇಷ್ಠನಾದ ಆ ಪರಶಿವನನ್ನು ಯಾವಾಗಲೂ ಮನಃಪೂರ್ವಕವಾಗಿ ಪೂಜಿಸುತ್ತಿರುವಿರಿ. ಆದುದರಿಂದ ನಾನು ನಿಮಗೆ ಈ ವಿಷಯದಲ್ಲಿ ಹೆಚ್ಚಿಗೆ ಹೇಳಬೇಕಾದುದೇನೂ ತೋರುವುದಿಲ್ಲ. ಆದರೂ, ನಾನು ತಿಳಿದಿರುವಷ್ಟನ್ನು ನಿಮಗೆ ಉಪದೇಶ ಮಾಡುವೆನು, ಲಾಲಿಸಿರಿ ಎಂದು ಸೂತಮುನಿಗಳು ಕಥೆಯನ್ನು ಮುಂದುವರಿಸಿದರು. ||೪-೫||

ಹಿಂದೆ ಒಂದುಸಾರಿ ಕೈಲಾಸಪರ್ವತದಲ್ಲಿ ಸುಖವಾಗಿ, ಆನಂದಪರಿಪೂರ್ಣನಾಗಿ ಕುಳಿತಿದ್ದ ಜಗದೊಡೆಯನೂ, ವೇದಾಂತಗಳಿಗೆ ಗೋಚರನಾಗತಕ್ಕವನೂ, ಸುಖಕರನೂ, ಜಗನ್ಮಂಗಳಕರನೂ, ಬ್ರಹ್ಮಾಂಡವನ್ನೆಲ್ಲಾ ತನ್ನ ನೇತ್ರಗಳಿಂದ

ನಿಷ್ಕಲಂ ನಿರ್ಗುಣಂ ಶಾಂತಂ ನಿರವದ್ಯಮನಾಮಯಂ ।
ನಿಷ್ಪ್ರಪಂಚಂ ನಿರಾಕಾರಂ ನಿರ್ಮಲಂ ನಿರುಪಾಧಿಕಂ ॥೮॥

ಶಿವಂ ಪ್ರಸನ್ನವದನಂ ಸರ್ವಾಭರಣಭೂಷಿತಂ ।
ಗೌರೀಭೂಷಿತವಾಮಾಂಗಂ ಬ್ರಹ್ಮವಿಷ್ಣ್ವಾದಿಸೇವಿತಂ ॥೯॥

ಅಪ್ರಮೇಯಂ ಜಗಜ್ಜನ್ಮಸ್ಥಿತಿಸಂಹಾರಕಾರಣಂ ।
ಸೋಮಸೂರ್ಯಾಗ್ನಿನಯನಂ ಸೋಮಾರ್ಧಕೃತಶೇಖರಂ ॥೧೦॥

ದಿವ್ಯಚಂದನಲಿಪ್ತಾಂಗಂ ನವಬಿಲ್ವದಲಾರ್ಚಿತಂ ।
ವ್ಯಾಘ್ರಚರ್ಮಪರೀಧಾನಂ ಅನಂತೇಂದುರವಿಪ್ರಭಂ ॥೧೧॥

---

ನೋಡಬಲ್ಲವನೂ, ದಿವ್ಯ ತೇಜಸ್ಸಿನಿಂದ ಶೋಭಿಸುತ್ತಿರುವವನೂ, ಸರ್ವತೋಮುಖವುಳ್ಳವನೂ, ನಾಶರಹಿತನೂ, ಸರ್ವವ್ಯಾಪಿಯಾದ ಬಾಹುಗಳುಳ್ಳವನೂ, ಎಲ್ಲಾ ಕಡೆಯಲ್ಲಿಯೂ ಕಾಲುಗಳುಳ್ಳವನೂ (ಸರ್ವವ್ಯಾಪಿಯೂ ಎಂದರ್ಥ) ಅಷ್ಟೈಶ್ವರ್ಯಪರಿಪೂರ್ಣನೂ ಆದ ಪರಮಶಿವನನ್ನು ಪೂಜ್ಯನಾದ ಕುಮಾರ ಸ್ವಾಮಿಯು ನೋಡಿದನು. ||೭||

ಪಾಪರಹಿತನೂ, ಗುಣಶೂನ್ಯನೂ, ಶಾಂತಸ್ವಭಾವನೂ, ಸಾಧುಶೀಲನೂ, ಆದ ಪರಮೇಶ್ವರನು ರೋಗರುಜಿನಗಳಿಗೆ ಸಿಕ್ಕದವನು. ಸ್ಥಾವರಜಂಗಮಾತ್ಮಕವಾದ ಈ ಪ್ರಪಂಚದ ಸಂಬಂಧದಿಂದ ದೂರನಾದವನು. ಆಕಾರವಿಲ್ಲದವನು, ಪರಿಶುದ್ಧನು, ಕಾರಣರಹಿತನು, ಸಾಧುಗಳ ಮನಸ್ಸಿನಲ್ಲಿ ಸದಾ ನೆಲಸಿರುವವನು ಮತ್ತೂ ಶುಭಕರನು, ನಿರ್ಮಲವಾದ ಮುಖವುಳ್ಳವನು, ಸಕಲ ಆಭರಣಗಳಿಂದಲೂ ಅಲಂಕೃತನು, ಶುಭ್ರವಾದ ದೇಹಕಾಂತಿಯುಳ್ಳ ಗಿರಿಜಾದೇವಿಯಿಂದ ಅಲಂಕರಿಸಲ್ಪಟ್ಟ ತನ್ನ ಶರೀರದ ಎಡಪಾರ್ಶ್ವವುಳ್ಳವನು, (ಅರ್ಧನಾರೀಶ್ವರನು) ಬ್ರಹ್ಮ, ವಿಷ್ಣು ಮುಂತಾದ ದೇವತೆಗಳಿಂದ ಸೇವಿಸಲ್ಪಡುವವನು. ||೮-೯||

ಅಳತೆಗೆ (ಪ್ರಮಾಣಕ್ಕೆ) ಸಿಗದವನು, ಪ್ರಪಂಚದ, ಸೃಷ್ಟಿ, ಸ್ಥಿತಿ, ಸಂಹಾರ ರೂಪವಾದ ಕಾರ್ಯಗಳಿಗೆ ಕಾರಣಭೂತನು. ಚಂದ್ರ, ಸೂರ್ಯರನ್ನೇ ಕಣ್ಣುಗಳನ್ನಾಗಿ ಧರಿಸಿರುವವನು, ಅರ್ಧಚಂದ್ರನನ್ನು ತಲೆಯಲ್ಲಿ ಧರಿಸಿ ಶೋಭಿಸುತ್ತಿರುವವನು. ದಿವ್ಯವಾದ ಚಂದನಗಂಧದಿಂದ ಲೇಪಿಸಲ್ಪಟ್ಟ ಅವಯವಗಳುಳ್ಳವನು, ಹೊಸ ಚಿಗುರಾದ

ನಾನಾಮಣಿಗಣಾಕೀರ್ಣಕಿರೀಟಕಟಕಾವೃತಂ ।
ದಯಾಸುಧಾರ್ದ್ರನಯನಂ ವರದಾಭಯಪಾಣಿನಂ ॥೧೨॥

ನಿತ್ಯಂ ಸಂತೋಷಪೂರ್ಣಾಂಗಮುಮಾಲಿಂಗಿತವಿಗ್ರಹಂ ।
ವಿಲೋಕ್ಯಾತೀವ ಸಂತುಷ್ಟಃ ಷಣ್ಮುಖಃ ಸಾಂಬಮೀಶ್ವರಂ ॥೧೩॥

ಮತ್ವಾ ಕೃತಾರ್ಥಮಾತ್ಮಾನಂ ಪ್ರಣಿಪತ್ಯ ಸದಾಶಿವಂ ।
ಪಪ್ರಚ್ಛ ಸರ್ವಲೋಕಾನಾಂ ಮುಕ್ತ್ಯುಪಾಯಂ ಕೃತಾಂಜಲಿಃ॥೧೪॥

॥ ಶ್ರೀಸ್ಕಂದ ಉವಾಚ ॥

ವಿಶ್ವೇಶ್ವರ ಮಹಾದೇವ ವಿಷ್ಣುಬ್ರಹ್ಮಾದಿವಂದಿತ ।
ದೇವಾನಾಂ ಮಾನವಾನಾಂ ಚ ಕಿಂ ಮೋಕ್ಷಸ್ಯಾಸ್ತಿ ಸಾಧನಂ ॥೧೫॥

---

ಬಿಲ್ವಪತ್ರೆಗಳಿಂದ ಪೂಜಿಸಲ್ಪಡುವವನು, ಹುಲಿಯ ಚರ್ಮವನ್ನು ಹೊದೆದಿರುವವನು, ಅನೇಕಕೋಟಿ ಸೂರ್ಯರ ಕಾಂತಿಯುಳ್ಳವನು. ॥೧೦-೧೧॥

ಮಹಾದೇವನು ನಾನಾರತ್ನಸಮೂಹಗಳಿಂದ ವ್ಯಾಪ್ತವಾದ ಕಿರೀಟ ಮತ್ತು ಕಡಗ ಇವುಗಳನ್ನು ಧರಿಸಿರುವವನು. ದಯೆಯೆಂಬ ಅಮೃತದಿಂದ ತೊಯ್ದು, ಅದೇ ದಯಾಮೃತವನ್ನು ತನ್ನ ಭಕ್ತರಮೇಲೆ ಬೀರುತ್ತಿರುವ ಕಣ್ಣುಗಳುಳ್ಳವನು. ವರದ (ವರವನ್ನು ಕೊಡುವುದು), ಅಭಯ (ಶರಣಾಗತರಾದವರಿಗೆ ಅಭಯದಾನಮಾಡುವುದು ಅಂದರೆ ನೀವೇನೂ ಭಯಪಡಬೇಡಿ ನಾನು ನಿಮ್ಮನ್ನು ರಕ್ಷಿಸುವೆನೆಂದು ಭರವಸೆ ಕೊಡುವುದು) ಈ ಅರ್ಥಸೂಚಕವಾದ ಹಸ್ತಮುದ್ರೆಯುಳ್ಳವನು. ಯಾವಾಗಲೂ, ಆನಂದಪೂರ್ಣವಾದ ದೇಹದಿಂದ ಶೋಭಿಸುವವನು, ಉಮಾದೇವಿಯಿಂದ ಆಲಿಂಗಿಸಲ್ಪಟ್ಟ ಶರೀರವುಳ್ಳವನು. ಇಂತಹ ಗಿರಿಜಾಸಮೇತನಾಗಿರುವ ಮಹೇಶ್ವರನನ್ನು ನೋಡಿ, ಷಣ್ಮುಖಸ್ವಾಮಿಯು ಅತ್ಯಂತ ಸಂತೋಷಹೊಂದಿ, ಆ ಸದಾಶಿವನಿಗೆ (ಯಾವಾಗಲೂ ಮಂಗಳಕರನಾದವನಿಗೆ) ನಮಸ್ಕಾರಮಾಡಿ, ಸಕಲ ಲೋಕಕ್ಕೂ ಮುಕ್ತಿಯುಂಟಾಗುವ ಉಪಾಯವನ್ನು ತಿಳಿಯಲು, ಕೈಜೋಡಿಸಿ, ಈರೀತಿ ಪ್ರಶ್ನೆ ಮಾಡಿದನು. ॥೧೨-೧೩-೧೪॥

"ಎಲೈ ಜಗದೊಡೆಯನಾದ ಮಹಾದೇವನೇ! ವಿಷ್ಣು, ಬ್ರಹ್ಮ, ಮೊದಲಾದ ದೇವತೆಗಳಿಂದ ನಮಸ್ಕರಿಸಲ್ಪಡುವ ಸ್ವಾಮಿಯೇ! ದೇವತೆಗಳೂ,

ತವ ನಾಮಾನ್ಯನಂತಾನಿ ಸಂತಿ ಯದ್ಯಪಿ ಶಂಕರ ।
ತಥಾಪಿ ತಾನಿ ದಿವ್ಯಾನಿ ನ ಜ್ಞಾಯಂತೇ ಮಯಾಧುನಾ ॥೧೬॥

ಪ್ರಿಯಾಣಿ ಶಿವನಾಮಾನಿ ಸರ್ವಾಣಿ ಶಿವ ಯದ್ಯಪಿ ।
ತಥಾಪಿ ಕಾನಿ ರಮ್ಯಾಣಿ ತೇಷು ಪ್ರಿಯತಮಾನಿ ತೇ ॥೧೭॥

ತಾನಿ ಸರ್ವಾರ್ಥದಾನ್ಯದ್ಯ ಕೃಪಯಾ ವಕ್ತುಮರ್ಹಸಿ ।
ಯನ್ನಾಮಸ್ಮರಣಾದೇವ ಸದ್ಯೋ ಮುಚ್ಯೇತ ಪಾತಕೈಃ ॥೧೮॥

ರಸನಾ ರಸಸಾರಜ್ಞಾ ತ್ವನ್ನಾಮಾಮೃತಪಾಯಿನೀ ।
ಯಸ್ಯಾಸ್ತಿ ಸ ಪುಮಾನ್ಧನ್ಯೋ ಮಾನ್ಯೋ ಹಿ ಮನುಜೈರಪಿ ॥೧೯॥

ಜನ್ಮಾಂತರಸಹಸ್ರೇಷು ತಪ್ತಂ ಯದಿ ತಪಸ್ತದಾ ।
ತ್ವನ್ನಾಮಸ್ಮರಣಾಸಕ್ತಂ ಚಿತ್ತಂ ಜಂತೋಃ ಪ್ರಜಾಯತೇ ॥೨೦॥

---

ಮಾನವರೂ, ಸುಲಭವಾಗಿ ಮೋಕ್ಷವನ್ನು ಪಡೆಯಬೇಕಾದರೆ ಯಾವ ಸಾಧನ ವೇರ್ಪಟ್ಟಿರುವುದು ? ॥೧೫॥

ಜಗನ್ಮಂಗಳಕರನಾದ ಸ್ವಾಮಿಯೇ, ನಿನಗೆ ಅನಂತವಾದ ಹೆಸರುಗಳಿರುವುವು. ಅಂತಹ ದಿವ್ಯವಾದ ನಿನ್ನ ನಾಮುಗಳನ್ನು ನನಗೆ ಈಗ ತಿಳಿಯಲು ಸಾಧ್ಯವಾಗಿಲ್ಲ. ॥೧೬॥

ಪರಶಿವನೇ! ನಿನ್ನ ನಾಮುಗಳೆಲ್ಲವೂ ಪ್ರಿಯಕರಗಳೇ ಆಗಿರುವುವು. ಆದರೂ ಅವುಗಳಲ್ಲಿ ಮನೋಹರವಾಗಿ, ನಿನಗೆ ಹೆಚ್ಚು ಪ್ರೀತಿಕರವಾದ ನಾಮುಗಳು ಯಾವುವು ? ಯಾವ ನಿನ್ನ ದಿವ್ಯನಾಮುಸ್ಮರಣಮಾತ್ರದಿಂದಲೇ ಮಾನವನ ಸಕಲ ಪಾಪಗಳೂ ತೊಲಗುವುವೋ, ಅಂತಹ ಸಕಲ ಇಷ್ಟಾರ್ಥಗಳನ್ನೂ ಕೊಡುವ ನಿನ್ನ ನಾಮುಗಳನ್ನು ದಯೆಯಿಟ್ಟು ನನಗೆ ತಿಳಿಸುವನಾಗು ಸ್ವಾಮಿ ! ॥೧೭-೧೮॥

ರಸಭರಿತ ಪದಾರ್ಥಗಳ ಸಾರವನ್ನು ಅರಿಯಲು, ಸಮರ್ಥವಾದ ಯಾವನ ನಾಲಿಗೆಯು, ನಿನ್ನ ದಿವ್ಯನಾಮುಗಳೆಂಬ ಅಮೃತವನ್ನು ಪಾನಮಾಡುವುದೋ ಆತನೇ ಧನ್ಯನು. ಅವನೇ ಎಲ್ಲಾ ಮಾನವರಿಂದಲೂ ಮಾನ್ಯನೆನಿಸುವನು. ॥೧೯॥

ಸಾವಿರಾರು ಜನ್ಮಗಳಲ್ಲಿ ತಪಸ್ಸುಮಾಡಿದ್ದರೆ ಮಾತ್ರ, ಪ್ರಾಣಿಗಳಿಗೆ ನಿನ್ನ ದಿವ್ಯನಾಮುಸ್ಮರಣೆಯಲ್ಲಿ ಮನಸ್ಸುಂಟಾಗುತ್ತದೆ. ಅಂತಹವರೇ ಧನ್ಯರಲ್ಲವೇ ! ॥೨೦॥

ಮಹೇಶನಾಮಾಮೃತದಿವ್ಯಧಾರಾ
ಪರಿಪ್ಲುತಾಂಗೋ ದವಮಧ್ಯಗೋಽಪಿ ।
ನ ಶೋಕಮಾಪ್ನೋತಿ ನರೋ ಯತೋಽಹಂ
ಸಂರಕ್ಷಿತೋ ವಹ್ನಿಗತಃ ಶಿವೇನ ॥೨೦॥

ಯತೋ ವಿಭೂತಿಕವಚಾಃ ಶಿವನಾಮಾಸ್ತ್ರಪಾಣಯಃ ।
ಚತುರ್ಭಿರೇವ ಯಾಮೀಯೈಶ್ಚಕ್ರುರ್ಯುದ್ಧಂ ಪುರಾ ಮುದಾ ॥೨೧॥

ಬ್ರಹ್ಮಹತ್ಯಾಸಹಸ್ರಾಣಿ ಪುರಾ ಕೃತ್ವಾಪಿ ಪುಲ್ಕಸಃ ।
ಶಿವೇತಿನಾಮ ವಿಮಲಂ ಶ್ರುತ್ವಾ ಮೋಕ್ಷಂ ಗತಃ ಪುರಾ ॥೨೩॥

ಏತೇಽಪಿ ಪ್ರಮಥಾಃ ಶುದ್ಧಾಃ ಶಿವನಾಮಾಮೃತಾಶನಾಃ ।
ಇಂದ್ರಾದ್ಯರ್ಚಿತಪಾದಾಬ್ಜಾ ವಸಂತಿ ಶಿವಸನ್ನಿಧೌ ॥೨೪॥

---

ಬೆಂಕಿಯ ಮಧ್ಯದಲ್ಲಿ (ಅಗ್ನಿನಕ್ಷತ್ರಗಳಾದ ಕೃತ್ತಿಕಾಮುಖದಲ್ಲಿ) ಸಿಕ್ಕಿದ್ದ ನನ್ನನ್ನು ಮಹೇಶ್ವರನಾದ ನೀನು, ನಿನ್ನ ದಿವ್ಯನಾಮಗಳನ್ನು ಸ್ಮರಣೆಮಾಡಿದುದರಿಂದ ಕಾಪಾಡಿರುವೆ. ಆದುದರಿಂದ ಮಹಾದೇವನ ದಿವ್ಯನಾಮಾಮೃತಧಾರೆಯಿಂದ ಪೂರ್ಣನಾದ ಮಾನವನು ಕಾಡುಗಿಚ್ಚಿನ ಮಧ್ಯದಲ್ಲಿ ಸಿಕ್ಕಿದ್ದರೂ, ಮಹೇಶನ ಅನುಗ್ರಹದಿಂದ ಯಾವ ವಿಧವಾದ ದುಃಖವನ್ನೂ ಹೊಂದುವುದಿಲ್ಲ. ॥೨೦॥

ಅಸ್ತ್ರಗಳನ್ನು ಕೈಯಿಂದ ಹಿಡಿದು, ಪರಶಿವನ ಭಕ್ತರು ಎಷ್ಟೋವೇಳೆ ಕೇವಲ ನಾಲ್ಕೇ ಜಾವಗಳಲ್ಲಿಯೇ ಸಂತೋಷದಿಂದ ಯುದ್ಧಮಾಡಿ ವಿಜಯಶೀಲರಾಗಿರುವರು. ॥೨೧॥

ಹಿಂದೆ ಪುಲ್ಕಸಜಾತಿಯವನು (ಅಂತ್ಯಜನು) ಸಾವಿರಾರು ಬ್ರಹ್ಮಹತ್ಯೆಗಳನ್ನು ಮಾಡಿದ್ದರೂ, ಆ 'ಶಿವ' ಎಂಬ ಪಾವನವಾದ ಹೆಸರನ್ನು ಕೇಳಿ, ಮೋಕ್ಷವನ್ನು ಪಡೆದಿರುವನು. ॥೨೩॥

ಶಿವನ ದಿವ್ಯನಾಮಾಮೃತವನ್ನೇ ಪಾನಮಾಡುತ್ತಾ ಪರಿಶುದ್ಧರಾಗಿರುವ ಈ ಪ್ರಮಥಗಣಗಳೂ, ಇಂದ್ರನೇ ಮೊದಲಾದವರಿಂದ ಪೂಜಿಸಲ್ಪಟ್ಟ ಪಾದಕಮಲಗಳುಳ್ಳವರಾಗಿ, ಆ ಶಿವನ ಸನ್ನಿಧಿಯಲ್ಲಿಯೇ ವಾಸಮಾಡುತ್ತಿರುವರು. ॥೨೪॥

ಶಿವನಾಮ್ನೈವ ಸಂಸಾರಮಹಾರೋಗೈಕಶಾಮಕಂ ।
ನಾನ್ಯತ್ಸಂಸಾರರೋಗಸ್ಯ ಶಾಮಕಂ ದೃಶ್ಯತೇ ಮಯಾ ॥೨೫॥

ಶಿವ ಶಂಕರ ವಿಶ್ವೇಶ ಮಹಾದೇವೇತಿ ಯನ್ಮಯಾ ।
ಪೂರ್ವಮುಚ್ಚರಿತಂ ಯುದ್ಧೇ ಜಯಸ್ತೇನಾಽಭವನ್ಮಮ ॥೨೬॥

ಶಂಕರೇಶ ಮಹೇಶೇತಿ ನಾಮದಿವ್ಯಂ ಮಹಾವನೇ ।
ಪುರಾ ಶ್ರುತಂ ಪಿಶಾಚೇನ ತತಸ್ತಸ್ಮಾತ್ಸಮೋಚಿತಃ ॥೨೭॥

ಸಮಸ್ತವೇದವೇದಾಂತಸಾರಭೂತಂ ಶಿವಪ್ರದಂ ।
ಶಿವನಾಮಾಮೃತಂ ದಿವ್ಯಂ ಪೇಯಂ ಸರ್ವಾರ್ಥಸಾಧಕಂ ॥೨೮॥

ಯೇ ಸಂತತಂ ಶಂಕರಮಾದರೇಣ
ಮನಃಸರೋಜಾಸನಸಂನಿವಿಷ್ಟಂ ।

---

ಈ ಸಂಸಾರವೆಂಬ ದೊಡ್ಡ ರೋಗಕ್ಕೆ ಶಿವನಾಮವೊಂದೇ ಶಮನಮಾಡುವ ಔಷಧಿಯು. ಇದಲ್ಲದೇ ಈ ಘೋರವಾದ ಸಂಸಾರವೆಂಬ ವ್ಯಾಧಿಯನ್ನು ಬೇರೆ ಯಾವುದೂ ಶಾಂತಿಗೊಳಿಸಲಾರದೆಂದು ನಾನು ತಿಳಿದಿರುವೆನು. ॥೨೫॥

ಶಿವ, ಶಂಕರ, (ಮಂಗಳಕರನೇ ) ವಿಶ್ವೇಶ, (ಜಗದೊಡೆಯ) ಮಹಾದೇವ, (ದೇವತೆಗಳಲ್ಲೆಲ್ಲಾ ದೊಡ್ಡವನು) ಎಂದು ನಾನು ದೇವರಾಕ್ಷಸರ ಯುದ್ಧದಲ್ಲಿ ನಿನ್ನ ದಿವ್ಯನಾಮಗಳನ್ನು ಉಚ್ಚಾರಮಾಡಿದುದರಿಂದ ಆಗ ನನಗೆ ಆ ಯುದ್ಧದಲ್ಲಿ ಗೆಲವು ದೊರೆಯಿತು. ॥೨೬॥

ಹಿಂದೆ, ಒಂದು ದೊಡ್ಡ ಕಾಡಿನಲ್ಲಿ ಶಂಕರ, ಈಶ, ಮಹೇಶ, ಎಂಬ ನಿನ್ನ ಮೂರು ದಿವ್ಯನಾಮಗಳನ್ನು ಕೇಳಿದ ಮಾತ್ರದಿಂದಲೇ ಒಂದು ಪಿಶಾಚಿಗೆ ತನ್ನ ಪೈಶಾಚಜನ್ಮವು ತೊಲಗಿ ಉತ್ತಮವಾದ ಗತಿಯುಂಟಾಗಿದೆ. ॥೨೭॥

ಮಂಗಳಪ್ರದವಾದ ಈ ಶಿವನಾಮಗಳೆಂಬ ಅಮೃತವು, ಸಕಲ ವೇದ ಮತ್ತು ವೇದಾಂತಗಳ ಸಾರಭೂತವಾದ ಪದಾರ್ಥವಾಗಿರುವುದು. ಸಕಲ ಮನೋರಥ ಗಳನ್ನೂ ಸಲ್ಲಿಸುವ ಈ ನಿನ್ನ ದಿವ್ಯನಾಮಾಮೃತವು ಎಲ್ಲರಿಂದಲೂ ಪಾನಮಾಡಲು ಯೋಗ್ಯವಾಗಿರುವುದು. ॥೨೮॥

ತಮ್ಮ ಮನಸ್ಸೆಂಬ ಕಮಲದಲ್ಲಿ ನೆಲಸಿರುವ ಶಂಕರನನ್ನು ಯಾವಾಗಲೂ ಆದರದಿಂದ ಧ್ಯಾನಮಾಡುತ್ತಾ ಸತತವೂ ಆ ಶಂಭುವಿನ ಸ್ಮರಣೆಯಲ್ಲಿಯೇ ಅನುರಕ್ತ

ಧ್ಯಾಯಂತಿ ಶಂಭುಂ ಸ್ಮರಣಾನುರಕ್ತಾ
ಸ್ತ ಏವ ಧನ್ಯಾಃ ಶಿವಸಂಮತಾಶ್ಚ ॥೨೯॥

ಶಿವನಾಮಾಮೃತಾಪ್ಲುಷ್ಟರಸನಾಃ ಶಿವಪೂಜಕಾಃ ।
ಶಿವಧ್ಯಾನರತಾ ನಿತ್ಯಂ ಸಂತಿ ಧನ್ಯಾಃ ಕ್ವಚಿತ್ಕ್ವಚಿತ್ ॥೩೦॥

ಇತ್ಯುಕ್ತ್ವಾ ವೇಪಮಾನಾಂಗಃ ಪ್ರಣಿಪತ್ಯ ಪುನಃ ಶಿವಂ ।
ಕುಮಾರಃ ಪಾರ್ಶ್ವತಸ್ತಸ್ಥೌ ನತಮೂರ್ಧಾ ಕೃತಾಂಜಲಿಃ ॥೩೧॥

॥ ಸೂತ ಉವಾಚ ॥

ಕುಮಾರೋದೀರಿತಾಂ ವಾಚಂ ಸರ್ವಲೋಕಹಿತಾವಹಾಂ ।
ಶ್ರುತ್ವಾ ಪ್ರಸನ್ನವದನಃ ತಮುವಾಚ ಸದಾಶಿವಃ ॥೩೨॥

॥ ಶ್ರೀ ಶಿವ ಉವಾಚ ॥

ಸಾಧು ಸಾಧು ಕುಮಾರಾದ್ಯ ಸಮ್ಯಕ್ಪೃಷ್ಟಂ ತ್ವಯಾಽಧುನಾ ।
ಯದಿದಾನೀಂ ತ್ವಯಾ ಪೃಷ್ಟಂ ತದ್ವಕ್ಷ್ಯೇ ಶೃಣು ಸಾದರಂ ॥೩೩॥

---

ರಾಗಿರುವರೇ ಧನ್ಯರು ಮತ್ತು ಅವರೇ ಆ ಪರಶಿವನಿಗೆ ಪ್ರೀತಿಪಾತ್ರರೆನಿಸುವರು. ॥೨೯॥

ನಿತ್ಯವೂ ಶಿವನ ನಾಮಾಮೃತದಿಂದ ಆರ್ದ್ರವಾದ ನಾಲಿಗೆಯುಳ್ಳವರಾಗಿ, ಕೆಲವು ಮಂದಿ ಶಿವಪೂಜಕರು ಆ ಪರಶಿವನ ಧ್ಯಾನದಲ್ಲಿಯೇ ತತ್ಪರರಾಗಿ ಧನ್ಯರೆನಿಸಿ ಕೆಲಕೆಲವು ಕಡೆ ಗೋಚರಿಸುತ್ತಿರುವರು” ॥೩೦॥

ಈರೀತಿಯಾಗಿ ಹೇಳಿದನಂತರ ನಡುಗುತ್ತಿರುವ ಶರೀರವುಳ್ಳವನಾಗಿ ಆ ಕುಮಾರಸ್ವಾಮಿಯು, ಪುನಃ ಶಿವನಿಗೆ ನಮಸ್ಕಾರಮಾಡಿ, ಆ ಪರಮೇಶ್ವರನ ಪಕ್ಕದಲ್ಲಿ ತಲೆಯನ್ನು ಬಾಗಿಸಿ, ಕೈಮುಗಿದು ವಿನಯದಿಂದ ನಿಂತುಕೊಂಡನು. ॥೩೧॥

ಸಕಲ ಲೋಕದ ಜನಗಳಿಗೂ ಹಿತಕರವಾಗಿರುವ ಆ ಕುಮಾರಸ್ವಾಮಿಯ ಮಾತುಗಳನ್ನು ಕೇಳಿ, ಪ್ರಸನ್ನಮುಖವುಳ್ಳವನಾಗಿ, ಸದಾಶಿವನು ಷಣ್ಮುಖನನ್ನು ಕುರಿತು ಹೀಗೆ ನುಡಿದನು. ॥೩೨॥

“ಕುಮಾರ, ನೀನು ಈಗ ಪ್ರಶ್ನೆಮಾಡಿದುದು ಸಾಧುವಾಗಿದೆ. ಬಹಳ

ಏವಮೇವ ಪುರಾ ಗೌರ್ಯಾ ಪೃಷ್ಟಃ ಕಾಶ್ಯಾಮಹಂ ತದಾ ।
ಸಮಾಖ್ಯಾತಂ ಮಯಾ ಸಮ್ಯಕ್ಸರ್ವೇಷಾಂ ಮೋಕ್ಷಸಾಧಕಂ ॥೩೪॥

ದಿವ್ಯಾನ್ಯನಂತನಾಮಾನಿ ಸಂತಿ ತನ್ಮಧ್ಯಗಂ ಪರಂ ।
ಅಷ್ಟೋತ್ತರಸಹಸ್ರಂ ತು ನಾಮ್ನಾಂ ಪ್ರಿಯತರಂ ಮಮ ॥೩೫॥

ಏಕೈಕಮೇವ ತನ್ಮಧ್ಯೇ ನಾಮ ಸರ್ವಾರ್ಥಸಾಧಕಂ ।
ಮಯಾಽಪಿ ನಾಮ್ನಾಂ ಸರ್ವೇಷಾಂ ಫಲಂ ವಕ್ತುಂ ನ ಶಕ್ಯತೇ॥೩೬॥

ತಿಲಾಕ್ಷತೈರ್ಬಿಲ್ವಪತ್ರೈಃ ಕಮಲೈಃ ಕೋಮಲೈರ್ನವೈಃ ।
ಪೂಜಯಿಷ್ಯತಿ ಮಾಂ ಭಕ್ತ್ಯಾ ಯಸ್ತ್ವೇತನ್ನಾಮಸಂಖ್ಯಯಾ ॥೩೭॥

ಸ ಪಾಪೇಭ್ಯೋ ಸಂಸೃತೇಶ್ಚ ಮುಚ್ಯತೇ ನಾತ್ರ ಸಂಶಯಃ ।
ತತೋ ಮಮಾಂತಿಕಂ ಯಾತಿ ಪುನರಾವೃತ್ತಿದುರ್ಲಭಂ ॥೩೮॥

---

ಚೆನ್ನಾಗಿ ಪ್ರಶ್ನೆಮಾಡಿದ್ದೀಯೆ. ವತ್ಸ, ನಿನ್ನ ಪ್ರಶ್ನೆಗೆ ಉತ್ತರವನ್ನು ಹೇಳುವೆನು. ಆದರದಿಂದ ಕೇಳುವನಾಗು. ||೩೩||

ನೀನು ಈಗ ಪ್ರಶ್ನೆಮಾಡಿದಂತೆಯೇ ಹಿಂದೆ ಗೌರಿಯು ಕಾಶಿಯಲ್ಲಿ ನನ್ನನ್ನು ಪ್ರಶ್ನೆಮಾಡಿದ್ದಳು. ಆಗ ಅವಳಿಗೆ ನಾನು ಜಗತ್ತಿನ ಈ ಮೋಕ್ಷಸಾಧನೆಗೆ ಬೇಕಾದ ಉಪಾಯವನ್ನು ಚೆನ್ನಾಗಿ ವಿವರಿಸಿದೆನು, ಅದನ್ನೇ ನಿನಗೂ ತಿಳಿಸುವೆನು ಕೇಳು. ||೩೪||

ನನ್ನ ದಿವ್ಯನಾಮಗಳು ಅಸಂಖ್ಯಾತವಾಗಿರುವುವೆಂಬುದು ನಿನಗೆ ತಿಳಿದೇ ಇವೆ. ಅವುಗಳ ಮಧ್ಯದಲ್ಲಿ ಸರ್ವೋತ್ಕೃಷ್ಟವೆನಿಸಿ, ನನಗೆ ಹೆಚ್ಚು ಪ್ರೀತಿಕರವಾದ ಸಾವಿರದೆಂಟು ನಾಮಗಳಿರುವುವು. ||೩೫||

ಆದರ ಮಧ್ಯದಲ್ಲಿರುವ ಒಂದೊಂದು ನಾಮಗಳೇ ಸಕಲ ಮನೋರಥಗಳನ್ನೂ ಈಡೇರಿಸುವುವು. ನನ್ನ ಎಲ್ಲಾ ಹೆಸರುಗಳ ಸ್ಮರಣೆಯಿಂದುಂಟಾಗುವ ಫಲವೆಷ್ಟೆಂದು ಹೇಳಲು ನನಗೇ ಸಾಧ್ಯವಿಲ್ಲ. ||೩೬||

ತಿಲಾಕ್ಷತೆ, (ಎಳ್ಳನ್ನೂ ಅಕ್ಷತೆಯನ್ನೂ ಪೂಜಾಸ್ಥಾನದಲ್ಲಿ ಉಪಯೋಗಿಸುವುದು) ಬಿಲ್ವಪತ್ರೆ, ಹೊಸದಾಗಿ ಕೋಮಲವಾಗಿರುವ ತಾವರೆಯ ಹೂಗಳು, ಇವುಗಳಿಂದ ನನ್ನ ಈಸಾವಿರದೆಂಟು ಸಂಖ್ಯೆಯುಳ್ಳ ದಿವ್ಯನಾಮಗಳನ್ನುಚ್ಚಾರಣೆಮಾಡುತ್ತಾ

ಏಕೈಕೇನೈವ ನಾಮ್ನಾ ಮಾಮರ್ಚಯಿತ್ವಾ ದೃಢವ್ರತಾಃ ।
ಶ್ರೇಷ್ಠಂ ಫಲಂ ಪ್ರಾಪ್ನುವಂತಿ ಸತ್ಯಮೇವೋಚ್ಯತೇ ಮಯಾ ॥೩೯॥

ಏತನ್ನಾಮಾವಳೀಂ ಯಸ್ತು ಪಠನ್ಮಾಂ ಪ್ರಣಮೇತ್ಸದಾ ।
ಸ ಯಾತಿ ಮಮ ಸಾಯುಜ್ಯಂ ಸ್ವೇಷ್ಟಬಂಧುಸಮನ್ವಿತಃ ॥೪೦॥

ಸ್ಪೃಷ್ಟ್ವಾ ಮಲ್ಲಿಂಗಮಮಲಮೇತನ್ನಾಮಾನಿ ಯಃ ಪಠೇತ್ ।
ಸ ಪಾತಕೇಭ್ಯಃ ಸರ್ವೇಭ್ಯಃ ಸದ್ಯ ಏವ ಪ್ರಮುಚ್ಯತೇ ॥೪೧॥

ಯಸ್ತ್ವೇತನ್ನಾಮಭಿಃ ಸಮ್ಯಕ್ತ್ರಿಕಾಲಂ ವತ್ಸರಾವಧಿ ।
ಮಾಮರ್ಚಯಂತಿ ನಿರ್ದಂಭಃ ಸ ದೇವೇಂದ್ರೋ ಭವಿಷ್ಯತಿ ॥೪೨॥

---

ಭಕ್ತಿಪೂರ್ವಕವಾಗಿ ಪೂಜಿಸುವ ಮಾನವನು ಸಕಲ ಪಾಪಗಳಿಂದಲೂ ಬಿಡುಗಡೆ ಹೊಂದಿ ಈ ಸಂಸಾರಬಂಧನದಿಂದ ಸಂಶಯವೇ ಇಲ್ಲದೇ ಪಾರಾಗುವನು. ಅನಂತರ ಪುನರ್ಜನ್ಮವಿಲ್ಲದ ನನ್ನ ಸಾನ್ನಿಧ್ಯವನ್ನು ಹೊಂದುವನು. ||೩೭-೩೮||

ನಿಯಮವುಳ್ಳವರಾಗಿ, ನನ್ನ ಒಂದೊಂದೇ ನಾಮಗಳನ್ನು ಉಚ್ಚಾರಣೆ ಮಾಡಿ, ಪೂಜೆಮಾಡುವವರೂ ಸಹ ಶ್ರೇಷ್ಠವಾದ ಫಲವನ್ನು ಪಡೆಯುತ್ತಾರೆ. ನಾನು ಹೇಳುವ ಈ ಮಾತನ್ನು ಸತ್ಯವೆಂದು ತಿಳಿ. ||೩೯||

ಈ ನನ್ನ ದಿವ್ಯನಾಮಾವಳಿಯನ್ನು ಪಠಿಸುತ್ತಾ ಯಾವಾಗಲೂ ನನಗೆ ನಮಸ್ಕಾರಮಾಡುವವನು ತನ್ನ ಇಷ್ಟ ಬಂಧು ಬಳಗಗಳೊಡನೆ ಕೊನೆಯಲ್ಲಿ ನನ್ನ ಸಾಯುಜ್ಯವನ್ನು ಪಡೆಯುತ್ತಾರೆ. ||೪೦||

ಶಿವಲಿಂಗವನ್ನು ಸ್ಪರ್ಶಮಾಡುತ್ತಾ ಈ ನನ್ನ ನಾಮಗಳನ್ನು ಪಠನಮಾಡುವವನು ಕೂಡಲೇ ಸಕಲ ಪಾಪಗಳಿಂದಲೂ ತಪ್ಪದೇ ಬಿಡುಗಡೆ ಹೊಂದುತ್ತಾನೆ. ||೪೧||

ಈ ನನ್ನ ದಿವ್ಯನಾಮಗಳಿಂದ ಪ್ರಾತಃಕಾಲ, ಮಧ್ಯಾಹ್ನ, ಸಾಯಂಕಾಲ ಈ ಮೂರು ಕಾಲಗಳಲ್ಲಿಯೂ ನನ್ನನ್ನು ಅಹಂಕಾರವಿಲ್ಲದೇ ಒಂದು ವರ್ಷಕಾಲ ಪೂಜೆ ಮಾಡುವವನು ದೇವೇಂದ್ರಪದವಿಯನ್ನು ಹೊಂದುವನು. ||೪೨||

ಏತನ್ನಾಮಾನುಸಂಧಾನನಿರತಃ ಸರ್ವದಾ ಮುದಾ ।
ಮಮ ಪ್ರಿಯತರಸ್ತಸ್ಮಿನ್ನಿವಸಾಮ್ಯಹಮಾದರಾತ್ ॥೪೩॥

ತತ್ಪೂಜಯಾ ಪೂಜಿತೋಽಹಂ ಸ ಏವಾಹಂ ಯತೋ ಮಮ ।
ತಸ್ಮಾತ್ಪ್ರಿಯತರಂ ಸ್ಥಾನಮನ್ಯನ್ನೈವ ಹಿ ದೃಶ್ಯತೇ ॥೪೪॥

ಹಿರಣ್ಯಬಾಹುರಿತ್ಯಾದಿನಾಮ್ನಾಂ ಶಂಭುರಹಂ ಋಷಿಃ ।
ದೇವತಾಽಪ್ಯಹಮೇವಾತ್ರ ಶಕ್ತಿರ್ಗೌರೀ ಮಮ ಪ್ರಿಯಾ ॥೪೫॥

ಮಹೇಶ ಏವ ಸಂಸೇವ್ಯಃ ಸರ್ವೈರಿತಿ ಹಿ ಕೀಲಕಂ ।
ಧರ್ಮಾದ್ಯರ್ಥಾಃ ಫಲಂ ಜ್ಞೇಯಂ ಫಲದಾಯೀ ಸದಾಶಿವಃ ॥೪೬॥

ಓಂ, ಓಂ, ಓಂ, ಓಂ, ಓಂ

---

ಈ ನನ್ನ ನಾಮಗಳನ್ನೇ ಅನುಸಂಧಾನಮಾಡುತ್ತಾ ಪ್ರೀತಿಯಿಂದ ಯಾವಾಗಲೂ ನನ್ನನ್ನು ಧ್ಯಾನಮಾಡುವವನು ನನಗೆ ತುಂಬಾ ಪ್ರೀತಿಪಾತ್ರನೆನಿಸುವನು. ಅವನಲ್ಲಿ ನಾನು ಆದರದಿಂದ ವಾಸಮಾಡುವೆನು. ॥೪೩॥

ಆ ರೀತಿಯಾದ ಪೂಜಾವಿಧಿಯಿಂದ ಪೂಜಿಸಲ್ಪಟ್ಟ ನಾನೂ, ಆ ಪೂಜೆ ಮಾಡುವವನೂ ಒಂದೇ. ನಿಮ್ಮಿಬ್ಬರಲ್ಲಿ ಯಾವ ಭೇದವೂ ಇಲ್ಲ. ನನಗೆ ಅವನಿಗಿಂತಲೂ ಹೆಚ್ಚು ಪ್ರೀತಿಕರವಾದ ಬೇರೆ ಸ್ಥಾನವೇ ಕಾಣುವುದಿಲ್ಲ. (ಅಂದರೆ ನನ್ನನ್ನು ಹಾಗೆ ಪೂಜೆಮಾಡುವವನು ನನ್ನ ಸಾರೂಪ್ಯವನ್ನೇ ಹೊಂದುವನೆಂದು ಭಾವವು.) ॥೪೪॥

'ಹಿರಣ್ಯಬಾಹು' ಮೊದಲಾದ ನನ್ನ ಸಹಸ್ರನಾಮಗಳಿಗೆ ಶಂಭುವೆನಿಸಿದ ನಾನೇ 'ಋಷಿಯು.' 'ದೇವತೆಯೂ' ನಾನೇ ಆಗಿರುವೆನು. ನನ್ನ ಪ್ರಿಯೆಯಾದ ಗೌರಿಯೇ 'ಶಕ್ತಿಯು' ಮಹೇಶ್ವರನೆನಿಸಿದ ನನ್ನನ್ನೇ ಎಲ್ಲರೂ ಸೇವಿಸಬೇಕೆಂಬ ಅರ್ಥವನ್ನು ತಿಳಿಸುವ ವಾಕ್ಯವೇ 'ಕೀಲಕವು'; ಧರ್ಮ, ಅರ್ಥ, ಕಾಮ, ಮೋಕ್ಷ ಎಂಬ ನಾಲ್ಕು ಪುರುಷಾರ್ಥಗಳೇ ಫಲಗಳು. ಈ ಫಲಗಳನ್ನು ಕೊಡುವವನೇ ಸದಾಶಿವನು. ॥೪೫-೪೬॥

ಹಿರಣ್ಯಬಾಹುಃ ಸೇನಾನೀರ್ದಿಕ್ಪತಿಸ್ತರುರಾಡ್ಧರಃ ।
ಹರಿಕೇಶಃ ಪಶುಪತಿಃ ಮಹಾನ್ಸಸ್ಪಿಂಜರೋ ಮೃಡಃ ॥೪೭॥

ವಿವ್ಯಾಧಿರ್ಬಭ್ಲುಶಃ ಶ್ರೇಷ್ಠಃ ಪರಮಾತ್ಮಾ ಸನಾತನಃ ।
ಸರ್ವಾನ್ನರಾಡ್ಜಗತ್ಕರ್ತಾ ಪುಷ್ಟೇಶೋ ನಂದಿಕೇಶ್ವರಃ ॥೪೮॥

ಆತತಾಯೀ ಮಹಾರುದ್ರಃ ಸಂಸಾರಾಸ್ತ್ರಸುರೇಶ್ವರಃ ।
ಉಪವೀತಿರಹಂತ್ಯಾತ್ಮಾ ಕ್ಷೇತ್ರೇಶೋ ವನನಾಯಕಃ ॥೪೯॥

ರೋಹಿತಃ ಸ್ಥಪತಿಃ ಸೂತೋ ವಾಗೀಶೋ ಮಂತ್ರಿರುನ್ನತಃ ।
ವೃಕ್ಷೇಶೋ ಹುತಭುಗ್ದೇವೋ ಭುವಂತಿರ್ವಾರಿವಸ್ಕೃತಃ ॥೫೦॥

---

ಶಿವಸಹಸ್ರನಾಮಸ್ತೋತ್ರಾರಂಭ

ಚಿನ್ನದ ಆಭರಣಗಳನ್ನು ತೋಳಲ್ಲಿ ಧರಿಸಿರುವವನು, ದೇವತೆಗಳ ಸೈನ್ಯಕ್ಕೆಲ್ಲಾ ಅಧಿಪತಿಯು, ದಿಕ್ಕುಗಳಿಗೆಲ್ಲಾ ಒಡೆಯನು, ವೃಕ್ಷರಾಜನು, ತನ್ನ ಭಕ್ತರ ಪಾಪಗಳನ್ನು ನಾಶಮಾಡುವವನು, ನೀಲವರ್ಣದ ಕೂದಲುಳ್ಳವನು. ಪಶುಗಳಿಗೆ ಒಡೆಯನು, ಮಹಾಪುರುಷನು, ಎಳೆಯ ಹುಲ್ಲಿನಂತೆ ಪಿಂಜರವರ್ಣವುಳ್ಳವನು (ಅಂದರೆ ಹಳದಿ, ಕೆಂಪು ಈ ಎರಡು ಬಣ್ಣಗಳೂ ಮಿಶ್ರವಾಗಿರುವ ಬಣ್ಣದಿಂದ ಕೂಡಿದವನು.) ಸುಖಸ್ವರೂಪನು. ನಂದಿಕೇಶ್ವರನ ಮೇಲೆ ಕುಳಿತು ಸುಖವಾಗಿ ನಿದ್ರಿಸುವವನು. ಶತ್ರುಗಳನ್ನು ವಿಶೇಷವಾಗಿ ದಂಡಿಸುವನು ; ಸರ್ವಶ್ರೇಷ್ಠನು, ಪರಮಾತ್ಮಸ್ವರೂಪನು, ಸನಾತನನು, ಆಹಾರವಸ್ತುಗಳಿಗೆಲ್ಲಾ ರಾಜನು, ಪ್ರಪಂಚವನ್ನು ಸೃಷ್ಟಿಸುವವನು, ಪರಿಪೂರ್ಣವಾದ ಗುಣಗಳಿಂದ ಯುಕ್ತರಾಗಿರುವ ಪುರುಷರಿಗೆ ಸ್ವಾಮಿಯು, ನಂದಿಕೇಶ್ವರನು. ॥೪೭-೪೮॥

ಚೆನ್ನಾಗಿ ಹೆದೆಯೇರಿಸಲ್ಪಟ್ಟು, ವಿಸ್ತಾರವಾಗಿ ಮಾಡಲ್ಪಟ್ಟಿರುವ ಧನುಸ್ಸಿನಿಂದ ಪ್ರಪಂಚವನ್ನೆಲ್ಲಾ ಕಾಪಾಡುತ್ತಿರುವನು, ಮಹಾಭಯಂಕರಸ್ವರೂಪನು, ಈ ಸಂಸಾರವೆಂಬ ಶತ್ರುವನ್ನು ಹೋಗಲಾಡಿಸುವುದರಲ್ಲಿ ಅಸ್ತ್ರಪ್ರಾಯವಾಗಿರುವ ದೇವತಾಸಾರ್ವಭೌಮನು, ಜಗನ್ಮಂಗಳಕ್ಕೋಸ್ಕರ ಯಜ್ಞೋಪವೀತವನ್ನು ಧರಿಸಿರುವನು, ಶತ್ರುಗಳಿಂದ ಕೊಲ್ಲಲು ಅಸಾಧ್ಯವಾಗಿರುವ ಸ್ವರೂಪವುಳ್ಳವನು, ಕ್ಷೇತ್ರಗಳಿಗೆಲ್ಲಾ ಸ್ವಾಮಿಯು, ಕಾಡುಗಳಿಗೆಲ್ಲಾ ಅಧಿಪತಿಯು, ಕೆಂಪುಬಣ್ಣ

**ಉಚ್ಚೈರ್ಘೋಷೋ ಘೋರರೂಪಃ ಪತ್ತೀಶಃ ಪಾಶಮೋಚಕಃ ।**
**ಓಷಧೀಶಃ ಪಂಚವಕ್ತ್ರಃ ಕೃತ್ಸ್ನವೀತೋ ಭಯಾನಕಃ ॥೫೧॥**

**ಸಹಮಾನಃ ಸ್ವರ್ಣರೇತಾಃ ನಿವ್ಯಾಧಿರ್ನಿರುಪಪ್ಲವಃ ।**
**ಆವ್ಯಾಧಿನೀಶಃ ಕಕುಭೋ ನಿಷಂಗೀ ಸ್ತೇನರಕ್ಷಕಃ ॥೫೨॥**

**ಮಂತ್ರಾತ್ಮಾ ತಸ್ಕರಾಧ್ಯಕ್ಷೋ ವಂಚಕಃ ಪರಿವಂಚಕಃ ।**
**ಅರಣ್ಯೇಶಃ ಪರಿಚರೋ ನಿಚೇರುಃ ಸ್ತಾಯುರಕ್ಷಕಃ ॥೫೩॥**

**ಪ್ರಕೃಂತೇಶೋ ಗಿರಿಚರೋ ಕುಲುಂಚೇಶೋ ಗುಹೇಷ್ಟದಃ ।**
**ಭವಃ ಶರ್ವೋ ನೀಲಕಂಠಃ ಕಪರ್ದೀ ತ್ರಿಪುರಾಂತಕಃ ॥೫೪॥**

---

ವುಳ್ಳವನು, ಸಕಲ ಲೋಕಾಧಿಪತಿಯು, ಸಾರಥಿಯು, ಮಾತುಗಳಿಗೆಲ್ಲಾ ಒಡೆಯನು, ಮಂತ್ರಶಕ್ತಿಯುಳ್ಳವರಲ್ಲಿ ಕುಶಲನು, ಉನ್ನತವಾದ ದೇಹವುಳ್ಳವನು, ಮರಗಳಿಗೆಲ್ಲಾ ಅಧಿಪತಿಯು, ಅಗ್ನಿಸ್ವರೂಪನಾದ ದೇವನು, ಭೂಮಂಡಲವನ್ನು ಕಾಪಾಡುವವನು, ಧನಾಧಿಪತಿಯು. ॥೪೯-೫೦॥

ಯುದ್ಧಕಾಲದಲ್ಲಿ ಉಚ್ಚವಾದ (ಗಂಭೀರವಾದ) ಧ್ವನಿಯುಳ್ಳವನು, ಭಯಂಕರವಾದ ಆಕಾಶವುಳ್ಳವನು, ಕಾಲಾಳು ಸೈನ್ಯಕ್ಕೆಲ್ಲಾ ಒಡೆಯನು, ಸಂಸಾರ ಪಾಶವನ್ನು ಹೋಗಲಾಡಿಸುವವನು, ಜ್ಯೋತಿರ್ಲತೆಗಳ ಸ್ವಾಮಿಯೂ, ಐದು ಮುಖವುಳ್ಳವನೂ, ಸೈನ್ಯದಲ್ಲೆಲ್ಲಾ ವ್ಯಾಪಿಸಿರುವನೂ, ಭಯವನ್ನುಂಟುಮಾಡುವ ಸ್ವರೂಪವುಳ್ಳವನೂ, ವಿರೋಧಿಗಳನ್ನು ತಿರಸ್ಕರಿಸುವನೂ, ಸುವರ್ಣಮಯವಾದ ತೇಜಸ್ಸುಳ್ಳವನೂ, ಶತ್ರುಗಳನ್ನು ವಿಶೇಷವಾಗಿ ಶಿಕ್ಷಿಸುವವನೂ, ಯಾವ ತೊಂದರೆಗಳಿಗೂ ಒಳಗಾಗದವನೂ, ಎಲ್ಲಾ ಕಡೆಯಲ್ಲಿಯೂ ತೊಂದರೆಪಡಿಸುತ್ತಿರುವ ಶೂರಸ್ತೇನರೇ ಮೊದಲಾದವರನ್ನು ಕಾಪಾಡುತ್ತಾ ಅವರಿಗೆ ಸ್ವಾಮಿಯಾಗಿರುವವನೂ, ಶ್ರೇಷ್ಠನೆನಿಸಿದವನೂ, ಕೈಯಲ್ಲಿ ಕತ್ತಿಯನ್ನು ಹಿಡಿದಿರುವವನೂ, ಕಳ್ಳರನ್ನು ಕಾಪಾಡುವವನೂ ಆಗಿರುವನು. ॥೫೧-೫೨॥

ಮಂತ್ರಸ್ವರೂಪನು, ಕಳ್ಳರಿಗೆಲ್ಲಾ ಅಧ್ಯಕ್ಷನು, ವಂಚಕನು (ಸ್ವಾಮಿಯ ಭೃತ್ಯನಾಗಿದ್ದು ಕ್ರಯವಿಕ್ರಯಾದಿ ವ್ಯಾಪಾರಗಳಲ್ಲಿ ಅವನಿಗೆ ಮೋಸಮಾಡುವನು.) ಪರಿವಂಚಕನು, (ಎಲ್ಲಾ ವ್ಯಾಪಾರಗಳಲ್ಲಿಯೂ ಸ್ವಾಮಿಗೆ ಮೋಸಮಾಡುವವನು.) ಅಡವಿಗಳಿಗೆಲ್ಲಾ ಅಧಿಪತಿಯಾಗಿ ಅಲ್ಲಿ ವಾಸಮಾಡುವ ಕಳ್ಳರಿಗೆ

**ವ್ಯುಪ್ತಕೇಶೋ ಗಿರಿಶಯಃ ಸಹಸ್ರಾಕ್ಷಃ ಸಹಸ್ರಪಾತ್ ।**
**ಶಿಪಿವಿಷ್ಟಶ್ಚಂದ್ರಮೌಳಿರ್ಹ್ರಸ್ವೋ ಮೀಢುಷ್ಟಮೋಽನಘಃ ॥೫೫॥**

**ವಾಮನೋ ವ್ಯಾಪಕಃ ಶೂಲೀ ವರ್ಷೀಯಾನಜಡೋಽಣುಃ ।**
**ಊರ್ವ್ಯಃ ಸೂರ್ಮ್ಯೋಽಗ್ರಿಯಃ ಶೀಭ್ಯಃ ಪ್ರಥಮಃ ಪಾವಕಾಕೃತಿಃ ॥೫೬॥**

---

ಸ್ವಾಮಿಯು, ಅಂಗಡೀ ಬೀದಿ ಮೊದಲಾದ ಕಡೆಗಳಲ್ಲಿ ಕದಿಯುವ ಬುದ್ಧಿಯಿಂದ ಸಂಚರಿಸುವನು, ತನ್ನ ಯಜಮಾನನ ಮನೆಯಲ್ಲಿಯೇ ಕದಿಯುವ ಅಪೇಕ್ಷೆಯಿಂದ ಯಾವಾಗಲೂ ಹೊಂಚುಹಾಕುವವನು, (ನಂಬಿಕಸ್ಥನಾಗಿಯೇ ಇದ್ದುಕೊಂಡು, ಮತ್ತೊಬ್ಬರಿಗೆ ಕಾಣದಂತೆ ಕದಿಯುವ ಕಳ್ಳನಿಗೆ ಸ್ತಾಯುವೆಂದು ಹೆಸರು) ಅಂತಹ ಕಳ್ಳರನ್ನು ಕಾಪಾಡುವವನು, ಪ್ರಕೃಂತರೆಂಬ (ಜನಗಳನ್ನು ಕೊಂದೇ ಅವರ ದ್ರವ್ಯಗಳನ್ನು ಅಪಹರಿಸುವವರು) ಕಳ್ಳರಿಗೆ ಒಡೆಯನೂ, ಬೆಟ್ಟಗುಡ್ಡಗಳಲ್ಲಿ ಸೌದೆ, ಕಡ್ಡಿ ಮೊದಲಾದವುಗಳನ್ನು ತೆಗೆದುಕೊಂಡು ಬರಲು ಹೋಗುವ ಜನಗಳ ಬಟ್ಟೆ ಬರೆಗಳನ್ನು ಕದಿಯುವ ಸ್ವಭಾವವುಳ್ಳ ಕಳ್ಳನು, ಭೂಮಿ, ಮನೆ, ಮಠ ಮೊದಲಾದವುಗಳನ್ನು ಅಪಹರಿಸುವ ಕಳ್ಳರಿಗೆ ಸ್ವಾಮಿಯು, ಷಣ್ಮುಖಸ್ವಾಮಿಗೆ ಇಷ್ಟಾರ್ಥಗಳನ್ನು ಕೊಡುವವನು, ಸಕಲ ಪ್ರಾಣಿಗಳಿಗೂ ಉತ್ಪತ್ತಿಕಾರಣನು, ಪಾಪವನ್ನು ನಾಶಮಾಡುವವನು, ವಿಷಪಾನದಿಂದ ಕಪ್ಪಾದ ಕೊರಳುಳ್ಳವನು, ಜಡೆಯನ್ನು ಧರಿಸಿರುವವನು, ತ್ರಿಪುರಾಸುರರನ್ನು ಧ್ವಂಸಮಾಡಿದವನು. ॥೫೩-೫೪॥

ಯತಿವೇಷವನ್ನು ಧರಿಸಿರುವನು (ಕ್ಷೌರಮಾಡಿಸಿಕೊಂಡಿರುವ ತಲೆಕೂದಲುಳ್ಳವನು) ಕೈಲಾಸಪರ್ವತದಲ್ಲಿ ನೆಲಸಿರುವವನು, ಸಹಸ್ರ ನೇತ್ರಗಳು ಮತ್ತು ಸಾವಿರ ಪಾದಗಳುಳ್ಳವನು, ವಿಷ್ಣುವಿನ ಆಕೃತಿಯನ್ನು ಧರಿಸಿರುವವನು, ಚಂದ್ರನನ್ನು ತಲೆಯಲ್ಲಿ ಧರಿಸಿರುವವನು, ಚಿಕ್ಕ ಆಕಾರವುಳ್ಳವನು, ಮೋಡದ ರೂಪವನ್ನು ಧರಿಸಿ, ಮಳೆಗರೆಯುವವನೂ, ದೋಷರಹಿತನೂ, ವಾಮನಾಕೃತಿಯುಳ್ಳವನೂ, ಜಗದ್ವ್ಯಾಪಕನೂ, ಶೂಲಾಯುಧವನ್ನು ಹಿಡಿದಿರುವವನೂ, ಗುಣಪರಿಪೂರ್ಣನೂ, ಜಡಸ್ವರೂಪವಿಲ್ಲದವನೂ, ಅಣುಸ್ವರೂಪದಿಂದ ಬಿಡಲ್ಪಟ್ಟವನೂ, ಭೂಮಿಯಲ್ಲಿ ಹುಟ್ಟುವವನೂ, ಒಳ್ಳೆಯ ಅಲೆಗಳಿಂದ ಕೂಡಿದ ನದಿಯಲ್ಲಿ ತೋರುವವನೂ, ಈ ಜಗತ್ತು ಹುಟ್ಟುವುದಕ್ಕಿಂತ ಮುಂಚೆಯೇ ಇದ್ದವನೂ, ನೀರಿನ ಪ್ರವಾಹದಲ್ಲಿ ಇರುವವನೂ, ಎಲ್ಲರಿಗಿಂತಲೂ ಅಗ್ರಗಣ್ಯನೂ, ಅಗ್ನಿಸ್ವರೂಪವುಳ್ಳವನೂ, ಆಗಿರುವನು. ॥೫೫-೫೬॥

**ಕುಚೇಲಸ್ತಾರಕಸ್ತಾರೋಽವಸ್ಥನ್ಯೋಽನಂತವಿಗ್ರಹಃ ।**
**ದ್ವೀಪ್ಯಃ ಸ್ರೋತಸ್ಯ ಈಶಾನೋ ಧುರ್ಯೋಗಃ ವ್ಯಯನೋಂಮಯಃ ॥೫೭॥**

**ಪೂರ್ವಜೋಽಪರಜೋ ಜ್ಯೇಷ್ಠಃ ಕನಿಷ್ಠೋ ವಿಶ್ವಲೋಚನಃ ।**
**ಅಪ್ರಗಲ್ಭ್ಯೋ ಮಧ್ಯಮೋರ್ವ್ಯೋ ಜಘನ್ಯೋ ಬುಧ್ನಿಯಃ ಪ್ರಭುಃ॥೫೮॥**

**ಪ್ರತಿಸರ್ಯೋಽನಂತರೂಪಃ ಸೋಭ್ಯೋ ಯಾಮ್ಯಃ ಸುರಾಶ್ರಯಃ ।**
**ಖಲ್ಯೋರ್ವರ್ಯೋಽಭಯಃ ಕ್ಷೇಮ್ಯಃ ಶ್ಲೋಕ್ಯಃ ಪಥ್ಯೋ ನಭಾಗ್ರಣೀಃ ॥೫೯॥**

---

ಭೂಮಿಯನ್ನೇ ವಸ್ತ್ರವನ್ನಾಗಿ ಧರಿಸಿರುವವನೂ, ಸಕಲ ಜಗತ್ತುಗಳನ್ನೂ ಉದ್ಧಾರಮಾಡುವವನೂ, ತನ್ನ ಭಕ್ತರನ್ನು ವಿಶೇಷವಾಗಿ ಕಾಪಾಡುವವನೂ, ಸ್ಥಿರವಾದ ನೀರಿನಲ್ಲಿ ನೆಲಸಿರುವವನೂ, ಅಪಾರವಾದ ಶರೀರಗಳನ್ನು ಧರಿಸಿರುವವನೂ, ದ್ವೀಪಗಳಲ್ಲಿ ನೆಲಸಿರುವವನೂ, ಪ್ರವಾಹದಲ್ಲಿರುವವನೂ, ಐಶ್ವರ್ಯಭರಿತನೂ, ಸಕಲ ಜಗತ್ತನ್ನೂ ನಾಶಮಾಡುವವನೂ, ಓಂಕಾರಸ್ವರೂಪನೂ, ಜಗತ್ಸೃಷ್ಟಿಗಿಂತಲೂ ಮೊದಲು ಹಿರಣ್ಯಗರ್ಭನರೂಪಿನಿಂದ ಹುಟ್ಟಿದವನೂ, ಜಗತ್ಪ್ರಳಯಕಾಲದಲ್ಲಿ ಕಾಲಾಗ್ನಿರೂಪದಿಂದ ಹುಟ್ಟಿದವನೂ, ವಿದ್ಯೆ, ಐಶ್ವರ್ಯ ಇವೇ ಮೊದಲಾದವುಗಳಿಂದ ಹಿರಿಯನೂ, ವಿದ್ಯೆ, ಐಶ್ವರ್ಯ, ಇವುಗಳಿಲ್ಲದೇ ಅಲ್ಪನಾಗಿರುವನೂ, ಜಗತ್ತಿನಲ್ಲೆಲ್ಲಾ ವ್ಯಾಪಿಸಿರುವ ಕಣ್ಣುಗಳುಳ್ಳವನೂ, ಇಂದ್ರಿಯ ಪಾಟವವಿಲ್ಲದ ಬಾಲಕನ ಸ್ವರೂಪವುಳ್ಳವನೂ, ರಕ್ಷಣಾಸಮಯದಲ್ಲಿ (ಮಧ್ಯಕಾಲದಲ್ಲಿ) ದೇವತೆಗಳು, ತಿರ್ಯಕ್ಪ್ರಾಣಿಗಳು ಇವೇ ಮೊದಲಾದ ರೂಪಿನಿಂದ ಹುಟ್ಟುವವನೂ, ಭೂಮಿಯಲ್ಲಿ ಜನಿಸುವವನೂ, ಹಸುಗಳೇ ಮೊದಲಾದ ತಿರ್ಯಕ್ಪ್ರಾಣಿಗಳ ಜಘನಪ್ರದೇಶಗಳಲ್ಲಿ ಕರುವೇ ಮೊದಲಾದ ರೂಪಿನಿಂದ ಹುಟ್ಟುವವನೂ, ಮರವೇ ಮೊದಲಾದವುಗಳ ಬುಡದಲ್ಲಿ ಕೊಂಬೆ ಮೊದಲಾದ ರೂಪಿನಿಂದ ಹುಟ್ಟುವವನೂ, ಸರ್ವಸಮರ್ಥನೂ ; ||೫೭-೫೮||

ಮದುವೆ ಮೊದಲಾದ ಮಂಗಳಕಾರ್ಯದಲ್ಲಿ ಕೈಗಳಲ್ಲಿ ರಕ್ಷಾಬಂಧವನ್ನು ಹೊಂದಿರುವವನೂ, ನಾನಾವಿಧವಾದ ರೂಪಗಳನ್ನು ಧರಿಸಿರುವವನೂ, ಪುಣ್ಯ ಪಾಪ ಸ್ವರೂಪಗಳೆರಡರಿಂದ ಭೂಯಿಷ್ಠವಾದ ಮನುಷ್ಯಲೋಕಸ್ವರೂಪದಂತಿರುವವನೂ, ಪಾಪಿ ಜನಗಳನ್ನು ಶಿಕ್ಷಿಸುವುದಕ್ಕೋಸ್ಕರ ಯಮಲೋಕದಲ್ಲಿ ಧರ್ಮಸ್ವರೂಪನಾಗಿ

ವನೋಽವಸಾನ್ಯಃ ಪೂತಾತ್ಮಾ ಶ್ರವಸ್ತಕ್ಷ್ಯಪ್ರತಿಶ್ರವಃ ।
ಆಶುಷೇಣೋ ಮಹಾಸೇನೋ ಮಹಾವೀರೋ ಮಹಾರಥಃ ॥೬೦॥

ಶೂರೋಽತಿಘಾತುಕೋ ವರೂಥೀ ಬಿಲ್ಮಿರುದ್ಯತಃ ।
ಶ್ರುತಸೇನಃ ಶ್ರುತಃ ಸಾಕ್ಷೀ ಕವಚೀ ವಶಕೃದ್ವಶೀ ॥೬೧॥

ಆಹನನ್ಯೋಽನನ್ಯನಾಥೋ ದುಂದುಭ್ಯೋಽರಿಷ್ಟನಾಶಕಃ ।
ಧೃಷ್ಣುಃ ಪ್ರಮೃಶ ಈಡ್ಯಾತ್ಮಾ ವಿಶ್ವವಕ್ತ್ರಃ ಸದಾಗತಿಃ ॥೬೨॥

---

ಜನಿಸುವವನೂ, ದೇವತೆಗಳಿಗೆಲ್ಲಾ ಆಶ್ರಯನಾಗಿರುವವನೂ, ಧಾನ್ಯಗಳನ್ನು ರೇಖೆಮಾಡುವ ಕಣಗಳಲ್ಲಿರುವವನೂ, ಸಕಲ ಸಸ್ಯಗಳಿಂದಲೂ ಯುಕ್ತವಾದ ಭೂಮಿಯನ್ನು ವಿಶೇಷವಾದ ಧಾನ್ಯಗಳಿಂದ ಹೊಂದಲು ಯೋಗ್ಯನೂ, ಭಕ್ತರಿಗೆಲ್ಲಾ ಅಭಯಪ್ರದಾನಮಾಡುವವನೂ, ಮೋಕ್ಷವನ್ನು ಹೊಂದಲು ಯೋಗ್ಯನೂ, ವೈದಿಕ ಮಂತ್ರಗಳಿಂದ ತಿಳಿಯಲು ಸಾಧ್ಯನೂ, ರಥ, ಕುದುರೆ ಮೊದಲಾದವುಗಳು ಸಂಚಾರಮಾಡುವ ದೊಡ್ಡ ದಾರಿಯನ್ನು ಹೊಂದಲು ಯೋಗ್ಯನೂ, ಅಂತರಿಕ್ಷದಲ್ಲಿರುವ ಸೂರ್ಯ ಚಂದ್ರ ನಕ್ಷತ್ರಗಳಿಗೆಲ್ಲಾ ಅಗ್ರೇಸರನೆನಿಸಿ ದಿವ್ಯತೇಜಸ್ಸಿನಿಂದ ಮೆರೆಯುತ್ತಿರುವವನೂ, ಕಾಡಿನಲ್ಲಿ ಮರಗಿಡಗಳ ರೂಪಿನಿಂದ ತೋರುವವನೂ, ವೇದಾಂತಶಾಸ್ತ್ರಪ್ರತಿಪಾದ್ಯನೂ, ಪರಿಶುದ್ಧವಾದ ಅಂತಃಕರಣವುಳ್ಳವನೂ, ಧ್ವನಿರೂಪದಿಂದ ಗೋಚರನಾಗುವವನೂ, ಬಳ್ಳಿಯೇ ಮೊದಲಾದ ಹಬ್ಬುವ ಪೈರುಗಳ ರೂಪದಿಂದಿರುವವನೂ, ಪ್ರತಿಧ್ವನಿರೂಪದಲ್ಲಿರುವನೂ, ವೇಗವಾಗಿ ಹೋಗುವ ಸೇನೆಯುಳ್ಳವನೂ, ದೊಡ್ಡ ಸೈನ್ಯವುಳ್ಳವನೂ, ಮಹಾವೀರಾಗ್ರಣಿಯೂ, ದೊಡ್ಡ ರಥಗಳುಳ್ಳವನೂ ; ॥೫೯-೬೦॥

ಯುದ್ಧದಲ್ಲಿ ಧೈರ್ಯವುಳ್ಳವನೂ, ತುಂಬಾ ಘಾತುಕನೂ, ಕಂಚುಕವುಳ್ಳವನೂ, ಯುದ್ಧದಲ್ಲಿ ತಲೆಗೆ ಏಟುಬೀಳದಂತೆ ಕಾಪಾಡುವ ತಲೆಟೋಪಿಯುಳ್ಳವನೂ, ಎಲ್ಲಾ ಕಾರ್ಯಗಳಲ್ಲಿಯೂ ಉದ್ಯುಕ್ತನಾಗಿರುವವನೂ, ಪ್ರಸಿದ್ಧವಾದ ಸೈನ್ಯವುಳ್ಳವನೂ, ವೇದಗಳಲ್ಲಿ ಪ್ರಸಿದ್ಧನಾಗಿರುವವನೂ, ಪ್ರಾಣಿಗಳ ಶುಭಾಶುಭರೂಪವಾದ ಕರ್ಮಗಳನ್ನು ಪ್ರತ್ಯಕ್ಷವಾಗಿ ನೋಡುವವನೂ, ಕವಚವುಳ್ಳವನೂ, ಎಲ್ಲರನ್ನೂ ತನ್ನ ಅಧೀನಮಾಡಿಕೊಂಡಿರುವವನೂ, ಇಂದ್ರಿಯನಿಗ್ರಹವುಳ್ಳವನೂ, ದುಂದುಭಿವಾದ್ಯವನ್ನು ಧ್ವನಿಮಾಡುವುದಕ್ಕೋಸ್ಕರ ಹೊಡೆಯುವ ದಂಡರೂಪಪದಾರ್ಥದಲ್ಲಿರುವವನೂ,

ತೀಕ್ಷ್ಣೇಷುಪಾಣಿಃ ಪ್ರಹಿತಃ ಸ್ವಾಯುಧಃ ಶಾಸ್ತ್ರವಿತ್ತಮಃ ।
ಸುಧನ್ವಾ ಸುಪ್ರಸನ್ನಾತ್ಮಾ ವದಾನ್ಯೋ ವೇದಸಂಮತಃ ॥೬೩॥

ಸ್ರುತ್ಯಃ ಪಥ್ಯೋ ವಿಶ್ವಬಾಹುಃ ಕಾಟ್ಯೋ ನೀಪ್ಯಃ ಶುಚಿಸ್ಮಿತಃ ।
ಸೂದ್ಯಃ ಸರಸ್ಯೋ ವೈಶಂತೋ ನಾದ್ಯಃ ಕೂಪ್ಯೋ ಋಷಿರ್ಮನುಃ ॥೬೪॥

ವರ್ಷ್ಯೋಽವರ್ಷ್ಯೋಽ ವರ್ಷರೂಪಃ ಕುಮಾರಃ ಕುಶಲೋಽಮಲಃ ।
ಮೇಘ್ಯೋಽವಧ್ಯೋಽಮೋಘಶಕ್ತಿರ್ವಿದ್ಯುತ್ಯೋಽಮೋಘವಿಕ್ರಮಃ ॥೬೫॥

---

ಎಲ್ಲರಿಗೂ ಒಡೆಯನೂ, ಭೇರಿವಾದ್ಯದಲ್ಲಿ ಶಬ್ದರೂಪದಿಂದ ತೋರುವವನೂ, ತನ್ನ ಭಕ್ತರ ಸಕಲ ಅರಿಷ್ಟಗಳನ್ನೂ ನಾಶಮಾಡುವವನೂ, ಯುದ್ಧದಲ್ಲಿ ಪಲಾಯನ ಮಾಡದೇ ಧೈರ್ಯದಿಂದಿರುವವನೂ, ಶತ್ರುಸೈನ್ಯಗಳ ವಿಷಯವನ್ನು ಪರಾಮರ್ಶಿಸುವವನೂ, ಎಲ್ಲರಿಂದಲೂ ಸ್ತೋತ್ರಾರ್ಹವಾದ ಸ್ವರೂಪವುಳ್ಳವನೂ, ಪ್ರಪಂಚಕ್ಕೆಲ್ಲಾ ತನ್ನ ವಕ್ರದೃಷ್ಟಿಯನ್ನು ಬೀರಿ ಪ್ರಳಯಕಾಲದಲ್ಲಿ ಧ್ವಂಸಮಾಡುವವನೂ, ಯಾವಾಗಲೂ ತಡೆಯಿಲ್ಲದ ಗತಿಯುಳ್ಳವನೂ ಆಗಿರುವನು. ॥೬೧-೬೨॥

ಹರಿತವಾದ ಖಡ್ಗವನ್ನು ಕೈಯಲ್ಲಿ ಹಿಡಿದಿರುವವನೂ, ಯಜಮಾನನಿಂದ ಕಳುಹಿಸಲ್ಪಟ್ಟ ದೂತರ ಸ್ವರೂಪವುಳ್ಳವನೂ, ಶುಭಕರವಾದ ತ್ರಿಶೂಲಾಯುಧವುಳ್ಳವನೂ, ಶಾಸ್ತ್ರಜ್ಞರಾದವರಲ್ಲಿ ಶ್ರೇಷ್ಠನೂ, ಉತ್ತಮವಾದ ಬಿಲ್ಲುಳ್ಳವನೂ, ನಿರ್ಮಲವಾದ ಮನಸ್ಸುಳ್ಳವನೂ, ದಾನಮಾಡುವುದರಲ್ಲಿ ತುಂಬಾ ಸಮರ್ಥನೂ, ವೇದಗಳಿಂದ ಶ್ರೇಷ್ಠನೆಂದು ಪರಿಗಣಿತನಾಗಿರುವವನೂ, ಸ್ತೋತ್ರಾರ್ಹನೂ, ರಥ ಕುದುರೆ ಮೊದಲಾದವುಗಳು ಸಂಚಾರಮಾಡಲು ಅನುಕೂಲವಾದ ದಾರಿಯುಳ್ಳವನೂ, ಎಲ್ಲಾ ಕಡೆಯಲ್ಲಿಯೂ ಹರಡಿರುವ ತೋಳುಗಳುಳ್ಳವನೂ, ಸ್ವಲ್ಪವಾದ ನೀರಿನ ಪ್ರವಾಹವುಳ್ಳ ಝರಿಯೇ ಮೊದಲಾದವುಗಳಲ್ಲಿ ಜಲರೂಪದಿಂದ ತೋರುವವನೂ, ಪರ್ವತದ ತುದಿಯಿಂದ ವಕ್ರವಾಗಿ ನೀರುಬೀಳುವ ಪ್ರದೇಶಗಳಲ್ಲಿ ತೋರುವವನೂ, ಶುಭ್ರವಾದ ಮಂದಹಾಸವುಳ್ಳವನೂ, ಕೆಸರಿರುವ ಜಾಗದಲ್ಲಿ ನೀರಿನ ರೂಪದಲ್ಲಿ ಆವಿರ್ಭವಿಸುವವನೂ, ನದಿಯ ನೀರಿನ ಆಕಾರದಿಂದ ತೋರುವವನೂ, ಬಾವಿಯ ನೀರಿನ ರೂಪದಲ್ಲಿ ಆವಿರ್ಭವಿಸುವವನೂ, ತತ್ವಗಳನ್ನು ಚೆನ್ನಾಗಿ ಅರಿತವನೂ, ಮಂತ್ರಸ್ವರೂಪನೂ ಎನಿಸಿರುವನು. ॥೬೩-೬೪॥

ಮಳೆಯ ನೀರಿನ ರೂಪವುಳ್ಳವನೂ, ಮಳೆಯ ಅಪೇಕ್ಷೆಯೇ ಇಲ್ಲದೆ ಸಮುದ್ರ ಮೊದಲಾದವುಗಳಲ್ಲಿ ಶಾಶ್ವತವಾಗಿರುವ ನೀರಿನ ಆಕಾರವುಳ್ಳವನೂ,

ದುರಾಸದೋ ದುರಾರಾಧ್ಯೋ ನಿರ್ದ್ವಂದ್ವೋ ದುಃಸಹರ್ಷಭಃ ।
ಈಧ್ರಿಯಃ ಕುಧ್ರುಶಯನೋ ಜಾನುಕರ್ಣ್ಯಃ ಪುರುಷ್ಟುತಃ ॥೬೬॥

ಆತಪ್ಯೋ ವಾಯುರಜರೋ ವಾತ್ಯಃ ಕಾತ್ಯಾಯನೀಪ್ರಿಯಃ ।
ವಾಸ್ತವ್ಯೋ ವಾಸ್ತುಪೋ ರೇಷ್ಮ್ಯೋ ವಿಶ್ವಮೂರ್ಧಾ ವಸುಪ್ರದಃ ॥೬೭॥

ಸೋಮಸ್ತಾಮ್ರೋಽರುಣಃ ಶಂಗೋ ರುದ್ರಃ ಸುಖಕರಃ ಸುಹೃತ್ ।
ಉಗ್ರೋಽನುಗ್ರೋ ಭೀಮಕರ್ಮಾ ಭೀಮೋ ಭೀಮಪರಾಕ್ರಮಃ ॥೬೮॥

---

ಮಳೆಯ ರೂಪದಲ್ಲಿ ಗೋಚರವಾಗುವನೂ, ಕುಮಾರಾವಸ್ಥೆಯುಳ್ಳವನೂ, ಕುಶಲಸ್ವರೂಪನೂ, ನಿರ್ಮಲನೂ, ಪರಿಶುದ್ಧರೂಪನೂ, ಯಾರಿಂದಲೂ ಕೊಲ್ಲಲು ಅಸಾಧ್ಯವಾದ ದೇಹವುಳ್ಳವನೂ, ಅಪರಿಮಿತವಾದ ಪರಾಕ್ರಮವುಳ್ಳವನೂ, ಮಿಂಚಿನ ಆಕಾರದಲ್ಲಿ ತೋರುವವನೂ, ಅತಿಶಯವಾದ ಶೌರ್ಯವುಳ್ಳವನೂ, ಶತ್ರುಗಳಿಂದ ಹೊಂದಲು ಅಸಾಧ್ಯನೂ, ದುಷ್ಟರಿಂದಲೂ ಪೂಜಿಸಲು ಯೋಗ್ಯನೂ, ಅದ್ವಿತೀಯನೂ, ಇತರರಿಂದ ಜಯಿಸಲು ಅಸಾಧ್ಯವಾದ ವೃಷಭವಾಹನವುಳ್ಳವನೂ, ನಿರ್ಮಲವಾಗಿ ಪ್ರಕಾಶಿಸುತ್ತಿರುವ ಶರತ್ಕಾಲದ ಮೇಘಗಳಲ್ಲಿ ಗೋಚರವಾಗುವವನೂ, ಕೈಲಾಸಪರ್ವತದಲ್ಲಿ ಮಲಗಿರುವವನೂ ಆಗಿರುವನು. ||೬೫-೬೬||

ಬಿಸಿಲಿನ ಜೊತೆಯಲ್ಲಿ ಮಳೆಗರೆಯುವವನೂ, ವಾಯುಸ್ವರೂಪನೂ, ಮುಪ್ಪಿಲ್ಲದವನೂ, ಗಾಳಿಯ ಜತೆಯಲ್ಲಿ ಮಳೆಗರೆಯುವವನೂ, ಕಾತ್ಯಾಯನೀ ದೇವಿಯೆನಿಸಿದ ಪಾರ್ವತಿಯ ಪ್ರಿಯರಮಣನೂ, ಹಸು, ಕುದುರೆ ಮೊದಲಾದ ಪದಾರ್ಥಗಳಲ್ಲಿ ಆಯಾ ರೂಪದಿಂದ ತೋರುವವನೂ, ಸಕಲ ವಸ್ತುಗಳನ್ನೂ ಪಾಲಿಸುವವನೂ, ಪ್ರಳಯಕಾಲದಲ್ಲಿ ಸಕಲ ಭೂತಗಳನ್ನೂ ನಾಶಮಾಡುವುದಕ್ಕೋಸ್ಕರ ಬೆಣಚುಕಲ್ಲು ಮೊದಲಾದವುಗಳೊಡನೆ ಮಳೆಗರೆಯುವವನೂ, ಎಲ್ಲಾ ಕಡೆಯಲ್ಲಿಯೂ ಹರಡಿರುವ ತಲೆಯುಳ್ಳವನೂ, ಐಶ್ವರ್ಯವನ್ನು ಕೊಡುವವನೂ, ಉಮಾರಮಣನೂ, ತಾಮ್ರವರ್ಣವುಳ್ಳವನೂ, ಅರುಣನಂತೆ ಬಣ್ಣವುಳ್ಳವನೂ, ತನ್ನ ಭಕ್ತರಿಗೆ ಸುಖವನ್ನು ಕೊಡುವವನೂ, ಭಕ್ತರ ದುಃಖವನ್ನೆಲ್ಲಾ ಹೋಗಲಾಡಿಸುವವನೂ, ಸುಖಪ್ರದನೂ, ಸ್ನೇಹಿತನೂ, ವಿರೋಧಿಗಳನ್ನು ನಾಶಪಡಿಸುವುದಕ್ಕೋಸ್ಕರ ಉಗ್ರವಾದ ಕೋಪವುಳ್ಳವನೂ, ಭಕ್ತರನ್ನು ಪಾಲಿಸುವುದಕ್ಕೋಸ್ಕರ ಶಾಂತಸ್ವರೂಪವುಳ್ಳವನೂ, ಭಯಂಕರವಾದ ಕರ್ಮಗಳನ್ನು ನಡೆಸುವವನೂ,

ಅಗ್ರೇವಧೋ ಹನೀಯಾತ್ಮಾ ಹಂತಾ ದೂರೇವಧೋ ವಧಃ ।
ಶಂಭುರ್ನಯೋಭುವೋ ನಿತ್ಯಃ ಶಂಕರಃ ಕೀರ್ತಿಸಾಗರಃ ॥೬೯॥

ಮಯಸ್ಕರಃ ಶಿವತರಃ ಖಂಡಪರ್ಶುರಜಃ ಶುಚಿಃ ।
ತೀರ್ಥ್ಯಃ ಕೂಲ್ಯೋಽಮೃತಾಧೀಶಃ ಪಾರ್ಯೋಽವಾರ್ಯೋಽಮೃತಾಕರಃ॥೭೦॥

ಶುದ್ಧಃ ಪ್ರತರಣೋ ಮುಖ್ಯಃ ಶುದ್ಧಪಾಣಿರಲೋಲುಪಃ ।
ಉಚ್ಚಃ ಉತ್ತರಪಾಸ್ತಾರ್ಯಸ್ತಾರ್ಯಜ್ಞಸ್ತಾರ್ಯಹೃದ್ಗತಃ ॥೭೧॥

---

ನೋಡಿದ ಮಾತ್ರದಿಂದಲೇ ಶತ್ರುಗಳಿಗೆ ಭಯವನ್ನುಂಟುಮಾಡುವವನೂ, ಭಯಂಕರವಾದ ಪರಾಕ್ರಮವುಳ್ಳವನೂ ಆಗಿರುವನು. ॥೬೭-೬೮॥

ಮುಂಭಾಗದಲ್ಲಿ ವಿರೋಧಿಗಳನ್ನು ಅನಾಯಾಸವಾಗಿ ಕೊಲ್ಲುವವನೂ, ಜಗತ್ಸಂಹಾರಕಾಲದಲ್ಲಿ ಎಲ್ಲರನ್ನೂ ಧ್ವಂಸಮಾಡುವವನೂ, ಲೋಕದಲ್ಲಿ ವಿರೋಧಿಗಳನ್ನು ಅನಾಯಾಸವಾಗಿ ಕೊಲ್ಲುವನೂ, ದೂರದಲ್ಲಿಯೂ ವಿರೋಧಿಗಳನ್ನು ಕೊಲ್ಲುವವನೂ, ವಧಸ್ವರೂಪನೂ, ಸುಖವನ್ನುಂಟುಮಾಡುವವನೂ, ಸುಖಪ್ರದನೂ, ಶಾಶ್ವತಸ್ವರೂಪನೂ, ಮಂಗಳಕರನೂ, ಕೀರ್ತಿಗೆ ಸಮುದ್ರದಂತೆ ಆಶ್ರಯನಾಗಿರುವವನೂ, ಸುಖಕರನೂ, ಅತ್ಯಂತ ಮಂಗಳಸ್ವರೂಪನೂ, ತುಂಡಾದ ಪರಶುವೆಂಬ ಆಯುಧವುಳ್ಳವನೂ, ಉತ್ಪತ್ತಿಶೂನ್ಯನೂ, ಶುಭ್ರನೂ, ಪ್ರಯಾಗಾದಿ ತೀರ್ಥಗಳಲ್ಲಿ ಸನ್ನಿಹಿತನಾಗಿರುವವನೂ, ನದಿಗಳ ದಡದಲ್ಲಿ ಲಿಂಗರೂಪದಿಂದ ತೋರುವವನೂ, ಅಮೃತಕ್ಕೆಲ್ಲಾ ಸ್ವಾಮಿಯೂ, ಸಂಸಾರವೆಂಬ ಸಾಗರವನ್ನು ದಾಟುವುದಕ್ಕೋಸ್ಕರ ಮೋಕ್ಷಾಪೇಕ್ಷಿಗಳಿಂದ ಧ್ಯಾನಮಾಡಲ್ಪಡುವವನೂ, ಸಂಸಾರ ಮಧ್ಯದಲ್ಲಿರುವವರಿಗೆ ಬೇಕಾದ ಫಲಗಳನ್ನು ಕೊಡುವ ಸ್ವರೂಪದಿಂದಿರುವವನೂ, ಅಮೃತಕ್ಕೆ ಆಶ್ರಯನೂ ಎನಿಸಿರುವನು. ॥೬೯-೭೦॥

ಪರಿಶುದ್ಧಸ್ವರೂಪನೂ, ಉತ್ತಮವಾದ ಮಂತ್ರಜಪಗಳೇ ಮೊದಲಾದವುಗಳಿಂದ ಪಾಪಗಳನ್ನು ಕಳೆದುಕೊಳ್ಳಲು ಕಾರಣವಾಗಿರುವವನೂ, ಎಲ್ಲಾ ದೇವತೆಗಳಲ್ಲಿಯೂ ಮುಖ್ಯನಾದವನೂ, ಪರಿಶುದ್ಧವಾದ ಕೈಯುಳ್ಳವನೂ, ಲೋಲುಪನಲ್ಲದವನೂ, ಉತ್ಕೃಷ್ಟನೂ, ಉತ್ತರದಿಕ್ಕನ್ನು ಪಾಲಿಸುವವನೂ, ಪ್ರಣವಮಂತ್ರಸ್ವರೂಪನೂ, ಪ್ರಣವಮಂತ್ರವನ್ನು ಜಪಿಸುವನೂ, ತನ್ನ ಹೃದಯದಲ್ಲಿ ಪ್ರಣವಮಂತ್ರವನ್ನಿಟ್ಟುಕೊಂಡಿರುವವನೂ, ಈ ಸಂಸಾರವನ್ನು ದಾಟುವುದಕ್ಕೆ ಮುಖ್ಯ

ಆತಾರ್ಯಃ ಸಾರಭೂತಾತ್ಮಾ ಸಾರಗ್ರಾಹೀ ದುರತ್ಯಯಃ ।
ಆಲಾದ್ಯೋ ಮೋಕ್ಷದಃ ಪಥ್ಯೋಽನರ್ಥಹಾ ಸತ್ಯಸಂಗರಃ ॥೨೨॥

ಶಷ್ಪ್ಯಃ ಫೇನ್ಯಃ ಪ್ರವಾಹ್ಯೋಽಚ್ಛಃ ಸಿಕತ್ಯಃ ಸೈಕತಾಶ್ರಯಃ ।
ಇರಿಣ್ಯೋ ಗ್ರಾಮಣೀಃ ಪುಣ್ಯಃ ಶರಣ್ಯಃ ಶುದ್ಧಶಾಸನಃ ॥೨೩॥

ವರೇಣ್ಯೋ ಯಜ್ಞರೂಪಶ್ಚ ಯಜ್ಞೇಶೋ ಯಜ್ಞನಾಯಕಃ ।
ಯಜ್ಞಕರ್ತಾ ಯಜ್ಞಭೋಕ್ತಾ ಯಜ್ಞವಿಘ್ನವಿನಾಶಕಃ ॥೨೪॥

ಯಜ್ಞಕರ್ಮಫಲಾಧ್ಯಕ್ಷೋ ಯಜ್ಞಮೂರ್ತಿರನಾತುರಃ ।
ಪ್ರಪಥ್ಯಃ ಕಿಂಶಿಲೋ ಗೇಹ್ಯೋ ಗೃಹ್ಯಸ್ತಲ್ಪ್ಯೋ ಧನಾಕರಃ ॥೨೫॥

---

ಸಾಧನವಾದ ತತ್ವಜ್ಞಾನವನ್ನು ಉಪೇಕ್ಷೆಮಾಡಿ ಕಾಮ್ಯಕರ್ಮಗಳನ್ನು ಅನುಷ್ಠಾನ ಮಾಡಿ, ಪುನಃ ಈ ಸಂಸಾರ ಪ್ರಪಂಚಕ್ಕೆ ಬರುವವನ ಸ್ವರೂಪವುಳ್ಳವನೂ, ಸಾರಭರಿತವಾದ ಸ್ವರೂಪವುಳ್ಳವನೂ, ಸಾರವನ್ನು ತಿಳಿಯುವವನೂ, ದುಃಖವನ್ನು ದಾಟಿದವನೂ, ಅಲಾದನೆನಿಸಿದ ಜೀವನನ್ನು ಪ್ರೇರಿಸುವವನೂ, ಮೋಕ್ಷಪ್ರದನೂ, ಉತ್ತಮವಾದ ಮಾರ್ಗದಲ್ಲಿ ಗೋಚರವಾಗುವವನೂ, ಅನರ್ಥಗಳನ್ನೆಲ್ಲಾ ನಾಶಮಾಡುವವನೂ, ಸತ್ಯಯುದ್ಧವುಳ್ಳವನೂ; ||೨೧-೨೨||

ಗಂಗಾನದಿಯ ದಡವೇ ಮೊದಲಾದವುಗಳಲ್ಲಿ ಬೆಳೆಯುವ ಎಳೆಯ ಗರಿಕೆ ಮೊದಲಾದವುಗಳಲ್ಲಿ ತೋರುವವನೂ, ನದೀಮಧ್ಯದಲ್ಲಿರುವ ನೊರೆಯ ಆಕಾರವುಳ್ಳವನೂ, ಪ್ರವಾಹದ ಆಕಾರವುಳ್ಳವನೂ, ಸ್ವಚ್ಛವಾಗಿರುವವನೂ, ಮರಳನ್ನು ಆಶ್ರಯಿಸಿ ಅಲ್ಲಿ ನೆಲಸಿರುವವನೂ, ಮರಳಿನ ಸಮೂಹಕ್ಕೆಲ್ಲಾ ಆಶ್ರಯನಾಗಿರುವನೂ, ಮರುಭೂಮಿಯಲ್ಲಿ ಗೋಚರಿಸುವವನೂ, ಗ್ರಾಮಗಳಿಗೆಲ್ಲಾ ಮುಖ್ಯಸ್ಥನಾಗಿರುವನ ರೂಪವುಳ್ಳವನೂ, ಪುಣ್ಯಸ್ವರೂಪನೂ, ಶರಣಾಗತರನ್ನು ರಕ್ಷಣೆಮಾಡುವವನೂ, ಶುದ್ಧವಾದ ಶಾಸನವುಳ್ಳವನೂ, ಶ್ರೇಷ್ಠನೂ, ಯಜ್ಞಸ್ವರೂಪನೂ, ಯಜ್ಞರೂಪಿಯೂ, ಯಜ್ಞೇಶ್ವರನೂ, ಯಜ್ಞಗಳಿಗೆಲ್ಲಾ ಒಡೆಯನೂ, ಯಜ್ಞಕರ್ತೃವೂ, ಯಜ್ಞ ಭೋಕ್ತೃವೂ, ಯಜ್ಞಗಳಿಗೆ ಉಂಟಾಗುವ ವಿಘ್ನಗಳನ್ನು ನಾಶಮಾಡುವವನೂ; ||೨೩-೨೪||

ಯಾಗಕರ್ಮದಿಂದುಂಟಾಗುವ ಫಲಗಳಿಗೆಲ್ಲಾ ಅಧ್ಯಕ್ಷನೂ, ಯಜ್ಞ ಮೂರ್ತಿಯೂ, ರೋಗರಹಿತನೂ, ಅನೇಕ ಜನಗಳಿಂದ ಸೇವಿಸಲ್ಪಟ್ಟಿರುವ

ಪುಲಸ್ತ್ಯಃ ಕ್ಷಪಗೋ ಗೋಷ್ಠ್ಯೋ ಗೋವಿದ್ಯೋಗೀತಸತ್ಕ್ರಿಯಃ ।
ಪ್ರದಯ್ಯೋ ಪ್ರದಕೃದ್ಧನ್ಯೋ ಗಹ್ವರೇಷ್ಠಃ ಪ್ರಭಾಕರಃ ॥೨೬॥

ನಿವೇಷ್ಪ್ಯೋ ನಿಯತೋ ಯಂತಾ ಪಾಗ್ಂ ಸವ್ಯಃ ಸುಪ್ರತಾಪನಃ ।
ಶುಷ್ಕ್ಯೋ ಹರಿತ್ಯಃ ಪೂತಾತ್ಮಾ ರಜಸ್ಯಃ ಸಾತ್ವಿಕ ಪ್ರಿಯಃ ॥೨೭॥

ಲೋಪ್ಯೋಲುಪ್ಯಃ ಪರ್ಣಶದ್ಯಃ ಪರ್ಣ್ಯಃ ಪೂರ್ಣಃ ಪುರಾತನಃ ।
ಭೂತೋ ಭೂತಪತಿರ್ಭೂಪೋ ಭೂಧರೋ ಭೂಧರಾಯುಧಃ॥೨೮॥

---

ಮಾರ್ಗದಲ್ಲಿ ತೋರುವವನೂ, ಕುತ್ಸಿತವಾದಕಲ್ಲಿನರೂಪಿನಿಂದ ಗೋಚರಿಸುವವನೂ, ಉಪ್ಪರಿಗೆ ಮನೆಗಳಲ್ಲಿ ಗೋಚರಿಸುವವನೂ, ಸಾಮಾನ್ಯಮನೆಗಳಲ್ಲಿ ತೋರುವವನೂ, ಮಂಚದ ಮೇಲೆ ಮಲಗುವವನ ರೂಪವುಳ್ಳವನೂ, ಧನಗಳಿಗೆಲ್ಲಾ ಆಶ್ರಯನೂ, ಭಕ್ತರ ಮುಂದೆ ತೋರುವವನೂ, ರಾತ್ರಿಯಲ್ಲಿ ಸಂಚರಿಸುವವನೂ, ಗೋವುಗಳ ಸ್ಥಾನದಲ್ಲಿ ನೆಲಸಿರುವವನೂ, ವೇದಗಳನ್ನು ತಿಳಿದವನೂ, ವೇದೋಕ್ತಸತ್ಕರ್ಮಗಳನ್ನಾಚರಿಸುವವನೂ, ಅಗಾಧವಾದ ನೀರುಳ್ಳ ಮಡುಗಳಲ್ಲಿ ಇರುವವನೂ, ಮಡುಗಳನ್ನು ನಿರ್ಮಿಸುವವನೂ, ಧನ್ಯನೂ, ದುರ್ಗಮವಾದ ಬೆಟ್ಟಗುಡ್ಡಗಳು ಗುಹೆ ಮೊದಲಾದವುಗಳಲ್ಲಿರುವವನೂ, ಪ್ರಪಂಚಕ್ಕೆಲ್ಲಾ ತನ್ನ ಪ್ರಭೆಯನ್ನು ಬೀರುವವನೂ; ॥೨೫-೨೬॥

ಮಂಜಿನ ನೀರಿನಲ್ಲಿರುವವನೂ, ನಿಯಮವುಳ್ಳವನೂ, ಇಂದ್ರಿಯನಿಗ್ರಹವುಳ್ಳವನೂ, ಪರಮಾಣುಕಣಗಳಲ್ಲಿರುವವನೂ, ತುಂಬಾ ಪ್ರತಾಪವುಳ್ಳವನೂ, ಒಣಗಿದ ಸೌದೆ ಮೊದಲಾದವುಗಳಲ್ಲಿ ನೆಲಸಿರುವವನೂ, ಹಸಿಯ ಕಡ್ಡಿಗಳಲ್ಲಿ ಅಡಗಿರುವವನೂ, ಪರಿಶುದ್ಧವಾದ ಅಂತಃಕರಣವುಳ್ಳವನೂ, ಧೂಳಿನ ಕಣಗಳಲ್ಲಿರುವನೂ, ಸತ್ವಗುಣದಿಂದ ಯುಕ್ತರಾದವರಿಗೆ ಪ್ರೀತಿಕರನೂ, ಹುಲ್ಲುಕಡ್ಡಿಗಳು ಬೆಳೆಯದ ಗಟ್ಟಿಸ್ಥಳಗಳಲ್ಲಿರುವವನೂ, ಪೈರುಪಚ್ಚೆಗಳು ಬೆಳೆಯುವ ಭೂಮಿಯಲ್ಲಿರುವವನೂ, ಒಣ ಎಲೆಗಳ ಸಮೂಹದಲ್ಲಿರುವನೂ, ಎಲೆಗಳಲ್ಲಿ ಅಡಗಿರುವವನೂ, ಪೂರ್ಣಸ್ವರೂಪವುಳ್ಳವನೂ, ಪುರಾತನನೂ, ಪೃಥಿವ್ಯಪ್ತೇಜೋವಾಯ್ವಾಕಾಶರೂಪವಾದ ಪಂಚಭೂತಗಳ ಸ್ವರೂಪವುಳ್ಳವನೂ, ಭೂತಗಳಿಗೆಲ್ಲಾ ಒಡೆಯನೂ, ರಾಜರ ಸ್ವರೂಪವುಳ್ಳವನೂ, ಪರ್ವತಸ್ವರೂಪನೂ, ಪರ್ವತವನ್ನೇ ಆಯುಧವಾಗುಳ್ಳವನೂ ಎನಿಸಿ ಪರಶಿವನು ನಾನಾರೂಪದಿಂದಿರುವನು. ॥೨೭-೨೮॥

ಭೂತಸಂಘೋ ಭೂತಮೂರ್ತಿರ್ಭೂತಿಹಾ ಭೂತಿಭೂಷಣಃ ।
ಮದನೋ ಮಾದಕೋ ಮಾದ್ಯೋ ಮದಹಾ ಮಧುರಪ್ರಿಯಃ ॥೭೯॥

ಮಧುರ್ಮಧುಕರಃ ಕ್ರೂರೋ ಮಧುರೋ ಮದನಾಂತಕಃ ।
ನಿರಂಜನೋ ನಿರಾಧಾರೋ ನಿರ್ಲಿಪ್ತೋ ನಿರುಪಾಧಿಕಃ ॥೮೦॥

ನಿಷ್ಪ್ರಪಂಚೋ ನಿರಾಕಾರೋ ನಿರೀಹೋ ನಿರುಪದ್ರವಃ ।
ಸತ್ವಃ ಸತ್ವಗುಣೋಪೇತಃ ಸತ್ವವಿತ್ಸತ್ವವಿತ್ಪ್ರಿಯಃ ॥೮೧॥

ಸತ್ವನಿಷ್ಠಃ ಸತ್ವಮೂರ್ತಿಃ ಸತ್ವೇಶಃ ಸತ್ವವಿತ್ತಮಃ ।
ಸಮಸ್ತಜಗದಾಧಾರಃ ಸಮಸ್ತಗುಣಸಾಗರಃ ॥೮೨॥

ಸಮಸ್ತದುಃಖವಿಧ್ವಂಸೀ ಸಮಸ್ತಾನಂದಕಾರಕಃ ।
ರುದ್ರಾಕ್ಷಮಾಲಾಭರಣೋ ರುದ್ರಾಕ್ಷಪ್ರಿಯವತ್ಸಲಃ ॥೮೩॥

---

ಭೂತಗಳ ಸಮೂಹವುಳ್ಳವನೂ, ಭೂತಗಳ ಆಕಾರವುಳ್ಳವನೂ, ಐಶ್ವರ್ಯವನ್ನು ನಾಶಮಾಡುವವನೂ, ಐಶ್ವರ್ಯವೇ ಆಭರಣವಾಗಿರುವವನೂ, ಪ್ರಾಣಿಗಳನ್ನು ಮದಗೊಳಿಸುವ ಮನ್ಮಥಸ್ವರೂಪವುಳ್ಳವನೂ, ಎಲ್ಲರನ್ನೂ ಮದಗೊಳಿಸುವವನೂ, ಮದಗೊಳಿಸುವ ಯೋಗ್ಯತೆಯುಳ್ಳವನೂ, ಮದವನ್ನು ಹೋಗಲಾಡಿಸುವವನೂ, ಮಧುರಪದಾರ್ಥಗಳಲ್ಲಿ ಪ್ರೀತಿಯುಳ್ಳವನೂ, ವಸಂತಸ್ವರೂಪನೂ, ಭ್ರಮರರೂಪಿಯೂ, ಕ್ರೂರನೂ, ಮಧುರವಾದ ಆಕಾರವುಳ್ಳವನೂ, ಮನ್ಮಥನನ್ನು ನಾಶಮಾಡಿದವನೂ, ನಿರ್ಲಿಪ್ತನೂ, ಆಧಾರಶೂನ್ಯನೂ, ಯಾವ ಸಂಬಂಧವೂ ಇಲ್ಲದವನೂ, ಉಪಾಧಿಯಿಲ್ಲದವನೂ ಆಗಿರುವನು. ॥೭೯-೮೦॥

ಈ ಪ್ರಪಂಚಸಂಬಂಧವಿಲ್ಲದವನೂ, ಆಕಾರರಹಿತನೂ, ಅಪೇಕ್ಷೆಯಿಲ್ಲದವನೂ, ಯಾವ ತೊಂದರೆಗಳಿಗೂ ಸಿಲುಕದವನೂ, ಸತ್ವಗುಣಸ್ವರೂಪನೂ, ಸತ್ವಗುಣದಿಂದ ಕೂಡಿದವನೂ, ಸತ್ವಗುಣವನ್ನು ತಿಳಿದವನೂ, ಸತ್ವಜ್ಞರಿಗೆ ಪ್ರೀತಿಕರನೂ, ಯಾವಾಗಲೂ ಸತ್ವಗುಣಜ್ಞರಲ್ಲಿ ಅತ್ಯುತ್ತಮನೂ, ಸಮಸ್ತ ಪ್ರಪಂಚಕ್ಕೂ ಆಧಾರಭೂತನಾಗಿರುವವನೂ, ಸಕಲ ಗುಣಗಳಿಗೂ ಸಾಗರದಂತೆ ಆಶ್ರಯನಾಗಿರುವನೂ; ॥೮೧-೮೨॥

ಸಕಲ ದುಃಖಗಳನ್ನೂ ನಾಶಮಾಡುವವನೂ, ಎಲ್ಲರಿಗೂ ಆನಂದವನ್ನುಂಟುಮಾಡುವವನೂ, ಕೊರಳಲ್ಲಿ ರುದ್ರಾಕ್ಷಮಾಲೆಯನ್ನು ಆಭರಣವಾಗಿ ಧರಿಸಿರು

ರುದ್ರಾಕ್ಷವಕ್ಷೋ ರುದ್ರಾಕ್ಷರೂಪೋ ರುದ್ರಾಕ್ಷಭಕ್ಷಕಃ ।
ವಿಶ್ವೇಶ್ವರೋ ವೀರಭದ್ರಃ ಸಂಮ್ರಾಡ್ದಕ್ಷಮಖಾಂತಕಃ ॥೮೪॥

ವಿಘ್ನೇಶ್ವರೋ ವಿಘ್ನಕರ್ತಾ ಗುರುರ್ದೇವಶಿಖಾಮಣಿಃ ।
ಭುಜಗೇಂದ್ರಲಸತ್ಕಂಠೋ ಭುಜಂಗಾಭರಣಪ್ರಿಯಃ ॥೮೫॥

ಭುಜಂಗವಿಲಸತ್ಕರ್ಣೋ ಭುಜಂಗವಲಯಾವೃತಃ ।
ಮುನಿವಂದ್ಯೋ ಮುನಿಶ್ರೇಷ್ಠೋ ಮುನಿವೃಂದನಿಷೇವಿತಃ ॥೮೬॥

ಮುನಿಹೃತ್ಪುಂಡರೀಕಸ್ಥೋ ಮುನಿಸಂಘೈಕಜೀವನಃ ।
ಮುನಿಮೃಗ್ಯೋ ವೇದಮೃಗ್ಯೋ ಮೃಗಹಸ್ತೋ ಮೃಗೇಶ್ವರಃ ॥೮೭॥

ಮೃಗೇಂದ್ರಚರ್ಮವಸನೋ ನರಸಿಂಹನಿಪಾತನಃ ।
ಮೃತ್ಯುಂಜಯೋ ಮೃತ್ಯುಮೃತ್ಯುರಪಮೃತ್ಯುವಿನಾಶಕಃ ॥೮೮॥

---

ವವನೂ, ರುದ್ರಾಕ್ಷಿಯಲ್ಲಿ ತುಂಬಾ ಪ್ರೀತಿವಾತ್ಸಲ್ಯವುಳ್ಳವನೂ, ವಕ್ಷಃಸ್ಥಳದಲ್ಲಿ ರುದ್ರಾಕ್ಷಿಯುಳ್ಳವನೂ, ರುದ್ರಾಕ್ಷದ ರೂಪುಳ್ಳವನೂ, ರುದ್ರಾಕ್ಷವನ್ನೇ ತಿನ್ನುವವನೂ, ಜಗದೊಡೆಯನೂ, ವೀರಭದ್ರನೂ, ಸಮ್ರಾಟ್ಸ್ವರೂಪನೂ, ದಕ್ಷಯಜ್ಞವನ್ನು ಧ್ವಂಸಮಾಡಿದವನೂ ಆಗಿದ್ದಾನೆ. ॥೮೩-೮೪॥

ವಿಘ್ನಗಳಿಗೆಲ್ಲಾ ಒಡೆಯನೂ, ವಿಘ್ನವನ್ನುಂಟುಮಾಡುವವನೂ, ಅಜ್ಞಾನವೆಂಬ ಕಗ್ಗತ್ತಲೆಯನ್ನು ಹೋಗಲಾಡಿಸುವ ಗುರುವೂ, ದೇವತೆಗಳಲ್ಲೆಲ್ಲಾ ಚೂಡಾರತ್ನದಂತೆ ಶ್ರೇಷ್ಠನೂ, ಕೊರಳಲ್ಲಿ ಸರ್ಪರಾಜನನ್ನು ಧರಿಸಿ ಶೋಭಿಸುತ್ತಿರುವವನೂ, ಸರ್ಪಾಭರಣವನ್ನು ಧರಿಸುವುದರಲ್ಲಿ ಪ್ರೀತಿಯುಳ್ಳವನೂ, ಕಿವಿಯಲ್ಲಿ ಹಾವನ್ನು ಧರಿಸಿ ಮೆರೆಯುತ್ತಿರುವವನೂ, ಸರ್ಪಕಂಕಣದಿಂದ ಪ್ರೀತಿಹೊಂದುತ್ತಿರುವವನೂ, ಮುನಿಗಳಿಂದ ನಮಸ್ಕೃತನೂ, ಮುನಿಗಳಲ್ಲೆಲ್ಲಾ ಶ್ರೇಷ್ಠನೂ, ಮುನಿಸಮೂಹದಿಂದ ಸೇವಿಸಲ್ಪಟ್ಟವನೂ; ॥೮೫-೮೬॥

ಮುನಿಗಳ ಹೃದಯವೆಂಬ ಕಮಲದಲ್ಲಿ ನೆಲಸಿರುವವನೂ, ಮುನಿಸಮೂಹಗಳಿಂದಲೇ ಮುಖ್ಯವಾಗಿ ಜೀವಿಸುವವನೂ, ಮುನಿಗಳಿಂದಲೂ, ವೇದಗಳಿಂದಲೂ ಯಾವಾಗಲೂ ಹುಡುಕಲ್ಪಡುವವನೂ, ಜಿಂಕೆಯನ್ನು ಕೈಯಲ್ಲಿ ಹಿಡಿದಿರುವನೂ, ಜಿಂಕೆಗಳಿಗೆಲ್ಲಾ ಸ್ವಾಮಿಯೂ, ಸಿಂಹಚರ್ಮವನ್ನು ಬಟ್ಟೆಯಂತೆ ಧರಿಸಿರುವನೂ,

ದುಷ್ಟಮೃತ್ಯುರದುಷ್ಟೇಷ್ಟೋ ಮೃತ್ಯುಹಾ ಮೃತ್ಯುಪೂಜಿತಃ ।
ಊರ್ಧ್ವೋ ಹಿರಣ್ಯಪರಮೋ ನಿಧನೇಶೋ ಧನಾಧಿಪಃ ॥೮೯॥

ಯಜುರ್ಮೂರ್ತಿಃ ಸಾಮಮೂರ್ತಿಃ ಋಙ್ಮೂರ್ತಿರ್ಮೂರ್ತಿವರ್ಜಿತಃ ।
ವ್ಯಕ್ತೋಽವ್ಯಕ್ತತಮೋಽವ್ಯಕ್ತೋ ವ್ಯಕ್ತಾವ್ಯಕ್ತತಮೋ ಜವೀ ॥೯೦॥

ಲಿಂಗಮೂರ್ತಿರಲಿಂಗಾತ್ಮಾ ಲಿಂಗಾಲಿಂಗಾತ್ಮವಿಗ್ರಹಃ ।
ಗ್ರಹೋಽಗ್ರಹೋ ಗ್ರಹಾಧಾರೋ ಗ್ರಹಾಕಾರೋ ಗ್ರಹೇಶ್ವರಃ ॥೯೧॥

ಗ್ರಹಕೃದ್ಗ್ರಹಭಿದ್ಗ್ರಾಹೀ ಗ್ರಹಾಗ್ರಹವಿಲಕ್ಷಣಃ ।
ಕಲ್ಪಾಕಾರಃ ಕಲ್ಪಕರ್ತಾ ಕಲ್ಪರಕ್ಷಣತತ್ಪರಃ ॥೯೨॥

---

ನರಸಿಂಹಾವತಾರಮಾಡಿದ್ದ ಮಹಾವಿಷ್ಣುವಿನ ಗರ್ವವನ್ನು ಹೋಗಲಾಡಿಸುವುದಕ್ಕೋಸ್ಕರ ಶರಭರೂಪವನ್ನು ತಾಳಿ ಅವನನ್ನು ಕೆಡವಿದವನೂ, ಮೃತ್ಯುವನ್ನು ಜಯಿಸಿದವನೂ, ಮೃತ್ಯುಸ್ವರೂಪನಾದ ಯಮನಿಗೂ ಮೃತ್ಯುಪ್ರದನೂ, ಅಪಮೃತ್ಯುವನ್ನು ನಾಶಮಾಡುವನೂ ; ||೮೭-೮೮||

ದುಷ್ಟರಾದ ಮಾನವರಿಗೆ ಮೃತ್ಯುಪ್ರಾಯನೂ, ದೋಷರಹಿತನೂ, ತನ್ನ ಭಕ್ತರಿಗೆ ಇಷ್ಟಪ್ರದನೂ, ಮೃತ್ಯುವನ್ನು ಸಂಹರಿಸಿದವನೂ, ಮೃತ್ಯುಸ್ವರೂಪನಾದ ಯಮನಿಂದ ಪೂಜಿಸಲ್ಪಟ್ಟವನೂ, ಊರ್ಧ್ವಲೋಕದಲ್ಲಿ ನೆಲಸಿರುವವನೂ, ಹಿರಣ್ಯಸ್ವರೂಪನೆನಿಸಿದವರಲ್ಲಿ ಶ್ರೇಷ್ಠನೂ, ಮೃತ್ಯುಪತಿಯೂ, ದ್ರವ್ಯಾಧಿಪನೂ, ಯಜುರ್ವೇದಮೂರ್ತಿಯೂ, ಸಾಮವೇದಮೂರ್ತಿಯೂ, ಋಗ್ವೇದಮೂರ್ತಿಯೂ, ಯಾವ ಆಕಾರವೂ ಇಲ್ಲದವನೂ, ವ್ಯಕ್ತವಾದ ರೂಪುಳ್ಳವನೂ, ಅದರಲ್ಲಿಯೂ ಶ್ರೇಷ್ಠನೂ, ಯಾರಿಗೂ ಗೋಚರವಾಗದ ಸ್ವರೂಪವುಳ್ಳವನೂ, ವ್ಯಕ್ತ, ಮತ್ತು ಅವ್ಯಕ್ತವಾದ ಪದಾರ್ಥಗಳಲ್ಲಿ ಶ್ರೇಷ್ಠನೂ, ವೇಗವುಳ್ಳವನೂ ಆಗಿದ್ದಾನೆ. ||೮೯-೯೦||

ಲಿಂಗಸ್ವರೂಪವುಳ್ಳವನೂ, ವಸ್ತುತಃ ದೇಹವಿಲ್ಲಧವನೂ ಲಿಂಗ, ಮತ್ತು ಲಿಂಗವಲ್ಲದ ಬೇರೆ ಆಕಾರವುಳ್ಳವನೂ, ಗ್ರಹಗಳ ಸ್ವರೂಪನೂ, ಗ್ರಹಾಕಾರವಿಲ್ಲದವನೂ, ಗ್ರಹಗಳಿಗೆಲ್ಲಾ ಆಧಾರಭೂತನಾಗಿರುವವನೂ, ಗ್ರಹಗಳ ಆಕಾರವುಳ್ಳವನೂ, ಗ್ರಹಗಳಿಗೆಲ್ಲಾ ಅಧಿಪತಿಯೂ, ಗ್ರಹಗಳನ್ನು ನಿರ್ಮಿಸಿದವನೂ, ತಾನೇ ಗ್ರಹರೂಪಿಯಾಗಿರುವವನೂ; ಎಲ್ಲವನ್ನೂ ಗ್ರಹಣಮಾಡುವವನೂ; ಗ್ರಹ, ಮತ್ತು ಗ್ರಹವಿಲ್ಲದ ಬೇರೆ ಪದಾರ್ಥಗಳು, ಇವುಗಳಿಗಿಂತ ವಿಲಕ್ಷಣವಾಗಿರುವವನೂ, ಕಲ್ಪದ

ಕಲ್ಪೋ ಕಲ್ಪಾಕೃತಿಃ ಕಲ್ಪನಾಶಕಃ ಕಲ್ಪಕಲ್ಪಕಃ ।
ಪರಮಾತ್ಮಾ ಪ್ರಧಾನಾತ್ಮಾ ಪ್ರಧಾನಪುರುಷಃ ಶಿವಃ ॥೯೩॥

ವೇದ್ಯೋ ವೈದ್ಯೋ ವೇದವೇದ್ಯೋ ವೇದವೇದಾಂತಸಂಸ್ತುತಃ ।
ವೇದವಕ್ತ್ರೋ ವೇದಜಿಹ್ವೋ ವಿಜಿಹ್ವೋ ಜಿಹ್ವನಾಶಕಃ ॥೯೪॥

ಕಲ್ಯಾಣರೂಪಃ ಕಲ್ಯಾಣಃ ಕಲ್ಯಾಣಗುಣಸಂಶ್ರಯಃ ।
ಭಕ್ತಕಲ್ಯಾಣದೋ ಭಕ್ತಕಾಮಧೇನುಃ ಸುರಾಧಿಪಃ ॥೯೫॥

ಪಾವನಃ ಪಾವಕೋ ವಾಮೋ ಮಹಾಕಾಲೋ ಮದಾಪಹಃ ।
ಘೋರಪಾತಕದಾವಾಗ್ನಿರ್ದವಭಸ್ಮಕಣಪ್ರಿಯಃ ॥೯೬॥

---

ಆಕಾರವುಳ್ಳವನೂ, ಕಲ್ಪಗಳನ್ನು ನಿರ್ಮಿಸುವವನೂ, ಕಲ್ಪಗಳನ್ನೆಲ್ಲಾ ಕಾಪಾಡುವುದರಲ್ಲಿ ತತ್ಪರನೂ; ॥೯೧-೯೨॥

ಕಲ್ಪಸ್ವರೂಪನೂ, ಕಲ್ಪಾಕಾರವುಳ್ಳವನೂ, ಕಲ್ಪಗಳನ್ನೆಲ್ಲಾ ನಾಶಮಾಡುವವನೂ, ಕಲ್ಪಗಳನ್ನು ನಿರ್ಮಿಸುವನೂ, ಪರಮಾತ್ಮನೂ, ಪ್ರಧಾನಸ್ವರೂಪನೂ, ಎಲ್ಲರಿಗಿಂತಲೂ ಪ್ರಧಾನನೆನಿಸಿದ ಪುರುಷನೂ, ಯೋಗಿಗಳ ಮನಸ್ಸಿನಲ್ಲಿ ಯಾವಾಗಲೂ ನೆಲಸಿರುವನೂ; ತಿಳಿಯಲು ಯೋಗ್ಯನಾದವನೂ, ವೈದ್ಯಸ್ವರೂಪನೂ, ವೇದಗಳಿಂದ ತಿಳಿಯಲು ಯೋಗ್ಯವಾದ ಸ್ವರೂಪವುಳ್ಳವನೂ, ವೇದಗಳು, ಮತ್ತು ವೇದಾಂತಗಳು ಇವುಗಳಿಂದ ಸ್ತೋತ್ರಮಾಡಲ್ಪಟ್ಟವನೂ, ಮುಖಗಳಲ್ಲಿಯೂ, ನಾಲಿಗೆಗಳಲ್ಲಿಯೂ ವೇದಗಳುಳ್ಳವನೂ, ವಸ್ತುತಃ ನಾಲಿಗೆಯಿಲ್ಲದವನೂ, ನಾಲಿಗೆಯನ್ನು ನಾಶಮಾಡುವವನೂ ; ॥೯೩-೯೪॥

ಮಂಗಳಸ್ವರೂಪನೂ, ಸ್ವತಃ ಮಂಗಳವಿಗ್ರಹನೂ, ಕಲ್ಯಾಣಗುಣಗಳಿಗೆಲ್ಲಾ ಆಶ್ರಯನೂ, ತನ್ನ ಭಕ್ತರಿಗೆಲ್ಲಾ ಮಂಗಳವನ್ನುಂಟುಮಾಡುವನೂ, ಭಕ್ತರಿಗೆ ಸಕಲ ಇಷ್ಟಾರ್ಥಗಳನ್ನೂ ಕೊಡುವ ಕಾಮಧೇನುವಿನಂತಿರುವವನೂ, ದೇವತೆಗಳಿಗೆಲ್ಲಾ ಒಡೆಯನೂ, ಪರಿಶುದ್ಧನೂ, ಯಜ್ಞೇಶ್ವರರೂಪನೂ, ಸುಂದರಮೂರ್ತಿಯೂ, ಮಹಾಕಾಲಸ್ವರೂಪನೂ, ಮದಗಳನ್ನೆಲ್ಲಾ ಹೋಗಲಾಡಿಸುವವನೂ, ಭಯಂಕರವಾದ ಪಾಪಗಳಿಗೆಲ್ಲಾ ಕಾಡುಗಿಚ್ಚಿನಂತಿರುವವನೂ, ಕಾಡುಗಿಚ್ಚಿನ ಬೂದಿಯ ಕಣಗಳಲ್ಲಿ ಪ್ರೀತಿಯುಳ್ಳವನೂ ಆಗಿ ಪರಶಿವನು ನಾನಾರೀತಿಯಲ್ಲಿ ಕಾಣುವನು. ॥೯೫-೯೬॥

ಅನಂತಸೋಮಸೂರ್ಯಾಗ್ನಿಮಂಡಲಪ್ರತಿಮಪ್ರಭಃ ।
ಜಗದೇಕಪ್ರಭುಃ ಸ್ವಾಮೀ ಜಗದ್ವಂದ್ಯೋ ಜಗನ್ಮಯಃ ॥೯೭॥

ಜಗದಾನಂದದೋ ಜನ್ಮಜರಾಮರಣವರ್ಜಿತಃ ।
ಖಟ್ವಾಂಗೀ ನೀತಿಮಾನ್ಸದ್ಯೋ ದೇವತಾತ್ಮಾತ್ಮಸಂಭವಃ ॥೯೮॥

ಕಪಾಲಮಾಲಾಭರಣೋ ಕಪಾಲೀ ವಿಷ್ಣುವಲ್ಲಭಃ ।
ಕಮಲಾಸನಕಾಲಾಗ್ನಿಃ ಕಮಲಾಸನಪೂಜಿತಃ ॥೯೯॥

ಕಾಲಾಧೀಶಸ್ತ್ರಿಕಾಲಜ್ಞೋ ದುಷ್ಟವಿಗ್ರಹವಾರಕಃ ।
ನಾಟ್ಯಕರ್ತಾ ನಟವರೋ ಮಹಾನಾಟ್ಯವಿಶಾರದಃ ॥೧೦೦॥

ವಿರಾಡ್ರೂಪಧರೋ ಧೀರೋ ವಿರಾಡ್ವೃಷಭವಾಹನಃ ।
ವೃಷಾಂಕೋ ವೃಷಭಾಧೀಶೋ ವೃಷಾತ್ಮಾ ವೃಷಭಧ್ವಜಃ ॥೧೦೧॥

---

ಅಪಾರವಾದ ಚಂದ್ರ, ಸೂರ್ಯ, ಅಗ್ನಿ ಇವರ ಸಮೂಹಕ್ಕೆ ಸಮನಾದ ಕಾಂತಿಯುಳ್ಳವನೂ, ಈ ಪ್ರಪಂಚಕ್ಕೆಲ್ಲಾ ಒಬ್ಬನೇ ಪ್ರಭುವೂ, ಜಗತ್ಸ್ವಾಮಿಯೂ, ಈ ಪ್ರಪಂಚದಿಂದ ನಮಸ್ಕೃತನೂ, ಈ ಪ್ರಪಂಚಸ್ವರೂಪನೂ, ಜಗತ್ತಿಗೆಲ್ಲಾ ಆನಂದಪ್ರದನೂ, ಜನನ, ಮುಪ್ಪು, ಮರಣ, ಇವುಗಳಾವುವೂ ಇಲ್ಲದವನೂ, ಮಂಚದ ಅವಯವವುಳ್ಳವನೂ; ನೀತಿವಂತನೂ, ಸದ್ಯೋಜಾತನೂ, ದೇವತಾಸ್ವರೂಪನೂ, ಸ್ವಯಂಭುವನೂ (ತಾನೇ ಇಚ್ಛೆ ಬಂದಾಗ ಜನ್ಮತಾಳುವವನೂ.) ॥೯೭-೯೮॥

ಕಪಾಲಮಾಲೆಯನ್ನು ಆಭರಣವಾಗಿ ಧರಿಸಿರುವವನೂ, ಕಪಾಲವನ್ನು ಕೈಯಲ್ಲಿ ಹಿಡಿದಿರುವವನೂ, ವಿಷ್ಣುವಿಗೆ ಪ್ರೀತಿಪಾತ್ರನೂ, ಕಮಲಾಸನನಾದ ಬ್ರಹ್ಮನಿಗೆ ಕಾಲಾಗ್ನಿಸ್ವರೂಪನೂ, (ಬ್ರಹ್ಮನ ಒಂದು ತಲೆಯನ್ನು ಕತ್ತರಿಸಿದುದರಿಂದ) ಬ್ರಹ್ಮನಿಂದ ಪೂಜಿಸಲ್ಪಟ್ಟವನೂ, ಕಾಲಗಳಿಗೆಲ್ಲಾ ಅಧಿಪತಿಯೂ, ಭೂತ, ಭವಿಷ್ಯದ್ವರ್ತಮಾನವೆಂಬ ಮೂರು ಕಾಲಗಳನ್ನೂ ಅರಿತವನೂ, ದುಷ್ಟಪ್ರಾಣಿಗಳನ್ನು ನಾಶಮಾಡುವವನೂ, ನಾಟ್ಯವಾಡುವವನೂ, ನಟನೆ ಮಾಡುವರಲ್ಲಿ ಶ್ರೇಷ್ಠನೂ, ನಾಟ್ಯವರಿತವರಲ್ಲಿ ತುಂಬಾ ನಿಪುಣನೂ; ॥೯೯-೧೦೦॥

ವಿರಾಡ್ರೂಪವನ್ನು ಧರಿಸಿರುವವನೂ, ಧೀರನೂ, ಹೆಚ್ಚಾಗಿ ಪ್ರಕಾಶಿಸುವವನೂ, ಎತ್ತನ್ನೇ ವಾಹನವನ್ನಾಗಿಮಾಡಿಕೊಂಡಿರುವನೂ, ವೃಷಭವನ್ನು ಗುರುತಾಗಿಟ್ಟು

ಮಹೋನ್ನತೋ ಮಹಾವಕ್ಷೋ ಮಹಾವೀರೋ ಮಹಾಭುಜಃ ।
ಮಹಾಸ್ಕಂಧೋ ಮಹಾಗ್ರೀವೋ ಮಹದ್ವಕ್ತ್ರೋ ಮಹಚ್ಛಿರಾಃ ॥೧೦೨॥

ಮಹಾಹನುರ್ಮಹಾದಂಷ್ಟ್ರೋ ಮಹದೋಷ್ಠೋ ಮಹೋದರಃ ।
ಸುಂದರಭ್ರೂಃ ಸುನಯನಃ ಸುಲಲಾಟಃ ಸುಕಂಧರಃ ॥೧೦೩॥

ಸತ್ಯವಾಕ್ಯೋ ಧರ್ಮವೇತ್ತಾ ಸತ್ಯಜ್ಞಃ ಸತ್ಯವಿತ್ತಮಃ ।
ಧರ್ಮವಾನ್ಧರ್ಮನಿಪುಣೋ ಧರ್ಮಾಽಧರ್ಮಪ್ರವರ್ತಕಃ ॥೧೦೪॥

ಕೃತಜ್ಞಃ ಕೃತಕೃತ್ಯಾತ್ಮಾ ಕೃತಕೃತ್ಯಃ ಕೃತಾಗಮಃ ।
ಕೃತವಿತ್ಕೃತ್ಯವಿಚ್ಛ್ರೇಷ್ಠೋ ಕೃತಜ್ಞಃ ಪ್ರಿಯಕೃತ್ತಮಃ ॥೧೦೫॥

ವ್ರತಕೃದ್ವ್ರತವಿಚ್ಛ್ರೇಷ್ಠೋ ವ್ರತವಿದ್ವಾನ್ಮಹಾವ್ರತೀ ।
ವ್ರತಿಪ್ರಿಯೋ ವ್ರತಾಕಾರೋ ವ್ರತಾಧಾರೋ ವ್ರತೇಶ್ವರಃ ॥೧೦೬॥

---

ಕೊಂಡಿರುವವನೂ, ವೃಷಭಗಳಿಗೆಲ್ಲಾ ಒಡೆಯನೂ, ಪುಣ್ಯಸ್ವರೂಪನೂ, ವೃಷಭವನ್ನೇ ಬಾವುಟವನ್ನಾಗಿ ಮಾಡಿಕೊಂಡಿರುವವನೂ, ತುಂಬಾ ಎತ್ತರವಾಗಿರುವವನೂ, ದೊಡ್ಡ ವಕ್ಷಃಸ್ಥಳವನ್ನುಳ್ಳವನೂ, ತುಂಬಾ ವೀರನೂ, ದೊಡ್ಡ ಭುಜವುಳ್ಳವನೂ, ದೊಡ್ಡ ಹೆಗಲುಳ್ಳವನೂ, ದೊಡ್ಡ ಕತ್ತುಳ್ಳವನೂ, ದೊಡ್ಡ ಮುಖವುಳ್ಳವನೂ, ದೊಡ್ಡ ತಲೆಯುಳ್ಳವನೂ ಆಗಿದ್ದಾನೆ. ॥೧೦೨॥

ವಿಶಾಲ ಕಪೋಲ, ದವಡೆ, ತುಟಿ, ಉದರ ಇವುಗಳುಳ್ಳವನೂ, ಸುಂದರವಾದ ಹುಬ್ಬು, ಕಣ್ಣು, ಹಣೆ, ಕೊರಳು, ಇವುಗಳಿಂದ ಕೂಡಿದವನೂ; ಸತ್ಯವಾಕ್ಯವುಳ್ಳವನೂ, ಧರ್ಮಜ್ಞನೂ, ಸತ್ಯವನ್ನರಿತವನೂ, ಸತ್ಯಜ್ಞರಲ್ಲಿ ಶ್ರೇಷ್ಠನಾದವನೂ, ಧರ್ಮಿಷ್ಠನೂ, ಧರ್ಮವನ್ನರಿತವರಲ್ಲಿ ನಿಪುಣನೂ, ಧರ್ಮ ಅಧರ್ಮ, ಇವುಗಳಲ್ಲಿ ಪ್ರವರ್ತಿಸುವವನೂ; (ಪ್ರೇರಿಸುವವನೂ) ॥೧೦೩-೧೦೪॥

ಉಪಕಾರವನ್ನು ಸ್ಮರಣೆಮಾಡಿಕೊಳ್ಳುವವನೂ, ಕೃತಕೃತ್ಯಸ್ವರೂಪವುಳ್ಳವನೂ, ಕೃತಕೃತ್ಯನೂ, ಮಾಡಿದ್ದನ್ನು ಬರುವಂತೆ ಮಾಡುವವನೂ, ಕೃತಜ್ಞನೂ, ಕೃತಜ್ಞರಲ್ಲಿ ಶ್ರೇಷ್ಠನೂ, ಪ್ರಿಯಕಾರಿಗಳಲ್ಲಿ ಉತ್ತಮನೂ, ವ್ರತವನ್ನು ಮಾಡುವವನೂ, ವ್ರತಜ್ಞರಲ್ಲಿ ಶ್ರೇಷ್ಠನೂ, ವ್ರತವನ್ನು ಚೆನ್ನಾಗಿ ತಿಳಿದವನೂ, ದೊಡ್ಡ ವ್ರತ

ಅತಿರಾಗೀ ವೀತರಾಗೋ ರಾಗಹೇತುರ್ವಿರಾಗವಿತ್ ।
ರಾಗಘ್ನೋ ರಾಗಶಮನೋ ರಾಗದೋ ರಾಗಿರಾಗವತ್ ॥೧೦೭॥

ವಿದ್ವಾನ್ವಿದ್ವತ್ತಮೋ ವಿದ್ವಜ್ಜನಮಾನಸಸಂಶ್ರಯಃ ।
ವಿದ್ವಜ್ಜನಾಶ್ರಯೋ ವಿದ್ವಜ್ಜನಸ್ತವ್ಯಪರಾಕ್ರಮಃ ॥೧೦೮॥

ನೀತಿಕೃನ್ನೀತಿವಿನ್ನೀತಿಪ್ರದಾತಾ ನೀತಿವಿತ್ಪ್ರಿಯಃ ।
ವಿನೀತವತ್ಸಲೋ ನೀತಿಸ್ವರೂಪೋ ನೀತಿಸಂಶ್ರಯಃ ॥೧೦೯॥

ಕ್ರೋಧಚಿತ್ಕ್ರೋಧಲಚ್ಕ್ರೋಧಿಜನವಿತ್ಕ್ರೋಧಿರೂಪಧೃಕ್ ।
ಕ್ರೋಧದಃ ಕ್ರೋಧಹಾ ಕ್ರೋಧಿಜನಹಾ ಕ್ರೋಧಕಾರಣಃ ॥೧೧೦॥

---

ವುಳ್ಳವನೂ, ವ್ರತಾಚರಣೆ ಮಾಡುವವರಿಗೆ ಪ್ರೀತಿಕರನೂ, ವ್ರತದ ಆಕಾರವುಳ್ಳವನೂ ವ್ರತಗಳಿಗೆಲ್ಲಾ ಆಧಾರವಾಗಿರುವವನೂ, ವ್ರತಸ್ವಾಮಿಯೂ ಆಗಿದ್ದಾನೆ. ॥೧೦೫-೧೦೬॥

ತುಂಬಾ ಅನುರಾಗವುಳ್ಳವನೂ, ರಾಗರಹಿತನೂ, (ವೈರಾಗ್ಯವುಳ್ಳವನೂ) ಅನುರಾಗಕ್ಕೆ ಕಾರಣಭೂತನೂ, ವೈರಾಗ್ಯವನ್ನರಿತವನೂ, ಅನುರಾಗವನ್ನು ನಾಶ ಮಾಡುವವನೂ, ರಾಗವನ್ನು ಶಮನಮಾಡುವವನೂ, ರಾಗಪ್ರದನೂ, ರಾಗವುಳ್ಳವರಲ್ಲಿ ರಾಗವನ್ನರಿತವನೂ, ವಿದ್ವಾಂಸನೂ, ವಿದ್ವಾಂಸರಲ್ಲಿ ಶ್ರೇಷ್ಠನೂ ವಿದ್ವಾಂಸರಾದ ಜನಗಳ ಮನಸ್ಸಿನಲ್ಲಿ ನೆಲಸಿರುವವನೂ, ವಿದ್ವಾಂಸರಿಗೆ ಆಶ್ರಯನಾಗಿರುವವನೂ, ವಿದ್ವಾಂಸರಿಂದ ಸ್ತೋತ್ರಾರ್ಹವಾದ ಪರಾಕ್ರಮವುಳ್ಳವನೂ; ॥೧೦೭-೧೦೮॥

ನೀತಿಯನ್ನಾಚರಿಸುವವನೂ, ನೀತಿಯನ್ನು ತಿಳಿದವನೂ, ನೀತಿಯನ್ನುಪದೇಶ ಮಾಡುವವನೂ, ನೀತಿಜ್ಞರಿಗೆ ಪ್ರೀತಿಕರನೂ, ತುಂಬಾ ವಿನಯವುಳ್ಳವರಲ್ಲಿ ಹೆಚ್ಚು ಪ್ರೀತಿಯುಳ್ಳವನೂ, ನೀತಿಯ ಸ್ವರೂಪವೇ ಆಗಿರುವವನೂ, ನೀತಿಗೆ ಆಶ್ರಯನೂ, ಕೋಪವನ್ನು ಜಯಿಸಿರುವವನೂ, ಕ್ರೋಧಕ್ಕೆ ಆಶ್ರಯನೂ, ಕ್ರೋಧವುಳ್ಳ ಜನಗಳನ್ನರಿತವನೂ, ಕ್ರೋಧವುಳ್ಳ ಜನಗಳ ರೂಪವನ್ನು ಧರಿಸಿರುವವನೂ, ಕೋಪವನ್ನು ಬೀರುವವನೂ, ಕೋಪಶಮನಮಾಡುವವನೂ, ಕೋಪವುಳ್ಳ ಜನರನ್ನು ಕೊಲ್ಲುವವನೂ, ಕ್ರೋಧಕ್ಕೆಲ್ಲಾ ಕಾರಣನೂ ಎನಿಸಿರುವನು. ॥೧೦೯-೧೧೦॥

ಗುಣವಾನ್ಗುಣವಿಚ್ಛ್ರೇಷ್ಠೋ ನಿರ್ಗುಣೋ ಗುಣವಿತ್ಪ್ರಿಯಃ ।
ಗುಣಾಧಾರೋ ಗುಣಾಕಾರೋ ಗುಣಕೃದ್ಗುಣನಾಶಕಃ ॥೧೧೧॥

ವೀರ್ಯವಾನ್ವೀರ್ಯವಿಚ್ಛ್ರೇಷ್ಠೋ ವೀರ್ಯವಿದ್ವೀರ್ಯಸಂಶ್ರಯಃ ।
ವೀರ್ಯಾಕಾರೋ ವೀರ್ಯತರೋ ವೀರ್ಯಹಾ ವೀರ್ಯವರ್ಧಕಃ ॥೧೧೨॥

ಕಾಲವಿತ್ಕಾಲಕೃತ್ಕಾಲೋ ಬಲಕೃದ್ಬಲವಿದ್ಬಲೀ ।
ಮನೋನ್ಮನೋ ಮನೋರೂಪೋ ಬಲಪ್ರಮಥನೋ ಬಲಃ ॥೧೧೩॥

ವಿದ್ಯಾಪ್ರದಾತಾ ವಿದ್ಯೇಶೋ ವಿದ್ಯಾಮಾತ್ರೈಕಸಂಶ್ರಯಃ ।
ವಿದ್ಯಾಕಾರೋ ಮಹಾವಿದ್ಯೋ ವಿದ್ಯಾವೇದ್ಯೋ ವಿಶಾರದಃ ॥೧೧೪॥

ವಸಂತಕೃದ್ವಸಂತಾತ್ಮಾ ವಸಂತೇಶೋ ವಸಂತದಃ ।
ಗ್ರೀಷ್ಮಾತ್ಮಾ ಗ್ರೀಷ್ಮಕೃದ್ಗ್ರೀಷ್ಮವರ್ಧಕೋ ಗ್ರೀಷ್ಮನಾಯಕಃ ॥೧೧೫॥

---

ಸಕಲ ಸದ್ಗುಣಗಳನ್ನೂ ತಿಳಿದವನೂ, (ಗುಣವಂತನೂ) ಗುಣವನ್ನರಿತವರಲ್ಲಿ ಶ್ರೇಷ್ಠನೂ, ಗುಣರಹಿತನೂ, (ದುರ್ಗುಣಗಳಿಂದ ರಹಿತನಾದವನು) ಗುಣಜ್ಞರಿಗೆ ಪ್ರೀತಿಕರನೂ, ಗುಣಗಳಿಗೆಲ್ಲಾ ಆಶ್ರಯನಾಗಿರುವವನೂ, ಗುಣಸ್ವರೂಪನೂ, ಗುಣಗಳನ್ನು ನಿರ್ಮಿಸುವವನೂ, ಗುಣಗಳನ್ನು ನಾಶಪಡಿಸುವನೂ, ಬಲಶಾಲಿಯೂ, ಬಲಿಷ್ಠರಲ್ಲಿ ಶ್ರೇಷ್ಠನೂ, ಬಲವನ್ನರಿತವನೂ, ಬಲಗಳಿಗೆಲ್ಲಾ ಆಶ್ರಯನೂ, ವೀರ್ಯಸ್ವರೂಪನೂ, ಬಲವನ್ನುಂಟುಮಾಡುವವನೂ, ಬಲವನ್ನು ನಾಶಮಾಡುವವನೂ, ಬಲವನ್ನು ಅಭಿವೃದ್ಧಿಪಡಿಸುವನೂ ; ||೧೧೧-೧೧೨||

ಕಾಲವನ್ನರಿತವನೂ, ಕಾಲವನ್ನು ನಿರ್ಮಿಸುವವನೂ, ಕಾಲಸ್ವರೂಪನೂ, ಬಲಕಾರಿಯೂ, ಬಲವನ್ನರಿತವನೂ, ಬಲಶಾಲಿಯೂ, ಮನಸ್ಸನ್ನು ಚಂಚಲಗೊಳಿಸುವವನೂ, ಮನಸ್ಸ್ವರೂಪನೂ, ಬಲವನ್ನು ಹೋಗಲಾಡಿಸುವವನೂ, ಬಲಸ್ವರೂಪನೂ, ವಿದ್ಯೆಯನ್ನು ಕೊಡುವವನೂ, ವಿದ್ಯೆಗಳಿಗೆಲ್ಲಾ ಅಧಿಪತಿಯೂ, ಜ್ಞಾನಮಾತ್ರಕ್ಕೆ ಆಶ್ರಯನಾಗಿರುವವನೂ, ವಿದ್ಯಾಕಾರವುಳ್ಳವನೂ, ಮಹಾವಿದ್ಯಾಸ್ವರೂಪನೂ, ಜ್ಞಾನವನ್ನು ತಿಳಿಯಲು ಯೋಗ್ಯನೂ, ಪಂಡಿತನೂ ಆಗಿದ್ದಾನೆ. ||೧೧೩-೧೧೪||

ವಸಂತನನ್ನು ನಿರ್ಮಿಸಿದವನೂ, ವಸಂತಸ್ವರೂಪನೂ, ವಸಂತಕಾಲಕ್ಕೆ ಅಧಿಪತಿಯೂ, ವಸಂತಕಾಲವನ್ನುಂಟುಮಾಡುವವನೂ, ಗ್ರೀಷ್ಮರ್ತುಸ್ವರೂಪನೂ,

ಪ್ರಾವೃಟ್ಕೃತ್ಪ್ರಾವೃಡಾಕಾರಃ ಪ್ರಾವೃಟ್ಕಾಲಪ್ರವರ್ತಕಃ ।
ಪ್ರಾವೃಟ್ಪ್ರವರ್ಧಕಃ ಪ್ರಾವೃಣ್ಣಾಥಃ ಪ್ರಾವೃಡ್ವಿನಾಶಕಃ ॥೧೧೬॥

ಶಾರದಾತ್ಮಾ ಶರದ್ಧೇತುಃ ಶರತ್ಕಾಲಪ್ರವರ್ತಕಃ ।
ಶರನ್ನಾಥಃ ಶರತ್ಕಾಲನಾಶಕಃ ಶಾರದಾಶ್ರಯಃ ॥೧೧೭॥

ಹಿಮಸ್ವರೂಪೋ ಹಿಮದೋ ಹಿಮಹಾ ಹಿಮನಾಯಕಃ ।
ಶೈಶಿರಾತ್ಮಾ ಶೈಶಿರೇಶಃ ಶೈಶಿರರ್ತುಪ್ರವರ್ತಕಃ ॥೧೧೮॥

ಪ್ರಾಚ್ಯಾತ್ಮಾ ದಕ್ಷಿಣಾಕಾರಃ ಪ್ರತೀಚ್ಯಾತ್ಮೋತ್ತರಾಕೃತಿಃ ।
ಊರ್ಧ್ವಾದ್ಯನ್ಯದಿಗಾಕಾರೋ ನಾನಾದೇಶೈಕನಾಯಕಃ ॥೧೧೯॥

ಸರ್ವಪಕ್ಷಿಮೃಗಾಕಾರಃ ಸರ್ವಪಕ್ಷಿಮೃಗಾಧಿಪಃ ।
ಪಿನಾಕಪಾಣಿಃ ಸೂರ್ಯಾತ್ಮಾ ಸೋಮಸೂರ್ಯಾಗ್ನಿಲೋಚನಃ ॥೧೨೦॥

---

ಗ್ರೀಷ್ಮಕಾಲವನ್ನು ನಿರ್ಮಿಸಿದವನೂ, ಗ್ರೀಷ್ಮಕಾಲವನ್ನು ಅಭಿವೃದ್ಧಿಗೊಳಿಸುವವನೂ, ಗ್ರೀಷ್ಮಋತುವಿಗೆ ಒಡೆಯನೂ, ವರ್ಷರ್ತುವನ್ನು ನಿರ್ಮಿಸಿದವನೂ, ವರ್ಷರ್ತುವಿನ ಆಕಾರವುಳ್ಳವನೂ, ಮಳೆಗಾಲವನ್ನು ನಡೆಸುವವನೂ, ಮಳೆಗಾಲವನ್ನು ಅಭಿವೃದ್ಧಿಗೊಳಿಸುವವನೂ, ಮಳೆಗಾಲಕ್ಕೆ ಒಡೆಯನೂ, ಮಳೆಗಾಲವನ್ನು ನಾಶಮಾಡುವವನೂ ; ॥೧೧೫-೧೧೬॥

ಶರದೃತುವಿನ ಸ್ವರೂಪನೂ, ಶರದೃತುವಿಗೆ ಕಾರಣಭೂತನಾಗಿರುವನೂ, ಶರತ್ಕಾಲಕ್ಕೆ ಪ್ರವರ್ತಕನಾಗಿರುವವನೂ, ಶರದೃತುವಿಗೆ ಒಡೆಯನೂ, ಶರತ್ಕಾಲವನ್ನು ನಾಶಮಾಡುವನೂ, ಶರತ್ಕಾಲಕ್ಕೆ ಆಶ್ರಯನೂ, ಹಿಮಸ್ವರೂಪನೂ, ಹಿಮವನ್ನುಂಟು ಮಾಡುವವನೂ, ಹಿಮವನ್ನು ನಾಶಮಾಡುವವನೂ, ಹಿಮಗಳಿಗೆ ಒಡೆಯನೂ, ಶಿಶಿರಋತುವಿನ ಸ್ವರೂಪನೂ, ಶಿಶಿರಋತುವಿಗೆ ಒಡೆಯನೂ, ಶಿಶಿರಋತುವನ್ನು ಪ್ರೇರಿಸುವವನೂ; ॥೧೧೭-೧೧೮॥

ಪೂರ್ವ, ದಕ್ಷಿಣ, ಪಶ್ಚಿಮ, ಉತ್ತರ, ಮೇಲೆ, ಕೆಳಗೆ ಮೊದಲಾದ ದಿಕ್ಕುಗಳ ಸ್ವರೂಪವುಳ್ಳವನೂ, ಅನೇಕ ದೇಶಗಳಿಗೂ ಒಬ್ಬನೇ ಆದ ನಾಯಕನೂ, ಸಕಲ ಪಕ್ಷಿ, ಮೃಗಗಳು ಇವುಗಳ ಆಕಾರವುಳ್ಳವನೂ, ಸಕಲ ಪಕ್ಷಿ, ಮೃಗಗಳು ಇವುಗಳಿಗೆ

ಜೀವಾಧ್ಯಕ್ಷೋ ಜೀವವಂದ್ಯೋ ಜೀವವಿಜ್ಜೀವರಕ್ಷಕಃ ।
ಜೀವಕೃಜ್ಜೀವಹಾ ಜೀವಜೀವನೋ ಜೀವಸಂಶ್ರಯಃ ॥೧೨೧॥

ಜ್ಯೋತಿಃ ಸ್ವರೂಪೋ ವಿಶ್ವಾತ್ಮಾ ವಿಶ್ವನಾಥೋ ವಿಯತ್ಪತಿಃ ।
ವಜ್ರಾತ್ಮಾ ವಜ್ರಹಸ್ತಾತ್ಮಾ ವಜ್ರೇಶೋ ವಜ್ರಭೂಷಿತಃ ॥೧೨೨॥

ಕುಮಾರಗುರುರೀಶಾನೋ ಗಣಾಧ್ಯಕ್ಷೋ ಗಣಾಧಿಪಃ ।
ಪಿನಾಕಪಾಣಿಃ ಸೂರ್ಯಾತ್ಮಾ ಸೋಮಸೂರ್ಯಾಗ್ನಿಲೋಚನಃ ॥೧೨೩॥

ಅಪಾಯರಹಿತಃ ಶಾಂತೋ ದಾಂತೋ ದಮಯಿತಾ ದಮಃ ।
ಋಷಿಃ ಪುರಾಣಪುರುಷಃ ಪುರುಷೇಶಃ ಪುರಂದರಃ ॥೧೨೪॥

---

ಅಧಿಪತಿಯೂ, ಪಿನಾಕವೆಂಬ ಬಿಲ್ಲನ್ನು ಕೈಯ್ಯಲ್ಲಿ ಹಿಡಿದಿರುವನೂ, ಸೂರ್ಯಸ್ವರೂಪನೂ, ಚಂದ್ರ, ಸೂರ್ಯ, ಅಗ್ನಿ ಇವರನ್ನೇ ಕಣ್ಣುಗಳಾಗಿ ಉಳ್ಳವನೂ ಆಗಿದ್ದಾನೆ. ॥೧೧೯-೧೨೦॥

ಜೀವಗಳಿಗೆಲ್ಲಾ ಅಧ್ಯಕ್ಷನೂ, ಜೀವಗಳಿಂದ ನಮಸ್ಕೃತನೂ, ಜೀವಾತ್ಮನನ್ನರಿತವನೂ, ಜೀವಗಳನ್ನು ಕಾಪಾಡುವವನೂ, ಜೀವಗಳನ್ನು ನಿರ್ಮಿಸುವವನೂ, ಜೀವಿಗಳನ್ನು ನಾಶಮಾಡುವವನೂ, ಜೀವಗಳನ್ನು ಬದುಕಿಸುವವನೂ, ಜೀವಗಳಿಗೆ ಆಶ್ರಯನೂ, ಜ್ಯೋತಿಃಸ್ವರೂಪನೂ, ಪ್ರಪಂಚಸ್ವರೂಪನೂ, ಜಗದೊಡೆಯನೂ, ಅಂತರಿಕ್ಷಗಳಿಗೆಲ್ಲಾ ಒಡೆಯನೂ, ವಜ್ರಸ್ವರೂಪನೂ, ವಜ್ರಾಯುಧವನ್ನು ಕೈಯ್ಯಿಂದ ಹಿಡಿದಿರುವ ಇಂದ್ರನ ಸ್ವರೂಪವುಳ್ಳವನೂ, ವಜ್ರಗಳಿಗೆ ಅಧಿಪತಿಯೂ, ವಜ್ರಗಳಿಂದ ಅಲಂಕೃತನೂ ; ॥೧೨೧-೧೨೨॥

ಕುಮಾರಸ್ವಾಮಿಯ ತಂದೆಯೂ, ಐಶ್ವರ್ಯಾಧಿಪತಿಯೂ, ಗಣಗಳಿಗೆಲ್ಲಾ ಒಡೆಯನೂ, ಗಣಾಧಿಪತಿಯೂ, ಪಿನಾಕವೆಂಬ ಬಿಲ್ಲನ್ನು ಹಿಡಿದಿರುವವನೂ, ಸೂರ್ಯಸ್ವರೂಪನೂ, ಚಂದ್ರ, ಸೂರ್ಯ, ಅಗ್ನಿ, ಇವರನ್ನೇ ಕಣ್ಣುಗಳನ್ನಾಗಿ ಉಳ್ಳವನೂ, ಯಾವ ತೊಂದರೆಗೂ ಎಡೆಯಾಗದವನೂ, ಶಾಂತಿಗುಣಗಳುಳ್ಳವನೂ, ಇಂದ್ರಿಯನಿಗ್ರಹವುಳ್ಳವನೂ, ಇಂದ್ರಿಯ ನಿಗ್ರಹಶಕ್ತಿಯನ್ನು ಮತ್ತೊಬ್ಬರಿಗೆ ಉಂಟುಮಾಡುವವನೂ, ಸಾಕ್ಷಾದ್ದಮಸ್ವರೂಪನೂ, ತತ್ವವನ್ನು ತಿಳಿದವನೂ, ಪುರಾಣಪುರುಷನೂ, ಪುರುಷರಿಗೆಲ್ಲಾ ಒಡೆಯನೂ, ತ್ರಿಪುರಾಸುರರ ಪಟ್ಟಣವನ್ನು ದಹನಮಾಡಿ ಧ್ವಂಸಮಾಡಿದವನೂ ಆಗಿರುವನು. ॥೧೨೩-೧೨೪॥

ಕಾಲಾಗ್ನಿರುದ್ರಃ ಸರ್ವೇಶಃ ಶಮರೂಪಃ ಶಮೇಶ್ವರಃ ।
ಪ್ರಲಯಾನಲಕೃದ್ಧವ್ಯಃ ಪ್ರಲಯಾನಲನಾಶಕಃ ॥೧೨೫॥

ತ್ರ್ಯಂಬಕೋಽಪ್ಯರಿಷಡ್ವರ್ಗನಾಶಕೋ ಧನದಪ್ರಿಯಃ ।
ಅಕ್ಷೋಭ್ಯಃ ಕ್ಷೋಭರಹಿತಃ ಕ್ಷೋಭದಃ ಕ್ಷೋಭನಾಶಕಃ ॥೧೨೬॥

ಸ ದಂಭೋ ದಂಭರಹಿತೋ ದಂಭದೋ ದಂಭನಾಶಕಃ ।
ಕುಂದೇಂದುಶಂಖಧವಲೋ ಭಸ್ಮೋದ್ಧೂಲಿತವಿಗ್ರಹಃ ॥೧೨೭॥

ಭಸ್ಮಧಾರಣಹೃಷ್ಟಾತ್ಮಾ ತುಷ್ಟಃ ಪುಷ್ಟೋಽರಿಸೂದನಃ ।
ಸ್ಥಾಣುರ್ದಿಗಂಬರೋ ಭರ್ಗೋ ಭಗನೇತ್ರಭಿದುಜ್ಜ್ವಲಃ ॥೧೨೮॥

ತ್ರಿಕಾಗ್ನಿಃ ಕಾಲಕಾಲಾಗ್ನಿರದ್ವಿತೀಯೋ ಮಹಾಯಶಾಃ ।
ಸಾಮಪ್ರಿಯಃ ಸಾಮವೇತ್ತಾ ಸಾಮಗಃ ಸಾಮಗಪ್ರಿಯಃ ॥೧೨೯॥

---

ಪ್ರಳಯಕಾಲದ ಬೆಂಕಿಯಂತೆ ಭಯಂಕರನೂ, ಎಲ್ಲರಿಗೂ ಒಡೆಯನೂ, ಶಮಸ್ವರೂಪನೂ, ಶಮಗಳಿಗೆಲ್ಲಾ ಒಡೆಯನೂ, ಪ್ರಲಯಕಾಲದ ಅಗ್ನಿಯನ್ನುಂಟು ಮಾಡುವವನೂ, ಮಂಗಳಸ್ವರೂಪನೂ, ಪ್ರಳಯಕಾಲದ ಬೆಂಕಿಯನ್ನು ನಾಶಮಾ ಡುವವನೂ, ಮೂರು ಕಣ್ಣುಳ್ಳವನೂ, ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ, ಇವುಗಳನ್ನು (ಅರಿಷಡ್ವರ್ಗಗಳನ್ನು) ನಾಶಮಾಡುವವನೂ, ಧನಾಧಿಪತಿ ಯಾದ ಕುಬೇರನಿಗೆ ಪ್ರೀತಿಪಾತ್ರನೂ, ಯಾರಿಂದಲೂ ಕ್ಷೋಭೆ ಹೊಂದದವನೂ, ಕ್ಷೋಭೆಯಿಲ್ಲದವನೂ, ಕ್ಷೋಭೆಯನ್ನುಂಟುಮಾಡುವವನೂ, ಕ್ಷೋಭೆಯನ್ನು ನಾಶಮಾಡುವವನೂ; ||೧೨೫-೧೨೬||

ದಂಭಯುಕ್ತನೂ, ದಂಭವಿಲ್ಲದವನೂ, ಜನಗಳಿಗೆ ದಂಭವನ್ನುಂಟುಮಾಡು ವವನೂ, ದಂಭವನ್ನು ನಾಶಮಾಡುವನೂ, ಕುಂದಪುಷ್ಪ, ಚಂದ್ರ, ಶಂಖ, ಇವುಗ ಳಂತೆ ಶುಭ್ರವರ್ಣವುಳ್ಳವನೂ, ಭಸ್ಮವನ್ನು ಮೈಗೆಲ್ಲಾ ಬಳಿದುಕೊಂಡಿರುವವನೂ, ಭಸ್ಮವನ್ನು ಧರಿಸುವುದರಿಂದ ಸಂತೋಷಹೊಂದುವ ಅಂತರಂಗವುಳ್ಳವನೂ, ಯಾವಾಗಲೂ ತೃಪ್ತಿಹೊಂದಿರುವವನೂ, ಶರೀರಪುಷ್ಟಿಯುಳ್ಳವನೂ, ಶತ್ರುಗಳನ್ನು ನಾಶಮಾಡುವವನೂ, ಸ್ಥಾಣುವೂ, ದಿಕ್ಕುಗಳನ್ನೇ ವಸ್ತ್ರವನ್ನಾಗಿ ಧರಿಸಿರುವನೂ, ಪ್ರಪಂಚವನ್ನೆಲ್ಲಾ ಸೃಷ್ಟಿಮಾಡುವನೂ, ಉಜ್ಜ್ವಲಸ್ವರೂಪವುಳ್ಳವನೂ. ಆಗಿರುವನು. ||೧೨೭-೧೨೮||

ದಕ್ಷಿಣಾಗ್ನಿ, ಗಾರ್ಹಪತ್ಯ, ಮತ್ತು ಆಹವನೀಯವೆಂಬ ಮೂರು ಅಗ್ನಿಗಳ

ಧೀರೋ ದಾಂತೋ ಮಹಾಧೀರೋ ಧೈರ್ಯದೋ ಧೈರ್ಯವರ್ಧಕಃ ।
ಲಾವಣ್ಯರಾಶಿಃ ಸರ್ವಜ್ಞಃ ಸುಬುದ್ಧಿರ್ಬುದ್ಧಿಮದ್ವರಃ ॥೧೩೦॥

ತುಂಬ್ರುವೀಣಾಕಂಬುಕಂಠಃ ಶಂಬರಾರಿನಿಕೃಂತನಃ ।
ಶಾರ್ದೂಲಚರ್ಮವಸನಃ ಪೂರ್ಣಾನಂದೋ ಜಗತ್ಪ್ರಿಯಃ ॥೧೩೧॥

ಜಯಪ್ರದೋ ಜಯಾಧ್ಯಕ್ಷೋ ಜಯಾತ್ಮಾ ಜಯಕಾರಣಃ ।
ಜಂಗಮಾಜಂಗಮಾಕಾರೋ ಜಗದುತ್ಪತ್ತಿಕಾರಣಃ ॥೧೩೨॥

ಜಗದ್ರಕ್ಷಾಕರೋಽವಶ್ಯೋ ಜಗತ್ಪ್ರಲಯಕಾರಣಃ ।
ಪೂಷದಂತಭಿದುತ್ಕೃಷ್ಟಃ ಪಂಚಯಜ್ಞಪ್ರಭಂಜಕಃ ॥೧೩೩॥

---

ಸ್ವರೂಪವುಳ್ಳವನೂ, ಪ್ರಳಯಕಾಲದ ಅಗ್ನಿಯಸ್ವರೂಪವುಳ್ಳವನೂ, ಅದ್ವಿತೀಯನೂ, ತುಂಬಾ ಕೀರ್ತಿಯುಳ್ಳವನೂ, ಸಾಮಗಳಲ್ಲಿ ಪ್ರೀತಿಯುಳ್ಳವನೂ, ಸಾಮವನ್ನರಿತವನೂ, ಸಾಮವನ್ನು ಗಾನಮಾಡುವನೂ, ಸಾಮಗಾನಮಾಡುವರಲ್ಲಿ ಪ್ರೀತಿಯುಳ್ಳವನೂ, ಧೀರನೂ, ಇಂದ್ರಿಯನಿಗ್ರಹವುಳ್ಳವನೂ, ತುಂಬಾ ಧೈರ್ಯವುಳ್ಳವನೂ, ಧೈರ್ಯವನ್ನುಂಟುಮಾಡುವನೂ, ಧೈರ್ಯವನ್ನು ಹೆಚ್ಚಿಸುವವನೂ, ಸೌಂದರ್ಯರಾಶಿಯೂ, ಸರ್ವಜ್ಞನೂ, ಒಳ್ಳೆಯ ಬುದ್ಧಿಯುಳ್ಳವನೂ, ಬುದ್ಧಿಯುಳ್ಳವರಲ್ಲಿ ಶ್ರೇಷ್ಠನೂ; ||೧೨೯-೧೩೦||

ತುಂಬುರು ನಾರದ ಮುನಿಗಳ ವೀಣೆಯಂತೆ ಮಧುರವಾದ ಧ್ವನಿಯುಳ್ಳವನೂ, ಶಂಖದಂತೆ ಕುತ್ತಿಗೆಯುಳ್ಳವನೂ, ಶಂಬರಾಸುರನನ್ನು ಕೊಂದ ಮನ್ಮಥನನ್ನು ಧ್ವಂಸಮಾಡಿದವನೂ, ಹುಲಿಯ ಚರ್ಮವನ್ನು ಹೊದಿಯುವವನೂ, ಪರಿಪೂರ್ಣವಾದ ಆನಂದಸ್ವರೂಪನೂ, ಪ್ರಪಂಚಕ್ಕೆಲ್ಲಾ ಪ್ರೀತಿಪಾತ್ರನೂ, ಜಯವನ್ನುಂಟುಮಾಡುವವನೂ, ಜಯಗಳಿಗೆಲ್ಲಾ ಅಧ್ಯಕ್ಷನೂ, ವಿಜಯಸ್ವರೂಪನೂ, ವಿಜಯಗಳಿಗೆಲ್ಲಾ ಕಾರಣನೂ, ಸ್ಥಾವರಜಂಗಮಾತ್ಮಕನೂ, ಈ ಜಗತ್ತಿನ ಸೃಷ್ಟಿಗೆ ಕಾರಣನೂ ಆಗಿರುವನು ; ||೧೩೧-೧೩೨||

ಪ್ರಪಂಚದ ರಕ್ಷಣಕಾರ್ಯದಲ್ಲಿ ನಿರತನೂ, ಮತ್ತೊಬ್ಬರಿಗೆ ವಶನಾಗದವನೂ, ಜಗತ್ತಿನ ಪ್ರಳಯಕ್ಕೆ ಕಾರಣಭೂತನೂ, ಪೂಷದಂತವನ್ನು ಭೇದಿಸಿದವನೂ, ಶ್ರೇಷ್ಠನೂ, ಪಂಚಯಜ್ಞಗಳನ್ನು ನಾಶಮಾಡುವವನೂ, ಎಂಟು ಮೂರ್ತಿಗ

ಅಷ್ಟಮೂರ್ತಿರ್ವಿಶ್ವಮೂರ್ತಿರತಿಸ್ಫೂರ್ತಿರಮೂರ್ತಿಮಾನ್ ।
ಕೈಲಾಸಶಿಖರಾವಾಸಃ ಕೈಲಾಸಶಿಖರಪ್ರಿಯಃ ॥೧೩೪॥

ಭಕ್ತಕೈಲಾಸದಃ ಸೂಕ್ಷ್ಮೋ ಮರ್ಮಜ್ಞಃ ಸರ್ವಶಿಕ್ಷಕಃ ।
ಸೋಮಃ ಸೋಮಕಲಾಕಾರೋ ಮಹಾತೇಜಾ ಮಹಾತಪಾಃ ॥೧೩೫॥

ಹಿರಣ್ಯಶ್ಮಶ್ರುರಾನಂದಃ ಸ್ವರ್ಣಕೇಶಃ ಸುವರ್ಣದೃಕ್ ।
ಬ್ರಹ್ಮಾ ವಿಶ್ವಸೃಡುರ್ವೀಶೋ ಮೋಚಕೋ ಬಂಧವರ್ಜಿತಃ ॥೧೩೬॥

ಸ್ವತಂತ್ರಃ ಸರ್ವತಂತ್ರಾತ್ಮಾ ದ್ಯುತಿಮಾನಮಿತಪ್ರಭಃ ।
ಪುಷ್ಕರಾಕ್ಷಃ ಪುಣ್ಯಕೀರ್ತಿಃ ಪುಣ್ಯಶ್ರವಣಕೀರ್ತನಃ ॥೧೩೭॥

ಪುಣ್ಯಮೂರ್ತಿಃ ಪುಣ್ಯದಾತಾ ಪುಣ್ಯಾಪುಣ್ಯಫಲಪ್ರದಃ ।
ಸಾರಭೂತಃ ಸ್ವರಮಯೋ ರಸಭೂತೋ ರಸಾಶ್ರಯಃ ॥೧೩೮॥

---

ಉಳ್ಳವನೂ, (ನೀರು, ಅಗ್ನಿ, ವಾಯು, ಯಜಮಾನ, ಚಂದ್ರ, ಸೂರ್ಯ, ಆಕಾಶ, ಪೃಥಿವೀ ಈ ಎಂಟೂ ಅಷ್ಟಮೂರ್ತಿಗಳು) ಪ್ರಪಂಚಸ್ವರೂಪನೂ, ಹೆಚ್ಚಾದ ಸ್ಫೂರ್ತಿಯುಳ್ಳವನೂ, ಮೂರ್ತಿರಹಿತನೂ, ಕೈಲಾಸಪರ್ವತದ ಶಿಖರದಲ್ಲಿ ವಾಸಮಾಡುವವನೂ, ಕೈಲಾಸಶಿಖರದಲ್ಲಿ ಪ್ರೀತಿಯುಳ್ಳವನೂ ; ||೧೩೩-೧೩೪||

ತನ್ನ ಭಕ್ತರಿಗೆ ಕೈಲಾಸವನ್ನು ಕೊಡುವವನೂ, ಸೂಕ್ಷ್ಮಸ್ವರೂಪನೂ, ಮರ್ಮವನ್ನರಿತವನೂ, ಎಲ್ಲರನ್ನೂ ಶಿಕ್ಷಿಸುವವನೂ, ಉಮಾರಮಣನೂ, ಚಂದ್ರಕಲೆಯ ಆಕಾರವುಳ್ಳವನೂ, ಅತಿಶಯ ತೇಜಸ್ವಿಯೂ, ಅಪಾರವಾದ ತಪಸ್ಸುಳ್ಳವನೂ, ಚಿನ್ನದ ಬಣ್ಣದ ಮೀಸೆಯುಳ್ಳವನೂ, ಆನಂದಸ್ವರೂಪನೂ, ಚಿನ್ನದಂತೆ ಕೂದಲುಳ್ಳವನೂ, ಚಿನ್ನದ ದೃಷ್ಟಿಯುಳ್ಳವನೂ, ಬ್ರಹ್ಮಸ್ವರೂಪನೂ, ಪ್ರಪಂಚವನ್ನು ಸೃಷ್ಟಿಮಾಡುವವನೂ, ಪ್ರಪಂಚಕ್ಕೆಲ್ಲಾ ಒಡೆಯನೂ, ಎಲ್ಲರ ದುಃಖಗಳನ್ನೂ ಬಿಡಿಸುವವನೂ, ಯಾವ ಬಂಧನಗಳಿಗೂ ಸಿಗದವನೂ; ||೧೩೫-೧೩೬||

ಸ್ವತಂತ್ರನೂ, ಎಲ್ಲಾ ತಂತ್ರಗಳ ಸ್ವರೂಪನೂ, ಕಾಂತಿಯುಳ್ಳವನೂ, ಅಪರಿಮಿತವಾದ ಪ್ರಭೆಯುಳ್ಳವನೂ, ಕಮಲದಂತೆ ಕಣ್ಣುಳ್ಳವನೂ, ಪುಣ್ಯಕೀರ್ತಿಯುಳ್ಳವನೂ, ಪುಣ್ಯಕಥೆಗಳನ್ನು ಕೇಳುವವನೂ ಮತ್ತು ಹೇಳುವನೂ, ಪುಣ್ಯ

ಓಂಕಾರಃ ಪ್ರಣವೋ ನಾದಃ ಪ್ರಣತಾರ್ತಿಪ್ರಭಂಜನಃ ।
ನಿಕಟಸ್ಥೋऽತಿದೂರಸ್ಥೋ ವಶೀ ಬ್ರಹ್ಮಾಂಡನಾಯಕಃ ॥೧೩೯॥

ಮಂದಾರಮೂಲನಿಲಯೋ ಮಂದಾರಕುಸುಮಾವೃತಃ ।
ವೃಂದಾರಕಪ್ರಿಯತಮೋ ವೃಂದಾರಕವರಾರ್ಚಿತಃ ॥೧೪೦॥

ಶ್ರೀಮಾನನಂತಕಲ್ಯಾಣಪರಿಪೂರ್ಣೋ ಮಹೋದಯಃ ।
ಮಹೋತ್ಸಾಹೋ ವಿಶ್ವಭೋಕ್ತಾ ವಿಶ್ವಾಶಾಪರಿಪೂರಕಃ ॥೧೪೧॥

ಸುಲಭೋऽಸುಲಭೋಲಭ್ಯೋऽಲಭ್ಯೋ ಲಾಭವರ್ಧಕಃ ।
ಲಾಭಾತ್ಮಾ ಲಾಭದೋ ವಕ್ತಾ ದ್ಯುತಿಮಾನನಸೂಯಕಃ ॥೧೪೨॥

---

ಮೂರ್ತಿಯೂ, ಪುಣ್ಯಪ್ರದನೂ, ಮಾನವರಿಗೆ ಪುಣ್ಯಪಾಪರೂಪವಾದ ಫಲಗಳನ್ನು ಕೊಡುವವನೂ, ಸಾರಭೂತವಾಗಿರುವನೂ, ಸ್ವರಸ್ವರೂಪನೂ, ರಸಭೂತನೂ, ರಸಗಳಿಗೆಲ್ಲಾ ಆಶ್ರಯನೂ ; ||೧೩೭-೧೩೮||

ಓಂಕಾರಸ್ವರೂಪನೂ, ಪ್ರಣವಾಕಾರನೂ, ನಾದಸ್ವರೂಪನೂ, ತನಗೆ ವಿನಯದಿಂದ ನಮಸ್ಕಾರಮಾಡಿದವರ ದುಃಖವನ್ನು ಹೋಗಲಾಡಿಸುವವನೂ, ಸಮೀಪದಲ್ಲಿರುವನೂ, ತುಂಬಾ ದೂರದಲ್ಲಿರುವನೂ, ಎಲ್ಲರನ್ನೂ ತನ್ನ ಅಧೀನಮಾಡಿಕೊಂಡಿರುವವನೂ, ಬ್ರಹ್ಮಾಂಡಗಳಿಗೆಲ್ಲಾ ಒಡೆಯನೂ ; ಮಂದಾರವೃಕ್ಷಗಳ ಬುಡದಲ್ಲಿ ನೆಲಸಿರುವನೂ, ಮಂದಾರ ಪುಷ್ಪಗಳಿಂದ ಪೂಜಿಸಲ್ಪಟ್ಟವನೂ, ದೇವತೆಗಳಿಗೆಲ್ಲಾ ತುಂಬಾ ಪ್ರೀತಿಪಾತ್ರನೂ, ಉತ್ತಮರಾದ ದೇವತೆಗಳಿಂದ ಪೂಜಿಸಲ್ಪಟ್ಟವನೂ ಎನಿಸಿ ಪರಶಿವನು ನಾನಾರೂಪದಲ್ಲಿರುವನು. ||೧೩೯-೧೪೦||

ಸಂಪದ್ಯುಕ್ತನೂ, ಅಪಾರವಾದ ಕಲ್ಯಾಣಗುಣಗಳಿಂದ ಪರಿಪೂರ್ಣನೂ, ದೊಡ್ಡದಾದ ಆವಿರ್ಭಾವವುಳ್ಳವನೂ, ಮೀರಿದ ಉತ್ಸಾಹವುಳ್ಳವನೂ, ಪ್ರಪಂಚ ಭೋಗವುಳ್ಳವನೂ, ಪ್ರಪಂಚದ ಆಶೆಗಳನ್ನೆಲ್ಲಾ ಪೂರ್ತಿಗೊಳಿಸುವವನೂ, ಸುಲಭನೂ ಸುಲಭವಾಗಿ ದೊರೆಯದವನೂ, ಭಕ್ತರಿಂದ ಹೊಂದಲು ಯೋಗ್ಯನೂ, ಮತ್ತಾರಿಗೂ ಹೊಂದಲು ಅಸಾಧ್ಯನೂ, ಲಾಭವನ್ನು ಹೆಚ್ಚು ಮಾಡುವವನೂ, ಲಾಭಸ್ವರೂಪನೂ, ಲಾಭವನ್ನುಂಟುಮಾಡುವವನೂ, ಚೆನ್ನಾಗಿ ಮಾತನಾಡುವವನೂ, ಕಾಂತಿವಂತನೂ, ಅಸೂಯಾರಹಿತನೂ ; ||೧೪೧-೧೪೨||

ಬ್ರಹ್ಮಚಾರೀ ದೃಢಾಚಾರೀ ದೇವಸಿಂಹೋ ಧನಪ್ರಿಯಃ ।
ವೇದೇಡ್ಯೋ ದೇವದೇವೇಶೋ ದೇವದೇವೋತ್ತಮೋತ್ತಮಃ॥೧೪೩॥

ಬೀಜರಾಜೋ ಬೀಜಹೇತುರ್ಬೀಜದೋ ಬೀಜವೃದ್ಧಿದಃ ।
ಬೀಜಾಧಾರೋ ಬೀಜರೂಪೋ ನಿರ್ಬೀಜೋ ಬೀಜನಾಶಕಃ ॥೧೪೪॥

ಪರಾಪರೇಶಃ ಪರದಃ ಪಿಂಗಲೋ ಯುಗ್ಮಲೋಚನಃ ।
ಪಿಂಗಳಾಕ್ಷಃ ಸುರಗುರುರ್ಗುರುಃ ಸುರಗುರುಪ್ರಿಯಃ ॥೧೪೫॥

ಯುಗಾವಹೋ ಯುಗಾಧೀಶೋ ಯುಗಕೃದ್ಯುಗನಾಶಕಃ ।
ಕರ್ಪೂರಗೌರೋ ಗೌರೀಶೋ ಗೌರೀಗುರುಗುಹಾಶ್ರಯಃ ॥೧೪೬॥

---

ಯಾವಾಗಲೂ ಬ್ರಹ್ಮಜ್ಞಾನತತ್ಪರನಾಗಿ ವಟುವಾಗಿರುವವನೂ, ದೃಢವಾದ ಆಚಾರವುಳ್ಳವನೂ, ದೇವತೆಗಳಲ್ಲೆಲ್ಲಾ ಶ್ರೇಷ್ಠನೂ, ದ್ರವ್ಯದಲ್ಲಿ ಪ್ರೀತಿಯುಳ್ಳವನೂ, ವೇದಗಳಿಂದ ಸ್ತೋತ್ರಮಾಡಲ್ಪಡುವವನೂ, ದೇವದೇವೋತ್ತಮನೂ, ಎಲ್ಲಾ ದೇವತೆಗಳಲ್ಲಿಯೂ ತುಂಬಾ ಶ್ರೇಷ್ಠನೂ, ಬೀಜಗಳಿಗೆಲ್ಲಾ ರಾಜನೂ, ಬೀಜಕ್ಕೆ ಕಾರಣಭೂತನೂ, ಬೀಜವನ್ನುಂಟುಮಾಡುವವನೂ, ಬೀಜವನ್ನು ಅಭಿವೃದ್ಧಿಮಾಡುವನೂ, ಬೀಜಗಳಿಗೆಲ್ಲಾ ಆಧಾರನೂ, ಬೀಜಸ್ವರೂಪನೂ, ಬೀಜರಹಿತನೂ, ಬೀಜಗಳನ್ನೆಲ್ಲಾ ನಾಶಮಾಡುವವನೂ; ೧೪೩-೧೪೪॥

ಶ್ರೇಷ್ಠವಾದ ಪದಾರ್ಥಗಳಿಗಿಂತಲೂ ತುಂಬಾ ಶ್ರೇಷ್ಠನೂ, ಈಶ್ವರನೂ, ಉತ್ಕೃಷ್ಟವಾದ ಫಲಗಳನ್ನು ಭಕ್ತರಿಗೆ ಕೊಡುವವನೂ, ಪಿಂಗಳ ಬಣ್ಣವುಳ್ಳವನೂ, ಎರಡು ಕಣ್ಣುಳ್ಳವನೂ, ಪಿಂಗಳ ಬಣ್ಣದ ಕಣ್ಣುಳ್ಳವನೂ, ದೇವತೆಗಳಿಗೆಲ್ಲಾ ಗುರುವೂ, ಅಜ್ಞಾನಾಂಧಕಾರವನ್ನು ಹೋಗಲಾಡಿಸುವವನೂ, ದೇವಗುರುವಾದ ಬೃಹಸ್ಪತ್ಯಾಚಾರ್ಯನಿಗೆ ಪ್ರಿಯಕರನೂ, ಯುಗವನ್ನು ಧರಿಸಿರುವವನೂ, ಯುಗಗಳಿಗೆಲ್ಲಾ (ಕೃತ, ತ್ರೇತಾ, ದ್ವಾಪರ, ಮತ್ತು ಕಲಿ, ಎಂಬ ಯುಗಗಳಿಗೆಲ್ಲಾ) ಒಡೆಯನೂ, ಯುಗಗಳನ್ನೆಲ್ಲಾ ನಿರ್ಮಿಸುವವನೂ, ಯುಗಗಳನ್ನು ನಾಶಮಾಡುವವನೂ; ಕರ್ಪೂರದಂತೆ ಶುಭ್ರವಾದ ಬಣ್ಣವುಳ್ಳವನೂ, ಗೌರೀದೇವಿಯ ರಮಣನೂ, ಗೌರೀ, ಗುರುವೆನಿಸಿದ ಗುಹ, ಇವರಿಗೆಲ್ಲಾ ಆಶ್ರಯನೂ; ॥೧೪೫-೧೪೬॥

ಧೂರ್ಜಟಿಃ ಪಿಂಗಲಜಟೋ ಜಟಾಮಂಡಲಮಂಡಿತಃ ।
ಮನೋಜವೋ ಬೀಜಹೇತುರಂಧಕಾಸುರಸೂದನಃ ॥೧೪೭॥

ಲೋಕಬಂಧುಃ ಕಲಾಧಾರಃ ಪಾಂಡುರಃ ಪ್ರಮಥಾಧಿಪಃ ।
ಅವ್ಯಕ್ತಲಕ್ಷಣೋ ಯೋಗೀ ಯೋಗೀಶೋ ಯೋಗಿಪುಂಗವಃ ॥೧೪೮॥

ಭೂತಾವಾಸೋ ಜನಾವಾಸಃ ಸುರಾವಾಸಃ ಸುಮಂಗಲಃ ।
ಭವವೈದ್ಯೋ ಯೋಗಿವೈದ್ಯೋ ಯೋಗಿಸಿಂಹಹೃದಾಸನಃ ॥೧೪೯॥

ಉತ್ತಮೋಽನುತ್ತಮಃ ಶಕ್ತಃ ಕಾಲಕೂಟವಿಷಾದನಃ ।
ಆಶಾಸ್ಯಃ ಕಮನೀಯಾತ್ಮಾ ಶುಭಃ ಸುಂದರವಿಗ್ರಹಃ ॥೧೫೦॥

ಭಕ್ತಕಲ್ಪತರುಃ ಸ್ತೋತಾ ಸ್ತವ್ಯಃ ಸ್ತೋತ್ರವರಪ್ರಿಯಃ ।
ಅಪ್ರಮೇಯಗುಣಾಧಾರೋ ವೇದಕೃದ್ವೇದವಿಗ್ರಹಃ ॥೧೫೧॥

---

ಧೂಸರಬಣ್ಣದ ಜಡೆಯುಳ್ಳವನೂ, ಪಿಂಗಳಬಣ್ಣದ ಜಡೆಯುಳ್ಳವನೂ, ಜಟಾಸಮೂಹದಿಂದ ಅಲಂಕೃತನೂ, ಮನೋವೇಗವುಳ್ಳವನೂ, ಬೀಜಗಳಿಗೆ ಕಾರಣಭೂತನೂ, ಅಂಧಕಾಸುರನನ್ನು ಕೊಂದವನೂ, ಲೋಕಗಳಿಗೆಲ್ಲಾ ಬಂಧುವೂ, ಕಲೆಗಳಿಗೆಲ್ಲಾ ಆಧಾರಭೂತನೂ, ಬಿಳಿಯಬಣ್ಣವುಳ್ಳವನೂ, ಪ್ರಮಥಗಣಗಳಿಗೆಲ್ಲಾ ಒಡೆಯನೂ, ಮತ್ತೊಬ್ಬರಿಗೆ ತೋರದ ಲಕ್ಷಣ (ಗುರುತು)ವುಳ್ಳವನೂ, ಯೋಗಶಕ್ತಿಯುಳ್ಳವನೂ, ಯೋಗಿಗಳಿಗೆಲ್ಲಾ ಒಡೆಯನೂ, ಯೋಗಿಶ್ರೇಷ್ಠನೂ ; ॥೧೪೭-೧೪೮॥

ಭೂತಗಳಿಗೂ, ಜನಗಳಿಗೂ, ದೇವತೆಗಳಿಗೂ, ಆವಾಸಸ್ಥಾನವಾಗಿರುವವನೂ, ಮಂಗಳಸ್ವರೂಪನೂ, ಈ ಸಂಸಾರವೆಂಬ ರೋಗಕ್ಕೆ ವೈದ್ಯನೂ, ಯೋಗಿಗಳಿಂದ ತಿಳಿಯಲು ಯೋಗ್ಯನಾದವನೂ, ಯೋಗಿಶ್ರೇಷ್ಠನ ಹೃದಯದಲ್ಲಿ ನೆಲಸಿರುವವನೂ, ಉತ್ತಮನೂ, ಉತ್ತಮನಲ್ಲದವನೂ, ಶಕ್ತಿಯುಳ್ಳವನೂ, ಕಾಲಕೂಟ ವಿಷವನ್ನು ತಿಂದವನೂ, ಶಾಸನಮಾಡಲು ಯೋಗ್ಯನೂ, ಮನೋಹರಸ್ವರೂಪನೂ, ಶುಭಕರನೂ, ಸುಂದರವಾದ ವಿಗ್ರಹವುಳ್ಳವನೂ ; ॥೧೪೯-೧೫೦॥

ಭಕ್ತರಿಗೆ ಕಲ್ಪವೃಕ್ಷದಂತಿರುವನೂ, ಸ್ತೋತ್ರಮಾಡುವನ ಸ್ವರೂಪವುಳ್ಳವನೂ, ಸ್ತೋತ್ರಾರ್ಹನೂ, ಉತ್ತಮವಾದ ಸ್ತೋತ್ರಗಳಿಗೆ ಪ್ರೀತಿಕರನೂ, ಅಪರಿಮಿತವಾದ ಗುಣಗಳಿಗೆ ಆಧಾರಭೂತನಾಗಿರುವನೂ, ವೇದಗಳನ್ನು ನಿರ್ಮಿಸಿದವನೂ, ವೇದ

ಕೀರ್ತ್ಯಾಧಾರಃ ಕೀರ್ತಿಕರಃ ಕೀರ್ತಿಹೇತುರಹೇತುಕಃ ।
ಅಪ್ರಧೃಷ್ಯಃ ಶಾಂತಭದ್ರೋ ಕೀರ್ತಿಸ್ತಂಭೋ ಮನೋಮಯಃ ॥೧೫೨॥

ಭೂಶಯೋಽನ್ನಮಯೋ ಭೋಕ್ತಾ ಮಹೇಷ್ವಾಸೋ ಮಹೀತನುಃ ।
ವಿಜ್ಞಾನಮಯ ಆನಂದಮಯಃ ಪ್ರಾಣಮಯೋಽನ್ನದಃ ॥೧೫೩॥

ಸರ್ವಲೋಕಮಯೋ ಯಷ್ಟಾ ಧರ್ಮಾಽಧರ್ಮಪ್ರವರ್ತಕಃ ।
ಅನಿರ್ವಿಣ್ಣೋ ಗುಣಗ್ರಾಹೀ ಸರ್ವಧರ್ಮಫಲಪ್ರದಃ ॥೧೫೪॥

ದಯಾಸುಧಾರ್ದ್ರನಯನೋ ನಿರಾಶೀರಪರಿಗ್ರಹಃ ।
ಪರಾರ್ಥವೃತ್ತಿರ್ಮಧುರೋ ಮಧುರಪ್ರಿಯದರ್ಶನಃ ॥೧೫೫॥

ಮುಕ್ತಾದಾಮಪರೀತಾಂಗೋ ನಿಃಸಂಗೋ ಮಂಗಲಾಕರಃ ।
ಸುಖಪ್ರದಃ ಸುಖಾಕಾರಃ ಸುಖದುಃಖವಿವರ್ಜಿತಃ ॥೧೫೬॥

---

ವಿಗ್ರಹನೂ, (ವೇದಸ್ವರೂಪನೂ) ಕೀರ್ತಿಗೆ ಆಧಾರನೂ, ಕೀರ್ತಿಯನ್ನುಂಟು ಮಾಡುವವನೂ, ಕೀರ್ತಿಗೆ ಕಾರಣನೂ, ಕಾರಣರಹಿತನೂ, ಯಾರಿಂದಲೂ ಪ್ರತಿಭಟಿಸಲು ಅಸಾಧ್ಯನೂ, ಶಾಂತಮಂಗಳಸ್ವರೂಪನೂ, ಕೀರ್ತಿಗೆ ಆಧಾರಸ್ತಂಭ ವಾಗಿರುವನೂ, ಮನಸ್ಸ್ವರೂಪನೂ ; ॥೧೫೧-೧೫೨॥

ಭೂಮಿಯಲ್ಲಿ ಮಲಗುವವನೂ, ಅನ್ನಮಯನೂ, ಭೋಕ್ತೃವೂ, ಭೂಮಿಯ ಶರೀರವುಳ್ಳವನೂ, ವಿಜ್ಞಾನಮಯನೂ, ಆನಂದಮಯನೂ, ಪ್ರಾಣಮಯನೂ, ಅನ್ನವನ್ನು ಕೊಡುವವನೂ, ಸಕಲ ಲೋಕಸ್ವರೂಪನೂ, ಯಾಗಮಾಡುವವನೂ, ಧರ್ಮ ಮತ್ತು ಅಧರ್ಮ ಇವುಗಳನ್ನು ನಡೆಸುವವನೂ, ನಿರ್ವೇದರಹಿತನೂ, ಗುಣವನ್ನು ಗ್ರಹಣಮಾಡುವವನೂ, ಎಲ್ಲಾ ಧರ್ಮಗಳ ಫಲವನ್ನೂ ಕೊಡುವವನೂ ಆಗಿರುವನು ; ॥೧೫೩-೧೫೪॥

ದಯಾಮೃತದಿಂದ ನೆನೆದ ಕಣ್ಣುಳ್ಳವನೂ, ಆಶೀರ್ವಾದವನ್ನು ಮತ್ತಾ ರಿಂದಲೂ ಹೊಂದಲು ಅನರ್ಹನೂ, ಪರಿಗ್ರಹರಹಿತನೂ, ಪರಪ್ರಯೋಜನರೂಪವಾದ ವ್ಯವಹಾರವುಳ್ಳವನೂ, ಮಧುರಸ್ವರೂಪನೂ, ಮಧುರಸ್ವಭಾವವುಳ್ಳವರಿಗೆ ಪ್ರೀತಿ ಯಿಂದ ದರ್ಶನಕೊಡುವವನೂ, ಮುತ್ತಿನಹಾರವನ್ನು ಶರೀರದಲ್ಲಿ ಧರಿಸಿರುವನೂ, ಸಹವಾಸರಹಿತನೂ, ಮಂಗಳಗಳಿಗೆಲ್ಲಾ ಸಮುದ್ರದಂತೆ ಆಶ್ರಯನೂ, ಸುಖಪ್ರದನೂ,

ವಿಶೃಂಖಲೋ ಜಗತ್ಕರ್ತಾ ಜಿತಸರ್ವಪಿತಾಮಹಃ ।
ಅನಪಾಯೋಽಕ್ಷಯೋ ಮುಂಡೀ ಸುರೂಪೋ ರೂಪವರ್ಜಿತಃ ॥೧೪೭॥

ಅತೀಂದ್ರಿಯೋ ಮಹಾಮಾಯೋ ಮಾಯಾವೀ ವಿಗತಜ್ವರಃ ।
ಅಮೃತಃ ಶಾಶ್ವತಃ ಶಾಂತೋ ಮೃತ್ಯುಹಾ ಮೂಕನಾಶಕಃ ॥೧೪೮॥

ಮಹಾಪ್ರೇತಾಸನಾಸೀನಃ ಪಿಶಾಚಾನುಚರಾವೃತಃ ।
ಗೌರೀವಿಲಾಸಸದನೋ ನಾನಾಗಾನವಿಶಾರದಃ ॥೧೪೯॥

ವಿಚಿತ್ರಮಾಲ್ಯವಸನೋ ದಿವ್ಯಚಂದನಚರ್ಚಿತಃ ।
ವಿಷ್ಣುಬ್ರಹ್ಮಾದಿವಂದ್ಯಾಂಘ್ರಿಃ ಸುರಾಸುರನಮಸ್ಕೃತಃ ॥೧೫೦॥

---

ಸುಖಸ್ವರೂಪನೂ, ಸುಖ ಮತ್ತು ದುಃಖ ಇವುಗಳಾವುದಕ್ಕೂ ಎಡೆಯಾಗದವನೂ; ॥೧೪೪-೧೪೬॥

ತಡೆಯಿಲ್ಲದವನೂ, ಪ್ರಪಂಚವನ್ನು ಸೃಷ್ಟಿಮಾಡುವವನೂ, ಬ್ರಹ್ಮನೇ ಮೊದಲಾದವರೆಲ್ಲರನ್ನೂ ಜಯಿಸಿದವನೂ, ಅಪಾಯರಹಿತನೂ, ನಾಶವಿಲ್ಲದವನೂ, ಸಂನ್ಯಾಸಿಯೂ, ಸುಂದರವಾದ ರೂಪುಳ್ಳವನೂ, ರೂಪವಿಲ್ಲದವನೂ, ಇಂದ್ರಿಯಗಳಿಗೆ ಗೋಚರವಾಗದವನೂ, ಅಪಾರವಾದ ಮಾಯಾಸ್ವರೂಪನೂ, ಮಾಯಾವಿಯೂ, ಜ್ವರವಿಲ್ಲದವನೂ, ಮರಣಹೊಂದದವನೂ, ಶಾಶ್ವತನೂ, ಶಾಂತಿಗುಣವುಳ್ಳವನೂ, ಮೃತ್ಯುವನ್ನು ಕೊಂದವನೂ, ಮೂಗತನವನ್ನು ಹೋಗಲಾಡಿಸುವವನೂ; ॥೧೪೭-೧೪೮॥

ದೊಡ್ಡ ಪ್ರೇತಗಳ ಆಸನದಲ್ಲಿ ಕುಳಿತಿರುವನೂ, ಪಿಶಾಚಗಳೆಂಬ ಅನುಚರರಿಂದ ಸುತ್ತುವರಿಯಲ್ಪಟ್ಟವನೂ, ಗೌರೀದೇವಿಗೆ ವಿಲಾಸಯೋಗ್ಯವಾದ ಮನೆಯಂತಿರುವವನೂ, ಅನೇಕವಿಧವಾದ ಗಾನವಿದ್ಯೆಗಳಲ್ಲಿ ಪಂಡಿತನೂ, ವಿಚಿತ್ರವಾದ ಹೂಮಾಲೆಗಳನ್ನು ಧರಿಸಿರುವನೂ, ದಿವ್ಯವಾದ ಚಂದನದಿಂದ ಲೇಪಿತನಾಗಿರುವವನೂ, ವಿಷ್ಣು ಬ್ರಹ್ಮ ಮೊದಲಾದ ದೇವತೆಗಳಿಂದ ನಮಸ್ಕರಿಸಲ್ಪಟ್ಟ ಪಾದವುಳ್ಳವನೂ, ದೇವ ದಾನವರಿಂದ ನಮಸ್ಕರಿಸಲ್ಪಟ್ಟವನೂ ಆಗಿದ್ದಾನೆ; ॥೧೪೯-೧೫೦॥

ಕಿರೀಟಕೋಟಿಬಾಲೇಂದುರ್ಮಣಿಕಂಕಣಭೂಷಿತಃ ।
ರತ್ನಾಂಗದಾಂಗೋ ರತ್ನೇಶೋ ರತ್ನರಾಜಿತಪಾದುಕಃ ॥೧೬೧॥

ನವರತ್ನಗುಣೋಪೇತಕಿರೀಟೋ ರತ್ನಕಂಚುಕಃ ।
ನಾನಾವಿಧಾನೇಕರತ್ನಲಸತ್ಕುಂಡಲಮಂಡಿತಃ ॥೧೬೨॥

ದಿವ್ಯರತ್ನಗಣಾಕೀರ್ಣಕಂಠಾಭರಣಭೂಷಿತಃ ।
ನವವ್ಯಾಲಮಣಿರ್ನಾಸಾಪುಟಭ್ರಾಜಿತಮೌಕ್ತಿಕಃ ॥೧೬೩॥

ರತ್ನಾಂಗುಲೀಯವಿಲಸತ್ಕರಶಾಖಾನಖಪ್ರಭಃ ।
ರತ್ನಭ್ರಾಜದ್ಧೇಮಸೂತ್ರಲಸತ್ಕಟಿತಟಃ ಪ್ರಭುಃ ॥೧೬೪॥

ವಾಮಾಂಗಭಾಗವಿಲಸತ್ಪಾರ್ವತೀ ವೀಕ್ಷಣಪ್ರಿಯಃ ।
ಲೀಲಾವಲಂಬಿತವಪುರ್ಭಕ್ತಮಾನಸ ಮಂದಿರಃ ॥೧೬೫॥

---

ತನ್ನ ಕಿರೀಟದ ತುದಿಯಲ್ಲಿ ಬಾಲಚಂದ್ರನನ್ನು ಧರಿಸಿರುವವನೂ, ರತ್ನಮಯವಾದ ಕಂಕಣವನ್ನು ಆಭರಣವಾಗಿ ಹೊಂದಿರುವವನೂ, ರತ್ನದ ಭುಜಕೀರ್ತಿಯುಳ್ಳವನೂ, ರತ್ನಗಳಿಗೆಲ್ಲಾ ಒಡೆಯನೂ, ರತ್ನಖಚಿತವಾದ ಪಾದುಕೆಯಿಂದ (ಹಾವುಗೆ) ಶೋಭಿಸುತ್ತಿರುವನೂ, ನವರತ್ನಗಳಿಂದಲೂ, ನಾನಾ ವಿಧವಾದ ಗುಣಗಳಿಂದಲೂ ಕೂಡಿದ ಕಿರೀಟವನ್ನು ಧರಿಸಿರುವವನೂ, ರತ್ನಮಯವಾದ ಕಂಚುಕವುಳ್ಳವನೂ, ಬಹು ಬಗೆಯ ಅನೇಕ ರತ್ನಗಳಿಂದ ಶೋಭಿಸುತ್ತಿರುವವನೂ ಕುಂಡಲದಿಂದ ಅಲಂಕೃತನಾಗಿರುವನೂ ; ॥೧೬೧-೧೬೨॥

ದಿವ್ಯವಾದ ರತ್ನಸಮೂಹದಿಂದ ವ್ಯಾಪ್ತವಾದ ಕಂಠಾಭರಣದಿಂದ ಅಲಂಕೃತನಾಗಿರುವನೂ, ಹೊಸ ಸರ್ಪದ ಮಣಿಯನ್ನು ಧರಿಸಿರುವವನೂ, ಮೂಗಿನಲ್ಲಿ ಪ್ರಕಾಶಿಸುತ್ತಿರುವ ಮುತ್ತುಳ್ಳವನೂ, ರತ್ನದ ಉಂಗುರದಿಂದ ಶೋಭಿಸುತ್ತಿರುವ ಕೈಬೆರಳುಗಳ ಉಗುರಿನ ಕಾಂತಿಯುಳ್ಳವನೂ, ರತ್ನದಿಂದ ಶೋಭಿಸುತ್ತಿರುವ ಚಿನ್ನದ ದಾರದಿಂದ ಪ್ರಕಾಶಿಸುತ್ತಿರುವ ಕಟಿಪ್ರದೇಶವುಳ್ಳವನೂ, ಸಮರ್ಥನೂ ; ॥೧೬೩-೧೬೪॥

ತನ್ನ ಎಡಭಾಗದಲ್ಲಿ ಶೋಭಿಸುತ್ತಿರುವ ಪಾರ್ವತೀದೇವಿಯನ್ನು ನೋಡುವುದರಲ್ಲಿ ಪ್ರೀತಿಯುಳ್ಳವನೂ, ಲೀಲೆಯಿಂದ ಶರೀರಧಾರಣೆಮಾಡಿರುವವನೂ, ಭಕ್ತಜನಗಳ ಮನಸ್ಸನ್ನೇ ತನ್ನ ಮನೆಯನ್ನಾಗಿ ಮಾಡಿಕೊಂಡಿರುವನೂ, ಪಾರಿಜಾತ

ಮಂದಮಂದಾರಪುಷ್ಪೌಘಲಸದ್ವಾಯುನಿಷೇವಿತಃ ।
ಕಸ್ತೂರೀ ವಿಲಸತ್ಫಾಲೋ ದಿವ್ಯವೇಷವಿರಾಜಿತಃ ॥೧೬೬॥

ದಿವ್ಯದೇಹಪ್ರಭಾಕೂಟಸಂದೀಪಿತದಿಗಂತರಃ ।
ದೇವಾಸುರಗುರುಃ ಸ್ತವ್ಯೋ ದೇವಾಸುರನಮಸ್ಕೃತಃ ॥೧೬೭॥

ಹಸ್ತರಾಜತ್ಪುಂಡರೀಕಃ ಪುಂಡರೀಕನಿಭೇಕ್ಷಣಃ ।
ಸರ್ವಾಶಾಸ್ಯಗುಣೋಽಮೇಯಃ ಸರ್ವಲೋಕೇಷ್ಟಭೂಷಣಃ ॥೧೬೮॥

ಸರ್ವೇಷ್ಟದಾತಾ ಸರ್ವೇಷ್ಟಃ ಸ್ಫುರನ್ಮಂಗಲವಿಗ್ರಹಃ ।
ಅವಿದ್ಯಾಲೇಶರಹಿತೋ ನಾನಾವಿದ್ಯೈಕಸಂಶ್ರಯಃ ॥೧೬೯॥

ಮೂರ್ತೀಭವತ್ಕೃಪಾಪೂರೋ ಭಕ್ತೇಷ್ಟಫಲಪೂರಕಃ ।
ಸಂಪೂರ್ಣಕಾಮಸೌಭಾಗ್ಯನಿಧಿಃ ಸೌಭಾಗ್ಯದಾಯಕಃ ॥೧೭೦॥

---

ಪುಷ್ಪದ ಸಮೂಹದ ಮೇಲೆ ಬೀಸಿ ಅದರ ಪರಿಮಳವನ್ನು ಹೊತ್ತು ಮೆಲ್ಲಗೆ ಬೀಸುತ್ತಿರುವ ಮಂದಮಾರುತದಿಂದ ಸೇವಿಸಲ್ಪಡುತ್ತಿರುವನೂ, ಹಣೆಯಲ್ಲಿ ಮನೋಹರವಾಗಿ ಶೋಭಿಸುತ್ತಿರುವ ಕಸ್ತೂರಿಯ ಲೇಪನವುಳ್ಳವನೂ, ದಿವ್ಯವಾದ ವೇಷದಿಂದ ಪ್ರಕಾಶಿಸುತ್ತಿರುವನೂ ; ||೧೬೫-೧೬೬||

ತನ್ನ ದಿವ್ಯ ದೇಹಕಾಂತಿಯ ಸಮೂಹದಿಂದ ಚೆನ್ನಾಗಿ ಬೆಳಗುತ್ತಿರುವ ದಿಕ್ಕುಗಳುಳ್ಳವನೂ, ದೇವರಾಕ್ಷಸರಿಗೆಲ್ಲಾ ಗುರುವೂ ; ಸ್ತೋತ್ರಾರ್ಹನೂ, ದೇವದಾನವರಿಂದ ನಮಸ್ಕೃತನಾಗಿರುವನೂ, ಕೈಯ್ಯಲ್ಲಿ ಕಮಲವನ್ನು ಹಿಡಿದು ಪ್ರಕಾಶಿಸುತ್ತಿರುವನೂ, ಕಮಲಕ್ಕೆ ಸಮಾನವಾದ ಕಣ್ಣುಳ್ಳವನೂ, ಎಲ್ಲರಿಂದ ಅಪೇಕ್ಷಿಸಲ್ಪಡುವ ಗುಣಗಳುಳ್ಳವನೂ, ಪ್ರಮಾಣರಹಿತನೂ, ಎಲ್ಲಾಲೋಕಗಳನ್ನೇ ಇಷ್ಟವಾದ ಆಭರಣವನ್ನಾಗಿವುಳ್ಳವನೂ ; ||೧೬೭-೧೬೮||

ಎಲ್ಲರಿಗೂ ಇಷ್ಟಾರ್ಥಗಳನ್ನು ಕೊಡುವವನೂ, ಎಲ್ಲರಿಗೂ ಇಷ್ಟನಾದವನೂ, ಪ್ರಕಾಶಮಾನವಾದ ಮಂಗಳವಿಗ್ರಹವುಳ್ಳವನೂ, ಅಜ್ಞಾನ ಲೇಶವೂ ಇಲ್ಲದವನೂ, ನಾನಾವಿಧವಾದ ವಿದ್ಯೆಗಳಿಗೆಲ್ಲಾ ಒಬ್ಬನೇ ಆಶ್ರಯನಾಗಿರುವನೂ, ಮೂರ್ತಿಯನ್ನೇ ಧರಿಸಿಬಂದಿರುವ ದಯಾರಸದ ಪ್ರವಾಹದಂತಿರುವನೂ, ತನ್ನ ಭಕ್ತರಿಗೆ ಬೇಕಾದ ಫಲಗಳನ್ನು ಪೂರ್ಣವಾಗಿ ಕೊಡುವವನೂ, ಪರಿಪೂರ್ಣವಾದ ಅಪೇಕ್ಷೆ ಮತ್ತು

ಹಿತೈಷೀ ಹಿತಕೃತ್ಸೌಮ್ಯಃ ಪರಾರ್ಥೈಕಪ್ರಯೋಜನಃ ।
ಶರಣಾಗತದೀನಾರ್ತಃ ಪರಿತ್ರಾಣಪರಾಯಣಃ ॥೧೭೦॥

ಜಿಷ್ಣುರ್ನೇತಾ ವಷಟ್ಕಾರೋ ಭ್ರಾಜಿಷ್ಣುರ್ಭೋಜನಂ ಹವಿಃ ।
ಭೋಕ್ತಾ ಭೋಜಯಿತಾ ಜೇತಾ ಜಿತಾರಿರ್ಜಿತಮಾನಸಃ ॥೧೭೨॥

ಅಕ್ಷರಃ ಕಾರಣಃ ಕ್ರುದ್ಧಃ ಸಮರಃ ಶಾರದಃ ಪ್ಲವಃ ।
ಆಜ್ಞಾಪಕೇಚ್ಛೋ ಗಂಭೀರಃ ಕವಿರ್ದುಸ್ಸ್ವಪ್ನನಾಶಕಃ ॥೧೭೩॥

ಪಂಚಕೋಶಸಮುತ್ಪತ್ತಿಃ ಕ್ಷೇತ್ರಜ್ಞಃ ಕ್ಷೇತ್ರಪಾಲಕಃ ।
ವ್ಯೋಮಕೇಶೋ ಭೀಮವೇಷೋ ಗೌರೀಪತಿರನಾಮಯಃ ॥೧೭೪॥

---

ಸೌಭಾಗ್ಯ ಇವುಗಳಿಗೆ ಆಶ್ರಯನೂ, ಸಕಲ ಸೌಭಾಗ್ಯಗಳನ್ನೂ ಕೊಡುವವನೂ ; ||೧೬೯-೧೭೦||

ಎಲ್ಲರಿಗೂ ಹಿತವನ್ನು ಬಯಸುವವನೂ, ಹಿತಚಿಂತಕನೂ, ಸೌಮ್ಯವಿಗ್ರಹನೂ, ಪರರ ಉಪಕಾರವೇ ಮುಖ್ಯವಾದ ಪ್ರಯೋಜನವಾಗಿ ಉಳ್ಳವನೂ, ಶರಣಾಗತನೂ, ದೀನರೂ, ಪೀಡಿತರಾದವರೂ, ಇವರನ್ನೆಲ್ಲಾ ಕಾಪಾಡುವುದರಲ್ಲಿ ನಿರತನಾಗಿರುವನೂ, ಜಯಶೀಲನೂ, ಯಜಮಾನನೂ, ವಷಟ್ಕಾರಸ್ವರೂಪನೂ, ವಿಶೇಷವಾಗಿ ಪ್ರಕಾಶಿಸುವನೂ, ಭೋಜನಸ್ವರೂಪನೂ, ಹವಿಃಸ್ವರೂಪನೂ, ಭೋಕ್ತೃಸ್ವರೂಪನೂ, ಭೋಜನಮಾಡಿಸುವನ ಆಕಾರವುಳ್ಳವನೂ, ಜಯಶೀಲನೂ, ಶತ್ರುಗಳನ್ನೆಲ್ಲಾ ಜಯಿಸಿದವನೂ, ತನ್ನ ಮನಸ್ಸನ್ನೇ ಗೆದ್ದವನೂ ಆಗಿದ್ದಾನೆ. ||೧೭೧-೧೭೨||

ನಾಶರಹಿತನೂ, ಜಗತ್ಕಾರಣನೂ, ಕೋಪವುಳ್ಳವನೂ, ಯುದ್ಧಸ್ವರೂಪನೂ, ಶರತ್ಕಾಲಸ್ವರೂಪನೂ, ದೋಣಿಯ ಆಕಾರವುಳ್ಳವನೂ, ಆಜ್ಞೆಮಾಡುವವನೂ, ಸ್ವೇಚ್ಛಸ್ವರೂಪನೂ, ಗಂಭೀರನೂ, ಕವನಮಾಡುವವನೂ, ಕೆಟ್ಟಸ್ವಪ್ನಗಳನ್ನೆಲ್ಲಾ ನಾಶಮಾಡುವವನೂ, ಪಂಚಕೋಶಗಳಿಗೂ, (ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯ) ಉತ್ಪತ್ತಿಕಾರಣನೂ, ಕ್ಷೇತ್ರಜ್ಞನೂ, ಕ್ಷೇತ್ರವನ್ನು ಪಾಲಿಸುವವನೂ, ಅಂತರಿಕ್ಷದಲ್ಲಿ ಕೂದಲುಳ್ಳವನೂ, ಭಯಂಕರವಾದ ವೇಷವುಳ್ಳವನೂ, ಗೌರೀಕಾಂತನೂ, ರೋಗರಹಿತನೂ ಆಗಿದ್ದಾನೆ. ||೧೭೩-೧೭೪||

ಭವಾಬ್ಧಿತರಣೋಪಾಯೋ ಭಗವಾನ್ಭಕ್ತವತ್ಸಲಃ ।
ವರೋ ವರಿಷ್ಠೋ ನೇದಿಷ್ಠಃ ಪ್ರಿಯಃ ಪ್ರಿಯಂವದಃ ಸುಧೀಃ ॥೧೭೫॥

ಯಂತಾ ಯವಿಷ್ಠಃ ಕ್ಷೋದಿಷ್ಠೋ ಯವಿಷ್ಠೋ ಯಮಶಾಸಕಃ ।
ಹಿರಣ್ಯಗರ್ಭೋ ಹೇಮಾಂಗೋ ಹೇಮರೂಪೋ ಹಿರಣ್ಯದಃ ॥೧೭೬॥

ಬ್ರಹ್ಮಜ್ಯೋತಿರನಾವೇಕ್ಷ್ಯಶ್ಚಾಮುಂಡಾಜನಕೋ ರವಿಃ ।
ಮೋಕ್ಷಾರ್ಥಿಜನಸಂಸೇವ್ಯೋ ಮೋಕ್ಷದೋ ಮೋಕ್ಷನಾಯಕಃ ॥೧೭೭॥

ಮಹಾಶ್ಮಶಾನನಿಲಯೋ ವೇದಾಶ್ವೋ ಭೂರಥಃ ಸ್ಥಿರಃ ।
ಮೃಗವ್ಯಾಧೋ ಧರ್ಮಧಾಮಾ ಪ್ರಚ್ಛನ್ನಃ ಸ್ಫಟಿಕಪ್ರಭಃ ॥೧೭೮॥

---

ಸಂಸಾರವೆಂಬ ಸಮುದ್ರವನ್ನು ದಾಟುವುದರಲ್ಲಿ ಉಪಾಯಭೂತನೂ, ಭಗವಂತನೂ, (ಷಡ್ಗುಣೈಶ್ವರ್ಯಭರಿತನೂ) ಭಕ್ತರಲ್ಲಿ ವಾತ್ಸಲ್ಯವುಳ್ಳವನೂ, ಉತ್ತಮನೂ, ಶ್ರೇಷ್ಠನೂ, ಸರ್ವಸಮೀಪವರ್ತಿಯೂ, ಪ್ರಿಯಕರನೂ, ಪ್ರಿಯವನ್ನು ಯಾವಾಗಲೂ ನುಡಿಯುತ್ತಿರುವನೂ, ಒಳ್ಳೆಯ ಬುದ್ಧಿಯುಳ್ಳವನೂ, ಸಕಲ ಪ್ರಪಂಚವನ್ನೂ ನಡೆಸುವವನೂ, ಅಣುರೂಪಿಯೂ, ಕ್ಷೀಣನಂತೆ ಕಾಣುವವನೂ, ಯಮನಿಗೂ ಶಿಕ್ಷೆಯನ್ನು ವಿಧಿಸುವವನೂ, ಹಿರಣ್ಯದೇಹಿಯೂ, ಹಿರಣ್ಯಾತ್ಮಕನೂ, ಸುವರ್ಣರೂಪದಿಂದ ದೊರೆಯುವವನೂ, ಸುವರ್ಣವನ್ನು ಅನುಗ್ರಹಿಸುವವನೂ; ||೧೭೫-೧೭೬||

ಬ್ರಹ್ಮಜ್ಯೋತಿಸ್ವರೂಪನೂ, ಯಾರಿಂದಲೂ ನೋಡಲು ಅಸಾಧ್ಯನೂ, ಚಾಮುಂಡಾದೇವಿಯೆಂಬ ಶಕ್ತಿಯನ್ನು ನಿರ್ಮಿಸಿದವನೂ, ಸೂರ್ಯಸ್ವರೂಪನೂ, ಮೋಕ್ಷಾಪೇಕ್ಷಿಗಳಾದ ಜನಗಳಿಂದ ಸೇವಿಸಲ್ಪಡುವವನೂ, ಮೋಕ್ಷವನ್ನು ಕೊಡುವನೂ, ಮೋಕ್ಷಕ್ಕೆಲ್ಲಾ ಒಡೆಯನೂ, ದೊಡ್ಡ ಸ್ಮಶಾನವನ್ನೇ ತನ್ನ ಮನೆಯನ್ನಾಗಿ ಮಾಡಿಕೊಂಡಿರುವನೂ, ವೇದಗಳನ್ನೇ ಕುದುರೆಗಳನ್ನಾಗಿ ಮಾಡಿಕೊಂಡಿದ್ದವನೂ, ಭೂಮಿಯನ್ನೇ ತೇರನ್ನಾಗಿ ಮಾಡಿಕೊಂಡಿರುವವನೂ, ಸ್ಥಿರ ಸ್ವರೂಪನೂ, ಜಿಂಕೆಗಳನ್ನು ಹೊಡೆಯುವ ಬೇಡನ ವೇಷವನ್ನು ಧಾರಣೆಮಾಡಿರುವನೂ, ಧರ್ಮಗಳಿಗೆಲ್ಲಾ ಸ್ಥಾನವಾಗಿರುವನೂ, ಗುಪ್ತವಾಗಿರುವವನೂ, ಸ್ಫಟಿಕದಂತೆ ಕಾಂತಿಯುಳ್ಳವನೂ ಆಗಿದ್ದಾನೆ. ||೧೭೭-೧೭೮||

ಸರ್ವಜ್ಞಃ ಪರಮಾರ್ಥಾತ್ಮಾ ಬ್ರಹ್ಮಾನಂದಾಶ್ರಯೋ ವಿಭುಃ ।
ಮಹೇಶ್ವರೋ ಮಹಾದೇವಃ ಪರಬ್ರಹ್ಮಾ ಸದಾಶಿವಃ ॥೧೭೯॥

ಏವಮೇತಾನಿ ನಾಮಾನಿ ಮುಖ್ಯಾನಿ ಮಮ ಷಣ್ಮುಖ ।
ಶುಭದಾನಿ ವಿಚಿತ್ರಾಣಿ ಗೌರ್ಯೈ ಪ್ರೋಕ್ತಾನಿ ಸಾದರಂ ॥೧೮೦॥

ಏತನ್ನಾಮ ಜಪೇ ಯೋಗ್ಯಾಃ ವಿಪ್ರಾದೇವ ಮುನೀಶ್ವರಾಃ ।
ಶುಚಿರ್ಭೂತಾಃ ಶಿವಪರಾಃ ನಾನ್ಯೇ ರಾಗಾದಿಮೋಹಿತಾಃ ॥೧೮೧॥

ವಿಭೂತಿಭೂಷಿತವಪುಃ ಶುದ್ಧೋ ರುದ್ರಾಕ್ಷಭೂಷಣಃ ।
ಶಿವಲಿಂಗಸಮೀಪಸ್ಥೋ ನಿಃಸಂಗೋ ನಿರ್ಜಿತಾಸನಃ ॥೧೮೨॥

ಏಕಾಗ್ರಚಿತ್ತೋ ನಿಯತೋ ವಶೀಭೂತಹಿತೇ ರತಃ ।
ಶಿವಲಿಂಗಾರ್ಚಕೋ ನಿತ್ಯಂ ಶಿವೈಕಶರಣಃ ಸದಾ ॥೧೮೪॥

---

ಎಲ್ಲವನ್ನೂ ತಿಳಿದವನೂ, ಪರಮ ಪ್ರಯೋಜನಸ್ವರೂಪನೂ, ಬ್ರಹ್ಮಾನಂದಕ್ಕೆ ಆಶ್ರಯನೂ, ವ್ಯಾಪಕನೂ, ತುಂಬಾ ಐಶ್ವರ್ಯವುಳ್ಳವನೂ, ದೇವತೆಗಳಲ್ಲೆಲ್ಲಾ ದೊಡ್ಡವನೂ, ಪರಬ್ರಹ್ಮಸ್ವರೂಪನೂ, ನಿತ್ಯಮಂಗಳಸ್ವರೂಪನೂ, ಓ ಷಣ್ಮುಖನೇ! ಈರೀತಿಯಾಗಿ ಈ ನನ್ನ ನಾಮಗಳು ಮುಖ್ಯವಾದವುಗಳು. ಶುಭಕರವೂ, ವಿಚಿತ್ರವೂ ಆಗಿರುವ ಈ ನಾಮಗಳನ್ನು ನಾನು ಹಿಂದೆ ಗೌರಿಗೆ ಆದರದಿಂದ ಹೇಳಿದ್ದೆನು. ||೧೭೯-೧೮೦||

ಓ ಮುನಿಶ್ರೇಷ್ಠರಿರಾ! ಬ್ರಾಹ್ಮಣರಿಗೆ ಈ ನಾಮಗಳು ಜಪಮಾಡಲು ಯೋಗ್ಯವಾಗಿರುವುವೆಂದು ತಿಳಿಯಿರಿ. ಇದನ್ನು ಜಪಮಾಡುವ ವಿಪ್ರರು ಶುಚಿರ್ಭೂತರಾಗಿ ಆ ಪರಶಿವನಲ್ಲಿಯೇ ತತ್ಪರರಾಗಿರಬೇಕು. ರಾಗದ್ವೇಷಗಳಿಗೆ ಒಳಪಟ್ಟವರಾದ ಇತರರು ಎಂದಿಗೂ ಈ ಜಪಕ್ಕೆ ಯೋಗ್ಯರಾಗಲಾರರು. ಶರೀರಕ್ಕೆಲ್ಲಾ ವಿಭೂತಿಯನ್ನು ಬಳಿದುಕೊಂಡು ಪರಿಶುದ್ಧರಾಗಿ, ರುದ್ರಾಕ್ಷಾಭರಣವನ್ನು ಧರಿಸಿ, ಶಿವಲಿಂಗದ ಹತ್ತಿರ ನಿಂತು, ಯಾವ ಸಹವಾಸವೂ ಇಲ್ಲದೇ ಆಸನವನ್ನೂ ಜಯಿಸಿ; ||೧೮೧-೧೮೨||

ನೆಟ್ಟಮನಸ್ಸುಳ್ಳವನಾಗಿ ನಿಯಮದಿಂದ ಪಂಚಭೂತಗಳನ್ನೂ ವಶಮಾಡಿಕೊಂಡು, ಅವುಗಳ ಹಿತಾಚರಣೆಯಲ್ಲಿಯೇ ತತ್ಪರನಾಗಿ, ಆ ಶಿವನನ್ನೇ ಯಾವಾಗಲೂ

ಮಮ ನಾಮಾನಿ ದಿವ್ಯಾನಿ ಯೋ ಜಪೇದ್ಭಕ್ತಿಪೂರ್ವಕಂ ।
ಏವಮುಕ್ತಗುಣೋಪೇತಃ ಸ ದೇವೈಃ ಪೂಜಿತೋ ಭವೇತ್ ॥೧೮೪॥

ಸಂಸಾರಪಾಶಸಂಬಂಧಜನಮೋಕ್ಷೈಕಸಾಧನಂ ।
ಮನ್ನಾಮಸ್ಮರಣಂ ನೂನಂ ತದೇವ ಸಕಲಾರ್ಥದಂ ॥೧೮೫॥

ಮನ್ನಾಮ್ನೈವ ಪರಂ ಜಪ್ಯಮಹಮೇವಾಕ್ಷಯಾರ್ಥದಃ ।
ಅಹಮೇವ ಸದಾ ಸೇವ್ಯೋ ಧ್ಯೇಯೋ ಮುಕ್ತ್ಯರ್ಥಮಾದರಾತ್ ॥೧೮೬॥

ವಿಭೂತಿವಜ್ರಕವಚೈರ್ಮನ್ನಾಮಶರಪಾಣಿಭಿಃ ।
ವಿಜಯಃ ಸರ್ವತೋ ಲಭ್ಯೋ ನ ತೇಷಾಂ ದೃಶ್ಯತೇ ಭಯಂ ॥೧೮೭॥

ಹೇ ಮುಕ್ತಿದಾಯಕ ಮಹೇಶ ಪಿನಾಕಪಾಣೇ
ಶಂಭೋ ಗಿರೀಶ ಹರ ಶಂಕರ ಚಂದ್ರಮೌಳೇ ।

---

ರಕ್ಷಕನೆಂದು ತಿಳಿದು ನಿತ್ಯವೂ ತಪ್ಪದೇ ಶಿವಲಿಂಗವನ್ನು ಪೂಜೆಮಾಡುತ್ತಾ, ಈ ನನ್ನ ದಿವ್ಯನಾಮಗಳನ್ನು ಭಕ್ತಿಯಿಂದ ಜಪಮಾಡುವವನು ಹಿಂದೆ ಹೇಳಿದ ಸಕಲ ಸದ್ಗುಣಗಳಿಂದಲೂ ಕೂಡಿದವನಾಗಿ ದೇವತೆಗಳಿಂದಲೂ ಪೂಜಿಸಲ್ಪಡುವನು. ||೧೮೩-೧೮೪||

ಈ ಸಂಸಾರಪಾಶದ ಸಂಬಂಧವುಳ್ಳ ಜನಗಳಿಗೆ ಮೋಕ್ಷಸಾಧನವಾಗಿರುವ ಈ ನನ್ನ ನಾಮಸ್ಮರಣೆಯೇ ಸಕಲ ಇಷ್ಟಾರ್ಥಗಳನ್ನೂ ನಿಶ್ಚಯವಾಗಿ ಕೊಡುವುದು. ನನ್ನ ನಾಮಗಳನ್ನೇ ಮುಖ್ಯವಾಗಿ ಅವರು ಜಪಿಸಬೇಕು. ನಾಶರಹಿತವಾದ ಮೋಕ್ಷವೇ ಮೊದಲಾದ ಫಲಗಳನ್ನು ಕೊಡುವವನೂ ನಾನೇ ಆಗಿರುವೆನು. ಮೋಕ್ಷಪ್ರಾಪ್ತಿಗೋಸ್ಕರ ಮಾನವರಿಂದ ಸೇವೆಮಾಡಲು ಯೋಗ್ಯನೂ ಧ್ಯಾನ ಯೋಗ್ಯನೂ ನಾನೇ ಆಗಿರುವೆನು. ||೧೮೫-೧೮೬||

ವಿಭೂತಿಯೆಂಬ ವಜ್ರಕವಚಗಳನ್ನು ಧರಿಸಿ ನನ್ನ ದಿವ್ಯನಾಮಗಳೆಂಬ ಬಾಣಗಳನ್ನು ಹಿಡಿದು ನಿಂತಿರುವ ಮಾನವರಿಗೆ, ಎಲ್ಲ ಕಡೆಯಲ್ಲಿಯೂ ವಿಜಯವೇ ಉಂಟಾಗುವುದೇ ಹೊರತು, ಅವರಿಗೆಂದೆಂದಿಗೂ ಭಯವೆಂಬುದು ಇರುವುದೇ ಇಲ್ಲ. ||೧೮೭||

ಮುಕ್ತಿಪ್ರದನಾದ ಮಹೇಶ್ವರನೇ! ಪಿನಾಕವೆಂಬ ಬಿಲ್ಲನ್ನು ಕೈಯಲ್ಲಿ ಹಿಡಿದಿರುವವನೇ! ಶುಭಕರನೇ! ಪರ್ವತಗಳಿಗೆಲ್ಲಾ ಒಡೆಯನೇ! ಪಾಪನಾಶಕನೇ! ಮಂಗಳ

ವಿಶ್ವೇಶ್ವರಾಂಧಕರಿಪೋ ಪುರಸೂದನೇತಿ
ಮಾಮರ್ಚಯಂತ್ಯನುವದಂತಿ ತ ಏವ ಧನ್ಯಾಃ ॥೧೪೮॥

ಯೋ ದೇವದೇವ ಜಗದೀಶ್ವರ ಪಂಚವಕ್ತ್ರ
ಸೋಮಾಗ್ನಿಭಾನುನಯನಾನಘಶೂಲಪಾಣೇ ।
ಗೌರೀಮನೋರಮಣ ಮಾರನಿಷೂದನೇತಿ
ಮಾಮರ್ಚಯಂತ್ಯನುವದಂತಿ ತ ಏವ ಧನ್ಯಾಃ ॥೧೪೯॥

ಯೋ ಶರ್ವಫಾಲನಯನಾಮಲ ವಿಶ್ವಮೂರ್ತೇ
ಶ್ರೀನೀಲಕಂಠ ವರದೋತ್ತಮ ವಿಶ್ವಬಾಹೋ ।
ಭರ್ಗತ್ರಿಲೋಚನ ಭಗಾಕ್ಷಿಹರಾಜರೇತಿ
ಮಾಮರ್ಚಯಂತ್ಯನುವದಂತಿ ತ ಏವ ಧನ್ಯಾಃ ॥೧೫೦॥

---

ಕರನಾದ ಚಂದ್ರಮೌಳಿಯೇ! ಜಗದೊಡೆಯನೇ! ಅಂಧಕಾಸುರನನ್ನೂ ತ್ರಿಪುರರನನ್ನೂ ಧ್ವಂಸಮಾಡಿದವನೇ! ಎಂದು ನನ್ನ ನಾಮಗಳನ್ನು ಹೇಳುತ್ತಾ ನನ್ನನ್ನು ಪೂಜೆಮಾಡುವ ಮಾನವರು ನಿಜವಾಗಿಯೂ ಧನ್ಯರೇ ಆಗಿರುವರು. ॥೧೪೮॥

ದೇವತೆಗಳಲ್ಲೆಲ್ಲಾ ಮುಖ್ಯದೇವನೂ, ಜಗದೊಡೆಯನೂ, ಐದು ಮುಖಗಳುಳ್ಳವನೂ, ಚಂದ್ರ ಸೂರ್ಯಾಗ್ನಿಲೋಚನನೂ, ಪಾಪರಹಿತನೂ, ತ್ರಿಶೂಲಾಯುಧವನ್ನು ಕೈಯಿಂದ ಹಿಡಿದಿರುವನೂ, ಗೌರೀದೇವಿಯ ಮನಸ್ಸಿಗೆ ಒಡೆಯನೂ, ಮನ್ಮಥನನ್ನು ಸುಟ್ಟು ಬೂದಿ ಮಾಡಿದವನೂ; ಎಂದು ನನ್ನ ನಾಮಗಳನ್ನು ಹೇಳುತ್ತಾ ಭಕ್ತಿಯಿಂದ ನನ್ನ ಪೂಜೆಮಾಡುವ ಮಾನವರೇ ಧನ್ಯರು. ॥೧೪೯॥

ಶರ್ವನೂ, ಹಣೆಯಲ್ಲಿ ಕಣ್ಣುಳ್ಳವನೂ, ಕಲ್ಮಷರಹಿತನೂ, ಜಗದ್ರೂಪಿಯೂ, ಕಪ್ಪಾದ ಕೊರಳುಳ್ಳವನೂ, ವರವನ್ನು ಕೊಡುವರಲ್ಲಿ ಉತ್ತಮನೂ, ಪ್ರಪಂಚದಲ್ಲೆಲ್ಲಾ ವ್ಯಾಪಿಸಿರುವ ತೋಳುಗಳುಳ್ಳವನೂ; ಪ್ರಪಂಚವನ್ನೆಲ್ಲಾ ಸೃಷ್ಟಿಮಾಡುವವನೂ, ಮೂರು ಕಣ್ಣುಗಳುಳ್ಳವನೂ, ಭಗಾಕ್ಷಿಯನ್ನು ನಾಶಮಾಡಿದವನೂ, ಮುಪ್ಪಿಲ್ಲದವನೂ, ಎಂಬುದಾಗಿ ನನ್ನ ದಿವ್ಯನಾಮಗಳನ್ನು ಹೇಳುತ್ತಾ ನನ್ನ ಪೂಜೆ ಮಾಡುವವರು ಧನ್ಯರು. ॥೧೫೦॥

**ಯೋ ವಿಷ್ಣುವಲ್ಲಭ ಸದಾಶಿವ ಕಾಲಕಾಲ**
**ಕಾಲಾಗ್ನಿರುದ್ರ ಕರುಣಾಕರ ದೀನಬಂಧೋ ।**
**ಕರ್ಪೂರಗೌರ ಪರಮೇಶ ಮಹೇಶ್ವರೇತಿ**
**ಮಾಮರ್ಚಯಂತ್ಯನುವದಂತಿ ತ ಏವ ಧನ್ಯಾಃ ॥೯೧॥**

**ಯೋ ವಾಮದೇವ ಭವಭಂಜಕ ಭೂತಿಭೂಷ**
**ಭೂತೇಶ ಖಂಡಪರಶೋ ಪ್ರಮಥಾಧಿನಾಥ ।**
**ವಿಶ್ವಾಧಿಕ ತ್ರಿದಶವಂದ್ಯ ಸುರೇಶ್ವರೇತಿ**
**ಮಾಮರ್ಚಯಂತ್ಯನುವದಂತಿ ತ ಏವ ಧನ್ಯಾಃ ॥೯೨॥**

**ಯೋ ಭಕ್ತವತ್ಸಲ ಜಟಾಪಟಲಾವಲಂಬಿ**
**ಬಾಲೇಂದುಖಂಡ ರುಚಿಮಂಡಲ ಮಂಡಿತಾಂಗ ।**
**ರತ್ನಸ್ಫುರದ್ಭುಜಗರಾಜವಿಭೂಷಣೇತಿ**
**ಮಾಮರ್ಚಯಂತ್ಯನುವದಂತಿ ತ ಏವ ಧನ್ಯಾಃ ॥೯೩॥**

---

ವಿಷ್ಣುವಿನಲ್ಲಿ ಪ್ರೀತಿಯುಳ್ಳ ಸ್ವಾಮಿಯೇ ! ನೀನು ನಿತ್ಯಮಂಗಳಸ್ವರೂಪನು, ಕಾಲಸ್ವರೂಪನಾದ ಯಮನನ್ನು ನಿಗ್ರಹಿಸಿದವನು, ಪ್ರಳಯಕಾಲದ ಅಗ್ನಿಯಂತೆ ಭಯಂಕರನು, ದಯಾಸಮುದ್ರನು, ದೀನಬಂಧುವು, ಕರ್ಪೂರದಂತೆ ಶುಭ್ರವರ್ಣವುಳ್ಳವನು, ತುಂಬಾ ಐಶ್ವರ್ಯವುಳ್ಳವನು, ಮಹೇಶ್ವರನು, ಎಂದು ನನ್ನ ದಿವ್ಯನಾಮಗಳನ್ನು ಧ್ಯಾನಮಾಡುತ್ತಾ ನನ್ನನ್ನು ಭಕ್ತಿಯಿಂದ ಪೂಜೆಮಾಡುವ ಮಾನವನೇ ಧನ್ಯನು. ॥೯೧॥

ಸುಂದರನಾದ ದೇವನೇ ! ನೀನು, ಸಂಸಾರ ತಾಪವನ್ನು ಹೋಗಲಾಡಿಸುವವನು. ವಿಭೂತಿಯನ್ನೇ ಆಭರಣವಾಗಿ ಧಾರಣೆಮಾಡಿರುವವನು, ಭೂತಗಳಿಗೆಲ್ಲಾ ಅಧಿಪತಿಯು. ತುಂಡಾದ ಪರಶುವೆಂಬ (ಕೊಡಲಿ) ಆಯುಧವನ್ನು ಹಿಡಿದಿರುವನು, ಪ್ರಮಥ ಗಣಗಳಿಗೆಲ್ಲಾ ಒಡೆಯನು, ಜಗಚ್ಛ್ರೇಷ್ಠನು, ದೇವತೆಗಳಿಂದ ನಮಸ್ಕೃತನೂ, ದೇವತೆಗಳಿಗೆಲ್ಲಾ ಸ್ವಾಮಿಯು, ಎಂದು ನನ್ನ ನಾಮಗಳನ್ನು ಉಚ್ಚರಿಸುತ್ತಾ ನನ್ನನ್ನು ಪೂಜೆಮಾಡುವವರು ಧನ್ಯರು. ॥೯೨॥

ಭಕ್ತವತ್ಸಲನಾದ ಸ್ವಾಮಿಯೇ ! ನಿನ್ನ ಜಡೆಗಳ ಸಮೂಹದಲ್ಲಿರುವ ಬಾಲಚಂದ್ರನ ಕಾಂತಿಯು ಮೈಮೇಲೆಲ್ಲಾ ಬಿದ್ದು ಅವಯವಗಳೆಲ್ಲಾ ಅಲಂಕೃತವಾಗಿ

ಯೇ ಭೀಮ ಷಣ್ಮುಖಗುರೋ ಮೃಗಶಾಬಹಸ್ತ
ಶಾರ್ದೂಲಚರ್ಮವಸನಾವ್ಯಯ ಸತ್ಯಸಂಧ ।
ಶೈಲಾಧಿರಾಜನಿಲಯ ತ್ರಿಪುರಾಂತಕೇತಿ
ನಾಮಾರ್ಚಯಂತ್ಯನುವದಂತಿ ತ ಏವ ಧನ್ಯಾಃ ॥೧೯೪॥

ಯೇ ಭೀಮರುದ್ರ ವೃಷಭಧ್ವಜ ವೀರಭದ್ರ
ಭದ್ರಾವತಾರ ಭಗವನ್ಭವಭಾವರೂಪ ।
ನಿಃಸಂಗ ನಿರ್ಮಲ ನಿರಂಜನ ನಿರ್ಗುಣೇತಿ
ನಾಮಾರ್ಚಯಂತ್ಯನುವದಂತಿ ತ ಏವ ಧನ್ಯಾಃ ॥೧೯೫॥

ಯೇ ಕಾಲಕೂಟವಿಷಭೂರಿಭಯಾರ್ತದೇವ
ಸಂರಕ್ಷಕಾದ್ಯ ವಿಷಮಾಕ್ಷ ಸಮಸ್ತಸಾಕ್ಷಿನ್ ।

---

ರುವುದು. ಮತ್ತು ಹೆಡೆಯಲ್ಲಿ ದಿವ್ಯವಾದ ರತ್ನದಿಂದ ಶೋಭಿಸುತ್ತಿರುವ ಆದಿಶೇಷ ನನ್ನೇ ಆಭರಣವನ್ನಾಗಿ ಧರಿಸಿರುವನು, ಎಂದು ನನ್ನ ದಿವ್ಯನಾಮಗಳನ್ನು ಸ್ಮರಣೆಮಾಡುತ್ತಾ ನನ್ನನ್ನು ಪೂಜೆಮಾಡುವವರೇ ಧನ್ಯರು. ॥೧೯೩॥

ವಿರೋಧಿಗಳಿಗೆ ಭೀಮನಂತೆ ಭಯಂಕರನೂ, ಷಣ್ಮುಖಸ್ವಾಮಿಯ ತಂದೆಯೂ, ಜಿಂಕೆಯ ಮರಿಯನ್ನು ಕೈಯಲ್ಲಿ ಹಿಡಿದಿರುವವನೂ, ಹುಲಿಯ ಚರ್ಮವನ್ನು ಹೊದ್ದಿರುವವನೂ, ನಾಶರಹಿತನೂ, ಸತ್ಯಸಂಧನೂ, ಪರ್ವತರಾಜನಾದ ಕೈಲಾಸಪರ್ವತವನ್ನೇ ನೆಲೆಯನ್ನಾಗಿ ಮಾಡಿಕೊಂಡಿರುವವನೂ, ತ್ರಿಪುರಾಸುರರನ್ನು ಕೊಂದವನೂ, ಎಂದು ನನ್ನ ದಿವ್ಯನಾಮಗಳನ್ನು ಸ್ಮರಣೆಮಾಡುತ್ತಾ ನನ್ನ ಪೂಜೆ ಮಾಡುವವರೇ ಧನ್ಯರು. ॥೧೯೪॥

ಶತ್ರುಭೀಷಣನೂ, ಭಕ್ತರ ಪಾಪಗಳನ್ನು ಹೋಗಲಾಡಿಸುವವನೂ, ಎತ್ತನ್ನು ಬಾವುಟವನ್ನಾಗಿ ಮಾಡಿಕೊಂಡಿರುವವನೂ, ವೀರಭದ್ರನೂ, ಭದ್ರಸ್ವಾಮಿಯ ಅವತಾರ ಮಾಡಿದವನೂ, ಷಡ್ಗುಣೈಶ್ವರ್ಯ ಸಂಪನ್ನನೂ, ಸಕಲ ಜಗತ್ಸೃಷ್ಟಿ ಸ್ಥಿತಿ ಸಂಹಾರಕರ್ತನೂ, ಸಂಸಾರ ಬಂಧನವನ್ನು ಹೋಗಲಾಡಿಸುವವನೂ, ಸಹವಾಸ ರಹಿತನೂ, ನಿಷ್ಕಲ್ಮಷನೂ, ನಿರ್ಲಿಪ್ತನೂ, ಗುಣರಹಿತನೂ, ಎಂದು ನನ್ನ ನಾಮಸ್ಮರಣೆ ಮಾಡುತ್ತಾ ನನ್ನನ್ನು ಪೂಜೆಮಾಡುವವರೇ ಧನ್ಯರು. ॥೧೯೫॥

ಸಮುದ್ರಮಥನಕಾಲದಲ್ಲಿ ಉಂಟಾದ ಭಯಂಕರವಾದ ಕಾಲಕೂಟವಿಷ

ಸೂಕ್ಷ್ಮಾತಿಸೂಕ್ಷ್ಮ ಶಿವದಕ್ಷಮುಖಾಂತಕೇತಿ
ನಾಮಾರ್ಚಯಂತ್ಯನುವದಂತಿ ತ ಏವ ಧನ್ಯಾಃ ॥೧೯೬॥

ಯೇ ಸೋಮ ಸಾಂಬ ಶಿಪಿವಿಷ್ಟ ಜಗನ್ನಿವಾಸ
ಕೈಲಾಸವಾಸ ಮುನಿಹೃತ್ಕಮಲಾಧಿವಾಸ ।
ಸೋಮಾವತಂಸ ಶಿತಿಕಂಠ ಶಿವಾಪ್ರಿಯೇತಿ
ನಾಮಾರ್ಚಯಂತ್ಯನುವದಂತಿ ತ ಏವ ಧನ್ಯಾಃ ॥೧೯೭॥

ಯೇ ಯಜ್ಞಶಾಶ್ವತವೃಷಾಸನ ಧರ್ಮರೂಪ
ಯಜ್ಞಾದಿಕರ್ಮಫಲದಾಯಕ ಯಜ್ಞಮೂರ್ತೇ ।
ಸೃಷ್ಟಿಸ್ಥಿತಿಪ್ರಲಯಕಾರಣ ಸಾತ್ತ್ವಿಕೇತಿ
ನಾಮಾರ್ಚಯಂತ್ಯನುವದಂತಿ ತ ಏವ ಧನ್ಯಾಃ ॥೧೯೮॥

---

ದಿಂದ ಹೆದರಿದ ದೇವತೆಗಳನ್ನು ಕಾಪಾಡಿದವನೂ, ಪುರಾಣಪುರುಷನೂ, ಮೂರು ಕಣ್ಣುಗಳುಳ್ಳವನೂ, ಎಲ್ಲರಿಗೂ ಸಾಕ್ಷಿಯೂ, ಸೂಕ್ಷ್ಮಸ್ವರೂಪನೂ, ಅತಿಸೂಕ್ಷ್ಮಸ್ವರೂಪನೂ, ಯೋಗಿಗಳ ಮನಸ್ಸಿನಲ್ಲಿ ನೆಲಸಿರುವವನೂ, ದಕ್ಷಯಜ್ಞವನ್ನು ನಾಶಮಾಡಿದವನೂ; ಎಂದು ನಾಮಸ್ಮರಣಪೂರ್ವಕ ನನ್ನನ್ನು ಪೂಜಿಸುವವರೇ ಧನ್ಯರು.॥೧೯೬॥

ಉಮಾರಮಣನೂ, ಅಂಬಿಕಾಸಮೇತನೂ, ವಿಷ್ಣುಸ್ವರೂಪನೂ, ಪ್ರಪಂಚಕ್ಕೆಲ್ಲಾ ವಾಸಸ್ಥಾನವಾಗಿರುವನೂ, ಕೈಲಾಸಪರ್ವತದಲ್ಲಿ ವಾಸಿಸುತ್ತಿರುವನೂ, ಮುನಿಗಳ ಹೃದಯವೆಂಬ ಕಮಲದಲ್ಲಿ ನೆಲಸಿರುವನೂ, ಚಂದ್ರಕಲೆಗಳನ್ನು ಶಿರೋಭೂಷಣವಾಗಿ ಧರಿಸಿರುವವನೂ, ವಿಷವನ್ನು ಕೊರಳಲ್ಲಿ ಧರಿಸಿರುವವನೂ, ಸರ್ವಮಂಗಳಾದೇವಿಗೆ ಪ್ರೀತಿಕರನೂ; ಎಂದು ನನ್ನ ನಾಮಸ್ಮರಣಪೂರ್ವಕವಾಗಿ ಪೂಜೆಮಾಡುವವರೇ ಧನ್ಯರು. ॥೧೯೭॥

ಯಜ್ಞಸ್ವರೂಪನೂ, ಶಾಶ್ವತನೂ, ವೃಷಭವನ್ನೇ ಆಸನವನ್ನಾಗಿ ಮಾಡಿಕೊಂಡಿರುವವನೂ, ಧರ್ಮಸ್ವರೂಪನೂ, ಯಜ್ಞಯಾಗಾದಿ ಕರ್ಮಗಳ ಫಲಗಳನ್ನು ಕೊಡುವವನೂ, ಯಜ್ಞಸ್ವರೂಪನೂ, ಸೃಷ್ಟಿ, ಸ್ಥಿತಿ, ಪ್ರಳಯ ಇವುಗಳಿಗೆ ಕಾರಣಭೂತನೂ, ಸತ್ವಗುಣಪ್ರಧಾನನೂ; ಎಂದು ನನ್ನ ನಾಮಸ್ಮರಣಪೂರ್ವಕ ಪೂಜೆಮಾಡುವವರೇ ಧನ್ಯರು. ॥೧೯೮॥

ಯೇ ನೀಲಲೋಹಿತ ದಿಗಂಬರ ಕೃತ್ತಿವಾಸ
ಶ್ರೀಕಂಠ ಶಾಂತನಿರುಪಾಧಿಕ ನಿರ್ವಿಕಾರ ।
ಮೃತ್ಯುಂಜಯಾವ್ಯಯ ನಿಧೀಶ ಗಣೇಶ್ವರೇತಿ
ನಾಮಾರ್ಚಯಂತ್ಯನುವದಂತಿ ತ ಏವ ಧನ್ಯಾಃ ॥೧೯೯॥

ಮನ್ನಾಮಾಮೃತಪಾಯಿನಃ ಸ್ವಜನನೀಸ್ತನ್ಯಂ ಪುನಃ ಸರ್ವಥಾ
ನಾಕಾಂಕ್ಷಂತಿ ನ ಚಾಪ್ನುವಂತಿ ಸತತಂ ಮತ್ಪಾದಪದ್ಮಾರ್ಚಕಾಃ ।
ಮಲ್ಲಿಂಗಾರ್ಚನತತ್ಪರಾ ಮಮ ಹಿತಾ ಮಲ್ಲೋಕ ಏವಾನಿಶಂ
ಸಂತಿಷ್ಠಂತಿ ನಿರಸ್ತದುಃಖನಿಕರಾ ಮದ್ಭಕ್ತವರ್ಯಾ ಮುದಾ ॥೨೦೦॥

ಮಲ್ಲಿಂಗ ಸಂಪೂಜನಸಕ್ತಚಿತ್ತಾಃ
ಮದ್ಭಕ್ತಪೂಜಾರ್ಥಮುಪಾತ್ತವಿತ್ತಾಃ ।

---

ಕಪ್ಪು ಮತ್ತು ಕೆಂಪು ಬಣ್ಣವುಳ್ಳವನೂ, ದಿಕ್ಕುಗಳನ್ನೇ ವಸ್ತ್ರವಾಗಿ ಧರಿಸಿರುವನೂ, ಆನೆಯ ಚರ್ಮವನ್ನು ಹೊದಿಯುವವನೂ, ಶ್ರೀಕಂಠನೂ, ಶಾಂತ ಸ್ವರೂಪನೂ, ಉಪಾಧಿರಹಿತನೂ, ವಿಕಾರಕ್ಕೊಳಗಾಗದವನೂ, ಮೃತ್ಯುವನ್ನು ಜಯಿಸಿದವನೂ, ನಾಶರಹಿತನೂ, ನವನಿಧಿಗಳಿಗೆಲ್ಲಾ ಒಡೆಯನೂ, ಗಣಾಧಿಪತಿಯೂ; ಎಂಬ ನಾಮಸ್ಮರಣಪೂರ್ವಕವಾಗಿ ನನ್ನನ್ನು ಪೂಜೆಮಾಡುವವರೇ ಧನ್ಯರು. ॥೧೯೯॥

ನನ್ನ ನಾಮಾಮೃತವನ್ನು ಪಾನಮಾಡುವವರು ಪುನಃ ತನ್ನ ತಾಯಿಯ ಎದೆಹಾಲನ್ನು ಕುಡಿಯಲು ಎಂದಿಗೂ ಅಪೇಕ್ಷಿಸಲಾರರು. ಯಾವಾಗಲೂ ನನ್ನ ಪಾದಪದ್ಮಗಳನ್ನು ಪೂಜಿಸುತ್ತಾ ನನ್ನ ಶಿವಲಿಂಗಪೂಜೆಯಲ್ಲಿಯೇ ನಿರತರಾಗಿರುವರು ನನಗೆ ಹಿತಕರರೆನಿಸುವರು. ಈ ನನ್ನ ಭಕ್ತಶ್ರೇಷ್ಠರು ಪ್ರೀತಿಯಿಂದ ನನ್ನನ್ನು ಪೂಜೆಮಾಡುತ್ತಾ ಅನವರತವೂ ಸಕಲ ದುಃಖಗಳನ್ನೂ ಕಳೆದುಕೊಂಡು ನನ್ನ ಲೋಕದಲ್ಲಿಯೇ ಸಂತೋಷದಿಂದ ವಾಸಮಾಡುತ್ತಾ ಆನಂದಭರಿತರಾಗಿ ಕಾಲ ಕಳೆಯುವರು. ಅವರಿಗೆ ಪುನಃ ಜನ್ಮ ದೊರೆಯುವುದೇ ಇಲ್ಲ. ॥೨೦೦॥

ನನ್ನ ಲಿಂಗಪೂಜೆಯಲ್ಲಿಯೇ ನೆಟ್ಟಮನಸ್ಸುಳ್ಳವರು, ತಮ್ಮ ಸಕಲ ದ್ರವ್ಯಗಳನ್ನೂ ನನ್ನ ಭಕ್ತರ ಪೂಜೆಗೋಸ್ಕರವೇ ವಿನಿಯೋಗಮಾಡುವರು. ನನ್ನ ನಾಮ

K294.5925
SSRS

ಮನ್ನಾಮಸಂಕೀರ್ತನಮಾತ್ರಚಿತ್ತಾಃ
ವಸಂತಿ ಮನ್ನಾಮಸುಧೈಕಚಿತ್ತಾಃ ॥೨೦೧॥

ಸಂತಃ ಕ್ವಚಿತ್ಸಂತಿ ನಿತಾಂತಮೀಶಂ
ಸ್ವಾಂತಃ ಸ್ಥಿತಂ ಸಂತತಮರ್ಚಯಂತಃ ।
ಮಾಮೇವ ವಿಶ್ವೇಶಮನಾದ್ಯನಂತ
ಮವೇದ್ಯಮೇಕಂ ನಿಗಮಾಂತವೇದ್ಯಂ ॥೨೦೨॥

॥ ಸೂತ ಉವಾಚ ॥

ಇತ್ಯುದೀರಿತಮಾಕರ್ಣ್ಯ ಮಹಾದೇವೇನ ತದ್ವಚಃ ।
ಸಂತುಷ್ಟಃ ಷಣ್ಮುಖಃ ಶಂಭುಂ ತುಷ್ಟಾವ ಗಿರಿಜಾಸುತಃ ॥೨೦೩॥

॥ ಸ್ಕಂದ ಉವಾಚ ॥

ದೇವದೇವ ಜಗನ್ನಾಥ ದೇವದೇವೋತ್ತಮ ಪ್ರಭೋ ।
ವೇದವೇದಾಂತವೇದ್ಯೇಶ ಜಗಜ್ಜನ್ಮೈಕಕಾರಣ ॥೨೦೪॥

---

ಸಂಕೀರ್ತನೆಯಲ್ಲಿಯೇ ಮನಸ್ಸುಳ್ಳ ನಿಷ್ಠರಾದ ಮಾನವರು ನನ್ನ ದಿವ್ಯನಾಮಾಮೃತದಲ್ಲಿಯೇ ನೆಟ್ಟಮನಸ್ಸುಳ್ಳವರಾಗಿ ವಾಸಿಸುವರು. ॥೨೦೧॥

ಯಾವಾಗಲೂ ತಮ್ಮ ಮನಸ್ಸಿನಲ್ಲಿ ಮಂಗಳಪ್ರದನಾದ ಈಶ್ವರನನ್ನು ಪೂಜೆ ಮಾಡುತ್ತಾ, ಜಗದೊಡೆಯನೂ, ಆದ್ಯಂತರಹಿತನೂ, ತಿಳಿಯಲು ಅಸಾಧ್ಯನೂ, ವೇದಾಂತವೇದ್ಯನೂ ಆದ ಅದ್ವಿತೀಯನೆನಿಸಿದ ನನ್ನನ್ನು ಅನವರತವೂ ಪೂಜೆ ಮಾಡುವ ಸತ್ಪುರುಷರು ಎಲ್ಲೋ ಕೆಲವು ಕಡೆಗಳಲ್ಲಿರುವರು. ॥೨೦೨॥

ಮಹಾದೇವನು ಹೀಗೆ ನುಡಿದುದನ್ನು ಕೇಳಿ ಸಂತೋಷಭರಿತನಾದ ಗಿರಿಜಾದೇವಿಯ ಕುಮಾರನಾದ ಷಣ್ಮುಖನು, ಆ ಶಂಭುವನ್ನು ಮುಂದೆ ಹೇಳುವಂತೆ ಸ್ತೋತ್ರಮಾಡಿದನು. ॥೨೦೩॥

ದೇವದೇವನೂ ಜಗದೊಡೆಯನೂ, ದೇವದೇವೋತ್ತಮನೂ, ಸರ್ವಸಮರ್ಥನೂ, ವೇದವೇದಾಂತಗಳಿಂದ ತಿಳಿಯಲು ಯೋಗ್ಯನೂ ಈ ಜಗತ್ಸೃಷ್ಟಿಗೆ, ಮೂಲಕಾರಣನೂ, ರೋಗರಹಿತನೂ, ಆಧಾರವಿಲ್ಲದವನೂ, ಅದ್ವಿತೀಯನೂ,

ನಿರಾಮಯ ನಿರಾಧಾರ ನಿರ್ದ್ವಂದ್ವ ನಿರುಪಾಧಿಕೆ ।
ನಿಷ್ಕಲಂಕ ನಿರಾಕಾರ ನಿಕಾರರಹಿತಾನಘ ॥೨೦೫॥

ಮಹಾದೇವಾಮರಾಧೀಶ ವೃಷಾಂಕ ವೃಷವಾಹನ ।
ವೃಷಭಧ್ವಜ ವಿಶ್ವೇಶ ತ್ರಿಪುರಾಂತಕ ಶಂಕರ ॥೨೦೬॥

ಕಾಲಕಾಲ ಕೃಪಾಸಿಂಧೋ ಶಿತಿಕಂಠ ಶಿವಾಪ್ರಿಯ ।
ತ್ರಿಕಾಗ್ನಿ ಕಾಲಕಾಲಾತ್ಮನ್ಭೂತೈಕನಿಲಯಾಮಲ ॥೨೦೭॥

ವಿಭೂತಿಭೂಷಣ ಶ್ರೀಮನ್ಭಸ್ಮೋದ್ಧೂಲಿತವಿಗ್ರಹ ।
ಕೈಲಾಸಶಿಖರಾವಾಸ ಕೃತ್ತಿವಾಸ ಮಹೇಶ್ವರ ॥೨೦೮॥

ಮನೋನ್ಮನಾಮಲಾನಂತ ವ್ಯೋಮಕೇಶ ಜಗತ್ಪತೇ ।
ಭೂತೇಶ ಭೂತಸಂಘಾತ್ಮನ್ಕಾಲಾಧಾರಪ್ರವರ್ತಕ ॥೨೦೯॥

---

ಉಪಾಧಿರಹಿತನೂ, ಕಳಂಕವಿಲ್ಲದವನೂ, ಆಕಾರವಿಲ್ಲದವನೂ, ವಿಕಾರವಿಲ್ಲದವನೂ, ನಿರ್ದುಷ್ಟನೂ ಆದ ಮಹೇಶ್ವರನೇ ನಿನಗೆ ವಂದನೆ. ॥೨೦೪-೨೦೫॥

ದೇವತೆಗಳಿಗೆಲ್ಲಾ ದೊಡ್ಡವನೂ, ದೇವತೋತ್ತಮನೂ, ವೃಷಭ ಚಿಹ್ನೆಯುಳ್ಳವನೂ, ವೃಷಭವಾಹನನೂ, ವೃಷಭವನ್ನೇ ಧ್ವಜವನ್ನಾಗಿ ಉಳ್ಳವನೂ, ಜಗದೊಡೆಯನೂ, ತ್ರಿಪುರಾಸುರರನ್ನು ನಾಶಮಾಡಿದವನೂ, ಮಂಗಳಕರನೂ, ಕಾಲಸ್ವರೂಪನಾದ ಮೃತ್ಯುವಿಗೇ ಮರಣಪ್ರದನೂ, ಕೃಪಾಸಮುದ್ರನೂ, ಶಿತಿಕಂಠನೂ, ಮಂಗಳಾಂಗಿಯಾದ ಗೌರೀದೇವಿಗೆ ಪ್ರೀತಿಕರನೂ; ದಕ್ಷಿಣಾಗ್ನಿ, ಗಾರ್ಹಪತ್ಯ, ಆಹವನೀಯವೆಂಬ ಮೂರು ಅಗ್ನಿಗಳಂತೆ ಭಯಂಕರವಾದ ಸ್ವರೂಪವುಳ್ಳವನೂ, ಭೂತಗಳಿಗೆಲ್ಲಾ ಆಶ್ರಯನೂ, ಮಲರಹಿತನೂ ಆಗಿರುವ ನಿನಗೆ ವಂದನೆ. ॥೨೦೬-೨೦೭॥

ವಿಭೂತಿಯನ್ನೇ ಆಭರಣವನ್ನಾಗಿ ಧರಿಸಿರುವವನೂ, ಸಂಪದ್ಯುಕ್ತನೂ, ಮೈಗೆಲ್ಲಾ ಭಸ್ಮೋದ್ಧೂಳನವನ್ನು ಮಾಡಿಕೊಂಡಿರುವವನೂ, ಕೈಲಾಸಪರ್ವತದ ಶಿಖರದಲ್ಲಿ ವಾಸಮಾಡುವವನೂ, ಆನೆಯ ಚರ್ಮವನ್ನು ಹೊದಿಯುವವನೂ, ತುಂಬಾ ಐಶ್ವರ್ಯವಂತನೂ, ಮನಸ್ಸನ್ನು ಚಂಚಲಗೊಳಿಸುವನೂ, ಪರಿಶುದ್ಧನೂ, ಕೊನೆಯಿಲ್ಲದವನೂ, ಅಂತರಿಕ್ಷವೇ ಕೂದಲಾಗುಳ್ಳವನೂ, ಜಗದೊಡೆಯನೂ, ಭೂತಗಳಿಗೆಲ್ಲಾ ಸ್ವಾಮಿಯೂ, ಭೂತಸಂಘಗಳ ಸ್ವರೂಪನೂ, ಕಾಲಗಳಿಗೆಲ್ಲಾ

ಕಪಾಲಮಾಲಾಭರಣ ಜರಾಮರಣವರ್ಜಿತ ।
ಯೋಗಿವೃಂದೈಕಮಂದಾರ ವೃಂದಾರಕಗಣಾರ್ಚಿತ ॥೨೧೦॥

ಯೋಗಿಹೃತ್ಪಂಕಜಾರೂಢ ನಿಗೂಢ ನಿಜವಿಗ್ರಹ ।
ಗಂಡಮಂಡಲಸಂಭ್ರಾಜನ್ಮಣಿಕುಂಡಲಮಂಡಿತ ॥೨೧೧॥

ಅನಂತಚಂಡಮಾರ್ತಾಂಡಮಂಡಲಾಧಿಕಸುಪ್ರಭ ।
ಹಿರಣ್ಯಬಾಹೋ ವಿಶ್ವಾತ್ಮನ್ಸಂಸಾರಾರ್ಣವತಾರಕ ॥೨೧೨॥

ವಿಶ್ವತೋಮುಖ ಸಾಮಾತ್ಮನ್ವಿಶ್ವತಶ್ಚರಣಾಜರ ।
ವಿಶ್ವತೋಲೋಚನಾನಂತ ವ್ಯೋಮಕೇಶ ಸದಾಶಿವ ॥೨೧೩॥

ಜ್ಯೇಷ್ಠ ಶ್ರೇಷ್ಠ ಸಮಸ್ತಾತ್ಮನ್ವ್ಯಾಪಕಾನಂತವಿಗ್ರಹ ।
ತ್ರಿಶೂಲಪಾಣೇ ಖಟ್ವಾಂಗಿನ್ನಿಸ್ಸಂಗನಿಗಮಾಶ್ರಯ ॥೨೧೪॥

---

ಆಧಾರಭೂತನಾಗಿ ಕಾಲಕ್ಕೆಲ್ಲಾ ಪ್ರವರ್ತಕನಾಗಿರುವನೂ ಆದ ಪರಶಿವನೇ ನಿನಗೆ ವಂದನೆ. ॥೨೦೮-೨೦೯॥

ಕಪಾಲಗಳ ಮಾಲೆಯನ್ನು ಆಭರಣದಂತೆ ಧರಿಸಿರುವನೂ, ಮುಪ್ಪು, ಮತ್ತು ಸಾವುಗಳಿಲ್ಲವವನೂ, ಯೋಗಿಗಳ ಸಮೂಹಕ್ಕೆಲ್ಲಾ ಮಂದಾರಪುಷ್ಪದಂತಿರುವನೂ, ದೇವಸಮೂಹಗಳಿಂದ ಪೂಜಿತನಾದವನೂ, ಯೋಗಿಗಳ ಹೃದಯಕಮಲದಲ್ಲಿ ನೆಲಸಿರುವನೂ, ಗೂಢವಾಗಿರುವನೂ, ನಿಜಸ್ವರೂಪನೂ, ಗಂಡಸ್ಥಳದಲ್ಲಿ ಪ್ರಕಾಶ ಮಾನವಾದ ರತ್ನಕುಂಡಲದಿಂದ ಅಲಂಕೃತನಾಗಿರುವನೂ ಆದ ದೇವನೇ ನಿನಗೆ ನಮಸ್ಕಾರ. ॥೨೧೦-೨೧೧॥

ಅಪಾರವಾದ ಪ್ರಚಂಡಸೂರ್ಯರ ಸಮೂಹಕ್ಕಿಂತಲೂ ಹೆಚ್ಚಾದ ಕಾಂತಿಯುಳ್ಳವನೂ, ತೋಳಲ್ಲಿ ಚಿನ್ನದ ಆಭರಣಗಳುಳ್ಳವನೂ, ಪ್ರಪಂಚಸ್ವರೂಪನೂ, ಈ ಸಂಸಾರಸಮುದ್ರದಿಂದ ಉದ್ಧಾರಮಾಡುವವನೂ, ಎಲ್ಲಾ ಕಡೆಯಲ್ಲಿಯೂ ಹರಡಿರುವ ಮುಖವುಳ್ಳವನೂ, ಸಾಮಸ್ವರೂಪನೂ, ಎಲ್ಲಾ ಕಡೆಯಲ್ಲಿಯೂ ವ್ಯಾಪಿಸಿರುವ ಕಾಲುಗಳುಳ್ಳವನೂ, ಮುಪ್ಪಿಲ್ಲದವನೂ, ಎಲ್ಲಾ ಕಡೆಯಲ್ಲಿಯೂ ಹರಡಿರುವ ಕಣ್ಣುಳ್ಳವನೂ, ನಾಶವಿಲ್ಲದವನೂ, ಅಂತರಿಕ್ಷದಲ್ಲಿ ಕೂದಲುಳ್ಳವನೂ, ನಿತ್ಯಮಂಗಳ ಸ್ವರೂಪನೂ ಆದ ಶಂಕರನೇ, ನಿನಗೆ ಪ್ರಣಾಮಗಳು. ॥೨೧೨-೨೧೩॥

ಎಲ್ಲರಿಗಿಂತಲೂ ಹಿರಿಯವನೂ, ಶ್ರೇಷ್ಠನೂ, ಸಮಸ್ತಸ್ವರೂಪನೂ, ವ್ಯಾಪ

ನಿರಾಶ್ರಯಾಖಿಲಾಧಾರ ಪರಬ್ರಹ್ಮನ್ಪರಾತ್ಪರ ।
ಬ್ರಹ್ಮಾನಂದೈಕನಿಲಯ ಮಯಸ್ಕರ ನಿರೀಶ್ವರ ॥೨೧೫॥

ಸತ್ವಪ್ರಧಾನ ಸತ್ವಾತ್ಮನ್ನಾನಂದಮಯ ಸರ್ವಗ ।
ಮಹಾಶ್ಮಶಾನನಿಲಯ ಮಹಾಪ್ರೇತಾಸನಸ್ಥಿತ ॥೨೧೬॥

ಪಿನಾಕಪಾಣೇ ದುಷ್ಟಾರೇಶ್ಶಿಷ್ಟಲೋಕೈಕಜೀವನ ।
ಶಾರ್ದೂಲಚರ್ಮವಸನ ಭೂಧರೇಶಶರಾನನ ॥೨೧೭॥

ಸ್ವೇಚ್ಛಾಕೃತಾವನೀಯಾನ ಜಡತ್ರಿಪುರಕಾನನ ।
ಪಾಸೀಕೃತಾನಂದವನ ಸೋಮಸೂರ್ಯಾಗ್ನಿಲೋಚನ ॥೨೧೮॥

---

ಕನೂ, ಅನಂತವಿಗ್ರಹನೂ, ತ್ರಿಶೂಲಾಯುಧವನ್ನು ಹಿಡಿದಿರುವನೂ, ಖಟ್ವದಲ್ಲಿ ಅವಯವಗಳನ್ನು ಹೊಂದಿರುವನೂ, ಸಂಬಂಧವಿಲ್ಲದವನೂ, ವೇದಗಳಿಗೆಲ್ಲಾ ಆಶ್ರಯನೂ ಆದ ಪರಮೇಶ್ವರನೇ ನಿನಗೆ ಶರಣು. ॥೨೧೪॥

ತನಗೆ ಆಶ್ರಯವನ್ನು ಮತ್ತಾರಿಂದಲೂ ಅಪೇಕ್ಷಿಸದವನೂ, ಸಕಲ ಪ್ರಪಂಚಕ್ಕೂ ಆಧಾರಭೂತನೂ, ಪರಬ್ರಹ್ಮನೆನಿಸಿದವನೂ, ಸಕಲ ಉತ್ಕೃಷ್ಟ ವಸ್ತುಗಳಿಗಿಂತಲೂ ಶ್ರೇಷ್ಠನೆನಿಸಿದವನೂ, ಬ್ರಹ್ಮಾನಂದ ಪ್ರಾಪ್ತಿಗೆ ಮುಖ್ಯಾಶ್ರಯನೂ, ಪ್ರಾಣಿಗಳಿಗೆ ಐಹಿಕಾಮುಷ್ಮಿಕವಾದ ಸುಖಸಂಪತ್ತುಗಳನ್ನು ದೊರಕಿಸುವವನೂ, ಅಶಾಶ್ವತವಾದ ಈ ಐಶ್ವರ್ಯಕ್ಕೆ ತಲೆಬಾಗದವನೂ ; ॥೨೧೫॥

ತೇಜಸ್ಸು ಮತ್ತು ಪರಾಕ್ರಮ ಇವುಗಳನ್ನೇ ಮುಖ್ಯವಾಗಿ ಹೊಂದಿರುವನೂ, ಸತ್ವಸ್ವರೂಪನೂ, ಆನಂದರೂಪಿಯೂ, ಸರ್ವವ್ಯಾಪಕನೂ, ದೊಡ್ಡ ಶ್ಮಶಾನದಲ್ಲಿ ವಾಸಮಾಡುವವನೂ, ದೊಡ್ಡದೊಡ್ಡ ಪ್ರೇತಗಳನ್ನೇ ಆಸನಮಾಡಿಕೊಂಡು ಅವುಗಳ ಮೇಲೆ ಸ್ಥಿರವಾಗಿ ಕುಳಿತಿರುವನೂ ಆದ ಪರಶಿವನೇ ನಿನಗೆ ವಂದನೆ. ॥೨೧೬॥

ಪಿನಾಕವೆಂಬ ಬಿಲ್ಲನ್ನು ಹಿಡಿದಿರುವನೂ, ದುಷ್ಟರನ್ನು ಶಿಕ್ಷಿಸುವನೂ, ಶಿಷ್ಟರಾದ ಜನಗಳನ್ನು ಉದ್ಧಾರಮಾಡುವನೂ, ಹುಲಿಯ ಚರ್ಮವನ್ನು ಹೊದಿಯುವನೂ, ಪರ್ವತರಾಜನಾದ ಮೇರುವನ್ನೇ ಬಿಲ್ಲಾಗಿ ಮಾಡಿಕೊಂಡವನೂ ಆದ ದೇವನೇ, ॥೨೧೭॥

ನೀನು ಭೂಮಿಯನ್ನು ತನ್ನ ಇಚ್ಛೆಯಂತೆ ರಥವನ್ನಾಗಿ ಮಾಡಿಕೊಂಡವನು, ತ್ರಿಪುರಾಸುರರೆಂಬ ಕಾಡನ್ನು ಗೆದ್ದವನು, ಆನಂದವೆಂಬ ಅರಣ್ಯದಲ್ಲಿ ವಾಸಮಾಡು

ಮುನಿಚಿತ್ತಾಸನಾಸೀನ ಕಾಲಕೂಟವಿಷಾದನ ।
ಕಂದರ್ಪದರ್ಪದಲನ ವೃಷಾಧೀಶೈಕವಾಹನ ॥೨೧೯॥

ದುಷ್ಟಾರಿಸಂಘಶಮನ ದುರ್ಲಂಘ್ಯದೃಢಶಾಸನ ।
ಅಪ್ರಧೃಷ್ಯ ನಿರೀಕ್ಷಾಚ್ಛತೇಜಃಪುಂಜ ನಿರಂಜನ ॥೨೨೦॥

ಸೂತೀಕೃತಾಸ್ವತಂತ್ರೇಷ್ಟ ಹಿತಕೃಚ್ಚತುರಾನನ ।
ಹಿಮಾದಿಶಿಖರಸ್ವಚ್ಛರತ್ನಚಾರುಸ್ಥಿರಾಸನ ॥೨೨೧॥

ಮಹೋದರ ಮಹಾವೀರ ಮಹಾಶೂರ ಸುರೇಶ್ವರ ।
ಮಹಾಧೀರಾದ್ಭುತಾಕಾರ ಸರ್ವಲೋಕಪ್ರಭಾಕರ ॥೨೨೨॥

---

ವನು, ಚಂದ್ರ, ಸೂರ್ಯ, ಮತ್ತು ಅಗ್ನಿ ಇವರನ್ನೇ ಕಣ್ಣುಗಳನ್ನಾಗಿ ಮಾಡಿಕೊಂಡಿರುವವನು. ॥೨೧೮॥

ದೇವದೇವನೇ, ನೀನು ಮುನಿಗಳ ಮನಸ್ಸೆಂಬ ಆಸನದಲ್ಲಿ ಯಾವಾಗಲೂ ನೆಲಸಿರುವೆ. ನೀನು ಕಾಲಕೂಟವೆಂಬ ಮಹಾವಿಷವನ್ನು ಅಮೃತಮಥನಕಾಲದಲ್ಲಿ ದೇವತೆಗಳನ್ನು ರಕ್ಷಿಸುವುದಕ್ಕೋಸ್ಕರ ತಿಂದವನು, ಮನ್ಮಥನ ಸೊಕ್ಕನ್ನು ಮುರಿದವನು, ವೃಷಭರಾಜನಾದ ನಂದಿಕೇಶ್ವರನನ್ನೇ ವಾಹನವನ್ನಾಗಿ ಮಾಡಿಕೊಂಡಿರುವನು. ॥೨೧೯॥

ದುಷ್ಟರಾದ ಶತ್ರುಗಳ ಸಮೂಹವನ್ನು ಧ್ವಂಸಮಾಡಿದವನು, ಮೀರುವುದಕ್ಕೆ ಅಸಾಧ್ಯವೂ, ದೃಢವೂ ಆದ ಅಪ್ಪಣೆಯುಳ್ಳವನು. ದೃಷ್ಟಿಸಿ ನೋಡಲು ಅಸಾಧ್ಯವಾದ ಮತ್ತು ಸ್ವಚ್ಛವಾದ ತೇಜಃಸಮೂಹವುಳ್ಳವನು, ನಿರ್ಲಿಪ್ತನು ; ॥೨೨೦॥

ಪರಾಧೀನರಾಗಿದ್ದವರನ್ನು ತನ್ನ ಸ್ವಾಧೀನಮಾಡಿಕೊಂಡು, ತನ್ನ ಇಷ್ಟ ಭಕ್ತರಿಗೆ ಹಿತವನ್ನುಂಟುಮಾಡುವುದರಲ್ಲಿ ಚತುರವಾದ ಮುಖವುಳ್ಳವನು, ಹಿಮಾಲಯ ಪರ್ವತದ ಕೈಲಾಸಶಿಖರದಲ್ಲಿ ಸ್ವಚ್ಛವಾದ ರತ್ನಗಳಿಂದ ಮನೋಹರವಾಗಿರುವ ಆಸನದಲ್ಲಿ ಸ್ಥಿರವಾಗಿ ಮಂಡಿಸಿರುವವನು ನೀನು ; ॥೨೨೧॥

ದೊಡ್ಡ ಹೊಟ್ಟೆಯುಳ್ಳವನು, ತುಂಬಾ ಬಲವುಳ್ಳವನು, ಅತ್ಯಂತ ಪರಾಕ್ರಮವುಳ್ಳವನು, ದೇವತೆಗಳಿಗೆ ಅಧಿಪತಿಯು, ಹೆಚ್ಚು ಧೈರ್ಯವುಳ್ಳವನು, ಅದ್ಭುತವಾದ ಆಕಾರವುಳ್ಳವನು, ಹದಿನಾಲ್ಕು ಲೋಕಗಳನ್ನು ತನ್ನ ಕಾಂತಿಯಿಂದ ಬೆಳಗಿಸುವನು ನೀನು ; ॥೨೨೨॥

ನಮಸ್ತೇ ನಮಸ್ತೇ ಮಹಾದೇವ ಶಂಭೋ
ನಮಸ್ತೇ ನಮಸ್ತೇ ಪ್ರಪನ್ನೈಕಬಂಧೋ ।
ನಮಸ್ತೇ ನಮಸ್ತೇ ದಯಾಸಾರಸಿಂಧೋ
ನಮಸ್ತೇ ನಮಸ್ತೇ ನಮಸ್ತೇ ಮಹೇಶ ॥೨೨೩॥

ನಮಸ್ತೇ ನಮಸ್ತೇ ಮಹಾಮೃತ್ಯುಹಾರಿ
ನ್ನಮಸ್ತೇ ನಮಸ್ತೇ ಮಹಾದುಃಖಹಾರಿನ್ ।
ನಮಸ್ತೇ ನಮಸ್ತೇ ಮಹಾಪಾಪಹಾರಿ
ನ್ನಮಸ್ತೇ ನಮಸ್ತೇ ನಮಸ್ತೇ ಮಹೇಶ ॥೨೨೪॥

ನಮಸ್ತೇ ನಮಸ್ತೇ ಜಗಜ್ಜನ್ಮಹೇತೋ
ನಮಸ್ತೇ ನಮಸ್ತೇ ವೃಷಾಧೀಶಕೇತೋ ।
ನಮಸ್ತೇ ನಮಸ್ತೇ ಮಹಾಪುಣ್ಯಕೇತೋ
ನಮಸ್ತೇ ನಮಸ್ತೇ ನಮಸ್ತೇ ಮಹೇಶ ॥೨೨೫॥

---

ದೇವತೆಗಳಲ್ಲೆಲ್ಲಾ ದೊಡ್ಡವನೂ, ಪ್ರಾಣಿಗಳಿಗೆಲ್ಲಾ ಸುಖಪ್ರದನೂ, ಶರಣಾಗತರಾದ ತನ್ನ ಭಕ್ತರಿಗೆ ಆಪ್ತಬಂಧುವಿನಂತಿರುವನೂ, ಸಾರಭೂತವಾದ ದಯೆಗೆ ಸಮುದ್ರದಂತೆ ಆಶ್ರಯನಾಗಿ ತನ್ನ ಭಕ್ತರನ್ನೆಲ್ಲಾ ದಯೆಯಿಂದ ಪಾಲಿಸುವವನೂ, ಆಗಿರುವ ಮಹೇಶ್ವರನೇ, ನಿನಗೆ ನಮಸ್ಕಾರಮಾಡುವೆನು. ॥೨೨೩॥

ದೊಡ್ಡ ದೊಡ್ಡ ಮೃತ್ಯುಗಳನ್ನು ಹೋಗಲಾಡಿಸುವನೂ, (ಅಥವಾ ಮೃತ್ಯುಪ್ರದನಾದ ಯಮನನ್ನೇ ತನ್ನ ಭಕ್ತನಾದ ಮಾರ್ಕಂಡೇಯನನ್ನು ಉದ್ಧಾರ ಮಾಡುವುದಕ್ಕೋಸ್ಕರ ನಿಗ್ರಹಿಸಿದವನು) ಭಯಂಕರವಾದ ಸಕಲ ದುಃಖಗಳನ್ನೂ ತೊಲಗಿಸುವವನೂ, (೧) ಚಿನ್ನವನ್ನು ಕದಿಯುವುದು, (೨) ಹೆಂಡವನ್ನು ಕುಡಿಯುವುದು, (೩) ಬ್ರಹ್ಮಹತ್ಯೆಯನ್ನು ಮಾಡುವುದು, (೪) ಗುರುವಿನ ಹೆಂಡತಿಯನ್ನು ಸಂಭೋಗಿಸುವುದು, (೫) ಈ ನಾಲ್ಕುಮಂದಿಯೊಡನೆ ಬೆರೆಯುವುದು ಈರೀತಿಯಾದ ಪಂಚಮಹಾಪಾಪಗಳನ್ನೂ ಹೋಗಲಾಡಿಸುವವನೂ, ಆದ ಮಹೇಶ್ವರನೇ, ಇದೋ ನಿನ್ನ ಚರಣಕ್ಕೆ ವಂದಿಸುವೆನು. ॥೨೨೪॥

ಈ ಜಗತ್ಸೃಷ್ಟಿಗೆ ಕಾರಣಭೂತನೂ, ವೃಷಭರಾಜನನ್ನೇ ಬಾವುಟವನ್ನಾಗಿ ಮಾಡಿಕೊಂಡಿರುವನೂ, ಪುಣ್ಯಗಳಿಗೆಲ್ಲಾ ಧ್ವಜಪ್ರಾಯನಾಗಿ ಉಚ್ಚಸ್ಥಾನದಲ್ಲಿರು

ನಮಸ್ತೇ ನಮಸ್ತೇ ಸದಾಚಂದ್ರಮೌಳೇ
ನಮಸ್ತೇ ನಮಸ್ತೇ ಸದಾ ಶೂಲಪಾಣೇ ।
ನಮಸ್ತೇ ನಮಸ್ತೇ ಸದೋಮೈಕಜಾನೇ
ನಮಸ್ತೇ ನಮಸ್ತೇ ನಮಸ್ತೇ ಮಹೇಶ ॥೨೨೬॥

ಯಸ್ಯ ಸ್ವರೂಪಂ ನ ವಿದುಃ ಸುರಾಸುರಾಃ
ಯಸ್ಯ ಸ್ವರೂಪಂ ನ ವಿದುರ್ಮುನೀಶ್ವರಾಃ ।
ಯಸ್ಯ ಸ್ವರೂಪಂ ನ ವಿದುರ್ಯಮೇಶ್ವರಾಃ
ತಸ್ಯೈವ ನಿತ್ಯಂ ಶಿವರೂಪಮೀಡೇ ॥೨೨೭॥

ಯಸ್ಯ ಸ್ವರೂಪಂ ನಿಗಮೈರಗಮ್ಯಂ
ಯಸ್ಯ ಸ್ವರೂಪಂ ನಿಯಮೈರಗಮ್ಯಂ ।
ಯಸ್ಯ ಸ್ವರೂಪಂ ಪರಮೈರಗಮ್ಯಂ
ತಸ್ಯೈವ ನಿತ್ಯಂ ಶಿವರೂಪಮೀಡೇ ॥೨೨೮॥

---

ವನೂ, ಸಕಲ ಅಷ್ಟೈಶ್ವರ್ಯಗಳಿಗೂ ಸ್ವಾಮಿಯೂ ಆದ ದೇವನೇ, ನಿನ್ನ ಚರಣ ಕಮಲಗಳಿಗೆ ನಮಿಸುವೆನು. ॥೨೨೫॥

ಯಾವಾಗಲೂ ತಲೆಯಲ್ಲಿ ಬಾಲಚಂದ್ರನನ್ನು ಧರಿಸಿರುವನೂ, ಸದಾ ತ್ರಿಶೂಲಾಯುಧವನ್ನು ಕೈಯಲ್ಲಿ ಹಿಡಿದಿರುವನೂ, ಅನವರತವೂ ಉಮಾದೇವಿಯೊಡನೆ ಯುಕ್ತನಾಗಿರುವನೂ, ಆಗಿರುವ ಮಹೇಶ್ವರನೇ, ನಿನಗೆ ಪ್ರಣಾಮ ಮಾಡುವೆನು. ॥೨೨೬॥

ದೇವರಾಕ್ಷಸರೂ, ಮುನಿಶ್ರೇಷ್ಠರೂ, ಯಮ ಮತ್ತು ಐಶ್ವರ್ಯವಂತರೂ, ಸಹ ಯಾವ ದೇವದೇವನ ಸ್ವರೂಪವನ್ನರಿಯರೋ ಅಂತಹ ಶಿವನ ರೂಪವನ್ನು ನಾನು ನಿತ್ಯವೂ ಧ್ಯಾನಮಾಡುತ್ತೇನೆ. ॥೨೨೭॥

ವೇದಗಳಿಂದಲೂ, ಕೃಚ್ಛ್ರಚಾಂದ್ರಾಯಣಾದಿ ನಿಯಮಗಳಿಂದಲೂ, ಪರಮಶ್ರೇಷ್ಠವಾದ ಇತರ ವ್ರತ ಹೋಮಾದಿಗಳಿಂದಲೂ ತಿಳಿಯಲಸಾಧ್ಯವಾದ ಆ ಪರಶಿವನ ಮಹಿಮೆಯನ್ನು ನಿತ್ಯವೂ ನಾನು ಕೊಂಡಾಡುವೆನು. ॥೨೨೮॥

ಸಂಸಾರದಾವಾನಲಶಾಮಕಾಯ
ಮೃತ್ಯುಂಜಯಾಯಾಮಿತವಿಕ್ರಮಾಯ ।
ಸುರಾಸುರೌಘಾರ್ಚಿತಪಾದುಕಾಯ
ಶಿವಾಸಮೇತಾಯ ನಮಃ ಶಿವಾಯ ॥೨೨೯॥

ಘೋರಾದಿಕಾಘೌಘನಿವಾರಕಾಯ
ಸ್ವರ್ಗಾಪವರ್ಗಾದಿಫಲಪ್ರದಾಯ ।
ನಿರಾಮಯಾಯಾಂಧಕಸೂದನಾಯ
ಶಿವಾಸಮೇತಾಯ ನಮಃ ಶಿವಾಯ ॥೨೩೦॥

ಕುಂದೇಂದು ಶಂಖಸ್ಫಟಿಕೋಪಮಾಯ
ಮಹೇಶ್ವರಾಯಾಶ್ರಿತವತ್ಸಲಾಯ ।
ಶ್ರೀನೀಲಕಂಠಾಯ ಯಮಾಂತಕಾಯ
ಶಿವಾಸಮೇತಾಯ ನಮಃ ಶಿವಾಯ ॥೨೩೧॥

---

ಸಂಸಾರವೆಂಬ ಕಾಡುಗಿಚ್ಚನ್ನು ಶಮನಮಾಡುವವನೂ, ಮೃತ್ಯುವನ್ನು ಜಯಿಸಿದವನೂ, ಅಪಾರವಾದ ಪರಾಕ್ರಮವುಳ್ಳವನೂ, ದೇವರಾಕ್ಷಸ ಸಮೂಹದಿಂದ ಪೂಜಿಸಲ್ಪಟ್ಟ ಪಾದುಕೆಗಳುಳ್ಳವನೂ, ಗಿರಿಜಾಸಮೇತನೂ ಆದ ಆ ಶಿವನಿಗೆ ನಮುಸ್ಕರಿಸುವೆನು. ॥೨೨೯॥

ಅತ್ಯಂತ ಭಯಂಕರವಾದ ಪಾಪಸಮೂಹಗಳನ್ನು ನಿವಾರಣೆಮಾಡುವವನೂ, ಸ್ವರ್ಗ, ಮೋಕ್ಷ, ಮೊದಲಾದ ಉತ್ತಮ ಫಲಗಳನ್ನು ಕೊಡುವವನೂ, ರೋಗರುಜಿನಾದಿಗಳಿಗೆ ಎಡೆಯಾಗದವನೂ, ಅಂಧಕಾಸುರನನ್ನು ಧ್ವಂಸಮಾಡಿದವನೂ ಆದ ಗಿರಿಜಾಸಮೇತನಾದ ಶಿವನಿಗೆ ನಮುಸ್ಕಾರವು. ॥೨೩೦॥

ಕೋಲುಮಲ್ಲಿಗೆ, ಚಂದ್ರ, ಶಂಖ, ಸ್ಫಟಿಕ, ಇವುಗಳಿಗೆ ಸಮಾನವಾದ ಶರೀರಕಾಂತಿಯುಳ್ಳವನೂ, ಅತಿಶಯವಾದ ಐಶ್ವರ್ಯವುಳ್ಳವನೂ, ಶರಣಾಗತರಲ್ಲಿ ವಿಶ್ವಾಸವುಳ್ಳವನೂ, ಶೋಭಿಸುತ್ತಿರುವ ಕಪ್ಪುಗೊರಳುಳ್ಳವನೂ, ಯಮನನ್ನು ನಿಗ್ರಹಿಸಿದವನೂ, ಮಂಗಳಾಂಬೆಯ ಸಹಚರನೂ ಆದ ಶಿವನಿಗೆ ನಮುಸ್ಕಾರವು. ॥೨೩೧॥

ಭುಜಂಗಚಕ್ರಾಧಿಪಭೂಷಣಾಯ
ನಾನಾಮಣಿಭ್ರಾಜಿತಕುಂಡಲಾಯ ।
ಕರ್ಪೂರಗೌರಾಯ ಸುರೋತ್ತಮಾಯ
ಶಿವಾಸಮೇತಾಯ ನಮಃ ಶಿವಾಯ ॥೨೩೨॥

ತ್ರಿಕಾಲಾಗ್ನಿಕಾಲಾಯ ಮನೋನ್ಮನಾಯ
ತ್ರಿಯಂಬಕಾಯ ತ್ರಿಪುರಾಂತಕಾಯ ।
ಕಾಲಾಗ್ನಿರುದ್ರಾಯ ಜಗನ್ಮಯಾಯ
ಶಿವಾಸಮೇತಾಯ ನಮಃ ಶಿವಾಯ ॥೨೩೩॥

ದಯಾಸಮುದ್ರಾಯ ನಿಧೀಶ್ವರಾಯ
ಧನೇಶಮಿತ್ರಾಯ ಸುಧಾಮಯಾಯ ।
ಕಾರುಣ್ಯರೂಪಾಯ ಮಯಸ್ಕರಾಯ
ಶಿವಾಸಮೇತಾಯ ನಮಃ ಶಿವಾಯ ॥೨೩೪॥

---

ಸರ್ಪಸಮೂಹಗಳಿಗೆಲ್ಲಾ ರಾಜನಾದ ಆದಿಶೇಷನನ್ನೇ ಆಭರಣವನ್ನಾಗಿ ಮಾಡಿಕೊಂಡಿರುವನೂ, ಅನೇಕ ರತ್ನಗಳಿಂದ ಹೊಳೆಯುತ್ತಿರುವ ಕುಂಡಲವುಳ್ಳವನೂ, ಕರ್ಪೂರದಂತೆ ಬೆಳ್ಳಗಿರುವನೂ, ದೇವೋತ್ತಮನೂ (ಮತ್ತು) ಗಿರಿಜಾರಮಣನೂ ಆದ ಆ ಶಿವನಿಗೆ ನಮಸ್ಕಾರ ಮಾಡುತ್ತೇನೆ. ॥೨೩೨॥

ದಕ್ಷಿಣಾಗ್ನಿ, ಗಾರ್ಹಪತ್ಯ, ಆಹವನೀಯಗಳೆಂಬ ಮೂರು ಅಗ್ನಿಗಳಂತೆ ಭಯಂಕರವಾದ ಕಾಲಸ್ವರೂಪನೂ, ಮನಸ್ಸನ್ನು ಚಂಚಲಗೊಳಿಸುವವನೂ, ಮುಕ್ಕಣ್ಣನೂ, ತ್ರಿಪುರಾಸುರ ಶತ್ರುವೂ, ಪ್ರಳಯಕಾಲದ ಅಗ್ನಿಯಂತೆ ಭಯಂಕರನೂ, ಜಗತ್ಸ್ವರೂಪನೂ, ಗಿರಿಜಾಸಮೇತನೂ ಆದ ಶಿವನಿಗೆ ಪ್ರಣಾಮಮಾಡುವೆನು. ॥೨೩೩॥

ಕರುಣಾಸಮುದ್ರನೂ, ನವನಿಧಿಗಳಿಗೂ ಒಡೆಯನೂ, ಧನಾಧಿಪತಿಯಾದ ಕುಬೇರನ ಸ್ನೇಹಿತನೂ, ಅಮೃತಸ್ವರೂಪನೂ, ಕರುಣಾಮಯವಾದ ಆಕಾರವುಳ್ಳವನೂ, ಇಹಪರಸುಖಗಳನ್ನು ಪ್ರಾಣಿಗಳಿಗೆ ಉಂಟುಮಾಡುವವನೂ, ಗಿರಿಜಾಸಮೇತನೂ ಆದ ಶಿವನಿಗೆ ನಮಸ್ಕಾರವು. ॥೨೩೪॥

ಬ್ರಹ್ಮೇಂದ್ರವಿಷ್ಣ್ವೀಶಸುರಾರ್ಚಿತಾಯ
ದೇವಾಧಿದೇವಾಯ ದಿಗಂಬರಾಯ ।
ಅನಂತಕಲ್ಯಾಣಗುಣಾರ್ಣವಾಯ
ಶಿವಾಸಮೇತಾಯ ನಮಃ ಶಿವಾಯ ॥೨೩೫॥

ವೇದಾಂತವೇದ್ಯಾಯ ಮಹೋದಯಾಯ
ಕೈಲಾಸವಾಸಾಯ ಶಿವಾಧವಾಯ ।
ಶಿವಸ್ವರೂಪಾಯ ಸದಾಶಿವಾಯ
ಶಿವಾಸಮೇತಾಯ ನಮಃ ಶಿವಾಯ ॥೨೩೬॥

ಇತಿ ಸ್ತುತ್ವಾ ಮಹಾದೇವಂ ಸರ್ವವ್ಯಾಪಿನಮೀಶ್ವರಂ ।
ಪುನಃ ಪುನಃ ಪ್ರಣಮ್ಯಾಥ ಸ್ಕಂದಸ್ತಸ್ಥೌ ಕೃತಾಂಜಲಿಃ ॥೨೩೭॥

ಮಹೇಶ್ವರಃ ಪ್ರಸನ್ನಾತ್ಮಾ ಕುಮಾರಂ ನತಕಂಧರಂ ।
ಪ್ರೀತ್ಯಾ ಪ್ರೋವಾಚ ವಚನಂ ಸರ್ವಾನಂದಕರಂ ತತಃ ॥೨೩೮॥

---

ಬ್ರಹ್ಮ, ಇಂದ್ರ, ವಿಷ್ಣು, ಈಶಾನ ಮೊದಲಾದ ದೇವತೆಗಳಿಂದ ಪೂಜಿಸಲ್ಪಟ್ಟವನೂ, ದೇವತೆಗಳಿಗೆಲ್ಲಾ ಅಧಿಪತಿಯೂ, ದಿಕ್ಕುಗಳನ್ನೇ ಬಟ್ಟೆಯನ್ನಾಗಿ ಧರಿಸಿರುವವನೂ, ಅಪಾರವಾದ ಕಲ್ಯಾಣಗುಣಗಳಿಗೆ ಸಮುದ್ರದಂತೆ ಆಶ್ರಯನೂ, ಗಿರಿಜಾರಮಣನೂ ಆದ ಶಿವನಿಗೆ ನಮಸ್ಕಾರಮಾಡುವೆನು. ॥೨೩೫॥

ವೇದಾಂತಗಳಿಂದ ತಿಳಿಯಲು ಯೋಗ್ಯನೂ, ತುಂಬಾ ಉತ್ಕರ್ಷಸ್ವರೂಪವುಳ್ಳವನೂ, ಕೈಲಾಸಪರ್ವತದಲ್ಲಿ ವಾಸಮಾಡುವವನೂ, ಗಿರಿಜಾರಮಣನೂ, ಮಂಗಳಸ್ವರೂಪನೂ, ಯಾವಾಗಲೂ ಯೋಗಿಗಳ ಮನಸ್ಸಿನಲ್ಲಿ ನೆಲಸಿರುವವನೂ, ಮಂಗಳಾದೇವಿಯೊಡನಾಡಿಯೂ ಆದ ಶಿವನಿಗೆ ನಮಸ್ಕಾರವು. ॥೨೩೬॥

ಈರೀತಿಯಾಗಿ ಆ ಕುಮಾರಸ್ವಾಮಿಯು ಸರ್ವವ್ಯಾಪಿಯೂ, ಐಶ್ವರ್ಯಶಾಲಿಯೂ ಆದ ಆ ಮಹಾದೇವನನ್ನು ಪದೇ ಪದೇ ಸ್ತೋತ್ರಮಾಡಿ, ತರುವಾಯ ಕೈಜೋಡಿಸಿ ವಿನಯದಿಂದ ನಿಂತುಕೊಂಡನು. ॥೨೩೭॥

ಆಗ ಸಂತುಷ್ಟಾಂತರಂಗನಾದ ಮಹೇಶ್ವರನು, ವಿನಯದಿಂದ ತಲೆಬಾಗಿಸಿ ನಿಂತಿರುವ ಕುಮಾರಸ್ವಾಮಿಯನ್ನು ನೋಡಿ, ಪ್ರೀತಿಯಿಂದ ಎಲ್ಲರಿಗೂ ಆನಂದವುಂಟಾಗುವಂತೆ ಈರೀತಿ ಮಾತನಾಡಿದನು. ॥೨೩೮॥

॥ಶ್ರೀಶಿವ ಉವಾಚ॥

ಪ್ರಹೃಷ್ಟೋಽಸ್ಮಿ ಪ್ರಸನ್ನೋಽಸ್ಮಿ ಸ್ತೋತ್ರೇಣಾನೇನ ಷಣ್ಮುಖ ।
ವರದೋಽಹಂ ವರಾನಿಷ್ಟಾನ್ವೃಣು ದಾಸ್ಯೇ ವರಾನಹಂ ॥೨೩೯॥

॥ ಸ್ಕಂದ ಉವಾಚ ॥

ಸಾಂಬ ಶಂಭೋ ಮಹಾದೇವ ದಯಾಸಾಗರ ಶಂಕರ ।
ಮಚ್ಚಿತ್ರಭ್ರಮರೋ ನಿತ್ಯಂ ತವಾಸ್ತು ಪದಪಂಕಜೇ ॥೨೪೦॥

ಸರ್ವಥಾ ಶರ್ವ ಸರ್ವೇಶ ಸರ್ವೋತ್ತಮ ಮಹೇಶ್ವರ ।
ತವ ನಾಮಾಽಮೃತಂ ದಿವ್ಯಂ ಜಿಹ್ವಾಗ್ರೇ ಮಮ ತಿಷ್ಠತು ॥೨೪೧॥

ಅನನ್ಯಶರಣಂ ಚಿತ್ತಂ ತವೈವ ಚರಣಾಂಬುಜೇ ।
ನಿವಸತ್ವನಿಶಂ ಶಂಭೋ ಮಮ ದೇವ ದಯಾನಿಧೇ ॥೨೪೨॥

---

ಓ ಷಣ್ಮುಖಸ್ವಾಮಿಯೇ, ನಿನ್ನ ಈ ಸ್ತೋತ್ರದಿಂದ ನಾನು ಸಂತುಷ್ಟನಾಗಿ ಪ್ರಸನ್ನನಾಗಿರುವೆನು. ಈಗ ನಿನಗೆ ಬೇಕಾದ ವರಗಳನ್ನು ಬೇಡು ಕೊಡಲು ಸಿದ್ಧನಾಗಿರುವೆನೆಂದು ಪರಮೇಶ್ವರನು ಕುಮಾರಸ್ವಾಮಿಗೆ ಹೇಳಲು ಆಗ ಕುಮಾರ ನಿಂತೆಂದನು. ॥೨೩೯॥

ಅಂಬಿಕಾರಮಣನಾದ ಶಂಭುವೇ, ದೇವಶ್ರೇಷ್ಠನೂ, ದಯಾಸಮುದ್ರನೂ, ಆದ ಶಂಕರನೇ, ನನ್ನ ಮನಸ್ಸೆಂಬ ಭ್ರಮರವು ನಿತ್ಯವೂ ನಿನ್ನ ಪಾದಕಮಲದಲ್ಲಿ ನೆಲಸಿರಲಿ. ॥೨೪೦॥

ಸಕಲರಿಗೂ ಒಡೆಯನೂ, ಸರ್ವೋತ್ತಮನೂ, ಅತ್ಯಂತ ಐಶ್ವರ್ಯಶಾಲಿಯೂ ಆದ ಶರ್ವನೇ, ಎಲ್ಲಾ ರೀತಿಯಿಂದಲೂ ಅಮೃತಸಮಾನವಾದ ನಿನ್ನ ನಾಮುಗಳು ಯಾವಾಗಲೂ ನನ್ನ ನಾಲಿಗೆಯ ತುದಿಯಲ್ಲಿ ನೆಲಸಲಿ. ॥೨೪೧॥

ದಯಾಳುವೂ, ಸುಖಪ್ರದನೂ ಆದ ದೇವನೇ, ಮತ್ತಾರಲ್ಲಿಯೂ ಆಸಕ್ತವಾಗದ ನನ್ನ ಮನಸ್ಸು ಅನವರತವೂ ಬಿಡದೇ ನಿನ್ನ ಪಾದಕಮಲದಲ್ಲಿಯೇ ವಿಹರಿಸಲಿ. ॥೨೪೨॥

ಶಿವಾಸ್ತು ತವ ಪಾದಾಬ್ಜೇ ಮನ್ಮನೋಮಧುಪಃ ಸದಾ ।
ಚತುರ್ವರ್ಗಫಲಾಕಾರಮಕರಂದವಿಜೃಂಭಿತೇ ॥೨೪೩॥

ಕಿಂ ವರೇಣ ಮಮಾನ್ಯೇನ ಮಯ್ಯೈತದ್ಯಾಚಿತಂ ವರಂ ।
ಸರ್ವಸೌಭಾಗ್ಯದಂ ನೂನಮಿತಿ ವೇದೈರ್ವಿನಿಶ್ಚಿತಂ ॥೨೪೪॥

ಇತಿ ತದ್ವಚನಂ ಶ್ರುತ್ವಾ ಸಾಂಬಃ ಸಂತುಷ್ಟಮಾನಸಃ ।
ಪಸ್ಪರ್ಶ ತಚ್ಛಿರಃ ಸಮ್ಯಗಾನಂದಪರಿಪೂರಿತಃ ॥೨೪೫॥

ಕುಮಾರ ತವ ಭಾಗ್ಯಸ್ಯ ನಾಂತೋ ನೂನಂ ನ ಸಂಶಯಃ ।
ತತ್ತ್ವತೋ ಮಾಂ ವಿದಿತ್ವೈವ ವಿಶ್ವೇಶಂ ಸ್ತೋತುಮಿಚ್ಛಸಿ ॥೨೪೬॥

ತ್ವಯಾ ತು ಯಾಚಿತಂ ದತ್ತಂ ಮಯಾ ತುಭ್ಯಂ ವರೋತ್ತಮಂ ।
ವರಾಂತರಂ ಚ ದಾಸ್ಯಾಮಿ ಸರ್ವಲೋಕೋಪಕಾರಕಂ ॥೨೪೭॥

---

ಮಹಾದೇವನೇ; ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಫಲಸ್ವರೂಪವಾದ ಮಕರಂದದಿಂದ ಶೋಭಿಸುತ್ತಿರುವ ನಿನ್ನ ಪಾದಕಮಲದಲ್ಲಿ ನನ್ನ ಮನಸ್ಸೆಂಬ ದುಂಬಿಯು ಯಾವಾಗಲೂ ವಾಸಿಸುತ್ತಾ ಮಕರಂದಪಾನಮಾಡಲಿ. ॥೨೪೩॥

ದೇವ! ನನಗೆ ಬೇರೆ ವರಗಳಿಂದ ಪ್ರಯೋಜನವೇನು! ಸಕಲ ಸೌಭಾಗ್ಯಗಳನ್ನೂ ನಿಶ್ಚಯವಾಗಿ ಕೊಡುವ ವರವನ್ನೇ ನಾನು ಈಗ ಪ್ರಾರ್ಥಿಸಿರುವೆನು. ಇದು ಸತ್ಯವೆಂದು ವೇದಗಳೂ ನಿಶ್ಚಯಿಸಿರುವುವು, ಎಂದು ಷಣ್ಮುಖನು ಮಹಾದೇವನನ್ನು ಪ್ರಾರ್ಥಿಸಿದನು. ॥೨೪೪॥

ಆಗ ಅಂಬಿಕಾರಮಣನಾದ ಮಹೇಶ್ವರನು ಕುಮಾರನ ಈರೀತಿಯಾದ ವಚನಗಳನ್ನು ಕೇಳಿ, ಸಂತುಷ್ಟಾಂತರಂಗನಾಗಿ, ಆನಂದಪರಿಪೂರ್ಣತೆಯಿಂದ ಆ ಷಣ್ಮುಖನ ತಲೆಯನ್ನು ಸ್ಪರ್ಶಮಾಡಿದನು. ॥೨೪೫॥

ಕುಮಾರ! ನಿನ್ನ ಭಾಗ್ಯಕ್ಕೆ ನಿಜವಾಗಿಯೂ ಕೊನೆಯೇ ಇಲ್ಲವೆಂಬುದರಲ್ಲಿ ಸಂಶಯವೇ ಇಲ್ಲ. ವಾಸ್ತವವಾಗಿ ಜಗದೊಡೆಯನಾದ ನನ್ನ ಸ್ವರೂಪವನ್ನು ತಿಳಿದು ಸ್ತೋತ್ರಮಾಡಲು ಅಪೇಕ್ಷಿಸುತ್ತಿದ್ದೀಯೆ. ॥೨೪೬॥

ಅಯ್ಯ ಮಗನೇ! ನೀನು ಬೇಡಿದ ಉತ್ತಮವಾದ ವರವನ್ನು ನಾನು ನಿನಗೆ ಕೊಟ್ಟಿರುವೆನಲ್ಲದೇ ಸಕಲ ಲೋಕಗಳಿಗೂ ಉಪಕಾರವಾಗುವ ಬೇರೆ ವರಗಳನ್ನೂ ನಿನಗೆ ಕೊಡುವೆನು, ಕೇಳು ; ॥೨೪೭॥

ತ್ವಯೇದಂ ಯತ್ಕೃತಂ ಸ್ತೋತ್ರಂ ಮಮ ಪ್ರಿಯಕರಂ ವರಂ ।
ತದ್ಯಃ ಪಠೇಚ್ಛುಚಿರ್ನಿತ್ಯಂ ಸ ಸಮಾಪ್ನೋತ್ಯಭೀಪ್ಸಿತಂ ॥೨೪೮॥

ಅಘೋರಪಾತಕೇಭ್ಯಶ್ಚ ಸಂಸಾರಾಚ್ಚ ವಿಮುಚ್ಯತಾಂ ।
ಭಕ್ತಿಮಾನಸ್ತು ಸತತಂ ಮಯಿ ಸಾಂಬೇ ಮಹೇಶ್ವರೇ ॥೨೪೯॥

ಇತಿ ದತ್ವಾ ವರಾನಿಷ್ಟಾನ್ಸಾಂಬಃ ಸಂಸಾರಮೋಚಕಃ ।
ತಸ್ಥಾವತೀವ ಸಂತುಷ್ಟೋ ಬ್ರಹ್ಮವಿಷ್ಣ್ವೀಶಸೇವಿತಃ ॥೨೫೦॥

ಭವಂತೋಽಪಿ ಮುನಿಶ್ರೇಷ್ಠಾಃ ಸಾಂಬಧ್ಯಾನಪರಾಯಣಾಃ ।
ಶಿವನಾಮಜಪಂ ಕೃತ್ವಾ ತಿಷ್ಠಂತು ಸುಖಿನಃ ಸದಾ ॥೨೫೧॥

ಶಿವ ಏವ ಸದಾ ಧ್ಯೇಯಃ ಸರ್ವದೇವೋತ್ತಮಃ ಪ್ರಭುಃ ।
ಶಿವ ಏವ ಸದಾ ಪೂಜ್ಯೋ ಮುಕ್ತಿಕಾಮ್ಯೈರ್ನ ಸಂಶಯಃ ॥೨೫೨॥

---

ನೀನು ಮಾಡಿದ, ನನಗೆ ತುಂಬಾ ಪ್ರೀತಿಕರವಾದ ಈ ಶ್ರೇಷ್ಠವಾದ ಸ್ತೋತ್ರವನ್ನು, ನಿತ್ಯವೂ ಶುಚಿಯಾಗಿ ಪಠನಮಾಡುವವನು ಸಕಲ ಅಭೀಷ್ಟಗಳನ್ನೂ ಹೊಂದುವನು. ॥೨೪೮॥

ಅಂಬಿಕಾರಮಣನೂ ಮಹೇಶ್ವರನೂ ಆದ ನನ್ನಲ್ಲಿ ಯಾವಾಗಲೂ ಭಕ್ತಿಯುಳ್ಳವನು, ತುಂಬಾ ಭಯಂಕರವಾದ ಪಾಪರಾಶಿಗಳಿಂದಲೂ, ಈ ಸಂಸಾರಬಂಧನದಿಂದಲೂ ಮುಕ್ತನಾಗುವನು. ॥೨೪೯॥

ಸಂಸಾರಬಂಧನವನ್ನು ಬಿಡಿಸುವ ಅಂಬಿಕಾಕಾಂತನು ಈರೀತಿಯಾಗಿ ಕುಮಾರಸ್ವಾಮಿಗೆ ಇಷ್ಟವಾದ ವರಗಳನ್ನು ಕೊಟ್ಟು, ಬಹಳ ಸಂತೋಷದಿಂದ ಬ್ರಹ್ಮ, ವಿಷ್ಣು, ಈಶಾನ ಇವರೇ ಮೊದಲಾದವರಿಂದ ಸೇವಿಸಲ್ಪಡುತ್ತಾ ಕುಳಿತಿದ್ದನು. ॥೨೫೦॥

ಮುನಿಪುಂಗವರಾದ ನೀವೂ ಕೂಡ ಆ ಅಂಬಿಕಾರಮಣನ ಧ್ಯಾನತತ್ಪರರಾಗಿ, ಯಾವಾಗಲೂ ಆ ಪರಶಿವನ ನಾಮಜಪಗಳನ್ನು ಮಾಡುತ್ತಾ ಸುಖವಾಗಿ ಬಾಳಿರಿ. ॥೨೫೧॥

ಮೋಕ್ಷಾಪೇಕ್ಷಿಗಳಾದ ಮಾನವರು ಸಕಲ ದೇವತೆಗಳಲ್ಲಿಯೂ ಉತ್ತಮನಾದ ಪ್ರಭುವೆನಿಸಿದ ಆ ಶಿವನನ್ನೇ ಯಾವಾಗಲೂ ಧ್ಯಾನಮಾಡಬೇಕು. ಅಲ್ಲದೆ ಆತನನ್ನೇ ಸಂಶಯವಿಲ್ಲದೇ ಪೂಜೆಮಾಡಬೇಕು. ॥೨೫೨॥

ಮಹೇಶಾನ್ನಾಧಿಕೋ ದೇವಃ ಸ ಏವ ಸುರಸತ್ತಮಃ ।
ಸ ಏವ ಸರ್ವವೇದಾಂತವೇದ್ಯೋ ನಾತ್ರಾಽಸ್ತಿ ಸಂಶಯಃ ॥೨೫೩॥

ಅನನ್ಯಶರಣೋ ನಿತ್ಯಂ ಶಂಕರಾರ್ಚನತತ್ಪರಃ ।
ಸ ಏವ ಧನ್ಯಃ ಪುಣ್ಯಾತ್ಮಾ ಸತ್ಯಮೇವೋಚ್ಯತೇ ಮಯಾ ॥೨೫೪॥

ಜನ್ಮಾಂತರಸಹಸ್ರೇಷು ಯದಿ ತಪ್ತಂ ತಪಸ್ತದಾ ।
ತಸ್ಯ ಶ್ರದ್ಧಾ ಮಹಾದೇವೇ ಭಕ್ತಿಶ್ಚ ಭವತಿ ಧ್ರುವಂ ॥೨೫೫॥

ಮುಕ್ತಿದಾತಾ ಮಹಾದೇವಸ್ತದನ್ಯೋ ನಾಸ್ತಿ ಸರ್ವಥಾ ।
ಸತ್ಯಮೇತತ್ಪುನಃ ಸತ್ಯಂ ಸತ್ಯಮೇತನ್ನ ಸಂಶಯಃ ॥೨೫೬॥

ಸುಭಗಾ ಜನನೀ ತಸ್ಯ ತಸ್ಯೈವ ಕುಲಮುನ್ನತಂ ।
ತಸ್ಯೈವ ಜನ್ಮ ಸಫಲಂ ಯಸ್ಯ ಭಕ್ತಿಃ ಸದಾಶಿವೇ ॥೨೫೭॥

---

ಆ ಮಹೇಶ್ವರನಿಗಿಂತಲೂ ಹೆಚ್ಚಿನ ದೇವತೆಗಳಾರೂ ಇಲ್ಲ. ಅವನೇ ದೇವತೆಗಳಲ್ಲಿ ಅತ್ಯಂತ ಶ್ರೇಷ್ಠನು. ಸಕಲ ವೇದಾಂತಗಳಿಂದಲೂ ತಿಳಿಯಲು ಯೋಗ್ಯನಾಗಿರುವವನೂ ಅವನೇ ಎಂಬುದರಲ್ಲಿ ಸ್ವಲ್ಪವೂ ಸಂದೇಹವಿಲ್ಲ. ||೨೫೩||

ಬೇರೆ ದೇವತೆಗಳನ್ನು ಮರೆಹೋಗದೇ ನಿತ್ಯವೂ ಶಂಕರನ ಪೂಜೆಯಲ್ಲಿಯೇ ತತ್ಪರನಾಗಿರುವ ಪುಣ್ಯಪುರುಷನೇ ಧನ್ಯನೆಂದು ನಾನು ಸತ್ಯವಾಗಿ ಹೇಳುವೆನು. ||೨೫೪||

ಸಾವಿರಾರು ಜನ್ಮಗಳಲ್ಲಿ ತಪಸ್ಸುಮಾಡಿದವನಿಗೆ ಮಾತ್ರ ಆ ಮಹಾದೇವನಲ್ಲಿ ನಂಬಿಕೆಯೂ ಮತ್ತು ಭಕ್ತಿಯೂ ನಿಜವಾಗಿ ಉಂಟಾಗುವುದು. ||೨೫೫||

ಆ ಮಹಾದೇವನೊಬ್ಬನೇ ಮೋಕ್ಷವನ್ನು ಕೊಡಬಲ್ಲನೇ ಹೊರತು ಮತ್ತಾವ ವಿಷ್ಣ್ವಾದಿದೇವತೆಗಳೂ ಎಂದಿಗೂ ಮುಕ್ತಿಪ್ರದರಲ್ಲವೆಂಬುದರಲ್ಲಿ ಸತ್ಯವಾಗಿಯೂ ಸಂಶಯವೇ ಇಲ್ಲ. ||೨೫೬||

ನಿತ್ಯಮಂಗಳಸ್ವರೂಪನಾದ ಆ ಪರಶಿವನಲ್ಲಿ ಭಕ್ತಿಯುಳ್ಳ ಮಾನವನ ತಾಯಿಯೇ ಸೌಭಾಗ್ಯವತಿಯು. ಅವನ ವಂಶವೇ ತುಂಬಾ ಉತ್ಕೃಷ್ಟವಾದದ್ದು. ಆತನ ಜನ್ಮವೇ ನಿಜವಾಗಿಯೂ ಸಾರ್ಥಕವು. ||೨೫೭||

ಯೇ ಶಂಭುಂ ಸುರಸತ್ತಮಂ ಸುರಗಣೈರಾರಾಧ್ಯಮೀಶಂ ಶಿವಂ
ಶೈಲಾಧೀಶಸುತಾಸಮೇತಮಮಲಂ ಸಂಪೂಜಯಂತ್ಯಾದರಾತ್ ।
ತೇ ಧನ್ಯಾಃ ಶಿವಪಾದಪೂಜನಪರಾ ಅನ್ಯೋ ನ ಧನ್ಯೋ ಜನಃ
ಸತ್ಯಂ ಸತ್ಯಮಿಹೋಚ್ಯತೇ ಮುನಿವರಾಃ ಸತ್ಯಂ ಪುನಃ ಸರ್ವಥಾ॥೧೫೮

ಇತಿ ಶ್ರೀಶಿವರಹಸ್ಯೇ ಉಗ್ರಾಖ್ಯೇ ಸಪ್ತಮಾಂಶೇ ಮಹೇತಿಹಾಸೇ
ಶತಸಾಹಸ್ರಿಕಾಯಾಂ ಸಂಹಿತಾಯಾಂ ಸ್ಕಂದಶಿವಸಂವಾದೇ
ಸಹಸ್ರನಾಮ ಸ್ಕಂದವರಪ್ರದಾನಂ ನಾಮ
ಪ್ರಥಮೋಽಧ್ಯಾಯಃ

---

ಮಂಗಳಕರನೂ, ದೇವೋತ್ತಮನೂ, ದೇವಸಮೂಹದಿಂದ ಪೂಜಿತನೂ, ಐಶ್ವರ್ಯಸಂಪನ್ನನೂ, ಯೋಗಿಗಳ ಮನಸ್ಸಿನಲ್ಲಿ ಅನವರತವೂ ನೆಲಸಿರುವವನೂ, ಪರ್ವತರಾಜಕುಮಾರಿಯ ಒಡನಾಡಿಯೂ, ಪರಿಶುದ್ಧನೂ, ಆದ ಆ ಪರಮೇಶ್ವರನನ್ನು ಆದರದಿಂದ ಚೆನ್ನಾಗಿ ಪೂಜೆಮಾಡುವವರೇ ಧನ್ಯರು. ಆ ಶಿವನ ಪಾದಪೂಜೆಮಾಡದ ಇತರ ಜನಗಳು ನಿರ್ಭಾಗ್ಯರೇ ಹೊರತು ಎಂದಿಗೂ ಧನ್ಯರೆನಿಸಲಾರರು. ಓ ಮುನಿಶ್ರೇಷ್ಠರೇ! ಈ ವಿಷಯವನ್ನು ಒತ್ತಿಒತ್ತಿ ಪದೇಪದೇ ಹೇಳುತ್ತಿರುವೆನು. ಚೆನ್ನಾಗಿ ಗಮನಿಸಿರಿ, ಎಂದು ಸೂತಮಹಾಮುನಿಗಳು ಶೌನಕಾದಿಗಳಿಗೆ ಹೇಳಿದರು. ॥೧೫೮॥

ಇಲ್ಲಿಗೆ ಶ್ರೀಶಿವರಹಸ್ಯದ ಉಗ್ರಸಂಜ್ಞಕವಾದ ಏಳನೆಯ ಅಂಶದಲ್ಲಿ
ಮೊದಲನೆಯ ಅಧ್ಯಾಯ ಮುಗಿದುದು.

|| ಶ್ರೀಃ ||

|| ಶ್ರೀಶಿವಾಯ ನಮಃ ||

# ಅಥ ಶ್ರೀಶಿವರಹಸ್ಯೇ

## ಉಗ್ರಾಖ್ಯೇ

## ಸಪ್ತಮಾಂಶೇ ಪೂರ್ವಾರ್ಧೇ

## ದ್ವಿತೀಯೋಽಧ್ಯಾಯಃ

|| ಋಷಯ ಊಚುಃ ||

ತ್ವತ್ಪ್ರಸಾದಾದ್ವಯಂ ಸೂತ ನಿಷ್ಪಾಪಾಸ್ಸ್ಮೋ ನ ಸಂಶಯಃ ।
ಧನ್ಯಾಃ ಕೃತಾ ತ್ವಯಾ ನೂನಂ ಸತ್ಕಥಾಶ್ರವಣಾದ್ವಯಂ ॥೧॥

ತ್ವದ್ವಾಗಮೃತಧಾರಾಭಿಃ ಪಾಪದಾವಾನಲೋ ಮಹಾನ್ ।
ಶಾಂತಂ ಪ್ರಶಾಂತಂ ಚಿತ್ತಂ ಚ ದುಃಖಾನ್ಯಪಗತಾನಿ ಚ ॥೨॥

ಪುನಃ ಪುಣ್ಯಕಥಾಮನ್ಯಾಂ ವದ ಪಾಪೌಘನಾಶನೀಂ
ಯತ್ಕಥಾಶ್ರವಣಂ ಸದ್ಯಃ ಪ್ರಸಾದಯತಿ ಚೇತಸಂ ॥೩॥

---

## ಎರಡನೆಯ ಅಧ್ಯಾಯ

" ಎಲೈ ಸೂತಮಹರ್ಷಿಯೇ, ನಿನ್ನ ಅನುಗ್ರಹದಿಂದ ನಾವು ಧನ್ಯರಾದೆವು. ನಮ್ಮ ಪಾಪಗಳೆಲ್ಲವೂ ನಾಶವಾದುವು. ಈ ಸತ್ಕಥೆಯನ್ನು ಕೇಳಿದುದರಿಂದ ನಾವು ಕೃತಕೃತ್ಯರಾದೆವು. ನಿನ್ನ ವಾಕ್ಕೆಂಬ ಅಮೃತಧಾರೆಗಳಿಂದ ನಮ್ಮ ಪಾಪವೆಂಬ ಅಗ್ನಿಯು ನಷ್ಟವಾಯಿತು. ನಮ್ಮ ಮನಸ್ಸಿಗೆ ಶಾಂತಿಯು ಲಭಿಸಿತು. ನಮ್ಮ ವಿಪತ್ತುಗಳೂ ದೂರವಾದುವು. ||೧-೨||

ಪೂಜ್ಯನೇ, ತಿರುಗಿ ನಮಗೆ ಅದೇ ಶಿವಕಥೆಯನ್ನು ಹೇಳು. ಯಾವ ಕಥೆಯನ್ನು ಕೇಳುವಿಕೆಯಿಂದ ನಮ್ಮ ಪಾಪರಾಶಿಯೆಲ್ಲಾ ದೂರವಾಗುವುದೋ ಅಂತಹ ಕಥೆಯನ್ನು ಕೇಳುವುದರಿಂದ ನಮ್ಮ ಮನಸ್ಸಿಗೆ ಆನಂದವುಂಟಾಗುವುದು.

ಕಸ್ಮಿನ್ ಕ್ಷೇತ್ರವರೇ ರಮ್ಯೇ ಜಪ್ಯೋ ಮಂತ್ರಶ್ಶಿವಾತ್ಮಕಃ ।
ಕುತ್ರ ವಾ ಶಂಕರಸ್ಯಾಸ್ತಿ ದೇವದೇವಸ್ಯ ಸನ್ನಿಧಿಃ ॥೪॥

॥ ಸೂತ ಉವಾಚ ॥

ಏವಮೇವ ಪುರಾ ಪೃಷ್ಟಃ ಪಾರ್ವತ್ಯಾ ಪರಮೇಶ್ವರಃ ।
ತತಃ ಪ್ರಹೃಷ್ಟವದನಃ ಸ ಜಗಾದ ಸತೀಂ ಪ್ರತಿ ॥೫॥

॥ ಶಿವ ಉವಾಚ ॥

ಅಸ್ತಿ ಕ್ಷೇತ್ರವರಂ ದೇವಿ ಸರ್ವಕ್ಷೇತ್ರೋತ್ತಮೋತ್ತಮಂ ।
ವೇದೋಪಗೀತಮನಿಶಂ ಕಾಶೀಕ್ಷೇತ್ರಮನಾಮಯಂ ॥೬॥

ಕಲ್ಪಾಂತೇ ಸಕಲಾನ್ ಲೋಕಾನ್ ಸಂಹೃತ್ಯ ನಿಜಮಾಯಯಾ ।
ಕಾಶ್ಯಾಮೇವ ತ್ವಯಾ ಸಾರ್ಧಂ ಸಂವಸಾಮಿ ಶುಭಾನನೇ ॥೭॥

ಕಾಶೀ ತ್ರಿಶೂಲಿನಿಲಯಾ ನಿರ್ಮುಕ್ತಾಲಯವರ್ಜಿತಾ ।
ಪುರಾತನಾ ನ ಸಾ ಜನ್ಯಾ ಪ್ರಳಯೇಽಪಿ ನ ನಶ್ಯತಿ ॥೮॥

---

ಯಾವ ಶಿವಕ್ಷೇತ್ರದಲ್ಲಿ ಎಂತಹ ಶಿವಮಂತ್ರವನ್ನು ಜಪಿಸಬೇಕು? ಎಲ್ಲಿ ಶ್ರೀಮಹಾದೇವನು ಸ್ಥಿರವಾಗಿ ವಾಸಮಾಡುವನು?" ಎಂದು ಮುನಿಗಳು ಸೂತಮಹರ್ಷಿಯನ್ನು ಪ್ರಶ್ನೆಮಾಡಿದರು. ॥೩-೪॥

ಎಲೈ ಋಷಿಗಳಿರಾ, ಹಿಂದೆ ಪಾರ್ವತಿಯು ಹೀಗೆಯೇ ಶಂಕರನನ್ನು ಪ್ರಶ್ನಿಸಿದಳು. ಆಗ ಮಹಾದೇವನು ಸಂತೋಷಗೊಂಡು ಸತೀದೇವಿಗೆ ಮುಂದೆ ಹೇಳುವಂತೆ ತಿಳಿಸಿದನು ಎಂದು ಸೂತರು ನುಡಿಯುತ್ತಾ ಶಿವೋಕ್ತಿಯನ್ನು ಅನುವಾದಮಾಡತೊಡಗಿದರು. ॥೫॥

ಎಲೌ ಪ್ರಿಯಳೇ, ಎಲ್ಲಾ ತೀರ್ಥಕ್ಷೇತ್ರಗಳಲ್ಲಿಯೂ ಉತ್ತಮವೆನಿಸಿ ವೇದೋಪನಿಷತ್ತಿನಲ್ಲಿಯೂ ಪ್ರಸಿದ್ಧಿ ಪಡೆದ ನಾಶರಹಿತವಾದ ಒಂದು ಕ್ಷೇತ್ರವಿದೆ. ಅದಕ್ಕೆ ಕಾಶೀಕ್ಷೇತ್ರವೆಂದು ಹೆಸರು. ಅಲ್ಲಿರುವವರಿಗೆ ಸಾವುನೋವುಗಳಾಗುವುದಿಲ್ಲ. ನಾನು ಪ್ರಳಯಕಾಲದಲ್ಲಿ ಎಲ್ಲಾ ಲೋಕಗಳನ್ನೂ ಮಾಯೆಯಿಂದ ಸಂಹರಿಸುವೆನು. ಬಳಿಕ ಕಾಶೀಕ್ಷೇತ್ರದಲ್ಲಿ ನಿನ್ನೊಡನೆ ವಾಸಿಸುವೆನು. ಆ ಕಾಶಿಯು ಶಂಕರನ(ನನ್ನ)

ಮಮಾಪರಾ ತನುಃ ಕಾಶೀ ಮತ್ತೋ ಭಿನ್ನಾ ನ ಸಾ ಪರಾ ।
ಸೈವಾಹಂ ನಾವಯೋರ್ಭೇದಃ ಸತ್ಯಮೇವಾವಯೋರಿವ ॥೯॥

ನಾಹಂ ವಸಾಮಿ ಕೈಲಾಸೇ ನ ಚ ಮಂದರಪರ್ವತೇ ।
ನ ವಾ ಹಿಮಾಚಲೇ ಭದ್ರೇ ಕಾಶ್ಯಾಮೇವ ವಸಾಮ್ಯಹಂ ॥೧೦॥

ವಸನ್ನಪ್ಯತ್ರ ಕೈಲಾಸೇ ವಿಲಾಸಾರ್ಥಂ ಕದಾಚನ ।
ವಿಹಾಯ ಕಾಶೀಮನಿಶಂ ನಿವಸಾಮಿ ಮನೋರಮೇ ॥೧೧॥

ಜ್ಯೋತಿಃಪುಂಜಮಯೀ ಕಾಶೀ ಜ್ಞಾನರೂಪಾ ಮನೋರಮಾ ।
ತಯಾ ತು ಸದೃಶಂ ವಸ್ತು ನಾಸ್ತಿ ಬ್ರಹ್ಮಾಂಡಗೋಲಕೇ ॥೧೨॥

---

ವಾಸಸ್ಥಾನವಾಗಿದೆ. ಅದು ಪವಿತ್ರವಾದದ್ದು. ಅದಕ್ಕೆ ಎಂದೂ ನಾಶವಿಲ್ಲ. ಕಾಶೀ ಕ್ಷೇತ್ರವು ಅನಾದಿಕಾಲದಿಂದಲೂ ಒಂದೇ ರೀತಿಯಲ್ಲಿರುವುದು. ಪ್ರಳಯಕಾಲ ದಲ್ಲಿಯೂ ಅದು ಅಳಿಯುವುದಿಲ್ಲ. ||೬-೭-೮||

ಕಾಶಿಯು ನನ್ನ ಎರಡನೆಯ ಶರೀರವಾಗಿದೆ. ನನ್ನ ಹೊರತು ಕಾಶಿ ಯೆಂಬುದು ಬೇರೆ ಇರುವುದಿಲ್ಲ. ಆ ಕಾಶಿಯೇ ನಾನು. ನನ್ನ ಸ್ವರೂಪವೇ ಕಾಶೀ ಕ್ಷೇತ್ರವು. ನನಗೂ ನಿನಗೂ ಭೇದವಿಲ್ಲದಿರುವಹಾಗೆ ನನಗೂ ಕಾಶೀಕ್ಷೇತ್ರಕ್ಕೂ ಯಾವ ಭೇದವೂ ಇಲ್ಲ. ||೯||

ಮಂಗಳಕರಳಾದ ಪಾರ್ವತಿಯೇ ! ನಾನು ಕೈಲಾಸದಲ್ಲಿಯಾಗಲೀ, ಮಂದರ ಪರ್ವತ, ಮತ್ತು ಹಿಮವತ್ಪರ್ವತದಲ್ಲಿಯಾಗಲೀ ವಾಸಿಸುವುದಿಲ್ಲ. ಯಾವಾಗಲೂ ನಾನು ಕಾಶೀಕ್ಷೇತ್ರದಲ್ಲಿಯೇ ಇರುತ್ತೇನೆ. ಯಾವಾಗಲಾದರೂ ವಿನೋದವಾಗಿ ಕಾಲಕಳೆಯಲು ಕೈಲಾಸವನ್ನು ಸೇರುವೆನು. ಆದರೆ ಕಾಶಿಯನ್ನು ಬಿಟ್ಟು ಬಹುಕಾಲ ಬೇರೆ ಸ್ಥಳದಲ್ಲಿ ನೆಲಸಲಾರೆನು. ಒಂದು ವೇಳೆ ಕಾಶೀಕ್ಷೇತ್ರವನ್ನು ಬಿಟ್ಟು ಸ್ವಲ್ಪಕಾಲ ವಿನೋದಕ್ಕಾಗಿ ಕೈಲಾಸದಲ್ಲಿ ವಾಸಿಸುವುದುಂಟು ||೧೦-೧೧||

ಕಾಶೀಕ್ಷೇತ್ರವು ಜ್ಯೋತಿರ್ಮಯವಾದುದು. ಕಾಶಿಯನ್ನು ಜ್ಞಾನಸ್ವರೂಪ ವೆಂದೂ, ಅತಿ ಮನೋಹರವಾದುದೆಂದೂ ಹೇಳುವರು. ಈ ಬ್ರಹ್ಮಾಂಡದೊಳಗೆ ಕಾಶಿಗೆ ಸಮನಾದುದು ಬೇರೊಂದಿಲ್ಲ. ಅದು ಭೂಮಿಯಲ್ಲಿದ್ದರೂ ಭೂಲೋಕಕ್ಕೆ ಅದು ಸೇರುವುದಿಲ್ಲ. ಕೆಳಗಿನ ಲೋಕದಲ್ಲಿದ್ದರೂ (ಕೆಳಗಡೆ ಇದ್ದರೂ) ಎಲ್ಲಕ್ಕಿಂತಲೂ

ಭೂಗತಾಪಿ ನ ಭೂಃ ಕಾಶೀ ನಿಮ್ನಾಸ್ಥಾಪ್ಯಖಿಲೋನ್ನತಾ ।
ವೇದವೇದ್ಯಾಪಿ ಸಾ ನೂನಂ ವೇದವೇದ್ಯಾ ನ ತತ್ತ್ವತಃ ॥೧೩॥

ಮತ್ಸ್ವರೂಪಾ ಯತಃ ಕಾಶೀ ತತೋಽಹಮಿವ ತತ್ತ್ವತಃ ।
ವೇದಾಂತೈರಪಿ ಸಾ ಕಾಶೀ ನ ಜ್ಞಾತುಂ ಶಕ್ಯತೇ ಧ್ರುವಂ ॥೧೪॥

ಯಥಾ ತ್ವಯಿ ಮಮ ಪ್ರೀತಿಃ ತಥಾ ಕಾಶ್ಯಾಂ ಶುಭಾನನೇ ।
ಸರ್ವಥಾ ಪ್ರೀತಿರಸ್ತ್ಯೇವ ನಾತ್ರಾಪ್ರೀತಿಃ ಕದಾಚನ ॥೧೫॥

ಮಹ್ಯಂ ತ್ವಮಿವ ಸಾ ಕಾಶೀ ಸರ್ವದಾ ಸರ್ವಸೌಖ್ಯದಾ ।
ಕಾಶೀ ಕಾಶೀತಿ ಸತತಂ ಉಚ್ಚರನ್ನಿವಸಾಮ್ಯಹಂ ॥೧೬॥

ಧರ್ಮೈಕರಾಶಿಃ ಸಾ ಕಾಶೀ ಪಾಪರಾಶಿವಿನಾಶಿನೀ ।
ಅವಿನಾಶೀ ಸುಧಾರಾಶಿರಾಶಾಸ್ಯ ಪಶಿಭಿಃ ಸದಾ ॥೧೭॥

---

ಅದು ಉತ್ತಮವಾದ, ಉನ್ನತವಾದ ಸ್ಥಾನವನ್ನು ಹೊಂದಿದೆ. ಅದರ ಮಹಿಮೆಯನ್ನು ವೇದದಿಂದ ತಿಳಿಯಬಹುದಾದರೂ, ವಸ್ತುತಃ ವೇದಗಳಿಂದಲೂ ಅದರ ಎಲ್ಲಾ ಮಹಾತ್ಮ್ಯೆಯೂ ತಿಳಿದು ಬರುವುದಿಲ್ಲ. ||೧೨-೧೩||

ಕಾಶಿಯು ನನ್ನ ಸ್ವರೂಪವಾದುದರಿಂದ ಮೂಲತಃ ವಿಚಾರಿಸಿದರೆ ನಾನೇ ಕಾಶೀಕ್ಷೇತ್ರವಾಗಿರುವೆನು. ಆ ಕಾಶೀಪ್ರಭಾವವನ್ನು ಉಪನಿಷತ್ತುಗಳಿಂದಲೂ ವೇದಾಂತಜ್ಞಾನದಿಂದಲೂ ಕೂಡ ತಿಳಿಯಲು ಸಾಧ್ಯವಿಲ್ಲವಾಗಿದೆ. ಅಂದಮೇಲೆ ಅದರ ಮಾಹಾತ್ಮ್ಯೆಯನ್ನು ತಿಳಿಯುವುದಾದರೂ ಹೇಗೆ? ಎಲೌ ಗೌರಿಯೇ, ಶುಭಾನನೇ! ನನಗೆ ನಿನ್ನಲ್ಲಿ ಪ್ರೀತಿ ಇರುವ ಹಾಗೆ ಕಾಶೀಕ್ಷೇತ್ರದಲ್ಲಿಯೂ ಪ್ರೀತಿ ಇರುತ್ತದೆ. ನಿಶ್ಚಯವಾಗಿಯೂ ಕಾಶೀಕ್ಷೇತ್ರವು ನನಗೆ ತುಂಬಾ ವಿಶ್ವಾಸದಾಯಕವಾದುದು. ||೧೪-೧೫||

ಪಾರ್ವತಿಯೇ! ನೀನು ನನಗೆ ಹೇಗೆ ಸುಖವನ್ನುಂಟುಮಾಡುವೆಯೋ ಹಾಗೆ ಆ ಕಾಶೀಕ್ಷೇತ್ರವೂ ನನಗೆ ಯಾವಾಗಲೂ ಸುಖಪ್ರದವಾಗಿದೆ. ನಾನು ಯಾವಾಗಲೂ ಕಾಶಿ, ಕಾಶಿ, ಎಂದು ಉಚ್ಚರಿಸುತ್ತಾ ವಾಸಮಾಡುತ್ತೇನೆ. ಸಮಸ್ತ ಧರ್ಮಗಳಿಗೂ ಮೂಲಸ್ಥಾನವು ಕಾಶಿಯಾಗಿದೆ. ಅದು ಎಲ್ಲಾ ಬಗೆಯ ಪಾಪ

ಬಹುಭಿರ್ಜನ್ಮಭಿರ್ನಿತ್ಯಂ ಯದಿ ಘೋರತರಂ ತಪಃ ।
ತಪ್ತಂ ತದಾ ಮತ್ಪ್ರಸಾದಾತ್ ಕಾಶ್ಯಾಂ ವಾಸೋ ಭವಿಷ್ಯತಿ ॥೧೮॥

ಕಾಶೀವಾಸರತಾ ಮರ್ತ್ಯಾಃ ಸ್ವರ್ಗಲೋಕನಿವಾಸಜಂ ।
ಸುಖಂ ಸರ್ವಂ ತಿರಸ್ಕೃತ್ಯ ನಿವಸಂತ್ಯನಿಶಂ ಮುದಾ ॥೧೯॥

ನೋಗ್ರೈಸ್ತಪೋಭಿರ್ದಾನೈಶ್ಚ ಧರ್ಮೈರಧ್ಯಯನೈರಪಿ ।
ಕಾಶೀಪ್ರೀತಿರ್ನ ಲೋಕಾನಾಂ ಮತ್ಪ್ರಸಾದಂ ವಿನಾ ಶುಭೇ ॥೨೦॥

ಕಾಶೀಪ್ರಕಾಶಕಂ ವಸ್ತು ಲೋಕೇ ನೈವ ಹಿ ದೃಶ್ಯತೇ ।
ಚಂದ್ರೋ ವಾ ಭಾನುರಗ್ನಿರ್ವಾ ತತ್ಪ್ರಕಾಶಕರೋ ನ ಹಿ ॥೨೧॥

ಯಾ ನ ವೇದ್ಯಾ ವೇದಸಂಘೈಸ್ತದನ್ಯೈರಪಿ ಸಾಧನೈಃ ।
ಅವೇದ್ಯಾ ಸಾ ಕಥಂ ವೇದ್ಯಾ ಕಾಶೀ ಲೋಕೇ ಶಿವಾತ್ಮಿಕಾ ॥೨೨॥

ಸ್ವರ್ಗಭೋಗಮಪಿ ತ್ಯಕ್ತ್ವಾ ದೇವೇಂದ್ರಾದ್ಯಾಮರಾಃ ಸದಾ ।
ಕಾಶೀವಾಸಮಪೇಕ್ಷ್ಯಂತೇ ಮುಕ್ತ್ಯರ್ಥಂ ಸರ್ವಸಾಧನೈಃ ॥೨೩॥

---

ಗಳನ್ನೂ ಹೋಗಲಾಡಿಸುತ್ತದೆ. ಎಂದಿಗೂ ನಾಶವಾಗದಿರುವ ಅಮೃತಧಾರೆಯೆಂದರೆ ಕಾಶೀಕ್ಷೇತ್ರವಲ್ಲದೇ ಬೇರೆ ಇಲ್ಲ. ಅನೇಕ ಜನ್ಮಗಳಿಂದಲೂ ತಪಸ್ಸನ್ನು ಮಾಡಿ ಬಳಿಕ ಅದರ ಪ್ರಭಾವದಿಂದ ಮನುಷ್ಯನು ಕಾಶೀಕ್ಷೇತ್ರದಲ್ಲಿ ಹುಟ್ಟುತ್ತಾನೆ. ॥೧೬-೧೭-೧೮॥

ಕಾಶೀಕ್ಷೇತ್ರದಲ್ಲಿ ವಾಸಮಾಡಬೇಕೆಂದು ಬಯಸಿದ ಮನುಷ್ಯರು ಸ್ವರ್ಗಲೋಕದ ಸುಖವನ್ನೂ ಸಹ ತಿರಸ್ಕರಿಸುವರು. ಘೋರವಾದ ತಪಸ್ಸು ಮಾಡುವಿಕೆ, ದಾನ ಮಾಡುವುದು, ವೇದಾಧ್ಯಯನ ಮಾಡುವಿಕೆ ಇವುಗಳಿಂದ ಕಾಶಿಯಲ್ಲಿ ಜನರಿಗೆ ಪ್ರೀತಿ ಹುಟ್ಟಲಾರದು. ಕಾಶಿಯಲ್ಲಿ ಜನರಿಗೆ ವಿಶ್ವಾಸವು ನನ್ನ ಅನುಗ್ರಹವಿಲ್ಲದೇ ಉಂಟಾಗಲಾರದು. ಕಾಶಿಯನ್ನು ಪ್ರಕಾಶಿಸುವ ವಸ್ತುವು ಈ ಲೋಕದಲ್ಲಿ ದೊರೆಯುವುದಿಲ್ಲ. ಚಂದ್ರ, ಸೂರ್ಯ, ಅಗ್ನಿ ಇವರಾರೂ ಕಾಶಿಯನ್ನು ಬೆಳಗಿಸಲು ಸಮರ್ಥರಾಗಿಲ್ಲ. ॥೧೯-೨೦-೨೧॥

ಋಕ್ ಯಜುರಾದಿ ವೇದಗಳಿಂದಲೂ ತಿಳಿಯಲಾಗದಿರುವ ಕಾಶಿಯನ್ನು ಇತರ ಸಾಧನಗಳಿಂದ ತಿಳಿಯುವ ಬಗೆ ಹೇಗೆ? ಲೋಕದಲ್ಲಿ ತಿಳಿಯಲಾಗದ

ಸರ್ವಯಜ್ಞತಪೋದಾನಧರ್ಮಾಣಾಂ ಫಲಮುತ್ತಮಂ ।
ಕಾಶೀವಾಸಾತ್ಮಕಂ ಸತ್ಯಂ ನ ತಸ್ಮಾದಧಿಕಂ ಫಲಂ ॥೨೪॥

ಬ್ರಹ್ಮಹತ್ಯಾದಿಪಾಪಾನಿ ಘೋರಾಣಿ ವಿವಿಧಾನ್ಯಪಿ ।
ಕಾಶೀತಿಸ್ಮರಣಾದೇವ ಕ್ಷಣಾನ್ನಶ್ಯತ್ಯಸಂಶಯಂ ॥೨೫॥

ಕಾಶೀ ನಿವಾಸನಿರತಾನ್ ನರಾನಪ್ಯಮರಾ ಮುದಾ ।
ನಮಸ್ಕುರ್ವಂತಿ ಸತತಂ ಪೂಜಯಂತಿ ಸ್ತುವಂತಿ ಚ ॥೨೬॥

ಕಾಶೀವಾಸಸಮುತ್ಪನ್ನಸುಖೇನ ಸದೃಶಂ ಸುಖಂ ।
ನಾನುಭೂತಂ ಮಯಾ ಕ್ವಾಪಿ ಕ್ವಚಿದಪ್ಯಮಲಾನನೇ ॥೨೭॥

ಮನ್ಮನೋ ರಮತೇ ಕಾಶ್ಯಾಂ ಯಥಾ ತದ್ವದ್ವರಾನನೇ ।
ನಾನ್ಯತ್ರ ರಮತೇ ಚೇತಃ ತದ್ವಸ್ತ್ವೇವ ಹಿ ತಾದೃಶಂ ॥೨೮॥

---

ಮಾಹಾತ್ಮ್ಯೆಯುಳ್ಳ ಆ ಕಾಶೀಕ್ಷೇತ್ರವು ಮಂಗಳಪ್ರದವಾದುದು. ಇಂದ್ರಾದಿ ದೇವತೆಗಳೂ ಸ್ವರ್ಗಭೋಗಗಳನ್ನು ತೊರೆದು ತಾವು ಮುಕ್ತಿಯನ್ನು ಹೊಂದುವುದಕ್ಕಾಗಿ ಕಾಶೀಕ್ಷೇತ್ರವಾಸವನ್ನು ಬಯಸುತ್ತಾರೆ. ॥೨೨-೨೩॥

ಎಲ್ಲಾ ಬಗೆಯಾದ ಅಶ್ವಮೇಧಾದಿ ಯಜ್ಞ, ಕೃಚ್ಛ್ರ, ಚಾಂದ್ರಾಯಣಾದಿ ತಪಸ್ಸೂ, ದಾನ, ಧರ್ಮ ಇವುಗಳ ಆಚರಣೆಗೆ ಕಾಶೀವಾಸವೇ ಫಲವಾಗಿರುತ್ತದೆ. ಈಲೋಕದಲ್ಲಿ ಕಾಶೀವಾಸಕ್ಕಿಂತಲೂ ಉತ್ತಮವಾದದ್ದು ಬೇರೆಇಲ್ಲ. ಬ್ರಹ್ಮಹತ್ಯ, ಸುರಾಪಾನಾದಿ ಮಹಾಪಾಪಗಳು ಮತ್ತು ನಾನಾತರಹದ ಉಪಪಾತಕಗಳೂ, ಕಾಶಿಕ್ಷೇತ್ರದ ಸ್ಮರಣಮಾತ್ರದಿಂದಲೇ ನಾಶಹೊಂದುವುವು. ॥೨೪-೨೫॥

ಕಾಶೀಕ್ಷೇತ್ರವಾಸಿಗಳಾದ ಮನುಷ್ಯರನ್ನು ದೇವತೆಗಳೂ ನಮಸ್ಕರಿಸುತ್ತಾರೆ. ಮತ್ತು ಅವರನ್ನು ಯಾವಾಗಲೂ ಪೂಜೆಮಾಡುತ್ತಾರೆ, ಸ್ತೋತ್ರಮಾಡುತ್ತಾರೆ. ಕಾಶೀವಾಸದಿಂದ ಉಂಟಾಗುವ ಸುಖಕ್ಕೆ ಸಮಾನವಾದುದನ್ನು ನಾನು ಬೇರೆ ಎಲ್ಲಿಯೂ ಅನುಭವಿಸಿಲ್ಲ. ॥೨೬-೨೭॥

ಪ್ರಿಯಳೇ, ನನ್ನ ಮನಸ್ಸು ಕಾಶಿಯನ್ನು ಸೇರಿ ರಮಿಸುತ್ತದೆ. ಕಾಶಿಗಿಂತಲೂ ಬೇರೆ ಸ್ಥಳದಲ್ಲಿರಲು ನನಗೆ ಮನಸ್ಸಿಲ್ಲ ಹಿಂದೆ ಶ್ರೀಶೈಲಶಿಖರದಲ್ಲಿ ಶ್ರೀಶೈಲೇಶ್ವರನ ಸನ್ನಿಧಿಯಲ್ಲಿ ಎಲ್ಲಾ ಧರ್ಮಗಳನ್ನೂ ಹೆಚ್ಚು ಕಡಿಮೆ ನೋಡಲು ತಕ್ಕಡಿಯಲ್ಲಿಟ್ಟು

ಸರ್ವೇ ಧರ್ಮಾಸ್ತುಲಾರೂಢಾಃ ಪರಸ್ಪರಜಿಗೀಷಯಾ ।
ಪುರಾ ಶ್ರೀ ಶೈಲಶಿಖರೇ ಶ್ರೀಶೈಲೇಶ್ವರಸಂನಿಧೌ ॥೨೯॥

ಕಾಶೀನಿವಾಸಜಾದ್ಧರ್ಮಾದನ್ಯೇ ಧರ್ಮಾಸ್ತುಲಾಂ ಗತಾಃ ।
ಪರಸ್ಪರಂ ಜಯಂ ಪ್ರಾಪ್ತಾಃ ಪ್ರಥಮಂ ತೇ ತತಃ ಪರಂ ॥೩೦॥

ಕಾಶೀನಿವಾಸಸಂಭೂತಧರ್ಮಶ್ರೇಷ್ಠಜಿಗೀಷಯಾ ।
ಪುನಃ ಸರ್ವೇ ತುಲಾಂ ಪ್ರಾಪ್ತಾ ಉದ್ಯತಾಃ ಸಂಭ್ರಮಾನ್ವಿತಾಃ॥೩೧॥

ಶ್ರೀಶೈಲೇಶಸ್ತದಾ ಧರ್ಮಾನ್ ಸಂವೀಕ್ಷ್ಯ ಜಯಕಾಂಕ್ಷಿಣಃ ।
ಉವಾಚ ವಚನಂ ಪ್ರೀತ್ಯಾ ಸಾನುರೂಪಂ ಜಗತ್ಪ್ರಿಯಂ ॥೩೨॥

ಕಾಶೀವಾಸಜಧರ್ಮೇಣ ಸ್ಪರ್ಧಾಕಾರ್ಯಂ ನ ಸರ್ವಥಾ ।
ಸ ಸರ್ವಧರ್ಮಚಕ್ರೇಶ ಇತಿ ವೇದೈರ್ವಿನಿಶ್ಚಿತಃ ॥೩೩॥

ಸಮೇ ನ ರಾಜತೇ ಸ್ಪರ್ಧಾ ಸಾ ಹೀನೇನ ನ ರಾಜತೇ ।
ಸರ್ವೋನ್ನತೇ ನ ತು ಸ್ಪರ್ಧಾ ಸ್ವನಾಶಾಯೋಪಪದ್ಯತೇ ॥೩೪॥

---

ತೂಕಮಾಡಲಾಯಿತು. ಆಗ ಕಾಶಿಯಲ್ಲಿ ವಾಸಮಾಡುವಿಕೆಯಿಂದ ಉಂಟಾದ ಸುಕೃತವನ್ನು ಒಂದು ಕಡೆ ಇಟ್ಟು ಇತರ ಎಲ್ಲಾ ಧರ್ಮಗಳನ್ನೂ ಒಂದು ತಕ್ಕಡಿಯಲ್ಲಿಟ್ಟು ತೂಗಲ್ಪಟ್ಟಿತು. ಆಗ ಕಾಶೀನಿವಾಸದಿಂದ ಉಂಟಾದ ಧರ್ಮವೇ ಇತರ ಎಲ್ಲಾ ಧರ್ಮಗಳನ್ನು ತೂಕದಲ್ಲಿ ಗೆದ್ದಿತು. ॥೨೮-೨೯-೩೦॥

ಬಳಿಕ ಕಾಶೀಕ್ಷೇತ್ರವಾಸದಿಂದ ಉಂಟಾದ ಧರ್ಮಶ್ರೇಷ್ಠವನ್ನು ಜಯಿಸಬೇಕೆಂದು ಇತರ ಧರ್ಮಗಳು ಶ್ರೀಶೈಲೇಶ್ವರನ ಸನ್ನಿಧಿಯಲ್ಲಿ ಒಳ್ಳೆಯ ಸಂಭ್ರಮದಿಂದ ತೂಕ ಹೆಚ್ಚಿಸಿಕೊಳ್ಳಲು ಆರಂಭಿಸಿದವು. ಆಗ ಶ್ರೀಶೈಲೇಶ್ವರನು ಜಯವನ್ನು ಅಪೇಕ್ಷಿಸುತ್ತಿರುವ ಇತರ ಧರ್ಮಗಳನ್ನು ಕುರಿತು ಪ್ರೀತಿಯಿಂದ ಸಾಮರೂಪವಾಗಿಯೂ, ಜಗತ್ತಿಗೆ ಹಿತಕರವಾಗಿಯೂ ಇರುವ ಮಾತನ್ನು ನುಡಿದನು. "ಎಲೈ ಧರ್ಮಗಳೇ, ಕಾಶಿವಾಸಧರ್ಮದೊಡನೆ ಸ್ಪರ್ಧೆಮಾಡಬೇಡಿ. ಆ ಧರ್ಮವು ಎಲ್ಲಾ ಧರ್ಮಗಳಿಗೂ ಸಾರ್ವಭೌಮನಂತೆ ಇರುತ್ತದೆ. ಹೀಗೆಂದು ವೇದದಲ್ಲಿ ನಿರ್ಣಯವಿದೆ. ॥೩೧-೩೨-೩೩॥

ಈತೆರನಾದ ಸ್ಪರ್ಧೆಯು ನನಗೆ ಇಷ್ಟವಿಲ್ಲ. ಹೀನರೊಡನೆ ಸ್ಪರ್ಧೆ

ಲೋಕೇ ನೀತಿವಿರುದ್ಧಾನಿ ಕರ್ಮಾಣಿ ವಿಫಲಾನಿ ಹಿ ।
ನ ಕುರ್ವಂತ್ಯೇನ ನಿಪುಣಾಃ ನೀತಿಶಾಸ್ತ್ರವಿಶಾರದಾಃ ॥೩೫॥

ಸ್ವಶಕ್ತಿಂ ಪರಶಕ್ತಿಂ ಚ ವಿಚಾರ್ಯ ಸಮಯಾದಿಕಂ ।
ತತಃ ಸ್ಪರ್ಧಾಂ ಪ್ರಕುರ್ವಾಣಾಃ ನಿಪುಣಾಃ ಸಂತಿ ಸಂಮತೇ ॥೩೬॥

ಕ್ವ ಭವಂತೋ ನ್ಯೂನವೀರ್ಯಾಃ ಕ್ವ ಸ ಸರ್ವೋನ್ನತಃ ಪರಃ ।
ಕ್ವಾನತೋದ್ಯದ್ಭಾನುತೇಜಾ ಕ್ವಾತ್ಯಲ್ಪಾಗ್ನ್ಯಣುಸುಪ್ರಭಾ ॥೩೭॥

ತತಸ್ತೇನ ಸಹ ಸ್ಪರ್ಧಾ ನ ಕರ್ತವ್ಯಾ ಕದಾಚನ ।
ಅಲ್ಪಸ್ಯ ಮಹತಾ ಸಾರ್ಧಂ ವಿರೋಧೋ ನೋಪಜಾಯತೇ ॥೩೮॥

ಇತಿ ಶ್ರೀಗಿರಿನಾಥಸ್ಯ ಶ್ರುತ್ವಾ ವಚನಮಾದರಾತ್ ।
ವಿಶ್ವಸ್ಯ ತದ್ವಚಃ ಸಮ್ಯಕ್ ಸ್ಪರ್ಧಾಂ ತ್ಯಕ್ತ್ವಾ ಯಯುಸ್ತತಃ ॥೩೯॥

---

ಮಾಡಬಾರದು. ಮತ್ತು ಉತ್ತಮನಾಗಿಯೂ, ಸಂಪತ್ಸಮೃದ್ಧನಾಗಿಯೂ ಇರುವವನೊಂದಿಗೆ ಸ್ಪರ್ಧೆಮಾಡಿದರೆ ಅದು ತನ್ನ ನಾಶಕ್ಕೇ ಕಾರಣವಾಗುವುದು. ಲೋಕವಲ್ಲಿ ನೀತಿಗೆ ವಿರುದ್ಧಗಳಾದ ಕೆಲಸಗಳನ್ನು ಮಾಡಿದರೆ ಅವು ಫಲಕಾರಿಗಳಾಗಲಾರವು. ಅಂತಹ ಕೆಲಸಗಳನ್ನು ತಿಳಿದವರು ಮಾಡುವುದಿಲ್ಲ. ತನ್ನ ಮತ್ತು ಶತ್ರುವಿನ ಬಲಾಬಲಗಳನ್ನು ಚೆನ್ನಾಗಿ ವಿಚಾರಿಸಿ ಅನಂತರ ಸ್ಪರ್ಧಿಸುವ ಅನೇಕ ಜಾಣರು ಲೋಕದಲ್ಲಿ ಇದ್ದಾರೆ. ॥೩೪-೩೫-೩೬॥

ಅಲ್ಪಬಲವುಳ್ಳ ನೀವೆಲ್ಲಿ? ಎಲ್ಲಕ್ಕಿಂತಲೂ ಉತ್ತಮವಾದ ಬಲಶಾಲಿಯಾದ ಆ ಕಾಶೀಕ್ಷೇತ್ರವಾಸ ಧರ್ಮವೆಲ್ಲಿ? ಅತ್ಯಂತ ಪ್ರಭಾವಶಾಲಿಯಾದ ಸೂರ್ಯನ ಬೆಳಕೆಲ್ಲಿ? ಕೇವಲ ಬೆಂಕಿಯ ಒಂದು ಪರಮಾಣುವಿನ ಹೊಳಪೆಲ್ಲಿ? ಆದುದರಿಂದ ನೀವು ಯಾವಾಗಲೂ ಅದರೊಡನೆ ಸ್ಪರ್ಧೆಮಾಡಬೇಡಿ. ಬಲಹೀನನಾದ ಚಿಕ್ಕವನು ದೊಡ್ಡವರೊಡನೆ ವೈರಮಾಡುವುದು ಸರಿಯಲ್ಲ" ॥೩೭-೩೮॥

ಹೀಗೆ ಈಶ್ವರನು ಹೇಳಿದ ಮಾತನ್ನು ಕೇಳಿ ಆ ಇತರ ಧರ್ಮಗಳು ಪರಸ್ಪರ ಸ್ಪರ್ಧೆಯನ್ನು ಬಿಟ್ಟು ಈಶ್ವರನ ಮಾತಿನಲ್ಲಿ ವಿಶ್ವಾಸವನ್ನಿಟ್ಟುಕೊಂಡು ಹಿಂದಕ್ಕೆ ಹೋದುವು. ಎಲೌ ಭದ್ರೇ, ಗೌರಿಯೇ, ಕೇಳು. ಕಾಶೀಕ್ಷೇತ್ರದಲ್ಲಿ

ತಸ್ಮಾಚ್ಛುಭಾನನೇ ದೇವಿ ಕಾಶೀವಾಸಸಮುದ್ಭವಃ ।
ಧರ್ಮೋ ಧರ್ಮಪರೋ ಜ್ಞೇಯೋ ಧರ್ಮಸ್ತಾದೃಙ್ನ ಸರ್ವಥಾ ॥೪೦॥

ಯಾವಂತಿ ಸಂತಿ ತೀರ್ಥಾನಿ ಪಾತಾಲೇ ಪೃಥಿವೀತಲೇ ।
ಸತ್ಯಲೋಕಾದಿಲೋಕೇಷು ತಾವಂತಿ ಸುಖದೇ ಸದಾ ॥೪೧॥

ಕಾಶೀಂ ಪ್ರಯಾಂತಿ ಶ್ರೀಕಾಶೀಂ ಅರ್ಚಯಂತಿ ಸ್ತುವಂತಿ ಚ ।
ಕಾಶ್ಯಾಂ ವಿಶ್ವೇಷು ತೀರ್ಥೇಷು ಸ್ನಾನಂ ಕುರ್ವೀತ ಯತ್ನತಃ ॥೪೨॥

ಪುಣ್ಯಕ್ಷೇತ್ರಾಣಿ ಸರ್ವಾಣಿ ದ್ವಾರದೇಶಸ್ಥಿತಾನ್ಯಪಿ ।
ಗತ್ವಾ ಕಾಶೀಂ ಮುದಾ ಸಮ್ಯಕ್ ಪೂಜಯಂತಿ ಹಿ ತಾಂ ಸದಾ ॥೪೩॥

ದೇವಾಃ ಸ್ವಸ್ವಗಣೈಃ ಸಾಕಂ ವಿಹಾಯ ಸ್ವರ್ಗಜಂ ಸುಖಂ ।
ಗಚ್ಛಂತ್ಯತೀವ ಸಂತುಷ್ಟಾಃ ಕಾಶೀಂ ಪ್ರತಿ ಸದಾ ಶಿವೇ ॥೪೪॥

ಸರಸ್ವತ್ಯಾ ಸಹ ಸ್ರಷ್ಟಾ ಕಾಶೀವಾಸರತಃ ಸದಾ ।
ಸತ್ಯಲೋಕಂ ವಿಹಾಯೈವ ಕಾಶೀಮಾಯಾತಿ ಹೃಷ್ಟಧೀಃ ॥೪೫॥

---

ವಾಸಮಾಡುವುದರಿಂದ ಹುಟ್ಟಿದ ಪುಣ್ಯವು ಧರ್ಮಗಳೊಳಗೆಲ್ಲಾ ಶ್ರೇಷ್ಠವೆನಿಸಿರುವುದು. ಅದಕ್ಕೆ ಸಮಾನವಾದುದು ಬೇರೊಂದಿಲ್ಲ. ಈ ಭೂಮಂಡಲದೊಳಗೆ ಎಷ್ಟು ಎಷ್ಟು ತೀರ್ಥಗಳಿವೆಯೋ, ||೩೯-೪೦||

ಮತ್ತು ಸತ್ಯಲೋಕವೇ ಮೊದಲಾದವುಗಳಲ್ಲಿ ಎಷ್ಟು ತೀರ್ಥಗಳುಂಟೋ ಅಷ್ಟು ತೀರ್ಥಗಳೂ ಕಾಶೀಕ್ಷೇತ್ರದಲ್ಲಿ ಇವೆ. ನಿಜವಾದ ಆಸ್ತಿಕರೆಲ್ಲರೂ ಕಾಶಿಗೆ ಹೋಗುವರು. ಮತ್ತು ಆ ಕಾಶಿಯಲ್ಲಿ ಶಿವನನ್ನು ಅರ್ಚನೆ ಮಾಡುತ್ತಾರೆ. ಅಲ್ಲದೇ ಅದನ್ನು ಸ್ತೋತ್ರಮಾಡುತ್ತಾರೆ. ಕಾಶಿಯಲ್ಲಿ ಸಮುಸ್ತ ತೀರ್ಥಗಳೂ ಇರುತ್ತವೆ. ಅಲ್ಲಿ ಸುಕೃತಿಗಳು ಬಹು ಆಯಾಸಪಟ್ಟಾದರೂ ಸ್ನಾನವನ್ನು ಮಾಡುತ್ತಾರೆ. ಕಾಶಿಯು ದ್ವಾರದಲ್ಲಿರುವ ಅನೇಕ ಪುಣ್ಯಕ್ಷೇತ್ರಗಳನ್ನು ದಾಟಿಕೊಂಡು ಅಲ್ಲಿಗೆ ಹೋಗಿ ಅದನ್ನು ಪೂಜೆಮಾಡುತ್ತಾರೆ. ||೪೧-೪೨-೪೩||

ದೇವತೆಗಳೂ ತಮ್ಮ ಪರಿವಾರಗಳೊಂದಿಗೆ ಸ್ವರ್ಗಸೌಖ್ಯವನ್ನು ಬಿಟ್ಟು ಸಂತೋಷದಿಂದ ಕಾಶಿಗೆ ಹೋಗಿ ವಾಸಿಸುತ್ತಾರೆ. ಬ್ರಹ್ಮನೂ ಕೂಡ ಸರಸ್ವತಿ

ವಿಷ್ಣುರಪ್ಯನಘಂ ಸ್ವೀಯಂ ಸ್ಥಾನಂ ತ್ಯಕ್ತ್ವಾ ಮುದಾ ಸದಾ ।
ಕಾಶ್ಯಾಂ ತಿಷ್ಠತಿ ಮಾಮೇವ ಲಿಂಗರೂಪಿಣಮರ್ಚಯನ್ ॥೪೬॥

ಗಂಧರ್ವಾಃ ಕಿನ್ನರಾ ಯಕ್ಷಾಃ ಸರ್ವೇ ಸ್ವಸ್ವಗಣಾನ್ವಿತಾಃ ।
ಪ್ರಯಾಂತಿ ಸತತಂ ಕಾಶೀಂ ಕಾಶೀಪೂಜನತತ್ಪರಾಃ ॥೪೭॥

ಪಾಂಡುಪರ್ಣಾಶಿನೋ ಧನ್ಯಾಃ ಮುನಯೋ ಬ್ರಹ್ಮವಾದಿನಃ ।
ವಾತಾಶನಾಶ್ಚ ಸತತಂ ಸಂತಿ ಕಾಶ್ಯಾಂ ಮುನೀಶ್ವರಾಃ ॥೪೮॥

ಕ್ಷೀರಾಬ್ಧಿಪ್ರಮುಖಾಃ ಸರ್ವೇ ಸಮುದ್ರಾಃ ಸತತಂ ಮುದಾ ।
ಕಾಶೀಪೂಜಾರ್ಥಮಾಯಾಂತಿ ರತ್ನೈರಭ್ಯರ್ಚಯಂತಿ ತಾಂ ॥೪೯॥

ಕಾಮದೋಗ್ಧ್ರೀ ಸ್ವಯಂ ಗತ್ವಾ ಕ್ಷೀರೇಣೈವಾಭಿಷಿಚ್ಯ ತಾಂ ।
ಕಾಶ್ಯಾಂ ತಿಷ್ಠತಿ ಸಂತುಷ್ಟಾ ದೇವಲೋಕಂ ವಿಹಾಯ ಸಾ ॥೫೦॥

---

ಯೊಂದಿಗೆ ಕಾಶಿಯಲ್ಲಿ ಉಳಿಯುತ್ತಾನೆ. ಆತನು ಒಂದೊಂದು ವೇಳೆ ಸತ್ಯಲೋಕವನ್ನು ಬಿಟ್ಟು ಸಂತೋಷದಿಂದ ಕಾಶಿಗೆ ಹೋಗುವುದುಂಟು. ॥೪೪-೪೫॥

ಶ್ರೀ ಮಹಾವಿಷ್ಣುವೂ ಕೂಡ ಶ್ರೇಷ್ಠವಾದ ತನ್ನ ವೈಕುಂಠವನ್ನು ಬಿಟ್ಟು ಕಾಶಿಯಲ್ಲಿ ಸಂತೋಷದಿಂದ ವಾಸಮಾಡುತ್ತಾನೆ. ಅಲ್ಲಿ ಶಿವಲಿಂಗಸ್ವರೂಪಿಯಾದ ನನ್ನನ್ನು ಪೂಜೆಮಾಡುತ್ತಾನೆ. ಗಂಧರ್ವರು, ಯಕ್ಷರು, ಕಿಂನರರು, ಎಲ್ಲರೂ ತಮ್ಮ ತಮ್ಮ ಪರಿವಾರದೊಂದಿಗೆ ಯಾವಾಗಲೂ ಕಾಶಿಗೆ ಹೋಗಿ ಅಲ್ಲಿ ಶಂಕರಪೂಜೆಯಲ್ಲಿ ಆಸಕ್ತರಾಗುವರು. ॥೪೬-೪೭॥

ಬ್ರಹ್ಮನಿಷ್ಠರೂ, ಮನನಶೀಲರೂ, ಮತ್ತು ಕೇವಲ ಹಣ್ಣೆಲೆಗಳನ್ನು ಭಕ್ಷಿಸುತ್ತಿರುವ ತಪಸ್ವಿಗಳೂ, ಮಹಾಸರ್ಪಗಳೂ, ಮುನಿಶ್ರೇಷ್ಠರೂ ಕಾಶೀಕ್ಷೇತ್ರದಲ್ಲಿ ವಾಸಿಸುತ್ತಾರೆ. ಕ್ಷೀರಸಮುದ್ರವೇ ಮೊದಲಾದ ಸಮುದ್ರಗಳೂ, ಯಾವಾಗಲೂ ಕಾಶೀಕ್ಷೇತ್ರವನ್ನು ಸೇರಿ ತಮ್ಮಲ್ಲಿರುವ ರತ್ನಗಳಿಂದ ಆ ಕ್ಷೇತ್ರವನ್ನು ಪೂಜಿಸುತ್ತವೆ. ಕಾಮಧೇನುವು ತಾನಾಗಿಯೇ ಬಂದು ತನ್ನ ಹಾಲಿನಿಂದ ಕಾಶೀಕ್ಷೇತ್ರಕ್ಕೆ ಅಭಿಷೇಕ ಮಾಡಿ, ಸಂತೋಷದಿಂದ ಅಲ್ಲಿಯೇ ವಾಸಿಸುವುದು. ಅದಕ್ಕೆ ಆಗ ದೇವಲೋಕವೂ ಸಹ ಬೇಡವೆನಿಸುತ್ತದೆ. ॥೪೮-೪೯-೫೦॥

ಪುಷ್ಪಿತಾಃ ಕಲ್ಪವೃಕ್ಷಾಶ್ಚ ಗತ್ವಾ ಕಾಶೀಮಹರ್ನಿಶಂ ।
ಪುಷ್ಪವೃಷ್ಟಿಂ ವಿತೇನುಸ್ತೇ ಕಾಶೀಪೂಜಾಪರಾಯಣಾಃ ॥೫೧॥

ಆದಿತ್ಯಾ ವಸವಃ ಸಾಧ್ಯಾಃ ಸಿದ್ಧಾಶ್ಚ ಸಗಣಾನ್ವಿತಾಃ ।
ಕಾಶ್ಯಾಂ ಶುಚಿಯುತಾ ನಿತ್ಯಂ ನಿವಿಶಂತ್ಯಾದರೇಣ ತೇ ॥೫೨॥

ಕಶ್ಯಪೋಽತ್ರಿರ್ವಸಿಷ್ಠಾದ್ಯಾಃ ಋಷಯಃ ಶೈವಪುಂಗವಾಃ ।
ವಿಶ್ವೇದೇವಾಶ್ಚ ಸತತಂ ಕಾಶ್ಯಾಂ ತಿಷ್ಠಂತ್ಯನಾಕುಲಾಃ ॥೫೩॥

ಅನ್ಯೇಽಪಿ ಸತ್ಯಲೋಕಾದಿಸಪ್ತಲೋಕನಿವಾಸಿನಃ ।
ಸರ್ವೇಽಪಿ ಕಾಶ್ಯಾಮನಿಶಂ ವಸಂತಿ ಶಿವಪೂಜಕಾಃ ॥೫೪॥

ಕಾಶೀಂ ತೇ ದುರ್ಲಭಾಂ ಪ್ರಾಪ್ಯ ನಿಕ್ಷೇಪಮಿವ ನಿರ್ಧನಾಃ ।
ತ್ಯಕ್ತುಂ ಮನಃ ಕದಾಚಿದ್ವಾ ನ ಕುರ್ವಂತ್ಯೇವ ಸರ್ವಥಾ ॥೫೫॥

ಕ್ಷುಧಿತಾ ಇವ ಮಿಷ್ಟಾನ್ನಂ ಪಿಪಾಸವ ಇವೋದಕಂ ।
ಕದಾಚಿದಪಿ ತೇ ಕಾಶೀಂ ನ ತ್ಯಜಂತಿ ದೃಢವ್ರತಾಃ ॥೫೬॥

---

ಕಲ್ಪವೃಕ್ಷಗಳು ಹೂಗಳಿಂದ ತುಂಬಿ ಕಾಶೀಕ್ಷೇತ್ರದಲ್ಲಿ ಬೆಳೆದಿರುತ್ತವೆ. ಅವು ಯಾವಾಗಲೂ ಹೂಮಳೆಯನ್ನು ಸುರಿಸುತ್ತಾ ಕಾಶೀಕ್ಷೇತ್ರವನ್ನು ಪೂಜಿಸುತ್ತವೆ. ದ್ವಾದಶಾದಿತ್ಯರು, ಅಷ್ಟವಸುಗಳು, ಸಾಧ್ಯರು, ಗಣಗಳೊಡಗೂಡಿರುವ ಸಿದ್ಧರು, ಇವರೇ ಮೊದಲಾದವರು ಆದರದಿಂದ ಕಾಶಿಯಲ್ಲಿ ವಾಸಿಸುತ್ತಾರೆ. ಮತ್ತು ಕಶ್ಯಪರು, ಅತ್ರಿ, ವಸಿಷ್ಠರು ಮೊದಲಾದ ಋಷಿಗಳೂ, ಈಶ್ವರಭಕ್ತಶ್ರೇಷ್ಠರೂ, ವಿಶ್ವೇದೇವತೆಗಳು, ಕೂಡ ಯಾವಾಗಲೂ ಕಾಶಿಯಲ್ಲಿ ನೆಲಸಿರುವರು. ||೫೧-೫೨-೫೩||

ಇನ್ನು ಸತ್ಯಲೋಕವೇ ಮೊದಲಾದವುಗಳಲ್ಲಿ ನೆಲಸಿರುವ ಕೆಲವರು ಉಳಿದ ಎಲ್ಲರೂ ಶಿವನನ್ನು ಪೂಜಿಸುವವರಾಗಿ ಕಾಶೀಕ್ಷೇತ್ರದಲ್ಲಿ ನಿಲ್ಲುತ್ತಾರೆ. ಅವರು ಬಡವರು ಹಣವನ್ನೂ, ಹಸಿದವರು ಒಳ್ಳೆಯ ಭೋಜನವನ್ನೂ, ಹೊಂದಿ ಆನಂದ ಪಟ್ಟಂತೆ ದುರ್ಲಭವಾದ ಕಾಶೀಕ್ಷೇತ್ರವನ್ನು ಸೇರಿ ಸಂತೋಷಗೊಳ್ಳುತ್ತಾರೆ. ಬಾಯಾರಿಕೆಯಾದವರು ನೀರನ್ನು ಹೊಂದಿ ಬಳಿಕ ಅದನ್ನು ಬಿಡಲು ಇಷ್ಟಪಡ

ಚಕೋರಾ ಇವ ಪೂರ್ಣೇಂದುಂ ಕಾಮುಕಾ ಇವ ಕಾಮಿನೀಂ ।
ನ ವಿಹಾಸ್ಯಂತಿ ತೇ ಕಾಶೀಂ ಅನ್ಯಾಶಾರಹಿತಾಃ ಸದಾ ॥೫೭॥

ಭ್ರಮರಾ ಇವ ಪುಷ್ಪಾಣಿ ಗಾವೋ ವತ್ಸತರಾನಿ ಚ ।
ಕಾಶೀಂ ಪ್ರಕಾಶಮಾನಾಂ ತಾಂ ನ ತ್ಯಜಂತಿ ದೃಢಾಶಯಾಃ ॥೫೮॥

ಪತಿವ್ರತೇವ ಭರ್ತಾರಂ ವಿದ್ಯೇವ ವಿಮಲಾಶಯಂ ।
ಕಾಶೀತ್ಯಾಗಂ ಮುಕ್ತಿಕಾಮೋ ನ ಕರೋತ್ಯೇವ ಪಾವನಃ ॥೫೯॥

ಕಃ ಕಾಶೀಂ ಯತತೇ ತ್ಯಕ್ತುಂ ಮೋಕ್ಷಾರ್ಥೀ ವಿಗತಸ್ಪೃಹಃ ।
ಮೂರ್ಖೋಽಪಿ ಗ್ರಾಸಮಮಲಂ ನ ಜಹಾತಿ ಕ್ಷುಧಾತುರಃ ॥೬೦॥

ಸಿಂಹಾಸನಂ ಯಥಾ ರಾಜಾ ನ ಜಹಾತಿ ಬಲಾನ್ವಿತಃ ।
ನ ಜಹಾತಿ ತಥಾ ಕಾಶೀಂ ಮರ್ತ್ಯಃ ಸಂಸಾರದುಃಖಿತಃ ॥೬೧॥

---

ದಂತೆ ಆ ದೇವತೆಗಳು ಕಾಶಿಯನ್ನು ಬಿಟ್ಟು ಹೋಗಲು ಬಯಸುವುದಿಲ್ಲ. ||೫೪-೫೫-೫೬||

ಚಕೋರಪಕ್ಷಿಗಳು ಪೂರ್ಣಚಂದ್ರನನ್ನೂ, ಕಾಮಿಗಳು ಕಾಮಿನಿಯನ್ನೂ ಬಿಡದೇ ಇರುವ ಹಾಗೆ ದೇವತೆಗಳು ಕಾಶೀಕ್ಷೇತ್ರವನ್ನು ಬಿಡಲಾರರು. ದುಂಬಿಗಳು ಹೂವನ್ನೂ, ಹಸುಗಳು ಎಳೆಕರುಗಳನ್ನೂ ಬಿಡದಿರುವಂತೆ, ದೇವತೆಗಳು ಕಾಶಿಯನ್ನು ಎಂದೂ ಬಿಟ್ಟಿರುವುದಿಲ್ಲ. ||೫೭-೫೮||

ಪತಿವ್ರತೆಯಾದವಳು ಗಂಡನನ್ನೂ, ವಿದ್ಯೆಯು ನಿರ್ಮಲವಾದ ಹೃದಯವನ್ನು (ಸ್ವಚ್ಛ ಅಭಿಪ್ರಾಯವನ್ನು) ಬಿಟ್ಟು ಇರದಂತೆ ಮುಕ್ತಿಯನ್ನು ಬಯಸುವವನು ಕಾಶಿಯನ್ನು ಬಿಡಲಾರನು. ಮೋಕ್ಷವನ್ನು ಬಯಸಬಲ್ಲವನೂ, ಆಸೆಯನ್ನು ತೊರೆದು ವೈರಾಗ್ಯಶಾಲಿಯಾದವನೂ ಕಾಶಿಯ ವಾಸವನ್ನು ಬಿಡಲು ಇಚ್ಛಿಸುವುದಿಲ್ಲ. ಮೂರ್ಖನಾದರೂ ಹಸಿದಿರುವಾಗ ದೊರಕಿದ ಬುತ್ತಿಯನ್ನು ಎಸೆದು ಬಿಡಲಾರನು. ಅತ್ಯಂತ ಬಲಶಾಲಿಯಾದ ರಾಜನು ತನ್ನ ಸಿಂಹಾಸನವನ್ನು ಇನ್ನೊಬ್ಬನಿಗೆ ಎಂದೂ ಸುಲಭವಾಗಿ ಬಿಟ್ಟುಕೊಡಲಾರನು. ಹಾಗೆ ಮನುಷ್ಯನು ಸಂಸಾರದ ಕಷ್ಟನಷ್ಟದಿಂದ ಕಂಗೆಟ್ಟು ಎಂದೂ ಕಾಶಿಯನ್ನು ತ್ಯಜಿಸಲು ಒಪ್ಪುವುದಿಲ್ಲ. ||೫೯-೬೦-೬೧||

ಅನಂತೋಗ್ರತಪೋಧರ್ಮೈರ್ಲಬ್ಧ್ವಾ ಕಾಶೀಂ ಶಿವೇಪ್ಸಿತಾಂ ।
ಕಃ ಸಂಜಹಾತಿ ಸುಭಗೇ ಸೌಭಾಗ್ಯನಿಲಯಾಂ ಶುಭಾಂ ॥೬೨॥

ಅನಂತಜನ್ಮಭಿರ್ಘೋರಂ ತಪಃ ಕೃತ್ವಾತಿದುರ್ಲಭಂ ।
ತೇನೈವ ತಪಸಾ ಕಾಶೀಂ ಲಬ್ಧ್ವಾ ಕಃ ಸಂಜಹಾತಿ ತಾಂ ॥೬೩॥

ದುರ್ಲಭಾ ಸರ್ವಥಾ ದೇವಿ ಲೋಕೇ ಕಾಶ್ಯಾಭಿಧಾ ಸುಧಾ ।
ಕಃ ಸಂಜಹಾತಿ ನಿಪುಣೋ ಹಸ್ತಗಾಂ ಶರ್ಕರಾಮಿವ ॥೬೪॥

ಅತಿಕ್ಲೇಶಾರ್ಜಿತಂ ವಿತ್ತಂ ನ ಮುಂಚಂತಿ ಯಥಾ ನರಾಃ ।
ತಥಾ ಘೋರತಪೋಲಬ್ಧಾಂ ಕಾಶೀಂ ಕಸ್ತ್ಯಕ್ತುಮಿಚ್ಛತಿ ॥೬೫॥

ಸರ್ವಥಾ ದುರ್ಲಭಾ ಕಾಶೀ ದುರ್ಲಭಾ ದುರ್ಲಭಾ ಧ್ರುವಂ ।
ದುರ್ಲಭಾ ದುರ್ಲಭಾ ಸತ್ಯಂ ದುರ್ಲಭಾ ದುರ್ಲಭಾ ಶುಭೇ ॥೬೬॥

ಮಹಾನಿಧಿರಿಯಂ ಕಾಶೀ ಪಾಪದಾರಿದ್ರ್ಯನಾಶಿನೀ ।
ಮೋಕ್ಷರೂಪೇಷ್ಟಫಲದಾ ಬ್ರಹ್ಮಾನಂದಪ್ರವರ್ಧಿನೀ ॥೬೭॥

---

ಅತಿ ಕಠಿನವಾದ ಉಗ್ರತಪಸ್ಸನ್ನು ಮಾಡಿ ಈಶ್ವರನಿಗೆ ಇಷ್ಟವಾದ ಕಾಶೀವಾಸವನ್ನು ಹೊಂದಬೇಕು. ಹಾಗೆ ಐಶ್ವರ್ಯಕ್ಕೆ ತವರುಮನೆಯಾದ ಆ ವಸ್ತುವನ್ನು ಶ್ರಮದಿಂದ ಪಡೆದ ಮೇಲೆ ಅದನ್ನು ಯಾರುತಾನೇ ಬಿಡುವರು? ಅನೇಕ ಜನ್ಮಗಳಿಂದಲೂ ಭೀಕರವಾದ ತಪಸ್ಸನ್ನು ಮಾಡಿ ಕಾಶೀಕ್ಷೇತ್ರವನ್ನು ಪಡೆದು ತ್ಯಜಿಸುವುದಾದರೂ ಹೇಗೆ ಸಾಧ್ಯ? ॥೬೨-೬೩॥

ಎಲೈ! ಪೂಜ್ಯಳೇ! ಪ್ರಿಯಳೇ, ಕಾಶಿಯೆಂಬ ಅಮೃತವು ಸಿಗುವುದು ದುರ್ಲಭ. ಕೈಗೆ ಸಿಕ್ಕಿರುವ ಸಕ್ಕರೆಯನ್ನು ಜಾಣನಾದವನು ಯಾವನೂ ಬಿಡಲಾರನು. ಬಹಳ ಕಷ್ಟಪಟ್ಟು ಸಂಪಾದಿಸಿದ ಹಣವನ್ನು ಮನುಷ್ಯರು ಬಿಡದಿರುವಂತೆ, ತಪಸ್ಸಿನಿಂದ ಸಂಪಾದಿತವಾದ ಈ ಕಾಶೀಕ್ಷೇತ್ರವನ್ನು ಯಾರೂ ತ್ಯಜಿಸಲಾರರು. ನಿಜವಾಗಿಯೂ ಕಾಶಿಯನ್ನು ಹೊಂದುವುದು ಕಷ್ಟ: ಪ್ರಮಾಣಪೂರ್ವಕವಾಗಿ ಈ ಮಾತನ್ನು ಹೇಳುವೆನು. ॥೬೪-೬೬॥

ಪ್ರಿಯಳೇ! ಈ ಕಾಶಿಯು ಮಹಾದ್ರವ್ಯಗಳ ನಿಧಿಯಾಗಿದೆ. ಇದು ಪಾಪವನ್ನೂ ಬಡತನವನ್ನೂ ಹೋಗಲಾಡಿಸಬಲ್ಲದು. ಮೋಕ್ಷವೆಂಬ ಇಷ್ಟಾರ್ಥವನ್ನು

ಇಯಂ ಕಾಶೀ ಕಾಮಧೇನುರ್ಮೋಕ್ಷರೂಪೇಷ್ಟಕಾಮದಾ ।
ವಿನಾಶಕಾಮದಾ ನೇಯಂ ಕಾಶೀ ನಿತ್ಯೇಷ್ಟಕಾಮದಾ ॥೬೮॥

ಕಾಶೀ ಕಾಶೀತಿ ಸತತಂ ಯಃ ಕಾಶೀಸ್ಮರಣೇ ರತಃ ।
ಸ ಸದ್ಯಃ ಸರ್ವಪಾಪೇಭ್ಯೋ ಮುಚ್ಯತೇ ದೇವಿ ಸರ್ವದಾ ॥೬೯॥

ದೇಶಾಂತರೇಽಪಿ ಯಃ ಸ್ಥಿತ್ವಾ ಕಾಶೀ ಕಾಶೀತಿ ಸಂವದೇತ್ ।
ಸ ಪಾಪಿಷ್ಠೋಽಪಿ ಸುಭಗೇ ಪಾತಕೇಭ್ಯೋ ವಿಮುಚ್ಯತೇ ॥೭೦॥

ವಿನಾತ್ಯುಗ್ರೇಣ ತಪಸಾ ಕಾಶೀಪ್ರಾಪ್ತಿಃ ಶುಭಾನನೇ ।
ನ ಭವತ್ಯೇವ ತತ್ಸತ್ಯಂ ಸತ್ಯಂ ಸತ್ಯಂ ನ ಸಂಶಯಃ ॥೭೧॥

ದುರ್ಲಭಂ ಮಾನುಷಂ ಜನ್ಮ ಸಂಪ್ರಾಪ್ಯೋಽಪಿ ನರೋ ಯದಿ ।
ಕಾಶೀಂ ಪ್ರಾಪ್ತುಂ ನ ಯತತೇ ಸ ಏವ ಪುರುಷಾಧಮಃ ॥೭೨॥

ಅನ್ಯತ್ರ ದುಃಸಹಂ ಮರ್ತ್ಯಃ ತಪಃ ಕೃತ್ವಾಪಿ ಸರ್ವದಾ ।
ನ ಪಾರಲೌಕಿಕಂ ಸೌಖ್ಯಂ ಪ್ರಾಪ್ನೋತಿ ವಿಮಲಾನನೇ ॥೭೩॥

---

ಈ ಕಾಶೀಕ್ಷೇತ್ರವು ಸುಲಭವಾಗಿ ನೀಡುವುದು. ಬ್ರಹ್ಮಾನಂದವು ಈ ಕಾಶೀಕ್ಷೇತ್ರದಲ್ಲಿ ಅಭಿವೃದ್ಧಿಯಾಗುವುದು. ಇದು ಮೋಕ್ಷವೆಂಬ ಇಷ್ಟಾರ್ಥವನ್ನು ಕೊಡಬಲ್ಲ ಕಾಮಧೇನುವಾಗಿದೆ. ಯಾವನು ಕಾಶೀ, ಕಾಶೀ, ಎಂದು ಸ್ಮರಣೆ ಮಾಡುತ್ತಿರುವನೋ ಅಷ್ಟರಿಂದಲೇ ಅವನು ಪಾಪಗಳಿಂದ ಬಿಡುಗಡೆ ಹೊಂದಬಲ್ಲನು. ||೬೭-೬೮-೬೯||

ಬೇರೆ ದೇಶದಲ್ಲಿ ಇರುವ ಮನುಷ್ಯನಾದರೂ ಯಾವಾಗಲೂ ಕಾಶಿ, ಕಾಶಿ ಎಂದು ಜಪಿಸುತ್ತಿದ್ದರೆ, ಅವನು ಪಾಪಿಯಾದರೂ ಪಾಪಗಳಿಂದ ಬಿಡುಗಡೆ ಹೊಂದುತ್ತಾನೆ. ಅತಿ ಕಠಿನವಾದ ತಪಸ್ಸನ್ನು ಮಾಡದೇ ಎಂದೂ ಕಾಶಿಯು ಲಭಿಸಲಾರದು. ಈ ಮಾತು ನಿಜವಾದುದು. ಶಪಥಮಾಡಿಬೇಕಾದರೂ ಹೇಳುತ್ತೇನೆ. ||೭೦-೭೧||

ದುರ್ಲಭವಾದ ಮನುಷ್ಯ ಜನ್ಮವನ್ನು ಹೊಂದಿ ಕಾಶೀ ಪ್ರಾಪ್ತಿಗಾಗಿ ಪ್ರಯತ್ನ ಮಾಡದಿರುವ ಮಾನವನು ಪುರುಷರೊಳಗೆ ಹೀನನೆನಿಸುತ್ತಾನೆ. ಅಂತಹ

ಪ್ರಜ್ವಲಜ್ವಲನಂ ತ್ಯಕ್ತ್ವಾ ಭಸ್ಮನ್ಯಾಜ್ಯಾದಿಕಂ ಹವಿಃ ।
ಹುತಮುಸ್ಯಖಿಲಂ ವ್ಯರ್ಥಂ ತಥಾನ್ಯತ್ರ ಕೃತಂ ತಪಃ ॥೨೪॥

ಧಿಕ್ತಸ್ಯ ಜೀವಿತಂ ಜಂತೋಃ ಧಿಕ್ ಧಿಕ್ತಸ್ಯ ಕುವರ್ತನಂ ।
ಯೇನ ಕಾಶೀ ನಾವಲೋಕಿ ಯೇನ ಕಾಶೀ ನ ಪೂಜಿತಾ ॥೨೫॥

ಧಿಕ್ಕುಲಂ ತಸ್ಯ ಧಿಕ್ ಸೌಖ್ಯಂ ಧಿಗ್ಬುದ್ಧಿರ್ಧಿಗ್ವರಂ ಯಶಃ ।
ಯೇನ ಕಾಶೀ ಶಿವಪುರೀ ನಾನರ್ಚಿ ಸಕಲಾರ್ಥದಾ ॥೨೬॥

ಧಿಗೈಶ್ವರ್ಯಂ ಧಿಗೈಶ್ವರ್ಯಂ ಧಿಕ್ತಸ್ಯ ನವಯೌವನಂ ।
ಯೇನ ಕಾಶೀ ಪುಣ್ಯರಾಶಿಃ ನಾಭ್ಯರ್ಚಿ ಶುಭಸಾಧನೈಃ ॥೨೭॥

ಧಿಗ್ವಾಣೀಂ ತಸ್ಯ ಧಿಕ್ ಜಂತೋಃ ಯೇನ ಕಾಶೀ ನ ಸಂಸ್ತುತಾ ।
ಧಿಕ್ ಧಿಕ್ ಧಿಕ್ ಮನಸ್ತಸ್ಯ ಯೇನ ಕಾಶೀ ನ ಚಿಂತಿತಾ ॥೨೮॥

---

ಮನುಷ್ಯನು ಬೇರೆ ಕಡೆಗಳಲ್ಲಿ ಅತಿ ದುಃಸಾಧ್ಯವಾದ ತಪಸ್ಸನ್ನು ಮಾಡಿದ್ದರೂ ಆತನಿಗೆ ಪರಲೋಕದ ಸೌಖ್ಯವು ಲಭಿಸಲಾರದು. ವಿಮಲವಾದ ಮುಖವುಳ್ಳ ಪಾರ್ವತಿಯೇ! ಚನ್ನಾಗಿ ಉರಿಯುತ್ತಿರುವ ಅಗ್ನಿಯಲ್ಲಿ ತುಪ್ಪವೇ ಮೊದಲಾದ ಹವಿಸ್ಸುಗಳನ್ನು ಹೋಮಮಾಡದೇ, ಬೂದಿಯಲ್ಲಿ ಹೋಮಮಾಡಿದರೆ ಆ ಹೋಮವು ಫಲಕಾರಿಯಾಗದಿರುವಂತೆ ಕಾಶೀಕ್ಷೇತ್ರ ಪ್ರಾಪ್ತಿಗೆ ಸಾಧನವಲ್ಲದ ತಪಸ್ಸು ವ್ಯರ್ಥವೆನಿಸುವುದು. ||೨೨-೨೩-೨೪||

ಕಾಶೀದರ್ಶನವನ್ನು ಮಾಡದಿರುವನ ಮತ್ತು ಕಾಶಿಯನ್ನು ಪೂಜಿಸದವನ ಜೀವನವು ನಿಷ್ಪ್ರಯೋಜನವು. ಎಲ್ಲಾ ಬಗೆಯ ಬಯಕೆಗಳನ್ನೂ ಕೊಡುವಂತಹ ಕಾಶಿಯನ್ನು ಪೂಜಿಸದವನ ಕುಲವೂ, ಆತನ ಸುಖವೂ, ಯಶಸ್ಸು, ಎಲ್ಲವೂ ವ್ಯರ್ಥವು. ಪುಣ್ಯಸಾಧನವಾದ ಕಾಶಿಯನ್ನು ಅನೇಕ ಸಾಧನಗಳಿಂದ ಅರ್ಚನೆ ಮಾಡದಿರುವ ಮನುಷ್ಯನ ಐಶ್ವರ್ಯವೂ, ಯೌವನವೂ, ವಾಕ್ಪಟುತ್ವವೂ ವಿಫಲಗಳಾಗುವುವು. ಅಂತಹವನ ಮನಸ್ಸಿಗೂ ಧಿಕ್ಕಾರವಿರಲಿ. ಆತನು ಎಂದೂ ಕಾಶಿಯನ್ನು ಸ್ತೋತ್ರಮಾಡಲಾರನು ಮತ್ತು ಅದನ್ನು ಸ್ಮರಿಸಲೂ ಆರನು. ||೨೫-೨೬-೨೭-೨೮||

ಧಿಕ್ ಧಿಕ್ ಧಿಕ್ ಶಿರಸ್ತಸ್ಯ ಯೇನ ಕಾಶೀ ನ ವಂದಿತಾ ।
ಧಿಕ್ ಧಿಕ್ ಧಿಕ್ ನಯನೇ ತಸ್ಯ ಯೇನ ಕಾಶೀ ನ ವೀಕ್ಷಿತಾ ॥೭೯॥

ಧಿಕ್ ಧಿಕ್ ಧಿಕ್ ಶ್ರವಣೇ ತಸ್ಯ ಯೇನ ಕಾಶೀತಿ ನ ಶ್ರುತಾ ।
ಧಿಕ್ ಧಿಕ್ ಧಿಕ್ ಕುತೌ ಪಾದೌ ಕಾಶೀ ಪ್ರಕ್ರಮವರ್ಜಿತೌ ॥೮೦॥

ಧಿಕ್ ಪಾಣಿಸ್ತಸ್ಯ ವಿಮಲೋ ಯೇನ ಕಾಶೀ ನ ಮಾರ್ಜಿತಾ ।
ಕೀಟಃ ಪತಂಗೋ ಮಂಡೂಕೋ ಮರ್ತ್ಯೋ ವಾ ಶಿವಸಂಮತಃ ॥೮೧॥

ಕಾಶ್ಯಾಂ ತ್ಯಕ್ತ್ವಾ ತನುರ್ಭೂಯೋ ನೈವಾಪ್ನೋತಿ ತನುಂ ಧ್ರುವಂ ।
ಯಸ್ಯ ಕಸ್ಯಾಪಿ ವಾ ಜಂತೋರ್ಮರಣೇ ಸಮುಪಸ್ಥಿತೇ ॥೭೨॥

ಕಾಶ್ಯಾಂ ಶಿವಶಿವೇತ್ಯೇತನ್ನಾಮ್ನೈವೋಪದಿಶಾಮ್ಯಹಂ ।
ಮದ್ಭಕ್ತಾನ್ವಿಮಲಾನ್ ದೃಷ್ಟ್ವಾ ಮರಣಾಸನ್ನಜೀವಿತಾನ್ ॥೮೩॥

ಮಮೈವಾಂಕೇ ಸಂನಿವೇಶ್ಯ ಶಿವೇತ್ಯುಪದಿಶಾಮ್ಯಹಂ ।
ಶಿವನಾಮಾನುಸಂಧಾನಾತ್ಪುರಾ ಪೂತತನುರ್ನರಃ ॥೮೪॥

ಪುನರ್ಮನ್ನಾಮ ತತ್ಕಾಶ್ಯಾಂ ಅಂತೇ ಪ್ರಾಪ್ನೋತಿ ಮಾನವಃ ।
ಶಿವೇತಿನಾಮ ದಾವಾಗ್ನಿಃ ಪಾಪತೂಲಾದ್ರಿನಾಶಕಃ ॥೮೫॥

---

ಕಾಶಿಗೆ ನಮಸ್ಕರಿಸದವನ ಶಿರಸ್ಸು ವ್ಯರ್ಥವು. ಕಾಶೀದರ್ಶನಮಾಡದ ಕಣ್ಣುಗಳು ಉಪಯೋಗವಿಲ್ಲ. ಕಾಶಿ ಪದವನ್ನು ಕೇಳದ ಕಿವಿಗಳು ನಿರರ್ಥಕಗಳಾಗುವುವು. ಕಾಶಿಗೆ ಪ್ರಯಾಣಮಾಡದ ಪಾದಗಳಿಂದ ಏನೂ ಪ್ರಯೋಜನವಿಲ್ಲ. ಯಾವನು ಕಾಶೀಕ್ಷೇತ್ರವನ್ನು ಕೈಯಿಂದ ಶುದ್ಧಿಗೊಳಿಸುವುದಿಲ್ಲವೋ ಆತನ ಹಸ್ತವು ಇದ್ದರೂ ಇಲ್ಲದಹಾಗೆ. ಕೀಟ, ಹಕ್ಕಿ, ಕಪ್ಪೆ, ಮನುಷ್ಯ ಇವರೊಳಗೆ ಯಾರಾದರೂ ಸರಿಯೇ ಕಾಶಿಯನ್ನು ಸೇರಿದರೆ ಅವರೇ ಧನ್ಯರಾಗುವರು. ॥೭೯-೮೦-೮೧॥

ಕಾಶೀಕ್ಷೇತ್ರದಲ್ಲಿ ದೇಹವನ್ನು ತ್ಯಜಿಸಿದರೆ ಪುನರ್ಜನ್ಮವು ಲಭಿಸುವುದಿಲ್ಲ. ಯಾವ ಪ್ರಾಣಿಯಾದರೂ ಸರಿಯೇ, ಅದಕ್ಕೆ ಅವಸಾನಕಾಲ ಬಂದಾಗ, ನಾನು ಕಾಶಿಯಲ್ಲಿ ಮರಣಕಾಲದಲ್ಲಿ ಉಪದೇಶಿಸಲು ಯೋಗ್ಯವಾದ ಶಿವಮಂತ್ರವನ್ನು ಉಪದೇಶಮಾಡುವೆನು. ನನ್ನ ಭಕ್ತರಾದವರು ಮರಣಾವಸ್ಥೆಯನ್ನು ಹೊಂದುವಾಗ

ತಸ್ಮಾಚ್ಛಿವಶಿವೇತ್ಯೇವ ನಾಮ ಜಪ್ಯಂ ಸದಾ ಜನೈಃ ।
ಸದಾಶಿವಶಿವೇತ್ಯೇವ ಮನ್ನಾಮೋಚ್ಚಾರಣಾಪರೈಃ ॥೮೬॥

ಕಾಶ್ಯಾಮಂತೇ ಶಿವೇತ್ಯೇವ ನಾಮ ಸಂಪ್ರಾಪ್ಯತೇ ಧ್ರುವಂ ।
ತತಃ ಶಿವಶಿವೇತ್ಯೇತತ್ ನಾಮ ಮುಕ್ತಿಪ್ರದಾಯಕಂ ॥೮೭॥

ತನ್ಮಯಾಪ್ಯುಪದಿಷ್ಟಂ ಚೇತ್ಕಾಶ್ಯಾಂ ಕಿಂ ಪುನರಂಬಿಕೇ ।
ಕಾಶ್ಯನ್ಯಪುಣ್ಯಕ್ಷೇತ್ರೇಷು ಮದ್ಭಕ್ತಃ ಸ್ವಪುರ್ಯದಿ ॥೮೮॥

ತ್ಯಜತ್ಯಂತೇ ಸ ಭೂಯೋಽಪಿ ಮದ್ಭಕ್ತೋ ಭುವಿ ಜಾಯತೇ ।
ತತಃ ಕಾಶೀಮವಾಪ್ಯಾಥ ಮದ್ಭಕ್ತೋ ಮತ್ಪ್ರಸಾದತಃ ॥೮೯॥

ಅಂತೇ ಶಿವಶಿವೇತ್ಯೇತತ್ ಮಂತ್ರಂ ಪ್ರಾಪ್ನೋತಿ ಮುಕ್ತಯೇ ।
ಸ್ವರ್ಗಭೋಗಕರೇ ಪುಣ್ಯೇ ನಷ್ಟೇ ದೇವಾಃ ಪುನರ್ನರಾಃ ॥೯೦॥

---

ನಾನು ಅವರನ್ನು ನನ್ನ ತೊಡೆಯಮೇಲೆ ಕುಳ್ಳಿರಿಸಿಕೊಂಡು ಅವರಿಗೆ ಶಿವನಾಮವನ್ನು ಉಪದೇಶಿಸುತ್ತೇನೆ. ಕೊನೆಯಕಾಲದಲ್ಲಿ ಮನುಜನು ಕಾಶಿಯಲ್ಲಿ ನನ್ನ ನಾಮವನ್ನು ಹೊಂದಿ ಮುಕ್ತನಾಗುವನು. ಶಿವನಾಮವೆಂಬ ಕಾಡುಗಿಚ್ಚು ಪಾಪಗಳೆಂಬ ಅರಳೆರಾಶಿಯನ್ನು ಸುಡುತ್ತದೆ. ॥೮೨-೮೩-೮೪-೮೫॥

ಆದುದರಿಂದ ಜನರು ಶಿವ, ಶಿವ ಎಂದು ಶಿವನಾಮವನ್ನು ಜಪಿಸಬೇಕು. ಯಾವಾಗಲೂ ಶಿವ, ಶಿವ ಎಂದು ನನ್ನ ನಾಮೋಚ್ಚಾರಣಾಪರರಾದವರಿಗೆ ಒಳ್ಳೆಯ ಗತಿಯು ಲಭಿಸುವುದು. ಅವರಿಗೆ ದೇಹಾವಸಾನಕಾಲದಲ್ಲಿ ಕಾಶೀಕ್ಷೇತ್ರದಲ್ಲಿ ನನ್ನ ನಾಮೋಪದೇಶವು ಲಭಿಸುತ್ತದೆ. ಶಿವನಾಮವು ನಿಶ್ಚಯವಾಗಿಯೂ ಮೋಕ್ಷವನ್ನು ಕೊಡಬಲ್ಲದು. ಆದುದರಿಂದ ಕಾಶೀಕ್ಷೇತ್ರದಲ್ಲಿ ನಾನು ಶಿವನಾಮವನ್ನು ಉಪದೇಶಿಸುತ್ತೇನೆ. ಕಾಶೀ ಅಥವಾ ಬೇರೆ ಕ್ಷೇತ್ರದಲ್ಲಿರುವ ನನ್ನ ಭಕ್ತನು ಶಿವನಾಮವನ್ನು ಜಪಿಸಿದ್ದಾದರೆ ಆತನು ಪುನಃ ಜನ್ಮವನ್ನು ಹೊಂದುವುದಿಲ್ಲ. ॥೮೬-೮೭-೮೮॥

ಶಿವನಾಮ ಪ್ರಭಾವದಿಂದ ಆತನು ಅಂತ್ಯಕಾಲದಲ್ಲಿ ದೇಹವನ್ನು ತ್ಯಜಿಸುವನು. ಬಳಿಕ ನನ್ನ ಭಕ್ತನಾಗಿ ಹುಟ್ಟುವನು. ಅನಂತರ ಕಾಶೀಕ್ಷೇತ್ರವನ್ನು ಹೊಂದಿ ನನ್ನ ಅನುಗ್ರಹದಿಂದ ನನ್ನ ಭಕ್ತನಾಗುವನು. ಬಳಿಕ ಆತನು ನನ್ನ ಪ್ರಸಾದದಿಂದ

ಭವಂತಿ ತೇಽಪಿ ಮದ್ಭಕ್ತಾಃ ಕಾಶ್ಯಾಂ ತಿಷ್ಠಂತ್ಯಹರ್ನಿಶಂ ।
ತತಃ ಕಾಶ್ಯಾಮಂತಕಾಲೇ ಮನ್ಮೈವಾನುಗ್ರಹೇ ಸತಿ ॥೯೧॥

ತದಾ ಶಿವಶಿವೇತ್ಯೇತತ್ ನಾಮ ಸಂಪ್ರಾಪ್ನುವಂತಿ ತೇ ।
ಕಾಶ್ಯಾಂ ಮುಕ್ತತನುರ್ಮರ್ತ್ಯೋ ನ ಪುನಸ್ತನುಭಾಕ್ ಶಿವೇ ॥೯೨॥

ಕಿಂತು ಮದ್ರೂಪತಾಂ ಯಾತಿ ಮದ್ಭಕ್ತೋ ಮತ್ಪರಾಯಣಃ ।
ತಥಾ ಭೂತೋ ನ ಯಾತ್ಯೇವ ಪ್ರಜ್ವಲದ್ವಹ್ನಿಗಂ ಹವಿಃ ॥೯೩॥

ತಥಾ ತ್ಯಕ್ತತನುಃ ಕಾಶ್ಯಾಂ ಶೈವೈರ್ನೈವಾಪ್ಯತೇ ಪುನಃ ।
ಕಾಶೀ ಶೈವಶರೀರಾಣಿ ಗೃಹಿತ್ವಾ ಯಾಚಿತಾಪಿ ಸಾ ॥೯೪॥

ನ ದದಾತಿ ಹವೀಂಷೀವ ಪಾವಕಃ ಪುನರುಜ್ವಲಃ ।
ಅನ್ಯತ್ರ ಮುಕ್ತಿಕಾಮೈಸ್ತು ನ ಸ್ಥಾತವ್ಯಂ ಕದಾಚನ ॥೯೫॥

---

ಕಾಶೀಕ್ಷೇತ್ರವನ್ನು ಹೊಂದುವನು. ದೇಹಾವಸಾನದಲ್ಲಿ ಶಿವ, ಶಿವ, ಎಂಬ ಮಂತ್ರವನ್ನು ಮುಕ್ತಿಗಾಗಿ ಹೊಂದುವನು. ಸ್ವರ್ಗಸೌಖ್ಯವು ಅನುಭವಿಸಿ ತೀರಿದ ಬಳಿಕ ದೇವತೆಗಳು, ಕಾಶಿಯಲ್ಲಿ ಯಾವಾಗಲೂ ಇರುತ್ತಾರೆ. ಆ ದೇವತೆಗಳು ನನ್ನ ಅನುಗ್ರಹದ ಪ್ರಭಾವದಿಂದ ಅಂತ್ಯಕಾಲದಲ್ಲಿ ಕಾಶಿಯನ್ನು ಸೇರುತ್ತಾರೆ. ಅನಂತರ ಶಿವ, ಶಿವ, ಎಂಬ ನಾಮೋಪದೇಶವನ್ನು ಅಲ್ಲಿ ಹೊಂದುತ್ತಾರೆ.॥೮೯-೯೦-೯೧-೯೨॥

ಶಿವಮಂತ್ರೋಪದೇಶದಿಂದ ಮನುಜನು ನನ್ನ ಸ್ವರೂಪವನ್ನು ಹೊಂದುವನು. ಅಲ್ಲದೇ ನನ್ನ ಭಕ್ತನಾಗುವನು. ಅಂತಹ ಮನುಷ್ಯನು ಪುನಃ ಜನ್ಮವೆತ್ತದೇ ಮುಕ್ತನಾಗುವನು. ಚೆನ್ನಾಗಿ ಪ್ರಜ್ವಲಿಸುವ ಅಗ್ನಿಯಲ್ಲಿ ಹವಿಸ್ಸನ್ನು ಹೋಮ ಮಾಡಿದರೆ ಅದು ಹುತವಾಗುವಂತೆ ಮನುಷ್ಯನ ಕ್ಲೇಶಗಳೂ ಅಲ್ಲಿ ನಾಶವಾಗುವುವು. ಹುತವಾದ ಹವಿಸ್ಸನ್ನು ಅಗ್ನಿಯು ಹಿಂದಿರುಗಿ ಹೇಗೆ ಕೊಡಲಾರದೋ ಹಾಗೆ ಕಾಶೀಯಲ್ಲಿ ದೇಹತ್ಯಾಗಮಾಡಿದ ಈಶ್ವರಭಕ್ತರಿಗೆ ಪುನರ್ಜನ್ಮವುಂಟಾಗಲಾರದು. ॥೯೩-೯೪॥

ಅಗ್ನಿಯು ಹವಿಸ್ಸನ್ನು ಪಚನಮಾಡುವಂತೆ ಶಿವಮಂತ್ರೋಪದೇಶದಿಂದ ಸಮಸ್ತ ಪಾಪಗಳೂ ಅಳಿಯುತ್ತವೆ. ಬೇರೆ ಮಾರ್ಗದಿಂದ ಮೋಕ್ಷವನ್ನು ಅಪೇಕ್ಷಿಸುವವರು ಕಾಶೀಯಲ್ಲಿ ವಾಸಿಸಕೂಡದು. ಕಾಶೀಯನ್ನು ತ್ಯಜಿಸಿದವರು ಸತ್ಯವನ್ನು

ತ್ಯಕ್ತ್ವಾ ಕಾಶೀಂ ಶುಭಾಂ ಸತ್ಯಮುದ್ಧೃತ್ಯ ಭುಜಮುಚ್ಯತೇ ।
ಮದ್ಭಕ್ತ ಏವಾಧಿಕಾರೀ ಮೋಕ್ಷೇ ಕಾಶ್ಯೇವ ಮುಕ್ತಿದಾ ॥೯೬॥

ಮನ್ನಾಮಸ್ಮೃತಿರೇವ ಸ್ಯಾನ್ಮೋಕ್ಷಸಾಧನಮುತ್ತಮಂ ।
ಶಿವೇ ಶಿವಶಿವೇತ್ಯೇತನ್ನಾಮಸ್ಮರಣಮೇವ ಹಿ ॥೯೭॥

ಕಾರಣಂ ಮೋಕ್ಷರೂಪಸ್ಯ ಫಲಸ್ಯೇತಿ ಮತಿರ್ಮಮ ।
ಮತ್ಪ್ರಸಾದೇನ ಸಂಪ್ರಾಪ್ಯ ಕಾಶೀಂ ಮುಕ್ತಿಪ್ರದಾಯಿನೀಂ ॥೯೮॥

ಮದ್ಭಕ್ತೋ ಮತ್ಪರೋ ನಿತ್ಯಂ ಕೋ ವಾ ಮುಂಚತಿ ಚಂಚುರಃ ।
ಪುಣ್ಯಪುಷ್ಪಸಮಾಕ್ರಾಂತಾಂ ಮೋಕ್ಷರೂಪಫಲಾವೃತಾಂ ॥೯೯॥

ಕಃ ಕಾಶೀಂ ಸಮುಪಾಶ್ರಿತ್ಯ ಪುನರನ್ಯತ್ರ ಗಚ್ಛತಿ ।
ಯಾಂ ನ ಭಾಸಯಿತುಂ ಶಕ್ತಾ ಭಾನುಚಂದ್ರಾನಲಾಃ ಶುಭೇ ॥೧೦೦॥

ತಾಮಿಷ್ಟಫಲದಾಂ ಕಾಶೀಂ ಕಸ್ತ್ಯಕ್ತುಂ ತನುತೇ ಮತಿಂ ।
ಅಮರ್ತ್ಯೈರಪ್ಯಲಭ್ಯಾಂ ತಾಂ ಅನಾಯಾಸೇನ ಮುಕ್ತಿದಾಂ ॥೧೦೧॥

---

ತ್ಯಜಿಸಿದವರೆಂದು ಹೇಳಲ್ಪಡುವರು. ಕಾಶೀಯಲ್ಲಿ ಮೋಕ್ಷ ಹೊಂದಲು ನನ್ನ ಭಕ್ತನಿಗೆ ಅಧಿಕಾರವುಂಟು. ಆ ಕಾಶೀಕ್ಷೇತ್ರವು ಮುಕ್ತಿದಾಯಕವಾದುದು. ನನ್ನ ನಾಮಸ್ಮರಣೆಯು ಮೋಕ್ಷಕ್ಕೆ ಸಾಧನವಾಗಿರುತ್ತದೆ. ಎಲೌ ಉಮಾದೇವಿಯೇ! ಶಿವ, ಶಿವ, ಎಂದು ಸ್ಮರಿಸುವಿಕೆಯು ಮೋಕ್ಷವೆಂಬ ಫಲಕ್ಕೆ ಕಾರಣವಾಗಿರುತ್ತದೆ. ನನ್ನ ಅನುಗ್ರಹದಿಂದ ಕಾಶೀಕ್ಷೇತ್ರವನ್ನು ಹೊಂದಿದ ಭಕ್ತನು ಯಾವನೂ ಮೋಕ್ಷಪ್ರದವಾದ ಕಾಶಿಯನ್ನು ಬಿಡಲು ಬಯಸುವುದಿಲ್ಲ. ಪುಣ್ಯವೆಂಬ ಹೂಗಳಿಂದಲೂ ಮೋಕ್ಷವೆಂಬ ಫಲಗಳಿಂದಲೂ ತುಂಬಿರುವ ಕಾಶೀ ಎಂಬ ವೃಕ್ಷವನ್ನು ಯಾವನೂ ತ್ಯಜಿಸಿ ಬೇರೆ ಹೋಗಲು ಇಷ್ಟಪಡಲಾರನು. ಆ ಕಾಶೀಕ್ಷೇತ್ರವನ್ನು ಪ್ರಕಾಶಪಡಿಸಲು ಸೂರ್ಯ, ಚಂದ್ರ, ಅಗ್ನಿ, ಇವರಾರೂ ಸಮರ್ಥರಾಗುವುದಿಲ್ಲ. ॥೯೫-೯೬-೯೭-೯೮-೯೯-೧೦೦॥

ನಮಗೆ ಬೇಕಾದುದನ್ನು ಕೊಡತಕ್ಕ ಕಾಶೀಕ್ಷೇತ್ರವನ್ನು ಯಾವನೂ ತ್ಯಜಿಸುವುದಿಲ್ಲ. ದೇವತೆಗಳಿಗೂ ಆ ಕಾಶಿಯು ದುರ್ಲಭವಾಗಿರುವುದು. ಅಲ್ಲದೇ ಆಯಾಸವಿಲ್ಲದೆ ಸುಖವಾಗಿ ಮುಕ್ತಿಯು ಕಾಶಿಯಿಂದ ಲಭಿಸುತ್ತದೆ. ಶ್ರೀಶಂಕರನು ಆ ಕಾಶೀ

ಕಃ ಸಂಜಹಾತಿ ವಿಮಲಃ ಕಾಶೀವಿನಾಶಾನನಾಯಿಕಾಂ ।
ಕ್ಷುಧಿತಃ ಕರಗಂ ಗ್ರಾಸಂ ಯಥಾ ನೈವ ವಿಮುಂಚತಿ ॥೧೦೨॥

ತಥಾ ನ ಮುಂಚತಿ ಪ್ರಾಜ್ಞಃ ಕಾಶೀಂ ಮುಕ್ತಿಪ್ರದಾಯಿನೀಂ ॥೧೦೩॥

ಮಲ್ಲಿಂಗಾರ್ಚನತತ್ಪರಾ ಹೃದಿ ಸದಾ ಮಾಮೇವ ಕಾಶ್ಯಾಂ ಮುದಾ
ಧ್ಯಾಯಂತೋ ಮಮ ನಾಮಶಂಕರಮಹಾದೇವಾಖಿಲೇಶ ಪ್ರಭೋ ।
ಗೌರೀನಾಥ ಶಿವೇಶ್ವರೇತಿ ವಿಮಲಂ ಭಕ್ತ್ಯಾ ಜಪಂತಃ ಪರಂ
ಸತ್ಯಂ ಸತ್ಯಮಪಾಸ್ತಭೋಗವಿಷಯಾಃ ಶೈವಾಗ್ರಗಣ್ಯಾಃ ಶಿವೇ ॥೧೦೪॥

ಇತಿ ಶ್ರೀಶಿವರಹಸ್ಯೇ ಉಗ್ರಾಖ್ಯೇ ಸಪ್ತಮಾಂಶೇ ಶಿವಗೌರೀ ಸಂವಾದೇ
ಕಾಶೀಮಹಿಮಾಖ್ಯಾನಂ ನಾಮ ದ್ವಿತೀಯೋಽಧ್ಯಾಯಃ

---

ಕ್ಷೇತ್ರದಲ್ಲಿ ಯಾವಾಗಲೂ ನೆಲಸಿರುತ್ತಾನೆ. ಹಸಿದವನು ಕೈಗೆ ಸಿಕ್ಕಿದ ಬುತ್ತಿಯನ್ನು ತ್ಯಜಿಸದಹಾಗೆ ತನಗೆ ಮುಕ್ತಿದಾಯಕವಾದ ಕಾಶೀಕ್ಷೇತ್ರವನ್ನು ಎಂದಿಗೂ ಬಿಡಲಾಗದು. ||೧೦೧-೧೦೨-೧೦೩||

ಎಲೌ ಪಾರ್ವತಿಯೇ! ಕಾಶೀಕ್ಷೇತ್ರವಾಸಿಗಳಾದ ನನ್ನ ಭಕ್ತರು ಯಾವಾಗಲೂ ನನ್ನನ್ನು ಪೂಜಿಸುವರು. ಮನಸ್ಸಿನಲ್ಲಿ ಧ್ಯಾನಿಸುವರು. ಬಳಿಕ ಹೇ! ಶಂಕರ! ಮಹಾದೇವ! ಪ್ರಭೋ! ಗೌರೀನಾಥ! ಶಿವನೇ, ಈಶ್ವರ ಎಂದು ನನ್ನ ನಾಮಜಪವನ್ನು ಮಾಡುತ್ತಾರೆ. ನಿಜವಾಗಿಯೂ ಶೈವಶ್ರೇಷ್ಠರು ಕಾಶಿಯಲ್ಲಿ ನನ್ನ ಧ್ಯಾನಾಸಕ್ತರಾಗಿರುವರು. ಅವರು ಸಮಸ್ತ ಭೋಗಗಳನ್ನೂ ತ್ಯಜಿಸಿ ವೈರಾಗ್ಯಶಾಲಿಗಳಾಗಿರುವರು. ಅವರೇ ಶೈವಾಗ್ರಗಣ್ಯರು. ಎಂದು ಪರಶಿವನು ಪಾರ್ವತಿಗೆ ಬೋಧಿಸಿದನು. ||೧೦೪||

ಇಲ್ಲಿಗೆ ಶ್ರೀ ಶಿವರಹಸ್ಯದ ಏಳನೆಯ ಅಂಶದಲ್ಲಿ ಶಿವಗೌರೀಸಂವಾದರೂಪವಾದ
ಕಾಶೀಮಹಿಮೆಯ ವರ್ಣನೆ ಎಂಬ ಎರಡನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

|| ಶ್ರೀಶಿವಾಯ ನಮಃ ||

# ಅಥ ಶ್ರೀಶಿವರಹಸ್ಯೇ

## ಉಗ್ರಾಖ್ಯೇ

### ಸಪ್ತಮಾಂಶೇ ಪೂರ್ವಾರ್ಧೇ

## ತೃತೀಯೋಽಧ್ಯಾಯಃ

|| ಪಾರ್ವತ್ಯುವಾಚ ||

**ದೇವೋತ್ತಮಾಖಿಲಾರಾಧ್ಯ ವಿಶ್ವೇಶ ಶಿವ ವಿಶ್ವಗ ।**
**ಶ್ರುತಾ ಪುಣ್ಯಕಥಾ ರಮ್ಯಾ ತ್ವತ್ಪ್ರಸಾದಾನ್ಮನೋಹರಾ ॥೧॥**

**ತ್ವನ್ಮುಖಾಂಭೋಜವಿಲಸತ್ಕಥಾಪುಷ್ಪರಸಂ ಪುನಃ ।**
**ಮಚ್ಚೇತಶ್ಚಂಚರೀಕೋಽಯಂ ಪಾತುಮಿಚ್ಛತಿ ಶಂಕರ ॥೨॥**

**ಮಹಾದೇವ ಕಿಯತ್ಕಾಶ್ಯಾಃ ಪರಿಮಾಣಂ ವಿಶೇಷತಃ ।**
**ಕಿಂ ವಾ ತತ್ರ ಮಹತ್ ಸ್ಥಾನಂ ಕಿಂ ವಾ ತೀರ್ಥಂ ಮಹದ್ವಿಭೋ॥೩॥**

---

## ಮೂರನೆಯ ಅಧ್ಯಾಯ

"ಎಲೈ ದೇವೋತ್ತಮನೇ, ನಿನ್ನನ್ನು ಎಲ್ಲರೂ ಆರಾಧಿಸುವರು. ನೀನು ಪ್ರಪಂಚವನ್ನೆಲ್ಲಾ ಆಳುವೆ. ಮಂಗಳಕರನು ನೀನಾಗಿರುವೆ. ಶಂಕರನೇ; ನಿನ್ನ ಅನುಗ್ರಹದಿಂದ ಮನೋಹರವಾದ ಮತ್ತು ಪುಣ್ಯಪ್ರದವಾದ ಕಾಶೀಮಹಿಮೆಯನ್ನು ಕೇಳಿದುದಾಯಿತು. ಮತ್ತು ನನ್ನ ಚಿತ್ತವೆಂಬ ದುಂಬಿಯು ನಿನ್ನ ಮುಖದಿಂದ ಹೊರಬೀಳುವ ಕಥೆಯೆಂಬ ಹೂರಸವನ್ನು (ಮಕರಂದವನ್ನು) ಪಾನಮಾಡಲು ಮತ್ತೆ ಬಯಸುತ್ತಿದೆ. ||೧-೨||

ಮಹಾದೇವನೇ, ಕಾಶಿಯು ಎಷ್ಟು ವಿಸ್ತಾರವುಳ್ಳದ್ದು ? ಅದರ ಅಳತೆ ಎಷ್ಟು ? ಅಲ್ಲಿ ಮಹತ್ತರವಾದ ಸ್ಥಾನವು ಯಾವುದು ? ಅಲ್ಲಿನ ಉತ್ತಮವಾದ ತೀರ್ಥದ

ಕಿಂ ವಾ ಶ್ರೇಷ್ಠತಮಂ ಲಿಂಗಂ ಸರ್ವವೇದಾಂತಸಂಸ್ತುತಂ ।
ತತ್ಸರ್ವಮವಿಶೇಷೇಣ ನಿರೂಪಯ ಕೃಪಾನಿಧೇ ॥೪॥

॥ ಶಿವ ಉವಾಚ ॥

ಸಮ್ಯಕ್ ಪೃಷ್ಟಂ ವರಾರೋಹೇ ಸಾಧು ಸಾಧು ವರಾನನೇ ।
ಪ್ರಶ್ನೋಽಯಂ ತವ ಕಲ್ಯಾಣಿ ಕಲ್ಯಾಣಂ ತನುತೇ ಮಮ ॥೫॥

ಯದ್ಯತ್ ಪೃಷ್ಟಂ ತ್ವಯಾ ದೇವಿ ತತ್ತದ್ದೇಹಾಂತಸಂಮತಂ ।
ವಿಚಾರ್ಯ ತದ್ವದಿಷ್ಯೇಽಹಂ ಶೃಣು ಕರ್ಣಮನೋರಮಂ ॥೬॥

ಪಂಚಕ್ರೋಶಾತ್ಮಕಂ ರಮ್ಯಂ ಕಾಶೀಕ್ಷೇತ್ರಮನುತ್ತಮಂ ।
ತತ್ತು ಜ್ಯೋತಿರ್ಮಯಂ ಲಿಂಗಂ ಯದವೇದ್ಯಂ ಪುರಾತನಂ ॥೭॥

ಸಹಸ್ರಕನಕದ್ವಾರಪರಿವೇಷ್ಟಿತಮುನ್ನತಂ ।
ವಜ್ರಸಂಘಟಿತಶ್ರೇಷ್ಠಸಹಸ್ರಾವರಣಾನ್ವಿತಂ ॥೮॥

---

ಹೆಸರೇನು ? ಅಲ್ಲಿ ಉತ್ತಮವೆನಿಸಿದ ಮತ್ತು ವೇದಾಂತಗಳಿಂದಲೂ ಸ್ತುತಿಸಲ್ಪಡುವ ಲಿಂಗವು ಯಾವುದಾಗಿದೆ? ಈ ಎಲ್ಲವನ್ನೂ ಸಮಾಧಾನವಾಗಿ ನನಗೆ ಹೇಳು" ಎಂದು ಪಾರ್ವತಿಯು ಶಂಕರನನ್ನು ಕೇಳಿದಳು. ॥೩-೪॥

ಎಲೌ ಕಲ್ಯಾಣಪ್ರದಳೇ, ಉತ್ತಮಪ್ರಿಯಳೇ, ನೀನು ಚೆನ್ನಾಗಿ ಪ್ರಶ್ನಿಸಿದೆ. ನಿನ್ನ ಈ ಪ್ರಶ್ನೆಯು ನನಗೆ ಮಂಗಳವನ್ನು ಉಂಟುಮಾಡುತ್ತದೆ. ನೀನು ಯಾವ ಯಾವುದನ್ನು ಕೇಳಿದೆಯೋ ಅದೆಲ್ಲವೂ ಪ್ರತಿಮಾನವನ ದೇಹಾವಸಾನದವರೆಗೂ ಅನ್ವಯಿಸಬಹುದಾಗಿದೆ. ಆದುದರಿಂದ ಅದನ್ನು ವಿಚಾರಿಸಿ ಎಲ್ಲವನ್ನೂ ಹೇಳುವೆನು. ಕರ್ಣಗಳಿಗೆ ಆನಂದವನ್ನುಂಟುಮಾಡುವ ಆ ವಿಚಾರವನ್ನು ಕೇಳು. ಎಂದು ಕಾಶೀಮಹಿಮೆಯನ್ನು ಪರಮೇಶ್ವರನು ಪಾರ್ವತಿಗೆ ಉಪದೇಶಿಸತೊಡಗಿದನು. ॥೫-೬॥

ಕಾಶೀಕ್ಷೇತ್ರವು ಐದುಕ್ರೋಶ ವಿಸ್ತಾರವಾಗಿದೆ. (ಅಂದರೆ ಎರಡೂವರೆ ಕೊಂಬಿನ ಕೂಗಿನಷ್ಟು ದೂರ ವಿಶಾಲವಾಗಿರುತ್ತದೆ.) ಅಲ್ಲಿ ಪುರಾತನವಾಗಿಯೂ ಉತ್ತಮವಾಗಿಯೂ ಇರುವ ಜ್ಯೋತಿರ್ಲಿಂಗವು ಕಂಡುಬರುತ್ತದೆ. ಆ ಲಿಂಗದ ಸುತ್ತಲೂ ಬಂಗಾರಮಯವಾದ ಒಂದು ಸಾವಿರ ಬಾಗಿಲುಗಳಿರುತ್ತವೆ. ವಜ್ರಗಳನ್ನು ಮೆಟ್ಟಿರುವ

ಅತ್ಯೂರ್ಧ್ವಲೋಕಗಶ್ರೇಷ್ಠರತ್ನಗೋಪುರರಾಜಿತಂ ।
ನಾನಾವಿಧಸುಧಾಸೌಧಶೃಂಗಕಾಂತಿವಿರಾಜಿತಂ ॥೯॥

ತದ್ಗೋಪುರಾಗ್ರಭಾಗೇಷು ವಿಮಲೇಷು ಕದಾಚನ ।
ನ ಭಾತಿ ಭಾನುಸಂಚಾರಶ್ಚಂಚಲಾಕ್ಷಿ ವರಾನನೇ ॥೧೦॥

ತದ್ಗೋಪುರೇಷು ವಿಮಲಾಶ್ಚಂದ್ರಸ್ಯಾಪಿ ನ ರಶ್ಮಯಃ ।
ನವಗ್ರಹಗಣಸ್ಯಾಪಿ ಕಾಂತಿರನ್ಯಸ್ಯ ವಾ ಚ್ಛವಿಃ ॥೧೧॥

ಪ್ರತ್ಯುತೈತದ್ಗೋಪುರಸ್ಯ ಛವಿಪ್ರತಿಹತಪ್ರಭಾಃ ।
ನಿಷ್ಪ್ರಭಾ ಏವ ತಿಷ್ಠಂತಿ ಸರ್ವೇ ಸೂರ್ಯೋದಯಾಃ ಪ್ರಿಯೇ ॥೧೨॥

ಕಾಶೀಗೋಪುರಶೃಂಗಾಣಿ ರಮ್ಯಾಣ್ಯತ್ಯುನ್ನತಾನಿ ಚ ।
ದೃಷ್ಟ್ವಾ ಸ ಮೇರುರುಚ್ಚೋಽಪಿ ಲಜ್ಜಿತೋ ಭವತಿ ಧ್ರುವಂ ॥೧೩॥

ಅಮೂಲ್ಯಾನರ್ಘ್ಯರತ್ನೌಘರಂಜಿತಂ ಶೃಂಗಮುತ್ತಮಂ ।
ಸರ್ವಲೋಕಾನತೀತ್ಯೈವ ಯಾತಿ ಪಶ್ಯ ವರಾನನೇ ॥೧೪॥

---

ಸಾವಿರ ಆವರಣಗಳು ಅಂದರೆ ಹೊರಗಿನ ಪ್ರಾಕಾರಗಳಿರುತ್ತವೆ. ಊರ್ಧ್ವಲೋಕಗಳನ್ನೂ ಮುಟ್ಟಿ ಮಿಕ್ಕಿರುವ ರತ್ನಖಚಿತಗಳಾದ ಹೊರಬಾಗಿಲುಗಳಿವೆ. ನಾನಾವಿಧವಾದ ಉಪ್ಪರಿಗೆ ಮನೆಗಳೂ ಶೃಂಗಗಳೂ ಅನೇಕವಿವೆ. ಅವು ವಿಶೇಷ ಕಾಂತಿಯಿಂದ ಕಂಗೊಳಿಸುತ್ತಿವೆ. ||೭-೮-೯||

ಆ ಜ್ಯೋತಿರ್ಮಯನಾದ ಶಂಕರನ ದೇವಾಲಯದ ಹೊರಬಾಗಿಲುಗಳಲ್ಲಿ ಶುಭ್ರವಾದ ಚಂದ್ರಿಕೆಯಾಗಲಿ, ಸೂರ್ಯಕಿರಣಗಳಾಗಲಿ ಪ್ರಸರಿಸಲಾರವು. ಅಂದರೆ ಆ ಬಾಗಿಲುಗಳ ಕಾಂತಿಯಿಂದ ಅವು ಆಚ್ಛಾದಿತಗಳಾಗಿರುತ್ತವೆ. ಹಾಗೆಯೇ ನವಗ್ರಹಗಳು ಅಲ್ಲಿ ತಮ್ಮ ಕಾಂತಿಯನ್ನು ಬೀರಲಾರವು. ಅಲ್ಲದೇ ಆ ಗೋಪುರದ ಕಾಂತಿಗಳಿಂದ ತಡೆಯಲ್ಪಟ್ಟು ಸೂರ್ಯೋದಯ ರಾಗವೂ ಸಹ ವಿಶೇಷವಾಗಿ ರಂಜಿಸಲಾರದು. ||೧೦-೧೧-೧೨||

ಕಾಶೀಕ್ಷೇತ್ರದ ಹೊರಬಾಗಿಲಿನ ಶೃಂಗಪ್ರದೇಶಗಳು ತುಂಬಾ ಎತ್ತರವಾದುವು. ಆ ಮೇರುಪರ್ವತವು ತಾನು ಎತ್ತರವಾಗಿರುವೆನೆಂದು ಭಾವಿಸಿದ್ದರೂ ಈ ಗೋಪುರಗಳನ್ನು ನೋಡಿದೊಡನೆ ಆ ಮೇರುವು ನಾಚಿಗೆಪಡುತ್ತದೆ. ಅಮೂಲ್ಯವಾದ

ಏತತ್ಪುರೋವರ್ತಿಶೃಂಗಮೂಲೇ ಭಾನುವಿಧುಗ್ರಹಾಃ ।
ತಿಷ್ಠಂತಿ ನಿಷ್ಪ್ರಭಾ ನಿತ್ಯಂ ಶೃಂಗಚ್ಛವಿಹತಪ್ರಭಾಃ ॥೧೫॥

ಕಥಮುಚ್ಚತರೋ ಭಾತಿ ಪುಣ್ಯಸ್ತಂಭ ಇವಾಮಲಃ ।
ಈದೃಶಾನ್ಯೇವ ಶೃಂಗಾಣಿ ಸಂತಿ ಕಾಶ್ಯಾಮನೇಕಧಾ ॥೧೬॥

ಕಾಶೀಗೋಪುರಶೃಂಗಾಣಾಮಗ್ರಭಾಗದಿದೃಕ್ಷಯಾ ।
ಪುರಾ ಪೂರ್ವಂ ಮಯಾ ದೇವಿ ಕದಾಚಿದ್ಗತಮಾದರಾತ್ ॥೧೭॥

ವೃಷೇಶಪ್ರಮುಖಾಃ ಸರ್ವೇ ಪ್ರಮಥಾಧೀಶ್ವರಾ ಅಪಿ ।
ಸಮಾಗತಾ ಮಯಾ ಸಾರ್ಧಂ ಮಹಾಸತ್ವಾ ಮಹಾಜವಾಃ ॥೧೮॥

ತೈಃ ಸಹೈವ ಮಯಾ ದೇವಿ ಗತಮೂರ್ಧ್ವಂ ತತಃ ಪರಂ ।
ಬಹುಕಾಲಾಟನಾತ್ಸರ್ವೇ ಶ್ರಾಂತಾಸ್ತೇ ಪ್ರಮಥಾಧಿಪಾಃ ॥೧೯॥

ತತಃ ಸರ್ವೇ ನಿವೇದ್ಯೈವ ಪರಾವೃತ್ತಾಃ ಶುಭಾನನೇ ।
ವೃಷೇಶ್ವರಾಧಿರೂಢೇನ ಮಯೈವ ಗತಮಗ್ರತಃ ॥೨೦॥

---

ರತ್ನಸಮುದಾಯದಿಂದ ರಚಿತವಾದ ಗೋಪುರದ ತುದಿಪ್ರದೇಶಗಳು ವಿಶೇಷವಾಗಿ ರಂಜಿಸುತ್ತಿವೆ. ಎಲೌ ಪ್ರಿಯಳೇ, ಅವುಗಳನ್ನು ನೋಡು, ಹೇಗೆ ಅವು ಎಲ್ಲಾ ಲೋಕಗಳನ್ನೂ ಅತಿಕ್ರಮಿಸಿ ಶೋಭಿಸುತ್ತಿವೆ! ||೧೩-೧೪||

ಎಲೌ ಪ್ರಿಯಳೇ, ಇಗೋ ಮುಂದೆ ತೋರುವ ಗೋಪುರಶೃಂಗದ ಬುಡದಲ್ಲಿ ಚಂದ್ರನೂ, ಗ್ರಹಗಳೂ ಇರುತ್ತವೆ. ಅವು ಶೃಂಗದ ಪ್ರಭೆಗಳಿಂದ ಮುಚ್ಚಿಹೋಗಿರುವುವು. ಆದುದರಿಂದ ಅವು ಪ್ರಕಾಶಿಸುವುದಿಲ್ಲ. ನೋಡು, ಈ ಉನ್ನತವಾದ ಶೃಂಗವು ಹೇಗೆ ಕಾಣುತ್ತಿದೆ! ಇಂತಹ ಶೃಂಗಗಳು ಕಾಶಿಯಲ್ಲಿ ಅನೇಕವಿವೆ. ದೇವಿಯೇ, ನಾನು ಹಿಂದೆ ಒಂದುಸಾರಿ ಕಾಶಿಯಲ್ಲಿರುವ ಗೋಪುರ ಶೃಂಗಗಳನ್ನು ನೋಡಬೇಕೆಂದು ಕಾಶಿಗೆ ಹೋದೆನು. ||೧೫-೧೬-೧೭||

ಆಗ ನಂದೀಶ್ವರನೇ ಮೊದಲಾದ ಪ್ರಮಥಗಣಗಳು ನನ್ನೊಡನೆ ಬಂದರು. ಅವರು ಬಹಳ ವೇಗಶಾಲಿಗಳೂ ಮಹಾಪರಾಕ್ರಮಿಗಳೂ ಆದವರು. ನಾನೂ ಅವರೊಂದಿಗೆ ಬಹಳಕಾಲ ಅಲ್ಲಲ್ಲಿ ಸಂಚರಿಸಿದೆ. ಬಳಿಕ ಆಯಾಸಗೊಂಡ ಎಲ್ಲಾ ಗಣಗಳೂ ನನ್ನಿಂದ ಅಪ್ಪಣೆಪಡೆದು ಹಿಂದಿರುಗಿದರು. ನಂದೀಶ್ವರನನ್ನು

ಗಮನೇ ಕತಿ ವಾ ಮಾಸಾಃ ಯಾತಾಃ ಸಂಖ್ಯಾ ನ ಸಾ ಕೃತಾ ।
ತತಃ ಪರಂ ಮಾಮಮೇಕಂ ಶೃಂಗಾಗ್ರಂ ರತ್ನರಂಜಿತಂ ॥೨೧॥

ಗಚ್ಛನ್ನೂರ್ಧ್ವಂ ಮಯಾ ದೃಷ್ಟಂ ತತ್ಕರೇಣ ಧೃತಂ ತತಃ ।
ಧೃತಮಪ್ಯತಿವೇಗೇನ ಗತಮೂರ್ಧ್ವಂ ತದಂಬಿಕೇ ॥೨೨॥

ಮಮಾಶ್ಚರ್ಯಮಭೂಚ್ಛೀಘ್ರಂ ಗಮನಂ ತಸ್ಯ ಪಶ್ಯತಃ ।
ವಾಯೋರಪಿ ತಥಾ ವೇಗೋ ನ ದೃಷ್ಟೋಽಪಿ ಕದಾಚನ ॥೨೩॥

ತಚ್ಛೃಂಗಾಗ್ರಂ ದೃಶ್ಯಮಾನಮದೃಶ್ಯಮಭವತ್ ಕ್ಷಣಾತ್ ।
ತದಾನೀಮೇವ ತದ್ದೃಷ್ಟ್ವಾ ವೃಷೇಶೋ ವಿಸ್ಮಯಂ ಗತಃ ॥೨೪॥

ಮಹದಾಶ್ಚರ್ಯಸಂಪನ್ನಃಸ್ತುತಃ ಪರಮಹಂ ಶುಭೇ ।
ಸಮಾಗತೋಽಸ್ಮಿ ಕೈಲಾಸಮಾರುಹ್ಯ ವೃಷಭಾಧಿಪಂ ॥೨೫॥

ಹರ್ಮ್ಯಗೋಪುರಶೃಂಗಾಣಿ ಪರಸ್ಪರಜಿಗೀಷಯಾ ।
ಗಚ್ಛಂತ್ಯತ್ಯಂತವೇಗೇನ ಸದಾ ರತ್ನಮಯಾನಿ ಹಿ ॥೨೬॥

---

ಆರೋಹಣಮಾಡಿದ ನಾನು ಮಾತ್ರ ಅವರೆಲ್ಲರಿಗೂ ಮುಂಗಡೆ ಹೊರಟೆನು. ||೧೮-೧೯-೨೦||

ಹಾಗೆ ಪ್ರಯಾಣಮಾಡುತ್ತಾ ಇರುವಲ್ಲಿ ಅನೇಕ ತಿಂಗಳು ಕಳೆದುಹೋದುವು. ಹೀಗೆ ಪ್ರಯಾಣಮಾಡಿದ ತಿಂಗಳುಗಳ ಲೆಕ್ಕವು ಸಿಕ್ಕಲಾರದೇ ಹೋಯಿತು. ಬಳಿಕ ಹೀಗೆ ಹೋಗುತ್ತಿರಲು ರತ್ನಖಚಿತವಾದ ಒಂದು ಶೃಂಗವನ್ನು ಕಂಡೆನು. ಆ ಶಿಖರವನ್ನು ಹಿಡಿದು ಮೇಲಕ್ಕೆ ಹತ್ತಿದೆನು. ನಾನು ಆಗ ಅತಿ ವೇಗದಿಂದ ಪ್ರಯಾಣ ಮಾಡಿದೆನು. ಎಲೌ ಅಂಬಿಕೆಯೇ! ವಾಯುವೂ ಕೂಡ ಅಷ್ಟೊಂದು ವೇಗವುಳ್ಳವನೆಂದು ಹೇಳಲಾರೆ. ಶೃಂಗವನ್ನು ನೋಡುತ್ತಾ ಪ್ರಯಾಣಮಾಡುತ್ತಿರುವಾಗ ನನಗೆ ಬಹಳ ಆಶ್ಚರ್ಯವಾಗುತ್ತಿತ್ತು. ||೨೧-೨೨-೨೩||

ಆ ಶೃಂಗವು ಕಾಣುತ್ತಿದ್ದ ಹಾಗೆಯೇ ಕ್ಷಣಕಾಲದಲ್ಲಿ ಮಾಯವಾಯಿತು. ಆಗ ನಂದಿಕೇಶ್ವರನು ಅತ್ಯಂತ ವಿಸ್ಮಯಗೊಂಡನು. ಆಗಲೇ ಮಹತ್ತರವಾದ ಆಶ್ಚರ್ಯವು ನನಗುಂಟಾಯಿತು. ಬಳಿಕ ವೃಷಭಾರೂಢನಾಗಿ ಕೈಲಾಸಕ್ಕೆ ಬಂದುಬಿಟ್ಟೆನು. ದೇವಿಯೇ, ಅಲ್ಲಿಯ ದೊಡ್ಡದೊಡ್ಡ ಉಪ್ಪರಿಗೆ ಮನೆಗಳ ಶಿಖರಗಳು ಅನ್ಯೋನ್ಯವಾಗಿ

ಅಷ್ಟದಿಕ್ಷು ಗಣಾಧೀಶಾಃ ಶೂಲಮುದ್ಗರಪಾಣಯಃ ।
ಅಸಂಖ್ಯಾತಾಃ ಸದಾ ದೇವಿ ವಸಂತ್ಯಮಿತವಿಕ್ರಮಾಃ ॥೨೭॥

ಸಹಸ್ರಾರ್ಬುದಭೂತೇಶಾಃ ಶಿತಶೂಲಕರಾಃ ಸದಾ ।
ನಿವಸಂತಿ ಪ್ರತಿದ್ವಾರಿ ತೀಕ್ಷ್ಣಾಕ್ಷಾ ವಿವೃತಾನನಾಃ ॥೨೮॥

ಶಕ್ತಿಸಂಘಾಶ್ಚ ಬಹವಃ ಪ್ರತಿದ್ವಾರಿ ವರಾನನೇ ।
ಜ್ವಲದ್ವಹ್ನಿನಿಭಾಃ ಸಂತಿ ಭೈರವಾಃ ಸ್ವಬಲೋನ್ನತಾಃ ॥೨೯॥

ರವಿರಕ್ತಾಕ್ಷಗಂಧರ್ವಃ ಕಶ್ಚಿದದ್ಭುತವಿಕ್ರಮಃ ।
ಕಾಶೀದಕ್ಷಿಣದಿಗ್ಭಾಗೇ ದುರ್ಧರ್ಷಸ್ತಿಷ್ಠತಿ ಪ್ರಿಯೇ ॥೩೦॥

ಧೃತೋರ್ಧ್ವಮುಷ್ಟಿರುನ್ಮತ್ತಃ ಶೂಲದಂತಕರಾಯುಧಃ ।
ಪ್ರಜ್ವಲದ್ವಹ್ನಿಸಂಕಾಶಃ ಸೂರ್ಯಮಂಡಲಸನ್ನಿಭಃ ॥೩೧॥

---

ಗೆಲ್ಲಬೇಕೆಂಬ ಇಚ್ಛೆಯಿಂದ ಅತಿ ವೇಗವಾಗಿ ಮೇಲಕ್ಕೆ ಹಬ್ಬಿವೆಯೋ ಎಂಬಂತಿವೆ. ॥೨೪-೨೫-೨೬॥

ಎಲೌ! ಗೌರಿಯೇ! ಕೇಳು. ಆ ಕಾಶೀಕ್ಷೇತ್ರದಲ್ಲಿ ಎಂಟು ದಿಕ್ಕುಗಳಲ್ಲಿಯೂ ಶೂಲ, ಮುದ್ಗರ, ಮೊದಲಾದ ಆಯುಧವನ್ನು ಹಿಡಿದುಕೊಂಡಿರುವ, ಮಹಾ ಪರಾಕ್ರಮಿಗಳಾದ ಅನೇಕ ಗಣಗಳು ನಿಂತಿರುತ್ತಾರೆ. ಅಲ್ಲಿ ಯಾವಾಗಲೂ ಹರಿತವಾದ ಶೂಲಾಯುಧವನ್ನು ಹಿಡಿದುಕೊಂಡಿರುವ ಒಂದು ಸಾವಿರ ಅರ್ಬುದ ಸಂಖ್ಯೆಯ ಭೂತಗಣಗಳು ವಾಸಮಾಡುತ್ತವೆ. ಪ್ರಿಯಳೇ! ಪ್ರತಿಯೊಂದು ಬಾಗಿಲಿನಲ್ಲಿಯೂ ಭಯಂಕರವಾದ ಮುಖವುಳ್ಳ ಭೂತಗಳು ಕಾಣಬರುತ್ತವೆ. ಅಲ್ಲದೆ ಶಕ್ತಿದೇವತೆಗಳೂ ಕೂಡ ಅಲ್ಲಿ ಇಲ್ಲಿ ಇರುವುವು. ಹೆಚ್ಚು ಬಲಶಾಲಿಗಳಾದ ಭೈರವ ಗಣಗಳೂ ಆ ಕಾಶೀಕ್ಷೇತ್ರದಲ್ಲಿ ವಾಸಮಾಡುತ್ತವೆ. ಅವರು ಉರಿಯುತ್ತಿರುವ ಬೆಂಕಿಯಂತೆ ತೇಜಸ್ವಿಗಳಾಗಿ ಕಾಣುತ್ತಾರೆ. ॥೨೭-೨೮-೨೯॥

ಆ ಕಾಶೀಕ್ಷೇತ್ರದ ದಕ್ಷಿಣ ದಿಕ್ಕಿನಲ್ಲಿ ಬಲಶಾಲಿಯಾದ ಮತ್ತು ಸೂರ್ಯನಂತೆ ಕೆಂಪಾದ ಕಣ್ಣುಗಳುಳ್ಳ ಒಬ್ಬ ಗಂಧರ್ವನು ವಾಸಮಾಡುತ್ತಾನೆ. ಆತನನ್ನು ಗೆಲ್ಲಲು ಯಾರಿಗೂ ಸಾಧ್ಯವಾಗಲಾರದು. ಅವನು ಮುಷ್ಟಿಯನ್ನು, ಮತ್ತು ಶೂಲ, ದಂಡ, ಸೊಂಡಿಲು, ಇವುಗಳನ್ನು ಆಯುಧಗಳನ್ನಾಗಿ ಧರಿಸಿರುತ್ತಾನೆ. ಅವನು ಜ್ವಲಿಸುತ್ತಿ

ತದ್ಭೃತ್ಯಾಸ್ತಾದೃಶಾ ವೀರಾ ಬಲಮಾನವಿಜೃಂಭಿತಾಃ ।
ರಕ್ತವಸ್ತ್ರಾ ರಕ್ತಕಾಯಾಃ ಶತ್ರುರಕ್ತೈಕಜೀವನಾಃ ॥೩೨॥

ಉನ್ಮತ್ತಭೈರವೋ ನಾಮ ಕಶ್ಚಿದಸ್ತಿ ಮಹಾಬಲಃ ।
ತಸ್ಯಾಮೇವ ದಿಶಿ ಶ್ರೇಷ್ಠಃ ಕೋಟಿಯೋಜನಮುನ್ನತಃ ॥೩೩॥

ಮಂದರಾಚಲಸಂಕಾಶೋ ಮಹಾಕಾಯೋ ಭಯಾನಕಃ ।
ಕೋಟಿಕೋಟಿಗಜಾಧೀಶಸಂಕಾಶಾಂಗುಲಿವಿಕ್ರಮಃ ॥೩೪॥

ಶ್ವೇತೋರ್ಧ್ವದೀರ್ಘರದನಃ ಪಿಂಗಲಾಕ್ಷ ಶಿರೋರುಹಃ ।
ಸಿತವಜ್ರನಿಭಾನಂತಕರರೋಮೋ ಮದೋದ್ಧತಃ ॥೩೫॥

ಕ್ರೂರಾಕ್ಷಿಪಾತಮಾತ್ರೇಣ ನಿಹಂತ್ಯರಿಕುಲಾನ್ ಬಹೂನ್ ।
ಪಾತಾಲೇ ಭುವಿ ವಾ ಕೋವಾ ತತ್ತುಲ್ಯೋ ನೈವ ದೃಶ್ಯತೇ ॥೩೬॥

---

ರುವ ಬೆಂಕಿಯಂತೆ ಯಾವಾಗಲೂ ಕಂಡುಬರುವನು. ಅವನು ಸೂರ್ಯನ ಹಾಗೆ ಪ್ರಕಾಶಿಸುವನು. ||೩೦-೩೧||

ಆ ಗಂಧರ್ವನ ಭೃತ್ಯರೂ ಕೂಡ ಅಲ್ಲಿ ಇರುತ್ತಾರೆ. ಅವರು ಪರಾಕ್ರಮ, ರೂಪು ಇವುಗಳಲ್ಲಿ ತನ್ನ ಒಡೆಯನಿಗೆ ಸಮಾನರಾಗಿರುತ್ತಾರೆ. ಆ ಭೃತ್ಯರೆಲ್ಲರೂ ಕೆಂಪು ಬಟ್ಟೆಯನ್ನು ಧರಿಸುವರು. ಅವರ ಮೈಬಣ್ಣವು ಕೆಂಪು. ಯಾವಾಗಲೂ ಅವರು ತಮ್ಮ ಶತ್ರುವಿನ ರಕ್ತದಿಂದಲೇ ಜೀವನವನ್ನು ನಡೆಸುತ್ತಾರೆ. ಆ ದಕ್ಷಿಣ ದಿಕ್ಕಿನಲ್ಲಿ ಉನ್ಮತ್ತ ಭೈರವನೆಂಬುವನು ಇರುತ್ತಾನೆ. ಆತನು ಮಹಾಬಲಶಾಲಿ; ಅವನು ಒಂದುಕೋಟಿ ಯೋಜನ ಎತ್ತರವಾಗಿದ್ದಾನೆ. ಮಂದರಪರ್ವತದ ಹಾಗೆ ಅವನು ಕಂಡುಬರುವನು. ಆತನನ್ನು ನೋಡಿದರೆ ಹೆದರಿಕೆಯುಂಟಾಗುವುದು. ಒಂದು ಕೋಟಿ ಸಂಖ್ಯೆ ಆನೆಗಳ ಬಲವು ಆ ಉನ್ಮತ್ತ ಭೈರವನಿಗೆ ಲಭಿಸಿರುವುದು. ||೩೨-೩೩-೩೪||

ಆ ಉನ್ಮತ್ತಭೈರವನು ದೀರ್ಘಕಾಯನು. ಅವನ ಹಲ್ಲುಗಳು ಉದ್ದವಾಗಿ ಶುಭ್ರವಾಗಿವೆ. ಹೊಂಬಣ್ಣದ ಕಣ್ಣು, ತಲೆಗೂದಲು ಇವುಗಳಿಂದ ಕೂಡಿದ್ದಾನೆ. ವಜ್ರದಂತೆ ಒರಟಾದ ಮತ್ತು ಬಿಳುಪಾದ ಕೂದಲು ಅವನ ಮೈತುಂಬಾ ತುಂಬಿವೆ. ಆತನು ಮದದಿಂದ ಗರ್ವಿತನಾಗಿದ್ದಾನೆ. ತನ್ನ ತೀಕ್ಷ್ಣವಾದ ಕಣ್ಣುನೋಟದಿಂದಲೇ ಅನೇಕ

ತತ್ಕ್ರೂರದೃಷ್ಟಿಪಾತೇನ ಭಸ್ಮ ಸಂಜಾಯತೇ ಗಿರಿಃ ।
ತತ್ಕ್ರೂರದೃಷ್ಟ್ಯಾ ಪೃಥಿವೀ ಕಂಪಮಾನೇವ ತಿಷ್ಠತಿ ॥೩೭॥

ಕ್ಷೀರಾಬ್ಧಿರೇಕದಾ ಪೂರ್ವಂ ಪೀತಸ್ತೇನ ತತಃ ಪರಂ ।
ಮಹಾಭುಜೋ ಮಹಾಕಾಯಃ ಕ್ರೂರದೃಷ್ಟಿರಲೋಲುಪಃ ॥೩೮॥

ಸರ್ವೇ ಸಮುದ್ರಾಃ ಸರಿತಃ ಪೀತಾಸ್ತೇನೈವ ಲೀಲಯಾ ।
ಶೈಲೇಂದ್ರಾಃ ಪೂರ್ವಮೇತೇನ ಭಕ್ಷಿತಾ ಬಹವೋ ಮುದಾ ॥೩೯॥

ಕದಾಚಿದೂರ್ಧ್ವಂ ನೀತೇಯಂ ಪೃಥಿವೀ ಪೃಥುಬಾಹುನಾ ।
ಛತ್ರೀಕೃತಾ ತದಾ ಸೈವ ತೇನ ಶೈಲವನಾನ್ವಿತಾ ॥೪೦॥

ಬಹುಕಾಲಪ್ರಯತ್ನೇನ ಸುರಗಂಧರ್ವವೀಕ್ಷಿತಃ ।
ಚಕ್ರವದ್ಭ್ರಾಮಯಾಮಾಸ ನಖಾಗ್ರೇ ಸಂನಿವೇಶ್ಯ ಚ ॥೪೧॥

ಅನೇನೈವಾತಿಮತ್ತೇನ ಲೋಕಾಃ ವ್ಯತ್ಯಾಸಿತಾಃ ಪುರಾ ।
ತತಃ ಸ ಕೃಪಯಾ ಲೋಕಾನ್ ಯಥಾ ಪೂರ್ವಂ ಚಕಾರ ಚ ॥೪೨॥

---

ಶತ್ರುಕುಲಗಳನ್ನು ನಾಶಮಾಡುತ್ತಾನೆ. ಭೂಮಿ ಮತ್ತು ಪಾತಾಳಲೋಕದಲ್ಲಿ ಅವನಿಗೆ ಸಮಾನನಾದವನು ಇನ್ನೊಬ್ಬನಿಲ್ಲ. ಅವನ ಭಯಂಕರವಾದ ದೃಷ್ಟಿಪಾತದಿಂದ ಭೂಮಿಯೇ ನಡುಗುತ್ತದೆ. ದೊಡ್ಡದೊಡ್ಡ ಪರ್ವತವನ್ನೂ ಸುಟ್ಟು ಅವನು ಬೂದಿ ಮಾಡುತ್ತಾನೆ. ||೩೫-೩೬-೩೭||

ಈ ಉನ್ಮತ್ತ ಭೈರವನು ಒಂದು ಸಲ ಕ್ಷೀರಸಮುದ್ರವನ್ನೇ ಕುಡಿದು ಬಿಟ್ಟನು. ಇವನ ತೋಳುಗಳು ಬಹು ಉದ್ದವಾಗಿವೆ. ಶರೀರವು ಬಹಳ ದೊಡ್ಡದು. ಆತನ ದೃಷ್ಟಿಯು ಅತಿ ಭಯಂಕರವಾದುದು. ಅಂತಹ ಇವನು ಎಲ್ಲಾ ನದಿ, ಸಮುದ್ರ ಇವುಗಳನ್ನೂ ಕುಡಿಯಬಲ್ಲನು. ದೊಡ್ಡದೊಡ್ಡ ಬೆಟ್ಟಗಳನ್ನು ಈತನು ಭಕ್ಷಿಸಿರುವನು. ಒಂದು ಸಲ ಆತನು ಭೂಮಿಯನ್ನು ಮೇಲಕ್ಕೆ ತೆಗೆದುಕೊಂಡು ಹೋಗುವನು. ಈ ಭೂಮಿಯನ್ನು ಅಲ್ಲಿ ಛತ್ರಿಯಹಾಗೆ ಹಿಡಿಯಬಲ್ಲನು. ||೩೮-೩೯-೪೦||

ಆ ಉನ್ಮತ್ತ ಭೈರವನು ದೇವಗಂಧರ್ವರು ನೋಡುತ್ತಿದ್ದ ಹಾಗೆಯೇ ಭೂಮಿಯನ್ನು ತನ್ನ ಕೈಬೆರಳುಗಳ ತುದಿಯಲ್ಲಿ ಇಟ್ಟುಕೊಂಡು ಚಕ್ರವನ್ನು ತಿರುಗಿಸು

ಇಂದ್ರಾದಿಲೋಕಪಾಲಾಶ್ಚ ಕೃತಾಂಜಲಿಪುಟಾಃ ಸದಾ ।
ಸಂಸೇವಂತೇ ಭಯಗ್ರಸ್ತಾಃ ಕಂಪಮಾನಾಸ್ತಮಾದರಾತ್ ॥೪೩॥

ತಪಸಾ ಸಮ್ಯಗಾರಾಧ್ಯ ತಮೇವ ತದನುಗ್ರಹಾತ್ ।
ಕಾಶೀಪ್ರವೇಶಮಿಚ್ಛಂತಿ ಸ್ವರ್ಗಲೋಕನಿವಾಸಿನಃ ॥೪೪॥

ಅನಿವೇದ್ಯ ಗತಃ ಪೂರ್ವಂ ತಮೇವ ಚತುರಾನನಃ ।
ಕಾಶ್ಯಾಂ ತತಃ ಕ್ರೂರದೃಷ್ಟಿರ್ಲೀಲಯಾ ಚತುರಾನನಂ ॥೪೫॥

ಶೀಘ್ರಂ ನಿಷ್ಕಾಸಯಾಮಾಸ ಪ್ರಲಪಂತಂ ಸ ಭೈರವಃ ।
ಕಾಶೀಪ್ರವೇಶೋ ನೈವಾಸ್ಯ ತದಾಪ್ರಭೃತಿ ಸರ್ವಥಾ ॥೪೬॥

ದುಃಖಿತಃ ಸವಿಧಿಸ್ತೇನ ವಿಕೃತೋ ವನಮಾಯಯೌ ।
ಪ್ರಲಪನ್ವನಮಾಶ್ರಿತ್ಯ ಸರಸ್ವತ್ಯಾ ಸ ತಿಷ್ಠತಿ ॥೪೭॥

---

ವಂತೆ ತಿರುಗಿಸುತ್ತಿದ್ದನು. ಅತ್ಯಂತ ಗರ್ವಿತನಾದ ಈತನು ಹಿಂದೆ ಲೋಕಗಳನ್ನೇ ವ್ಯತ್ಯಾಸಮಾಡಿದನು. ಅಸ್ತವ್ಯಸ್ತವನ್ನಾಗಿ ಮಾಡಿದನು. ಬಳಿಕ ದಯೆಯಿಂದ ಹಿಂದಿನಂತೆಯೇ ಆಯಾ ಸ್ಥಳದಲ್ಲಿ ತಂದು ನಿಲ್ಲಿಸಿದನು. ಇಂದ್ರನೇ ಮೊದಲಾದ ಲೋಕಪಾಲಕರು ಕೈಜೋಡಿಸಿಕೊಂಡು ಯಾವಾಗಲೂ ಆತನನ್ನು ಸೇವಿಸುತ್ತಾರೆ. ಆ ಇಂದ್ರಾದಿಗಳು ಇವನ ಭಯದಿಂದ ನಡುಗುತ್ತಿರುವರು. ||೪೧-೪೨-೪೩||

ಸ್ವರ್ಗಲೋಕವಾಸಿಗಳಾದ ದೇವತೆಗಳು ಘೋರ ತಪಸ್ಸನ್ನಾಚರಿಸಿ ಆ ಉನ್ಮತ್ತ ಭೈರವನ ಅನುಜ್ಞೆಯಿಂದ ಕಾಶೀವಾಸವನ್ನು ಬಯಸುವರು. ಒಂದು ಬಾರಿ ಬ್ರಹ್ಮನು ಆ ಉನ್ಮತ್ತ ಭೈರವನ ಅಪ್ಪಣೆಯಿಲ್ಲದೇ ಕಾಶಿಯನ್ನು ಪ್ರವೇಶಿಸಿದನು. ಆಗ ಭಯಂಕರವಾದ ನೋಟವುಳ್ಳ ಆ ಭೈರವನು ಲೀಲೆಯಿಂದಲೇ ಜಾಗ್ರತೆಯಾಗಿ ಬ್ರಹ್ಮನನ್ನು ಓಡಿಸಿದನು. ಅಲ್ಲಿಂದ ಮುಂದಕ್ಕೆ ಬ್ರಹ್ಮನಿಗೆ ಕಾಶೀಪ್ರವೇಶವು ದೊರೆಯದೇ ಹೋಯಿತು. ಆ ವಿಧಿಯು ದುಃಖಗೊಂಡು ಆಗ ಕಾಡನ್ನು ಸೇರಿದನು. ಅಲ್ಲಿ ಬಹುಕಾಲದಿಂದ ಯೋಚನಾಸಕ್ತನಾಗಿ ಸಂಚರಿಸುತ್ತಾ ಸರಸ್ವತಿಯೊಡನೆ ಇರುವನು. ||೪೪-೪೫-೪೬-೪೭||

ಇದಾನೀಂ ವಿಧಿರತ್ಯಂತಂ ಕಾಶೀದರ್ಶನಲಾಲಸಃ ।
ತಮೇವ ತಪಸಾ ಸಮ್ಯಗಾರಾಧಯತಿ ಸಾದರಂ ॥೪೮॥

ಅತ್ಯುಗ್ರತಪಸಾ ತುಷ್ಟೋ ಭೈರವೋ ಭಕ್ತವತ್ಸಲಃ ।
ತಸ್ಯ ಕಾಶೀಪ್ರವೇಶಾರ್ಥಂ ಆಜ್ಞಾಂ ದಾಸ್ಯತ್ಯಸಂಶಯಂ ॥೪೯॥

ಅಯಮೇತಾದೃಶೋ ದೇವಿ ಕಾಶೀಪಾಲನತತ್ಪರಃ ।
ಇತೋಽಪಿ ಪ್ರಬಲಾಃ ಸಂತಿ ಕಾಶೀಸಂರಕ್ಷಣಕ್ಷಮಾಃ ॥೫೦॥

ತೇಷಾಂ ತೇಜೋಬಲಂ ವೀರ್ಯಂ ಶೌರ್ಯಮೌದಾರ್ಯಮುತ್ಕಟಂ ।
ವಕ್ತುಂ ನ ಶಕ್ಯತೇ ದೇವಿ ಸಹಸ್ರವದನೈರಪಿ ॥೫೧॥

ಕಾಶೀಸಂರಕ್ಷಕಾ ವೀರಾಃ ಯಾವಂತಃ ಸಂತಿ ತಾವತಾ ।
ಪ್ರಸಾದೇನ ವಿನಾ ಕಾಶೀಂ ಪ್ರವೇಷ್ಟುಂ ನೈವ ಶಕ್ಯತೇ ॥೫೨॥

ಭಿನ್ನಪ್ರಕೃತಿಗಾಃ ಕ್ರೂರಾಃ ಕಾಶೀಸಂರಕ್ಷಕಾಃ ಸದಾ ।
ಅನಂತಾ ದುರ್ಮದಾಃ ಸರ್ವೇ ಪರಸ್ಪರಜಿಗೀಷವಃ ॥೫೩॥

---

ಎಲೌ ದೇವಿಯೇ, ಈಗ ಆ ಬ್ರಹ್ಮನು ಕಾಶೀಕ್ಷೇತ್ರವನ್ನು ನೋಡಬೇಕೆಂಬ ಆಸೆಯಿಂದ ಆ ಉನ್ಮತ್ತ ಭೈರವನನ್ನು ತಪಸ್ಸಿನಿಂದ ಆರಾಧಿಸುತ್ತಿರುವನು. ಭಕ್ತರಲ್ಲಿ ಪ್ರೀತಿಯುಳ್ಳ ಆ ಭೈರವನು ಅವನ ಉಗ್ರತಪಸ್ಸಿಗೆ ಪ್ರೀತನಾಗಿ ಬ್ರಹ್ಮನಿಗೆ ಕಾಶೀಪ್ರವೇಶಮಾಡಲು ಅಪ್ಪಣೆಯನ್ನು ನಿಶ್ಚಯವಾಗಿಯೂ ಕೊಡುವನು. ಹೀಗೆ ಉನ್ಮತ್ತ ಭೈರವನು ಕಾಶೀಕ್ಷೇತ್ರದ ರಕ್ಷಣೆಯಲ್ಲಿ ನಿರತನಾಗಿರುವನು. ಇವನಿಗಿಂತಲೂ ಇನ್ನೂ ಬಲಶಾಲಿಗಳಾದವರು ಅನೇಕರು ಕಾಶೀರಕ್ಷಣೆಗಾಗಿ ಸಿದ್ಧರಾಗಿರುವರು. ॥೪೮-೪೯-೫೦॥

ಎಲೌ ಪಾರ್ವತಿಯೇ, ಆ ಕಾಶೀರಕ್ಷಕರ ಬಲ, ಪರಾಕ್ರಮ, ಶೌರ್ಯ, ಔದಾರ್ಯ ಇವೇ ಮೊದಲಾದುವನ್ನು ಒಂದು ಸಾವಿರ ಮುಖಗಳಿಂದಲೂ ಹೇಳಲು ಸಾಧ್ಯವಾಗಲಾರದು. ಕಾಶೀಸಂರಕ್ಷಕರಾದ ಎಷ್ಟು ಮಂದಿ ವೀರರು ಇರುವರೋ ಅವರ ಅನುಗ್ರಹವಿಲ್ಲದೇ ಕಾಶಿಯನ್ನು ಪ್ರವೇಶಿಸಲು ಯಾರಿಗೂ ಸಾಧ್ಯವಾಗುವುದಿಲ್ಲ. ಆ ಕಾಶೀಪಾಲಕರ ಸ್ವಭಾವವು ಬೇರೆ ಬೇರೆಯಾಗಿದೆ. ಅವರು ಬಹಳ ಕ್ರೂರರು. ಅವರು ತಮ್ಮೊಳಗೆ ಅನ್ಯೋನ್ಯವಾಗಿ ಜಯಿಸಬೇಕೆಂಬ ಇಚ್ಛೆಯಿಂದ ಸ್ಪರ್ಧಿಸುತ್ತಾರೆ.

ಅನಲ್ಪಾರಾಧನಶ್ರೀಕಾ ಬಹುಸೇವಾಭಿಲಾಷಿಣಃ ।
ಛಿದ್ರಾನ್ವೇಷಣಲೋಲಾಕ್ಷಾಃ ಪಕ್ಷಪಾತವಿವರ್ಜಿತಾಃ ॥೫೪॥

ತತ್ಪ್ರಸಾದಾಯ ಯತ್ನೋಽಪಿ ಕರ್ತುಂ ನೈವ ಹಿ ಶಕ್ಯತೇ ।
ತತ್ಪ್ರಸಾದಸ್ವರೂಪಂ ತು ಫಲಂ ಕೇನೋಪಲಭ್ಯತೇ ॥೫೫॥

ಅನಂತಜನ್ಮಭಿಃ ಕ್ಲೇಶಾಃ ಕೇನ ಕಾರ್ಯಾಃ ಪ್ರಯತ್ನತಃ ।
ಕೇನ ವಾ ತತ್ಪ್ರಸಾದೋಽಪಿ ಪ್ರಾಪ್ತವ್ಯಃ ಕ್ಲೇಶಸಾಧಿತಃ ॥೫೬॥

ಕೇನ ಸೂಚ್ಯಗ್ರಮಾರುಹ್ಯ ತಪಃ ಕರ್ತವ್ಯಮಾದರಾತ್ ।
ಕೇನೋಪವಾಸಾಃ ಕರ್ತವ್ಯಾ ಕಾಶೀಪ್ರಾಪ್ತ್ಯೈ ನಿರಂತರಂ ॥೫೭॥

ಕೇನ ಸಂದೀಪ್ತಪಂಚಾಗ್ನಿಜ್ವಾಲಾಸಹ್ಯಾ ಸುದುಃಸಹಾ ।
ಕೇನ ಪರ್ಣಾಶನಂ ಕಾರ್ಯಂ ಕಾಶೀಪ್ರಾಪ್ತ್ಯೈ ನಿರಂತರಂ ॥೫೮॥

ಕೇನಾಧೋಮುಖಮಾಸಾದ್ಯ ಧೂಮಃ ಪೇಯೋಽತಿದುಃಸಹಃ ।
ಕೇನೇಂದ್ರಿಯಜಯಃ ಕಾರ್ಯಃ ಕಾಶೀಪ್ರಾಪ್ತ್ಯೈ ನಿರಂತರಂ ॥೫೯॥

---

ಸಂಖ್ಯೆಯಲ್ಲಿ ಅವರು ಅನೇಕರಿದ್ದಾರೆ. ಮತ್ತು ತುಂಬಾ ಮದೋನ್ಮತ್ತರೂ ಆಗಿರುವರು. ||೫೧-೫೨-೫೩||

ಆ ಕಾಶೀರಕ್ಷಕರು ಅಲ್ಪಸ್ವಲ್ಪ ಸೇವೆಗೆ ತೃಪ್ತಿಪಡಲಾರರು. ಹೆಚ್ಚು ಸೇವೆಯನ್ನು ಅಪೇಕ್ಷಿಸುವವರಾಗಿಯೂ, ಯಾವಾಗಲೂ ಭಕ್ತರ ದೋಷವನ್ನೇ ಹುಡುಕುವವರೂ, ಪಕ್ಷಪಾತವಿಲ್ಲದವರೂ ಆಗಿರುವರು. ಅವರನ್ನು ಸುಮುಖರನ್ನಾಗಿ ಮಾಡಲು ಸಾಧ್ಯವಾಗುವುದಿಲ್ಲ. ಅವರ ಅನುಗ್ರಹವನ್ನು ಸಂಪಾದಿಸಲು ಯಾರಿಗೂ ಶಕ್ಯವಾಗುವುದಿಲ್ಲ. ಏಕೆಂದರೆ ಅನೇಕ ಜನ್ಮಗಳಿಂದಲೂ ತಪಸ್ಸು ಮೊದಲಾದ ಕ್ಲೇಶಕಾರ್ಯಗಳನ್ನು ಆಚರಿಸಿದ್ದರೂ ವಿಶೇಷ ಕಷ್ಟಪಟ್ಟಾದರೂ ಅವರ ಅನುಗ್ರಹವು ಲಭಿಸುವುದು ದುರ್ಲಭ. ಸೂಚಿಯ ಮೊನೆಯ ಮೇಲೆ ನಿಂತುಕೊಂಡು ತಪಸ್ಸನ್ನು ಮಾಡಬೇಕು ಮತ್ತು ಅನೇಕ ಉಪವಾಸ ವ್ರತಗಳನ್ನು ನಡೆಸಬೇಕು. ಹೀಗೆ ಮಾಡಿದರೆ ಕಾಶೀವಾಸವು ಲಭಿಸುವುದು. ||೫೪-೫೫-೫೬-೫೭||

ಚೆನ್ನಾಗಿ ಪ್ರಜ್ವಲಿಸುತ್ತಿರುವ ಪಂಚಾಗ್ನಿ ಮಧ್ಯದಲ್ಲಿದ್ದು ತಪಸ್ಸುಮಾಡಬೇಕು. ಮತ್ತು ಕೇವಲ ಎಲೆಗಳನ್ನು ತಿಂದು ತಪಸ್ಸನ್ನು ಆಚರಿಸಬೇಕು. ಕಾಶೀ

ಕೇನ ಮಿಷ್ಟಾನ್ನಪಾನಾದಿ ತ್ಯಕ್ತ್ವಾ ನಿಃಸ್ಪೃಹವಾದರಾತ್ ।
ಸ್ವಲ್ಪಂ ವಾತಾಶನಂ ಕಾರ್ಯಂ ಕಾಶೀಪ್ರಾಪ್ತ್ಯೈ ನಿರಂತರಂ ॥೬೦॥

ಕೇನಾಗಲಂ ಜಲೇ ಸ್ಥಿತ್ವಾ ಹಿಮಕಾಲೇ ದುರಾಸದೇ ।
ಪಂಚಾಕ್ಷರಜಪಃ ಕಾರ್ಯಃ ಕಾಶೀಪ್ರಾಪ್ತ್ಯೈ ನಿರಂತರಂ ॥೬೧॥

ಕೇನ ಸ್ರಕ್ಚಂದನಶ್ರೇಷ್ಠವನಿತಾಕನಕಾದಯಃ ।
ಅವಿವಾದಂ ಕಥಂ ತ್ಯಾಜ್ಯಾಃ ಕಾಶೀಪ್ರಾಪ್ತ್ಯೈ ನಿರಂತರಂ ॥೬೨॥

ಕೇನ ಮುಕ್ತಾವಳೀ ತ್ಯಾಜ್ಯಾಃ ನಾನಾರತ್ನವಿರಾಜಿತಾ ।
ರುದ್ರಾಕ್ಷಧಾರಣಂ ಕಾರ್ಯಂ ಕಾಶೀಪ್ರಾಪ್ತ್ಯೈ ನಿರಂತರಂ ॥೬೩॥

ಕೇನ ನಾನಾವಿಧಾಃ ಸೌಧಾಃ ತ್ಯಕ್ತಾಃ ಶೃಂಗವಿರಾಜಿತಾಃ ।
ಅರಣ್ಯೇ ವಸತಿಃ ಕಾರ್ಯಾ ಕಾಶೀಪ್ರಾಪ್ತ್ಯೈ ನಿರಂತರಂ ॥೬೪॥

---

ಪ್ರಾಪ್ತಿಗಾಗಿ ತಲೆಕೆಳಗಾಗಿ ಇದ್ದು ಅಗ್ನಿಯ ಹೊಗೆಯನ್ನು ಸೇವಿಸುತ್ತಿರಬೇಕು. ಅಲ್ಲದೇ ತನ್ನ ಇಂದ್ರಿಯಗಳನ್ನು ಗೆಲ್ಲಬೇಕು. ಮಿಷ್ಟಾನ್ನಾದಿಗಳನ್ನು ಬಿಟ್ಟು ಮಿತಾಹಾರವನ್ನು ಸೇವನೆಮಾಡಬೇಕು. ಕೆಲವುಕಾಲ ಕೇವಲ ವಾಯುವನ್ನು ಸೇವಿಸುತ್ತಿರಬೇಕಾಗುತ್ತದೆ. ಹೀಗೆ ನಿಯಮದಿಂದಿರುವವರಿಗೆ ಕಾಶೀಪ್ರಾಪ್ತಿಯುಂಟಾಗುವುದು. ॥೫೮-೫೯-೬೦॥

ಚಳಿಗಾಲದಲ್ಲಿ ಕತ್ತುಮುಳುಗುವಷ್ಟು ನೀರಿನಲ್ಲಿ ನಿಂತುಕೊಂಡು ಪಂಚಾಕ್ಷರೀಜಪವನ್ನು ಮಾಡಬೇಕು. ಮತ್ತು ಹೂಮಾಲೆ, ಚಂದನ, ವನಿತೆ, ಕನಕ ಇತ್ಯಾದಿ ವಿಷಯಸುಖಗಳನ್ನು ಬಿಡಬೇಕು. ಅನೇಕ ರತ್ನಗಳನ್ನು ಮೆಟ್ಟಿರುವ ಮುಕ್ತಾವಳಿ (ಮುತ್ತಿನಹಾರ) ಧಾರಣೆಯನ್ನು ದೂರಮಾಡಬೇಕು. ರುದ್ರಾಕ್ಷಮಾಲೆಯನ್ನು ಧರಿಸಬೇಕು. ಅನೇಕ ಶೃಂಗಾರಗಳಿಂದ ಸಮೃದ್ಧಗಳಾದ ಉಪ್ಪರಿಗೆ ಮನೆಗಳನ್ನು ಬಿಟ್ಟು ಕಾಡಿನಲ್ಲಿ ವಾಸಮಾಡಬೇಕು. ಹೀಗೆ ಮಾಡಿದರೆ ಕಾಶಿಯು ಲಭಿಸುತ್ತದೆ. ಇಷ್ಟು ವೈರಾಗ್ಯದಿಂದ ದುಷ್ಕರವಾದುದನ್ನು ಆಚರಿಸಲು ಯಾರಿಂದ ಸಾಧ್ಯ ? ॥೬೨-೬೩-೬೪॥

ಕೇನ ತ್ಯಕ್ತ್ವಾ ಕಟುಸ್ಪರ್ಶದೃಢನಾರೀಕುಚಾಸನಂ ।
ಕುಶಾಸನಂ ಪರಿಗ್ರಾಹ್ಯಂ ಕಾಶೀಪ್ರಾಪ್ತ್ಯೈ ನಿರಂತರಂ ॥೬೫॥

ಕೇನ ಕಾಂತಾ ಸಮಾಕ್ರಾಂತಾ ಶಯ್ಯಾಂ ತ್ಯಕ್ತ್ವಾ ಮನೋರಮಾಂ ।
ಭಸ್ಮಶಯ್ಯಾ ಪರಿಗ್ರಾಹ್ಯಾ ಕಾಶೀಪ್ರಾಪ್ತ್ಯೈ ನಿರಂತರಂ ॥೬೬॥

ಕಸ್ಯಚಿದ್ಭೂರಿಪುಣ್ಯೇನ ಬಹುಜನ್ಮಾರ್ಜಿತೇನ ಹಿ ।
ಮಹೇಶಾನುಗ್ರಹೇ ಜಾತೇ ಕಾಶೀ ಪ್ರಾಪ್ತಿರ್ಭವಿಷ್ಯತಿ ॥೬೭॥

ನಿರಂತರಂ ಕೃತಾ ಭಕ್ತಿರ್ಯೇನ ಮಯ್ಯನಪಾಯಿನೀ ।
ತೇನ ಕಾಶೀಪುರಂ ಪ್ರಾಪ್ತಂ ನಾನ್ಯೇನ ಶುಭದರ್ಶನಂ ॥೬೮॥

ಯಸ್ಯ ಭಕ್ತಿರ್ದೃಢಾ ನಿತ್ಯಂ ಮಯ್ಯೇವಾಽವ್ಯಭಿಚಾರಿಣೀ ।
ತಸ್ಯೈವ ಕಾಶೀ ಸುಲಭಾ ನಾನ್ಯಸ್ಯ ವರವರ್ಣಿನೀ ॥೬೯॥

ಯಸ್ಯ ಲಿಂಗಾರ್ಚನೇ ಪ್ರೀತಿರ್ಯಸ್ಯ ರುದ್ರಜಪೇ ಮತಿಃ ।
ತಸ್ಯೈವ ಕಾಶೀ ಸುಲಭಾ ಸ ಏವ ಮಮ ಸಮ್ಮತಃ ॥೭೦॥

ಶಿವಕ್ಷೇತ್ರಾಟನಂ ಯೇನ ಬಹುಧಾ ಕೃತಮಾದರಾತ್ ।
ತೇನೈವ ಕಾಶೀಸಂಪ್ರಾಪ್ಯಾ ನಾನ್ಯೇನ ಕಮಲಾನನೇ ॥೭೧॥

---

ಕಠಿನಸ್ಪರ್ಶವಾದ ಕಾಂತೆಯ ಸ್ತನಸೇವನೆಯನ್ನು ಬಿಟ್ಟು ದರ್ಭಾಸನವನ್ನು ಸ್ವೀಕರಿಸಬೇಕು. ಮತ್ತು ಕಾಂತೆಯಿಂದ ಶೋಭಿಸುತ್ತಿರುವ ಶಯನವನ್ನು ದೂರ ಮಾಡಿ ಭಸ್ಮಸ್ಥಂಡಿಲಶಾಯಿಯಾಗಬೇಕು. ಹೀಗೆ ಆಚರಿಸಿ ಅನೇಕ ಜನ್ಮಗಳಿಂದ ಸಂಚಿತವಾದ ಪುಣ್ಯಪ್ರಭಾವದಿಂದ ಶ್ರೀಮಹೇಶ್ವರನ ಅನುಗ್ರಹವನ್ನು ಪಡೆದು ಕಾಶಿಯನ್ನು ಹೊಂದಬಹುದು. ಇಷ್ಟು ದುಷ್ಕರವಾದ ನಿಯಮದಿಂದ ಕಾಶಿಯನ್ನು ಯಾವನು ತಾನೆ ಪ್ರವೇಶಿಸಿಯಾನು ? ಆದರೆ ಯಾವಾಗಲೂ ಅಳಿಯದ ಭಕ್ತಿಯಿಂದ ಮನುಜನು ಪುಣ್ಯಪ್ರದವಾದ ಕಾಶೀಪಟ್ಟಣವನ್ನು ಸುಲಭವಾಗಿ ಹೊಂದಬಲ್ಲನು. ॥೬೫-೬೬-೬೭-೬೮॥

ಯಾವನಿಗೆ ನನ್ನಲ್ಲಿ ದೃಢವಾದ ಭಕ್ತಿ ಇರುವುದೋ, ಅಂತಹವನಿಗೆ ಕಾಶೀ ಪ್ರಾಪ್ತಿಯು ಸುಲಭವಾಗುವುದು. ಎಲೌ ವರವರ್ಣಿನಿಯೇ! ಲಿಂಗಾರ್ಚನೆ, ಮತ್ತು ರುದ್ರಜಪದಲ್ಲಿ ಯಾವನಿಗೆ ಪ್ರೀತಿ ಇರುತ್ತದೆಯೋ, ಅವನಿಗೆ ಕಾಶಿಯು ನಿರಾಯಾಸ

ಶಿವಪೂಜೈವ ಸತತಂ ಕೃತಾ ಯೇನ ಭವಿಷ್ಯತಿ ।
ತೇನೈವ ಕಾಶೀ ಸಂಪ್ರಾಪ್ಯಾ ನಾನ್ಯೇನ ಕಮಲಾನನೇ ॥೨೨॥

ತ್ರಿಪುಂಡ್ರಧಾರಣಂ ಯೇನ ಕೃತಂ ಸ್ಯಾದ್ವಿಧಿಪೂರ್ವಕಂ ।
ತೇನೈವ ಕಾಶೀ ಸಂಪ್ರಾಪ್ಯಾ ನಾನ್ಯೇನ ಕಮಲಾನನೇ ॥೨೩॥

ಕೃತಂ ಯೇನ ಸದಾ ಭಕ್ತ್ಯಾ ಶಿವಕ್ಷೇತ್ರಸ್ಯಮಾರ್ಜನಂ ।
ತೇನೈವ ಕಾಶೀ ಸಂಪ್ರಾಪ್ಯಾ ನಾನ್ಯೇನ ಕಮಲಾನನೇ ॥೨೪॥

ಶಿವಪೂಜಾರ್ಥಮನಿಶಂ ಯೇನ ಬಿಲ್ವಾರ್ಜನಂ ಕೃತಂ ।
ತೇನೈವ ಕಾಶೀ ಸಂಪ್ರಾಪ್ಯಾ ನಾನ್ಯೇನ ಕಮಲಾನನೇ ॥೨೫॥

ಶಿವಸ್ಥಾನಾನಿ ಯೇನೈವ ಕಾರಿತಾನಿ ಕೃತಾನಿ ಚ ।
ತೇನೈವ ಕಾಶೀ ಸಂಪ್ರಾಪ್ಯಾ ನಾನ್ಯೇನ ಕಮಲಾನನೇ ॥೨೬॥

ಶಿವಭಕ್ತ್ಯೈಃ ಸದಾ ಪ್ರೀತಿಃ ಕೃತಾ ಯೇನ ಭವಿಷ್ಯತಿ ।
ತೇನೈವ ಕಾಶೀ ಸಂಪ್ರಾಪ್ಯಾ ನಾನ್ಯೇನ ಕಮಲಾನನೇ ॥೨೭॥

ಯೇನ ಬಿಲ್ವವನಂ ರಮ್ಯಂ ಸಮ್ಯಕ್ಕೃತಮನಾಮಯಂ ।
ತೇನೈವ ಕಾಶೀ ಸಂಪ್ರಾಪ್ಯಾ ನಾನ್ಯೇನ ಕಮಲಾನನೇ ॥೨೮॥

---

ವಾಗಿ ಲಭಿಸುವುದು. ಈಶ್ವರಕ್ಷೇತ್ರಗಳಲ್ಲಿ ಬಹಳವಾಗಿ ಸಂಚಾರಮಾಡಿದವನಿಗೂ ಕಾಶಿಯು ಸಿಕ್ಕುತ್ತದೆ. ಯಾವಾಗಲೂ ಈಶ್ವರಪೂಜೆಯಲ್ಲಿ ಆಸಕ್ತನಾಗಿರುವವನಿಗೂ ಕಾಶೀವಾಸವು ಲಭಿಸುತ್ತದೆ. ॥೧೯-೨೦-೨೧-೨೨॥

ಕಮಲದಂತೆ ಕಣ್ಣುಳ್ಳ ಪ್ರಿಯಳೇ! ಯಾರು ವಿಧಿಯಲ್ಲಿ ಹೇಳಿರುವಂತೆ ಭಸ್ಮತ್ರಿಪುಂಡ್ರಧಾರಣೆಯನ್ನು ಮಾಡುವರೋ, ಮತ್ತು ಯಾವಾಗಲೂ, ಭಕ್ತಿಯಿಂದ ಶಿವಕ್ಷೇತ್ರವನ್ನು ಸಾರಿಸಿ, ಗುಡಿಸಿ ಶುದ್ಧಿಗೊಳಿಸುವರೋ, ಈಶ್ವರ ಪೂಜೆಗಾಗಿ ಪ್ರತಿ ನಿತ್ಯವೂ ಯಾರು ಬಿಲ್ವಪತ್ರೆಗಳನ್ನು ತರುವರೋ, ಅವರು ಕಾಶೀಕ್ಷೇತ್ರವನ್ನು ಅನಾಯಾಸವಾಗಿ ಹೊಂದುವರು. ಇತರರು ಎಂದಿಗೂ ಹೊಂದಲಾರರು. ॥೨೩-೨೪-೨೫॥

ಈಶ್ವರ ದೇವಾಲಯಗಳನ್ನು ಕಟ್ಟಿಸಿದವನೂ, ಈಶ್ವರಭಕ್ತರಲ್ಲಿ ವಿಶೇಷವಾದ ವಿಶ್ವಾಸವನ್ನು ಇಟ್ಟುಕೊಂಡಿರುವನೂ, ಮನೋಹರವಾದ ಬಿಲ್ವವನವನ್ನು ಮಾಡಿಸಿದವನೂ, ಶಿರಸ್ಸು, ಕಂಠ, ಕಿವಿ, ಇವುಗಳಲ್ಲಿ ರುದ್ರಾಕ್ಷಿಯನ್ನು ಧರಿಸಿದವನೂ,

ಯೇನ ಮೂರ್ಧ್ನಿ ಗಲೇ ಕರ್ಣೇ ರುದ್ರಾಕ್ಷಾಃ ಸತತಂ ಧೃತಾಃ ।
ತೇನೈವ ಕಾಶೀ ಸಂಪ್ರಾಪ್ಯಾ ನಾನ್ಯೇನ ಕಮಲಾನನೇ ॥೭೯॥

ರುದ್ರಾಭಿಷೇಕಪಾನೀಯಂ ಯೇನ ಪೀತಂ ಸದಾಮುದಾ ।
ತೇನೈವ ಕಾಶೀ ಸಂಪ್ರಾಪ್ಯಾ ನಾನ್ಯೇನ ಕಮಲಾನನೇ ॥೮೦॥

ಯೇನ ಸಾಂಗಂ ಲಿಂಗದಾನಂ ಕೃತಂ ಸ್ಯಾದ್ಭಕ್ತಿಪೂರ್ವಕಂ ।
ತೇನೈವ ಕಾಶೀ ಸಂಪ್ರಾಪ್ಯಾ ನಾನ್ಯೇನ ಕಮಲಾನನೇ ॥೮೧॥

ಯೇನ ಶೈವಾ ಶಿವಪ್ರೀತ್ಯೈ ಭೋಜಿತಾಃ ಸಾಧುಸಾಧನೈಃ ।
ತೇನೈವ ಕಾಶೀ ಸಂಪ್ರಾಪ್ಯಾ ನಾನ್ಯೇನ ಕಮಲಾನನೇ ॥೮೨॥

ಯೇನ ಪಾರ್ಥಿವಲಿಂಗಾನಿ ಪೂಜಿತಾನ್ಯನಿಶಂ ಮುದಾ ।
ತೇನೈವ ಕಾಶೀ ಸಂಪ್ರಾಪ್ಯಾ ನಾನ್ಯೇನ ಕಮಲಾನನೇ ॥೮೩॥

ಶೈಲಾಶ್ಚೂರ್ಣಯಿತುಂ ಶಕ್ಯಂ ಮಂದರಪ್ರಮುಖಾದೃಢಾಃ ।
ಕದಾಚಿತ್ಕೇನಚಿತ್ಸಮ್ಯಕ್ ಕಾಶೀಂ ಪ್ರಾಪ್ತುಂ ನ ಶಕ್ಯತೇ ॥೮೪॥

ಸದ್ಯಃ ಶೋಷಯಿತುಂ ಶಕ್ಯಃ ನಿಃಶೇಷಮತಿವೇಲಗಾಃ ।
ಕದಾಚಿತ್ಕೇನ ಚಿತ್ಸಮ್ಯಕ್ಕಾಶೀಂ ಪ್ರಾಪ್ತುಂ ನ ಶಕ್ಯತೇ ॥೮೫॥

---

ರುದ್ರಾಭಿಷೇಕ ಮಾಡಿದ ತೀರ್ಥಜಲವನ್ನು ಪ್ರಾಶನಮಾಡಿದವನು, ಇವರೆಲ್ಲರೂ ನಿಜವಾಗಿಯೂ ಕಾಶಿಯನ್ನು ಹೊಂದುವರು. ಇತರರಿಗೆ ಅದು ಎಂದೂ ಲಭಿಸಲಾರದು. ||೭೭-೭೮-೭೯-೮೦||

ಸಾಂಗವಾಗಿ ಶಿವಲಿಂಗಪ್ರದಾನಮಾಡಿದವನೂ, ಅಕ್ಕರೆಯಿಂದ ಶಾಂಭವರಿಗೆ ಭೋಜನ ಮಾಡಿಸಿದವನೂ; ಪಾರ್ಥಿವಲಿಂಗವನ್ನು ಮಾಡಿ ಪೂಜೆಮಾಡಿದವನು, ಇವರು ಕಾಶೀಕ್ಷೇತ್ರವನ್ನು ಸುಲಭವಾಗಿ ಸೇರುವರು. ಮಂದರವೇ ಮೊದಲಾದ ಕಠೋರವಾದ ಪರ್ವತಗಳನ್ನಾದರೂ ಕುಟ್ಟಿ ಚೂರುಚೂರು ಮಾಡಬಹುದು. ಆದರೆ ಕಾಶಿಯನ್ನು ಮಾತ್ರ ಸುಲಭವಾಗಿ ಹೊಂದಲು ಸಾಧ್ಯವಾಗಲಾರದು. ||೮೧-೮೨-೮೩-೮೪||

ಅಪಾರವಾದ ಸಮುದ್ರಗಳನ್ನು ಕೂಡಲೇ ಬತ್ತಿಸಬಹುದು. ಕ್ಷೀರಸಮುದ್ರವೇ ಮೊದಲಾದ ಕಡಲುಗಳನ್ನು ದಾಟಬಹುದು. ಎಲ್ಲಾ ಲೋಕಗಳನ್ನೂ ಒಂದುವೇಳೆ

ಕ್ಷೀರಾಬ್ಧಿಪ್ರಮುಖಾದೀನಾಂ ಪಾರಂ ಕರ್ತುಂ ಹಿ ಶಕ್ಯತೇ ।
ಕದಾಚಿತ್ಕೇನಚಿತ್ಸಮ್ಯಕ್ಕಾಶೀಂ ಪ್ರಾಪ್ತುಂ ನ ಶಕ್ಯತೇ ॥೮೬॥

ವ್ಯತ್ಯಾಸಃ ಸರ್ವಲೋಕಾನಾಂ ಶಕ್ಯತೇ ಕರ್ತುಮೇಕದಾ ।
ತದಾಚಿತ್ಕೇನಚಿತ್ಸಮ್ಯಕ್ಕಾಶೀಂ ಪ್ರಾಪ್ತುಂ ನ ಶಕ್ಯತೇ ॥೮೭॥

ಪ್ರಜ್ವಲದ್ವಹ್ನಿಮಧ್ಯೇ ತು ಶಕ್ಯತೇ ಸ್ಥಾತುಮುನ್ನಹಂ ।
ಕದಾಚಿತ್ಕೇನಚಿತ್ಸಮ್ಯಕ್ಕಾಶೀಂ ಪ್ರಾಪ್ತುಂ ನ ಶಕ್ಯತೇ ॥೮೮॥

ಇಂದುಂ ಕಂದುಕವತ್ಕರ್ತುಂ ಶಕ್ಯತೇ ಭಾನುಮಾನಪಿ ।
ಕದಾಚಿತ್ಕೇನ ಚಿತ್ಸಮ್ಯಕ್ಕಾಶೀಂಪ್ರಾಪ್ತುಂ ನ ಶಕ್ಯತೇ ॥೮೯॥

ಬಹುಧಾ ವಿವಿಧಂ ದ್ರವ್ಯಂ ಬಹುದಾತುಂ ಚ ಶಕ್ಯತೇ ।
ಕದಾಚಿತ್ಕೇನ ಚಿತ್ಸಮ್ಯಕ್ಕಾಶೀಂಪ್ರಾಪ್ತುಂ ನ ಶಕ್ಯತೇ ॥೯೦॥

ಪುರಾ ಕಶ್ಚಿದ್ದ್ವಿಜಾಧೀಶಃ ಶಿವಮೂರ್ತಿರಿತಿಶ್ರುತಃ ।
ಸರ್ವವೇದಾರ್ಥತತ್ವಜ್ಞಃ ಸರ್ವಶಾಸ್ತ್ರವಿಶಾರದಃ ॥೯೧॥

ನೀತಿಮಾನ್ ನಿಪುಣೋ ಮಂತ್ರೀ ಸರ್ವದಾ ಶಿವಪೂಜಕಃ ।
ಅಸಂಖ್ಯಾತಧನಾಧ್ಯಕ್ಷಃ ತುರಂಗಗಜಪಾಲಕಃ ॥೯೨॥

---

ವ್ಯತ್ಯಾಸಮಾಡಬಹುದು. ಆದರೆ ಯಾವನಿಂದಲೂ ಕಾಶಿಯನ್ನು ಸುಲಭವಾಗಿ ಹೊಂದಲು ಸಾಧ್ಯವಾಗಲಾರದು. ||೮೫-೮೬-೮೭||

ಚೆನ್ನಾಗಿ ಉರಿಯುತ್ತಿರುವ ಬೆಂಕಿಯ ಮಧ್ಯದಲ್ಲಿ ನಿಲ್ಲಬಹುದು. ಹೇರಳ ದ್ರವ್ಯವನ್ನು ದಾನಮಾಡಬಹುದು. ಸೂರ್ಯಚಂದ್ರರನ್ನು ಹಿಡಿದು ಚಂಡಿನಂತೆ ಆಟವಾಡಿಸಬಹುದು. ಕಾಶಿಗೆ ಹೋಗಲು ಯಾವನಿಗೂ ಶಂಕರಾನುಗ್ರಹವಿಲ್ಲದೇ ಸಾಧ್ಯವಾಗಲಾರದು. ಇದರಲ್ಲಿ ಒಂದು ಇತಿಹಾಸವುಂಟು. ಕೇಳು. ||೮೮-೮೯-೯೦||

ಹಿಂದೆ ಶಿವಮೂರ್ತಿ ಎಂಬ ಹೆಸರಿನಿಂದ ಪ್ರಸಿದ್ಧನಾದ ಒಬ್ಬ ಬ್ರಾಹ್ಮಣನಿದ್ದನು. ಆತನು ಸಕಲ ವೇದಗಳ ಒಳತತ್ತ್ವಗಳನ್ನು ತಿಳಿದಿದ್ದನು. ಎಲ್ಲಾ ಶಾಸ್ತ್ರಗಳಲ್ಲಿಯೂ ಪಂಡಿತನಾಗಿದ್ದನು. ಸಂಪೂರ್ಣ ನೀತಿಯನ್ನು ಅವನು ಬಲ್ಲನು. ರಹಸ್ಯ ವಿಷಯುಗಳಲ್ಲಿಯೂ, ಸನ್ಮಾರ್ಗಾವಲಂಬನೆಯಲ್ಲಿಯೂ ಅವನಿಗೆ ಅಭಿರುಚಿ

ಪುರಾಣಶ್ರವಣಾಸಕ್ತಃ ಕಾಶೀಮಾಹಾತ್ಮ್ಯಮುತ್ತಮಂ ।
ಶ್ರೋತ್ರಾನಂದಕರಂ ರಮ್ಯಂ ಶುಶ್ರಾವಾಘೌಘನಾಶಕಂ ॥೯೩॥

ತತಃ ಸ ಮನ್ಮಥಾಕಾರೋ ನವಮನ್ಮಥನಿಂದಕಃ ।
ಸ್ವೋಪಾರ್ಜಿತಗಜಾಶ್ವಾದಿಧನಧಾನ್ಯಾದಿಕಂ ಸ್ವಕಂ ॥೯೪॥

ರೂಪಲಾವಣ್ಯಸೌಂದರ್ಯನವಯೌವನದರ್ಪಿತಾಂ ।
ಸ್ವಭಾರ್ಯಾಂ ಚ ವಿಲೋಕ್ಯಾಶು ಬಭಾಷೇ ವಚನಂ ಮುದಾ ॥೯೫॥

॥ ಶಿವಮೂರ್ತಿರುವಾಚ ॥

ಅಯಿ ಭಾರ್ಯೇ ವಚೋ ಮತ್ತಃ ಶೃಣು ಕರ್ಣೈಕಭೂಷಣಂ ।
ಕಾಶೀಕ್ಷೇತ್ರಸ್ಯ ಮಾಹಾತ್ಮ್ಯಂ ಶ್ರುತಮದ್ಯ ಮಯಾಧುನಾ ॥೯೬॥

ದಿವಿ ವಾನ್ಯತ್ರ ವಾ ಲೋಕೇ ಕಾಶೀಸ್ಥಲಸಮಂ ಸ್ಥಲಂ ।
ನ ದೃಷ್ಟಂ ನ ಶ್ರುತಂ ಕ್ವಾಪಿ ನಾಸ್ತಿ ಚೇತಿ ಕಥಾ ಶ್ರುತಾ ॥೯೭॥

---

ಹೆಚ್ಚು. ಆತನು ಯಾವಾಗಲೂ ಶಂಕರನನ್ನು ಪೂಜಿಸುವ ಸ್ವಭಾವದವನಾಗಿದ್ದನು. ಅಲ್ಲದೇ ಹೇರಳವಾದ ಧನವು ಆತನಲ್ಲಿತ್ತು. ಕುದುರೆ ಆನೆಗಳನ್ನೂ ಸಹ ಆತನು ರಕ್ಷಿಸುತ್ತಿದ್ದನು. ಕಾಶೀಮಾಹಾತ್ಮೆಯನ್ನು ಕೇಳುವುದರಲ್ಲಿ ಆತನಿಗೆ ತುಂಬಾ ಆಸಕ್ತಿ. ಆತನು ಒಂದು ಸಾರಿ ಕೇಳುವುದಕ್ಕೆ ಹಿತವಾಗಿಯೂ ಸಮಸ್ತ ಪಾಪಗಳನ್ನು ನಾಶಮಾಡುವುದಾಗಿಯೂ ಇದ್ದ ಕಾಶೀಮಹಿಮೆಯನ್ನು ಕೇಳಿದನು.॥೯೧-೯೨-೯೩॥

ಆತನು ರೂಪದಲ್ಲಿ ಮನ್ಮಥನಿಗೆ ಸಮನಾಗಿ ನೂತನ ಮನ್ಮಥನನ್ನೂ ನಿಂದಿಸತಕ್ಕವನಾಗಿದ್ದನು. ತಾನು ಸಂಪಾದಿಸಿದ ಗಜಾಶ್ವ ಧನಧಾನ್ಯಗಳೇ ಮೊದಲಾದ ಐಶ್ವರ್ಯದಿಂದ ಸಮೃದ್ಧನಾಗಿದ್ದನು. ಆತನ ಹೆಂಡತಿಯು ರೂಪ, ಲಾವಣ್ಯ, ಸೌಂದರ್ಯ ಇವುಗಳಿಂದ ಶೋಭಿತಳಾಗಿದ್ದಳು. ಮತ್ತು ನವಯೌವನದಿಂದ ಗರ್ವಿತಳಾಗಿದ್ದಳು. ಅಂತಹ ತನ್ನ ಭಾರ್ಯೆಯನ್ನು ನೋಡಿ ಶಿವಮೂರ್ತಿಯು ಈರೀತಿ ನುಡಿದನು. ॥೯೪-೯೫॥

ಎಲೌ ! ಪ್ರಿಯಳೇ, ನಾನು ಹೇಳುವ ಕರ್ಣಮನೋಹರವಾದ ಮಾತನ್ನು ಕೇಳು. ನಾನು ಈಗ ಕಾಶೀಕ್ಷೇತ್ರದ ಮಾಹಾತ್ಮ್ಯೆಯನ್ನು ಕೇಳಿದ್ದೇನೆ. ದೇವ ಲೋಕದಲ್ಲಿಯಾಗಲೀ ಅಥವಾ ಬೇರೆ ಕಡೆಯಲ್ಲಿಯಾಗಲೀ ಕಾಶಿಗೆ ಸಮಾನವಾದ

ಬಹುಜನ್ಮತಪಃಸಾಧ್ಯಾ ಕಾಶೀಪ್ರಾಪ್ತಿಃ ಕಿಲಾಮಲಾ ।
ಅಲಭ್ಯಾ ಕಿಲ ಸಾ ಕಾಶೀ ವಿರಿಂಚಿಪ್ರಮುಖೈರಪಿ ॥೯೮॥

ದುರ್ಧರ್ಷಾಃ ಪ್ರಬಲಾ ವೀರಾ ನಾನಾಶಾಸ್ತ್ರಾಸ್ತ್ರಪಾರಗಾಃ ।
ವಿವೃತಾಸ್ಯಾ ಮದೋನ್ಮತ್ತಾಃ ಶ್ರೀಕಾಶೀಪಾಲಕಾಃ ಕಿಲ ॥೯೯॥

ತಾದೃಶಾನಾಂ ಪ್ರಸಾದೇನ ವಿನಾ ಕಾಶೀ ಶಿವಾತ್ಮಿಕಾ ।
ನ ದೃಶ್ಯತೇ ಕಿಲಾಮರ್ತ್ಯೈರ್ಮನುಜೈರ್ದೃಶ್ಯತೇ ಕಥಂ ॥೧೦೦॥

ವಿಶ್ವೇಶ್ವರಾಭಿದಂ ಲಿಂಗಂ ಜ್ಯೋತೀರೂಪಂ ಸನಾತನಂ ।
ವೇದವೇದಾಂತಸಂವೇದ್ಯಂ ಏಕಮಸ್ತೀತಿ ಸಂಶ್ರುತಂ ॥೧೦೧॥

ತಲ್ಲಿಂಗದರ್ಶನಾತ್ಸದ್ಯೋ ಮುಚ್ಯತೇ ಕಿಲ ಪಾತಕೈಃ ।
ತದೇವಾರಾಧ್ಯಮಮಲಂ ಮರ್ತ್ಯೈರ್ದೇವೈಃ ಸುರೈರಪಿ ॥೧೦೨॥

---

ಸ್ಥಳವು ಮತ್ತೊಂದಿಲ್ಲ. ಕಾಶಿಗೆ ಸಮಾನವಾದ ಕ್ಷೇತ್ರವೊಂದನ್ನು ಬೇರೆ ನೋಡಲೂ ಆಗುವುದಿಲ್ಲ. ಮತ್ತು ಕೇಳುವಂತೆಯೂ ಇಲ್ಲ. ಕಾಶಿಯನ್ನು ಹೊಂದಬೇಕಾದರೆ ಅನೇಕ ಜನ್ಮಗಳಿಂದಲೂ ತಪಸ್ಸನ್ನು ಆಚರಿಸಿರಬೇಕು. ಆದುದರಿಂದಲೇ ಬ್ರಹ್ಮನೇ ಮೊದಲಾದವರಿಗೆ ಕಾಶೀ ಪ್ರಾಪ್ತಿಯು ದುರ್ಲಭವಾಗಿದೆ. ॥೯೬-೯೭-೯೮॥

ಆ ಕಾಶೀಕ್ಷೇತ್ರವನ್ನು ಸಂರಕ್ಷಿಸುವವರು ಮಹಾಬಲಶಾಲಿಗಳು. ಮತ್ತು ಅನೇಕ ವಿಧದ ಆಯುಧಗಳನ್ನು ಧರಿಸಿರುವರು. ಅವರನ್ನು ಹೆದರಿಸಲು ಯಾವನಿಗೂ ಶಕ್ಯವಿಲ್ಲ. ಅವರು ವಿಕಾರವಾದ ಮುಖವುಳ್ಳವರು. ಮತ್ತು ಅವರು ಮದಮತ್ತ ರಾಗಿರುವರು. ಇಂತಹವರ ಅನುಗ್ರಹವಿಲ್ಲದೇ ಕಾಶೀಕ್ಷೇತ್ರವನ್ನು ಪ್ರವೇಶಿಸು ವುದಕ್ಕೆ ಸಾಧ್ಯವಿಲ್ಲ. ದೇವತೆಗಳೂ ಕೂಡ ಕಾಶೀಕ್ಷೇತ್ರದ ದರ್ಶನವನ್ನು ಮಾಡ ಲಿಲ್ಲ. ಅಂದಮೇಲೆ ಮನುಷ್ಯರ ಪಾಡೇನು ? ಅಲ್ಲಿ ಜ್ಯೋತಿರ್ಮಯವಾದ ವಿಶ್ವೇಶ್ವರ ನೆಂಬ ಹೆಸರುಳ್ಳ ಒಂದು ಶಿವಲಿಂಗವಿರುತ್ತದೆ. ಅದು ವೇದೋಪನಿಷತ್ತುಗಳಲ್ಲಿ ಪ್ರಸಿದ್ಧಿ ಹೊಂದಿದೆ. ವೇದಾಂತಮಾರ್ಗಗೋಚರವಾಗಿ ಆ ಒಂದು ಶಿವಲಿಂಗವು ಮಾತ್ರ ಭೂಲೋಕದಲ್ಲಿ ಇರುತ್ತದೆಯೆಂದು ಕೇಳಿದ್ದೇನೆ. ॥೯೯-೧೦೦-೧೦೧॥

ಆ ವಿಶ್ವೇಶ್ವರಲಿಂಗದ ದರ್ಶನದಿಂದ ಮನುಜನು ಸಕಲ ಪಾಪಗಳಿಂದಲೂ ಬಿಡುಗಡೆಯನ್ನು ಹೊಂದುವನು. ಆದುದರಿಂದ ಆ ಲಿಂಗವನ್ನು ದೇವತೆಗಳೇ

ತದ್ವಿಶ್ವೇಶ್ವರಮುತ್ಕೃಷ್ಟಮನಾದ್ಯಂತಮನಾಮಯಂ ।
ಲಿಂಗಂ ದ್ರಷ್ಟವ್ಯಮನಘಂ ಯತ್ನೈರ್ನಾನಾವಿಧೈರಪಿ ॥೧೦೩॥

ವಿನಾ ತದ್ದರ್ಶನೈರ್ಲೋಕೇ ಮುಕ್ತಿರತ್ಯಂತದುರ್ಲಭಾ ।
ಲಿಂಗಮೂರ್ತಿರ್ಮಹಾದೇವಃ ತದಾಕಾರೇಣ ತಿಷ್ಠತಿ ॥೧೦೪॥

ಬ್ರಹ್ಮಣಾಪಿ ನ ಸಾ ಕಾಶೀ ಲಭ್ಯತೇ ಕಿಲ ಸರ್ವಥಾ ।
ಕಿಮನ್ಯೈರ್ಮಾದೃಶೈರ್ಮರ್ತ್ಯೈಃ ಕಿಂ ಕರ್ತವ್ಯಮತಃ ಪರಂ ॥೧೦೫॥

ತಪೋಭಿರ್ವಿವಿಧೈರ್ದಾನೈಃ ಯಥಾವಿಧಿಕೃತೈರಪಿ ।
ಕಾಶೀ ನ ಲಭ್ಯತೇ ನೂನಂ ಕಿಂಕರ್ತವ್ಯಮತಃ ಪರಂ ॥೧೦೬॥

ನಾನಾವಿಧಶಿವಕ್ಷೇತ್ರಭ್ರಮಣೇನಾಪಿ ಸರ್ವಥಾ ।
ನ ಲಭ್ಯಾ ಕಿಲ ಸಾ ಕಾಶೀ ಕಿಂಕರ್ತವ್ಯಮತಃ ಪರಂ ॥೧೦೭॥

ಕಾಶೀಪ್ರಾಪ್ತ್ಯರ್ಥಮುದ್ಯುಕ್ತಂ ಪುಮಾಂಸಂ ವಿಘ್ನರಾಶಯಃ ।
ತಿಷ್ಠಂತಿ ಕಿಲ ಸಂಶ್ರಿತ್ಯ ಕಿಂಕರ್ತವ್ಯಮತಃ ಪರಂ ॥೧೦೮॥

---

ಮೊದಲಾದವರು ಅರ್ಚಿಸುವರು. ಆ ವಿಶ್ವೇಶ್ವರಲಿಂಗವು ಉತ್ಕೃಷ್ಟವೂ, ಅನಾದಿಯೂ ನಾಶವಿಲ್ಲದುದೂ ಆಗಿದೆ. ಆದುದರಿಂದ ಪ್ರಯತ್ನಪಟ್ಟಾದರೂ ಆ ಶಿವಲಿಂಗದ ದರ್ಶನವನ್ನು ಪಡೆಯಬೇಕು. ಲೋಕದಲ್ಲಿ ಶ್ರೀವಿಶ್ವೇಶ್ವರಲಿಂಗದ ದರ್ಶನದ ವಿನಾ ಮುಕ್ತಿಯು ದೊರೆಯುವುದು ದುರ್ಲಭ. ಶ್ರೀಶಂಕರನು ಆ ಲಿಂಗಸ್ವರೂಪದಿಂದ ಕಾಶಿಯಲ್ಲಿ ಇರುತ್ತಾನೆ. ॥೧೦೨-೧೦೩-೧೦೪॥

ಬ್ರಹ್ಮನೂ ಕೂಡ ಶಿವಾನುಗ್ರಹವಿಲ್ಲದೇ ಕಾಶಿಯನ್ನು ಹೊಂದಲಾರನು. ಅಂದಮೇಲೆ ಮನುಷ್ಯರಾದ ನಮ್ಮಂತಹವರಿಗೆ ಕಾಶಿಯ ಲಾಭವಾದರೂ ಹೇಗೆ? ಇನ್ನು ಮುಂದೆ ಮಾಡುವುದಾದರೂ ಏನು? ಎಂದು ಯೋಚನೆಯಾಗುತ್ತದೆ. ತಪಸ್ಸು, ನಾನಾವಿಧವಾದ ದಾನ, ಅನೇಕ ತರಹದ ಶಿವಕ್ಷೇತ್ರಗಳ ಸಂಚಾರ, ಇವುಗಳಿಂದ ಕಾಶೀಪ್ರಾಪ್ತಿಯಾಗಲಾರದು. ಆದುದರಿಂದ ಮುಂದೆ ಏನುಮಾಡೋಣ? ॥೧೦೫-೧೦೬-೧೦೭॥

ಕಾಶೀಕ್ಷೇತ್ರಕ್ಕೆ ಪ್ರಯಾಣಮಾಡಬೇಕೆಂದು ಉದ್ಯುಕ್ತನಾದ ಮನುಷ್ಯನಿಗೆ ಅನೇಕ ತೊಂದರೆಗಳು ಬಂದು ಆತನ ಪ್ರಯಾಣವನ್ನು ತಡೆಗಟ್ಟುವುವು. ಇದರಮೇಲೆ

ಕಶ್ಚಿತ್ಕಾಲಾಗ್ನಿಪ್ರಾಕಾರಃ ಕಾಶ್ಯಾಮಂತೇತಿದುಃಸ್ಸಹಃ ।
ತತ್ತಾಪತಪ್ತನಿಕಟೇ ನಯಂತಿ ಕಿಲ ದೇವತಾಃ ॥೧೦೯॥

ಧಿಕ್ ಜನ್ಮ ಮಮ ಧಿಕ್ ಭಾಗ್ಯಂ ಧಿಕ್ ಕಾಂತಂ ನವಯೌವನಂ ।
ಸಾ ಕಾಶೀ ನ ಮಯಾ ಪ್ರಾಪ್ತಾ ಯಾ ಮುಕ್ತಿಫಲದಾಯಿನೀ ॥೧೧೦॥

ಧಿಗೈಶ್ವರ್ಯಂ ಧಿಗೌದಾರ್ಯಂ ಧಿಕ್ ಮನ್ಯೇತದ್ವಪುರ್ನವಂ ।
ಸಾ ಕಾಶೀ ನ ಮಯಾ ಪ್ರಾಪ್ತಾ ಯಾ ಮುಕ್ತಿಫಲದಾಯಿನೀ॥೧೧೧॥

ಧಿಕ್ ಪ್ರಭಾವಂ ಧಿಗೌನ್ನತ್ಯಂ ಧಿಗ್ಯೈತತ್ಸುಂದರಂ ಮುಖಂ ।
ಸಾ ಕಾಶೀ ನ ಮಯಾ ಪ್ರಾಪ್ತಾ ಯಾ ಮುಕ್ತಿಫಲದಾಯಿನೀ॥೧೧೨॥

ಧಿಗೇತಚ್ಚರಣದ್ವಂದ್ವಂ ಕೋಮಲಂ ಕಮಲಾಮಲಂ ।
ಸಾ ಕಾಶೀ ನ ಮಯಾ ಪ್ರಾಪ್ತಾ ಯಾ ಮುಕ್ತಿಫಲದಾಯಿನೀ ॥೧೧೩॥

ಧಿಕ್ ನೇತ್ರಯುಗಳಂ ಧಿಕ್ ಧಿಕ್ ಮನ್ಯೇತತ್ಕರಪಲ್ಲವಂ ।
ಸಾ ಕಾಶೀ ನ ಮಯಾ ಪ್ರಾಪ್ತಾ ಯಾ ಮುಕ್ತಿಫಲದಾಯಿನೀ ॥೧೧೪॥

ಧಿಕ್ ನಾನಾವಿಧರತ್ನಾಢ್ಯಕೋಶಾಗಾರಂ ಮನೋರಮಂ ।
ಸಾ ಕಾಶೀ ನ ಮಯಾ ಪ್ರಾಪ್ತಾ ಯಾ ಮುಕ್ತಿಫಲದಾಯಿನೀ ॥೧೧೫॥

---

ಕಾಶಿಯಲ್ಲಿ ಒಂದು ಅಗ್ನಿಯ ಪ್ರಾಕಾರವಿರುತ್ತದೆ. ದೇವತೆಗಳೆಲ್ಲರೂ ಅದರ ತಾಪದಿಂದ ಬಳಲಿ ಅದರ ಬಳಿಯಲ್ಲಿಯೇ ನಿಲ್ಲುತ್ತಾರೆ. ಹೀಗಿರುವಲ್ಲಿ ಆ ಕಾಶಿಗೆ ಹೋಗುವುದಾದರೂ ಹೇಗೆ? ಮುಂದೆ ಏನುಮಾಡುವುದೆಂಬುದು ತಿಳಿಯದಾಗಿದೆ. ಅಯ್ಯೋ! ಮೋಕ್ಷವನ್ನು ಕೊಡುವ ಕಾಶಿಗೆ ಯಾತ್ರೆ ಮಾಡದಿರುವವನ ಜನ್ಮವೂ, ಭಾಗ್ಯವೂ ವ್ಯರ್ಥವೇ ಅಲ್ಲವೇ! ||೧೦೮-೧೦೯-೧೧೦-೧೧೧||

ಮೋಕ್ಷವನ್ನು ಕೊಡತಕ್ಕ ಕಾಶೀಕ್ಷೇತ್ರವನ್ನು ಹೊಂದದ ಈ ಐಶ್ವರ್ಯ ಪ್ರಭಾವವೂ, ಔನ್ನತ್ಯವೂ, ಸುಂದರವಾದ ಮುಖಾದಿ ಅವಯವಗಳೂ ಮತ್ತು ಕಮಲದಂತಿರುವ ಚರಣದ್ವಯವೂ, ಕಣ್ಣುಗಳೂ ಮತ್ತು ಎಳೆಚಿಗುರಿನಂತಿರುವ ಹಸ್ತಗಳೂ, ಅನೇಕ ವಿಧವಾದ ರತ್ನರಾಶಿಗಳನ್ನು ತುಂಬಿದ ಭಂಡಾರ ಇವೆಲ್ಲವೂ ನನ್ನ ಭಾಗಕ್ಕೆ ನಿಷ್ಪ್ರಯೋಜನವು. ||೧೧೨-೧೧೩-೧೧೪-೧೧೫||

ಧಿಕ್ಚಾತುರ್ಯಂ ಜನಸ್ತವ್ಯಂ ಧಿಕ್ ಮನ್ಯೈತತ್ಕುಲಂ ಬಲಂ ।
ಸಾ ಕಾಶೀ ನ ಮಯಾ ಪ್ರಾಪ್ತಾ ಯಾ ಮುಕ್ತಿಫಲದಾಯಿನೀ ॥೧೧೬॥

ಸ್ವೋದರಂ ಸಾರಮೇಯೋಽಪಿ ಸಂಪೂರಯತಿ ಸರ್ವದಾ ।
ತಚ್ಛರೀರಾನ್ಮಚ್ಛರೀರಂ ನ ವರಂ ನಾರಮೀದೃಶಂ ॥೧೧೭॥

ದುರ್ಲಭಂ ಮಾನುಷಂ ಬ್ರಾಹ್ಮಂ ಜನ್ಮ ಪ್ರಾಪ್ಯಾಪಿ ಶರ್ಮದಂ ।
ಹಾಹಾಹಾಹಾ ಮಯಾ ಕಾಶೀ ನ ಲಬ್ಧಾ ಕಿಂಕರೋಮ್ಯಹಂ॥೧೧೮॥

ಕಿಂ ದುಷ್ಕೃತಂ ಮಯಾ ಪೂರ್ವಂ ಕೃತಂ ಬಹುವಿಧಂ ಮುದಾ ।
ಹಾಹಾಹಾಹಾ ಮಯಾ ಕಾಶೀ ನ ಲಬ್ಧಾ ಕಿಂ ಕರೋಮ್ಯಹಂ॥೧೧೯॥

ಕಿಂ ಭಸ್ಮಧಾರಣಂ ಸಮ್ಯಕ್ ನ ಪುರಾ ಕೃತಮಾದರಾತ್ ।
ಹಾಹಾಹಾಹಾ ಮಯಾ ಕಾಶೀ ನ ಲಬ್ಧಾ ಕಿಂ ಕರೋಮ್ಯಹಂ॥೧೨೦॥

ಕಿಂ ಪೂರ್ವಜನ್ಮನ್ಯನಿಶಂ ರುದ್ರಾಕ್ಷಾ ನ ಧೃತಾಃ ಶುಭಾಃ ।
ಹಾಹಾಹಾಹಾ ಮಯಾ ಕಾಶೀ ನ ಲಬ್ಧಾ ಕಿಂ ಕರೋಮ್ಯಹಂ॥೧೨೧॥

ಕಿಂ ಲಿಂಗಸ್ಫೋಟನಂ ಪೂರ್ವಂ ಕೃತಂ ದುಃಖೈಕಸಾಧನಂ ।
ಹಾಹಾಹಾಹಾ ಮಯಾ ಕಾಶೀ ನ ಲಬ್ಧಾ ಕಿಂ ಕರೋಮ್ಯಹಂ॥೧೨೨॥

---

ಮೋಕ್ಷರೂಪ ಫಲವನ್ನು ಕೊಡುವ ಕಾಶೀಕ್ಷೇತ್ರವನ್ನು ಹೊಂದದಿರುವವನ ಚಾತುರ್ಯ, ಜನಮೆಚ್ಚಿಗೆ ಇವು ಕೂಡ ವ್ಯರ್ಥವು. ನಾಯಿಯೂ ತನ್ನ ಹೊಟ್ಟೆಯನ್ನು ತುಂಬಿಕೊಳ್ಳುವುದು. ನಮ್ಮ ದೇಹಕ್ಕಿಂತ ಆ ಶ್ವಾನದ ಶರೀರವೇ ಉತ್ತಮವೆಂದು ಹೇಳಬಹುದು. ದುರ್ಲಭವಾದ ಮನುಷ್ಯ ಜನ್ಮವನ್ನು ಹೊಂದಿ, ಅದರೊಳಗೆ ಶ್ರೇಷ್ಠವಾದ ಬ್ರಾಹ್ಮಣವರ್ಣದವನಾಗಿ ಕಾಶೀಯಾತ್ರೆಯನ್ನು ಮಾಡದಿರುವುದಕ್ಕಿಂತ ನಾಯಿಯ ಜನ್ಮವೇ ಶ್ರೇಷ್ಠವೆಂದು ತೋರುವುದು. ನಾನು ಪೂರ್ವಜನ್ಮದಲ್ಲಿ ಯಾವ ಕೆಟ್ಟಕೃತ್ಯವನ್ನು ಆಚರಿಸಿದ್ದೆನೋ ಆದರ ಫಲವಾಗಿ ಈಗ ನನಗೆ ಕಾಶೀಪ್ರಾಪ್ತಿಯು ಆಗಲಿಲ್ಲ. ಅಯ್ಯೋ! ನಾನೇನು ಮಾಡಲಿ? ॥೧೧೬-೧೧೭-೧೧೮-೧೧೯॥

ನಾನು ಹಿಂದಿನ ಜನ್ಮದಲ್ಲಿ ಭಸ್ಮಧಾರಣೆಯನ್ನು ಮಾಡಲಿಲ್ಲ. ಮತ್ತು ರುದ್ರಾಕ್ಷವನ್ನು ಧರಿಸಿದವನಲ್ಲ. ವಿಪತ್ತಿಗೆ ಕಾರಣವಾದ ಶಿವಲಿಂಗಸ್ಫೋಟವನ್ನು

ಕಿಂ ವಾ ಶಿವಾಚಾರರತಾಃ ಶೈವಾ ನಾರಾಧಿತಾಃ ಪುರಾ ।
ಹಾಹಾಹಾಹಾ ಮಯಾ ಕಾಶೀ ನ ಲಬ್ಧಾ ಕಿಂ ಕರೋಮ್ಯಹಂ॥೧೨೩॥

ಕಿಂ ವಾ ಶಿವಕ್ಷೇತ್ರಮಧ್ಯೇ ಪುರೀಷಾದಿಕೃತಂ ಮಯಾ ।
ಹಾಹಾಹಾಹಾ ಮಯಾ ಕಾಶೀ ನ ಲಬ್ಧಾ ಕಿಂ ಕರೋಮ್ಯಹಂ॥೧೨೪॥

ಕಿಂ ವಾ ರುದ್ರಜಪೇನೇಶೋ ನಾರಾಧಿ ಗಿರಿಜಾಪತಿಃ ।
ಹಾಹಾಹಾಹಾ ಮಯಾ ಕಾಶೀ ನ ಲಬ್ಧಾ ಕಿಂ ಕರೋಮ್ಯಹಂ॥೧೨೫॥

ಕಿಂ ವಾ ಬಿಲ್ವೀದಳೈರೀಶೋ ನಾರಾಧಿ ಬಹುಧಾ ಶಿವಃ ।
ಹಾಹಾಹಾಹಾ ಮಯಾ ಕಾಶೀ ನ ಲಬ್ಧಾ ಕಿಂ ಕರೋಮ್ಯಹಂ॥೧೨೬॥

ಕಿಂ ವಾ ಶಿವಾಲಯಂ ಭಗ್ನಂ ಶಿವಪ್ರೀತಿಕರಂ ಶುಭಂ ।
ಹಾಹಾಹಾಹಾ ಮಯಾ ಕಾಶೀ ನ ಲಬ್ಧಾ ಕಿಂ ಕರೋಮ್ಯಹಂ॥೧೨೭॥

ಕಿಂ ಗೋಕೋಟಿಸಹಸ್ರಾಣಿ ಸಂಹತಾನಿ ಪುರಾ ಮಯಾ ।
ಹಾಹಾಹಾಹಾ ಮಯಾ ಕಾಶೀ ನ ಲಬ್ಧಾ ಕಿಂ ಕರೋಮ್ಯಹಂ॥೧೨೮॥

---

ಮಾಡಿದೆನೋ! ಏನೋ! ಅಯ್ಯೋ! ಆ ಕಾರಣದಿಂದ ನನಗೆ ಕಾಶಿಯು ಲಭಿಸಲಿಲ್ಲ ವೆಂದು ತೋರುತ್ತದೆ? ಮುಂದೇನುಮಾಡಲಿ? ||೧೨೦-೧೨೧-೧೨೨||

ನಾನು ಪೂರ್ವಜನ್ಮದಲ್ಲಿ ಶಿವಪೂಜಾದಿಗಳಲ್ಲಿ ನಿರತರಾದ ಈಶ್ವರಭಕ್ತರನ್ನು ಗೌರವಿಸಲಿಲ್ಲ. ಮತ್ತು ಎಲ್ಲೋ ಶಿವಕ್ಷೇತ್ರ ಮಧ್ಯದಲ್ಲಿ ಮಲಬಾಧೆಯನ್ನು ತೀರಿಸಿ ರಬೇಕು. ಅಯ್ಯೋ! ಆ ಕಾರಣದಿಂದಲೇ ನನಗೆ ಕಾಶಿಯು ಲಭಿಸದಿರುವುದು. ಈಗ ನಾನೇನು ಮಾಡಲಿ ಎಂದು ಯೋಚನೆಯಾಗಿದೆ. ||೧೨೩-೧೨೪||

ನಾನು ರುದ್ರಜಪವನ್ನು ಮಾಡಲಿಲ್ಲ. ಬಿಲ್ವಪತ್ರೆಗಳಿಂದ ಶಂಕರನಿಗೆ ಅರ್ಚನೆಮಾಡಲಿಲ್ಲ. ನಾನು ಶಿವನಿಗೆ ಪ್ರೀತಿಕರವಾದ ದೇವಾಲಯವನ್ನು ನಾಶ ಮಾಡಿರಬೇಕು. ನಾನು ಹಿಂದಿನ ಜನ್ಮದಲ್ಲಿ ಒಂದು ಕೋಟಿ ಗೋವುಗಳನ್ನು ಹಿಂಸಿಸಿರಬೇಕು. ಆದುದರಿಂದ ಈಗ ನನಗೆ ಕಾಶಿಯ ಪ್ರಾಪ್ತಿಯಾದರೂ ಹೇಗೆ ಉಂಟಾದೀತು? ಅಯ್ಯೋ! ಮುಂದೇನು ಮಾಡಲಿ. ||೧೨೫-೧೨೬-೧೨೭-೧೨೮||

ಕಿಂ ವಾ ಶೈವಃ ಪುರಾ ವಿಪ್ರಃ ಶಿವಲಿಂಗತನುರ್ಹತಃ ।
ಹಾಹಾಹಾಹಾ ಮಯಾ ಕಾಶೀ ನ ಲಬ್ಧಾ ಕಿಂ ಕರೋಮ್ಯಹಂ॥೧೨೯॥

ಕಿಂ ವಾ ಬಿಲ್ವವನಂ ರಮ್ಯಂ ಪುರಾಚ್ಛಿನ್ನಂ ಶಿವಪ್ರಿಯಂ ।
ಹಾಹಾಹಾಹಾ ಮಯಾ ಕಾಶೀ ನ ಲಬ್ಧಾ ಕಿಂ ಕರೋಮ್ಯಹಂ॥೧೩೦॥

ಕಿಂ ವಾ ಬಿಲ್ವದಳೈರೀಶಮನಭ್ಯರ್ಚ್ಯಾನಿಶಂ ಪುರಾ ।
ಹಾಹಾಹಾಹಾ ಮಯಾ ಕಾಶೀ ನ ಲಬ್ಧಾ ಕಿಂ ಕರೋಮ್ಯಹಂ॥೧೩೧॥

ಏವಂ ವಿಲಪ್ಯ ಬಹುಧಾ ಸ ವಿಪ್ರೋ ಗಿರಿಜೇ ತತಃ ।
ಸ್ವಸಂಚಿತಂ ಧನಂ ಸರ್ವಂ ಶೈವೇಭ್ಯಃ ಪ್ರದದೌ ಮುದಾ ॥೧೩೨॥

ತತಃ ಸರ್ವಂ ಪರಿತ್ಯಾಜ್ಯ ಸಭಾರ್ಯಃ ಸ್ವಾರ್ಜಿತಂ ಧನಂ ।
ಜಗಾಮ ಗಹನಂ ರಮ್ಯಂ ಸಬಿಲ್ವತರುಸಂವೃತಂ ॥೧೩೩॥

ತಸ್ಮಿನ್ವನೇ ಜಿತಾಹಾರಃ ಸಭಾರ್ಯೋಽಪಿ ಜಿತೇಂದ್ರಿಯಃ ।
ತಪಸ್ತೇಪೇ ಮಹದ್ಘೋರಂ ಸರ್ವಭೂತಭಯಾಪಹಂ ॥೧೩೪॥

ತೇನೈವ ಕಂಪಿತಾ ದೇವಾಃ ಸರ್ವೇ ಬ್ರಹ್ಮಾದಯಸ್ತದಾ ।
ಚೇಲುಶ್ಚ ಗಿರಯಃ ಸರ್ವೇ ತರವಶ್ಚಾತಿಕಂಪಿತಾಃ ॥೧೩೫॥

---

ಶಿವಸ್ವರೂಪಿಯಾದ ಶಾಂಭವನನ್ನು ನಾನು ಹತಮಾಡಿದೆನೋ ಏನೋ ? ಅಥವಾ ಹಿಂದೆ ರಮಣೀಯವಾದ ಬಿಲ್ವವನವನ್ನು ಕತ್ತರಿಸಿದೆನೋ ? ಚಿಗುರಾದ ಬಿಲ್ವಪತ್ರಗಳಿಂದ ಶಂಕರನನ್ನು ಅರ್ಚಿಸಲಿಲ್ಲವೆ ! ಆದುದರಿಂದಲೇ ನನಗೆ ಕಾಶಿಯು ಪ್ರಾಪ್ತಿಯಾಗಿಲ್ಲ. ಮುಂದೇನು ಮಾಡಲಿ'' ಎಂದು ಆ ಬ್ರಾಹ್ಮಣನು ಬಹುವಾಗಿ ಚಿಂತಿಸಿದನು. ಬಳಿಕ ತಾನು ಸಂಪಾದಿಸಿದ ದ್ರವ್ಯವನ್ನೆಲ್ಲಾ ಶಾಂಭವರಿಗೆ ಈಶ್ವರ ಪ್ರೀತಿಯಾಗಿ ದಾನಮಾಡಿದನು. ॥೨೯-೩೦-೩೧-೩೨॥

ಮತ್ತು ಆ ಬ್ರಾಹ್ಮಣನು ಎಲ್ಲವನ್ನೂ ತ್ಯಜಿಸಿ ತಾನು ಸಂಪಾದಿಸಿದ ಹಣವನ್ನೆಲ್ಲಾ ದಾನಮಾಡಿದನು. ಅನಂತರ ಹೆಂಡತಿಯೊಡಗೂಡಿ, ಬಿಲ್ವಪತ್ರಗಳಿಂದ ರಮ್ಯವಾದ ಒಂದು ಕಾಡನ್ನು ಪ್ರವೇಶಿಸಿದನು. ಆ ಕಾಡಿನಲ್ಲಿ ತಾನು ಜಿತೇಂದ್ರಿಯನಾಗಿ, ಮಿತವಾದ ಆಹಾರವನ್ನು ಸೇವಿಸುತ್ತಾ, ಪತ್ನಿಯೊಡನೆ ಘೋರವಾದ ತಪಸ್ಸನ್ನಾಚರಿಸಿದನು. ಆತನ ತಪಃಪ್ರಭಾವದಿಂದ ದೇವತೆಗಳೂ ಹೆದರಿ ನಡುಗಿ

ಕ್ಷೀರಾಬ್ಧಿಪ್ರಮುಖಾಶ್ಚಾಪಿ ಸಮುದ್ರಾಃ ಕಂಪಿತಾಸ್ತದಾ ।
ವಸುಧಾಪಿ ಚಚಾಲೇಯಂ ಸರಿತ್ಕಾನನಸಂವೃತಾ ॥೩೬॥

ಏವಂ ಘೋರತರಂ ವಿಪ್ರಸ್ತಪಸ್ತಪ್ತುಂ ಸಮಾರಭೇ ।
ಪೂರ್ವಂ ಪೂರ್ವಭವೇಽಪ್ಯೇವಂ ತಪಸ್ತಪ್ತಮನೇನ ಹಿ ॥೩೭॥

ಕೋಟಿಜನ್ಮಾವಧಿ ಪ್ರೀತ್ಯಾ ಕಾಶೀಸಂಪ್ರಾಪ್ತಯೇ ಮುದಾ ।
ತಪೋ ಘೋರತರಂ ತೀವ್ರಂ ಅಯಂ ಕೃತ್ವೈವ ತಿಷ್ಠತಿ ॥೩೮॥

ಈದೃಶಾ ಬಹವೋ ದೇವಿ ಕಾಶೀಪ್ರಾಪ್ತ್ಯರ್ಥಮೇವ ಹಿ ।
ತಪೋ ಘೋರತರಂ ಕೃತ್ವಾ ತಿಷ್ಠಂತಿ ನಿಯತೇಂದ್ರಿಯಾಃ ॥೩೯॥

ಯೇ ಕಾಶೀವಾಸಸಿದ್ಧ್ಯೈ ದೃಢತರನಿಯಮಾಸಕ್ತಚಿತ್ತಾ ವಿವಿಕ್ತಂ
ದೇಶಂ ಸಂಶ್ರಿತ್ಯ ರಮ್ಯಂ ಶಿವಜನಸಹಿತಂ ಬಿಲ್ವವೃಕ್ಷಾಘವೀತಂ ।

---

ದರು. ದೊಡ್ಡ ದೊಡ್ಡ ಪರ್ವತಗಳು ಚಲಿಸಿದವು. ಎಲ್ಲಾ ವೃಕ್ಷಗಳೂ ತಪಿಸಿದವು. ||೧೩೩-೧೩೩-೧೩೫||

ಕ್ಷೀರಸಮುದ್ರವೇ ಮೊದಲಾದ ಸಮುದ್ರಗಳೂ ನಡುಗಿದುವು. ನದೀಕಾಡುಗಳೊಳಗೊಂಡಿರುವ ಭೂಮಿಯೂ ನಡುಗಿತು. ಹೀಗೆ ಆ ಬ್ರಾಹ್ಮಣನು ತೀವ್ರವಾದ ತಪಸ್ಸನ್ನು ಮುಂದುವರಿಸಿದನು. ಪೂರ್ವಜನ್ಮದಲ್ಲಿಯೂ ಈತನು ಹೀಗೆ ತಪಸ್ಸನ್ನು ಮಾಡಿದ್ದನು. ಮುಂದೆ ಕಾಶೀಪ್ರಾಪ್ತಿಗೋಸುಗ ಒಂದು ಕೋಟಿ ಜನ್ಮಗಳೂ ಹೀಗೆಯೇ ತಪಸ್ಸು ಮಾಡಿದನು. ಅತಿ ಘೋರವಾದ ಇಂತಹ ತಪಸ್ಸಿನಿಂದ ನಾನು ಸಂತೋಷಪಟ್ಟಿರುವೆನು. ||೧೩೬-೧೩೭-೧೩೮||

ಎಲೌ ಪಾರ್ವತಿಯೇ ಕೇಳು. ಹೀಗೆ ಅನೇಕರು ಕಾಶಿಯನ್ನು ಹೊಂದುವುದಕ್ಕಾಗಿ ಇಂದ್ರಿಯಗಳನ್ನು ಜಯಿಸಿ ತೀವ್ರವಾದ ತಪಸ್ಸನ್ನು ಈಗಲೂ ಮಾಡುತ್ತಿರುವರು. ||೧೩೯||

ಕಾಶಿಯಲ್ಲಿ ವಾಸಮಾಡಬೇಕೆಂದು ಬಯಸುವವರು ದೃಢತರವಾದ ನಿಯಮವ್ರತಾದಿಗಳನ್ನು ಅನುಷ್ಠಾನಮಾಡುತ್ತಾರೆ. ಅಲ್ಲದೇ ಜನಶೂನ್ಯವಾಗಿಯೂ ರಮಣೀಯವಾಗಿಯೂ ಇರುವ ಬಿಲ್ವವೃಕ್ಷವನಗಳನ್ನು ಆಶ್ರಯಿಸುತ್ತಾರೆ. ಮತ್ತು ಶರೀರಕ್ಕೆ ಸಿತಭಸ್ಮಧಾರಣೆಮಾಡಿಕೊಂಡು ಸಂತೋಷದಿಂದಿರುವರು. ಎಲೌ ಗಿರಿಜೆಯೇ,

**ತಿಷ್ಠಂತ್ಯತ್ಯಂತಹೃಷ್ಟಾ ಧೃತಭಸಿತಕಣಾವಿಷ್ಟದೇಹಾ ಮನೋಜ್ಞಾಃ**
**ತೇ ಧನ್ಯಾಃ ಸತ್ಯಮೇತದ್ಗಿರಿವರತನಯೇ ಸರ್ವಥಾ ಸತ್ಯಮೇವ॥೪೦॥**

**ಇತಿ ಶ್ರೀಶಿವರಹಸ್ಯೇ ಉಗ್ರಾಖ್ಯೇ ಸಪ್ತಮಾಂಶೇ ಕಾಶೀಕ್ಷೇತ್ರ ಮಾಹಾತ್ಮ್ಯ ವರ್ಣನಂ ನಾಮ ತೃತೀಯೋಽಧ್ಯಾಯಃ**

---

ಇಂತಹವರು ಧನ್ಯರೂ, ಸತ್ಯಸಂಧರೂ, ಮನೋಹರಾಕೃತಿಯುಳ್ಳವರೂ ಆಗಿರುವರು. ಎಂದು ಪರಶಿವನು ಪಾರ್ವತಿಗೆ ಕಾಶೀಕ್ಷೇತ್ರ ಮಹಿಮೆಯನ್ನು ವಿಸ್ತಾರವಾಗಿ ತಿಳಿಯ ಪಡಿಸಿದನು. ॥೧೪೦॥

ಇಲ್ಲಿಗೆ ಶ್ರೀಶಿವರಹಸ್ಯದ ಏಳನೆಯ ಅಂಶದಲ್ಲಿ ಕಾಶೀಕ್ಷೇತ್ರ ಪ್ರಾಪ್ತಿವರ್ಣನವೆಂಬ ಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಉಗ್ರಾಖ್ಯೇ

## ಸಪ್ತಮಾಂಶೇ ಪೂರ್ವಾರ್ಧೇ

## ಚತುರ್ಥೋಽಧ್ಯಾಯಃ

॥ ಶ್ರೀಶಿವ ಉವಾಚ ॥

**ಕಥಾಮನ್ಯಾಂ ಪ್ರವಕ್ಷ್ಯೇಽಹಂ ಶೃಣು ಸಾದರಮಂಬಿಕೇ ।**
**ಯತ್ಕಥಾಶ್ರವಣಾದೇವ ಸದ್ಯೋ ಮುಚ್ಯೇತ ಪಾತಕೈಃ ॥೧॥**

**ಶಿವಸ್ಥಾನಾನ್ಯನೇಕಾನಿ ಸಂತಿ ಕಾಶ್ಯಾಂ ವರಾನನೇ ।**
**ತೇಷಾಂ ಸಂಖ್ಯಾ ಮಯಾ ಕರ್ತುಂ ಸಮ್ಯಗೇವ ನ ಶಕ್ಯತೇ ॥೨॥**

**ಕದಾಚಿಚ್ಛಕ್ಯತೇ ಕರ್ತುಂ ಭೂಪಾಂಸುಗಣನಾ ಭುವಿ ।**
**ಕಾಶೀ ಶಿವಸ್ಥಾನಸಂಖ್ಯಾ ಕೇನ ಕಾರ್ಯಾ ವಿಶೇಷತಃ ॥೩॥**

---

## ನಾಲ್ಕನೆಯ ಅಧ್ಯಾಯವು

ಎಲೌ ಅಂಬಿಕೆಯೇ! ಸಮಸ್ತ ಪಾಪಗಳಿಂದಲೂ ಬಿಡುಗಡೆ ಹೊಂದಬಹುದಾದ ಇನ್ನೊಂದು ಕಥೆಯನ್ನು ಹೇಳುವೆನು ಕೇಳು. ಕಾಶೀಕ್ಷೇತ್ರದಲ್ಲಿ ಅನೇಕ ಸ್ಥಳಗಳು ಶಿವನ (ನನ್ನ) ನಿವಾಸಭೂಮಿಗಳಾಗಿರುವುವು. ಆವುಗಳ ಸಂಖ್ಯೆ ಇಷ್ಟೆಂದು ಗಣನೆಮಾಡಲು ನನಗೆ ಶಕ್ಯವಿಲ್ಲವಾಗಿದೆ. ಒಂದುವೇಳೆ ಭೂಮಿಯಲ್ಲಿರುವ ಧೂಳುಗಳನ್ನಾದರೂ ಲೆಕ್ಕಮಾಡಬಹುದು. ಆದರೆ ಕಾಶಿಯಲ್ಲಿರುವ ಶಿವಸ್ಥಾನಗಳನ್ನು ಎಣಿಸಲು ಸಾಧ್ಯವಿಲ್ಲ. ॥೧-೨-೩॥

ಲಿಂಗೋಪರ್ಯಪಿ ಲಿಂಗಾನಿ ಸಂತಿ ಕಾಶ್ಯಾಮನೇಕಧಾ ।
ತಾನಿ ರಮ್ಯಾಣಿ ಲಿಂಗಾನಿ ವಿಚಿತ್ರಫಲದಾನಿ ಚ ॥೪॥

ತಿಲಸ್ಯಾಪಿ ಚ ಸೂಕ್ಷ್ಮಸ್ಯ ಸಾವಕಾಶತಯಾ ಸ್ಥಿತಿಃ ।
ನ ದೃಶ್ಯತೇ ಮಯಾ ಕಾಶ್ಯಾಂ ಲಿಂಗಂ ಸಂಮರ್ದತಃ ಶುಭೇ ॥೫॥

ಮಮ ದಿವ್ಯಾ ತನುಃ ಕಾಶೀ ಸರ್ವಾ ಯದ್ಯಪಿ ಸರ್ವದಾ ।
ತಥಾಪ್ಯಂತರ್ಗೃಹಾಕಾರಾ ಮಮಾಂತಸ್ತನುರುತ್ತಮಾ ॥೬॥

ಅಂತರ್ಗೃಹಸ್ಯ ಪ್ರಾಕಾರಃ ಕಾಶ್ಮೀರಮಣಿರಂಜಿತಃ ।
ಸ ಚೇದಾನೀಮಪಿ ಸ್ಪಷ್ಟಂ ಜವೇನೋರ್ಧ್ವಂ ಪ್ರಯಾತಿ ಹಿ ॥೭॥

ತನ್ಮೂಲಮಂತರ್ಭಾಗೋ ವಾ ನ ಕೇನಾಪಿ ಚ ದೃಶ್ಯತೇ ।
ತತ್ಪ್ರಾಕಾರಪ್ರಭಾಪೂರೈರ್ದಿಶಃ ಸರ್ವಾಪಿ ಭೂಷಿತಾಃ ॥೮॥

ನಾನಾವಿಧಾನೇಕದಿವ್ಯರತ್ನರಾಜಿವಿರಾಜಿತಂ ।
ತದೇವಾಂತರ್ಗೃಹಂ ರಮ್ಯಂ ಮಮ ಪ್ರಿಯತರಂ ವರಂ ॥೯॥

---

ಕಾಶಿಯಲ್ಲಿ ಮನೋಹರಗಳಾಗಿಯೂ, ಆಶ್ಚರ್ಯಜನಕಗಳಾಗಿಯೂ ಇರುವ ಶಿವಲಿಂಗಗಳು ಒಂದರಮೇಲೊಂದರಂತೆ ಹೇರಳವಾಗಿಯೂ ನಿಬಿಡವಾಗಿಯೂ ಇರುವುವು. ಅವು ಭಕ್ತರ ಸಕಲ ಇಷ್ಟಾರ್ಥಗಳನ್ನು ನೆರವೇರಿಸುತ್ತವೆ. ಅತಿ ಸೂಕ್ಷ್ಮವಾದ ಎಳ್ಳನ್ನು ರಾಶಿಹಾಕಿದರೂ ಸ್ವಲ್ಪವಾದರೂ ಅವಕಾಶ ದೊರೆಯುಬಹುದು. ಶಿವಲಿಂಗಗಳು ಕಾಶಿಯಲ್ಲಿ ಸಾಂದ್ರವಾಗಿರುವುದರಿಂದ ರಂಧ್ರವೇ ಕಂಡುಬರುವುದಿಲ್ಲ. ಮನೋಹರವಾದ ಕಾಶಿಯೇ ನನ್ನ ಶರೀರವಾಗಿದೆ. ಆದರೂ ಅಲ್ಲಿ ಒಂದು ಅಂತರ್ಗೃಹವಿರುತ್ತದೆ. ಆ ಅಂತರ್ಗೃಹದಲ್ಲಿ ಉಜ್ವಲವಾದ ನನ್ನ ಅಂತಃ ಶರೀರವೂ ಇರುವುದು. ಆ ಒಳಮನೆಗೆ ಹಾಕಿರುವ ಪ್ರಾಕಾರಗಳು ಕಾಶ್ಮೀರಮಣಿಗಳಿಂದ ರಂಜಿತವಾಗಿವೆ. ಅವು ಈಗಲೂ ಊರ್ಧ್ವಲೋಕವನ್ನು ವೇಗದಿಂದ ಮುಟ್ಟುವಂತಿವೆ. ॥೪-೫-೬-೭॥

ಆ ಒಳಮನೆಯ ಮೂಲಭಾಗವಾಗಲೀ ಅಗ್ರಭಾಗವಾಗಲೀ ಯಾರ ಕಣ್ಣಿಗೂ ಗೋಚರಿಸದ ಹಾಗಿದೆ. ಆ ಅಂತರ್ಗೃಹದ ಪ್ರಾಕಾರದ ಹೊಳಪುಗಳಿಂದ ದಿಕ್ಕುಗಳೆಲ್ಲಾ ಬೆಳಗುತ್ತಿವೆ. ಬಗೆಬಗೆಯ ರತ್ನಗಳಿಂದ ಅದು ಕಂಗೊಳಿಸುತ್ತಿದೆ.

ತಸ್ಮಿನ್ನಂತರ್ಗೃಹೇ ರಮ್ಯೇ ನಿವಸಾಮ್ಯನಿಶಂ ಶುಭೇ ।
ನ ತತ್ರ ವಸತಿರ್ನಿತ್ಯಂ ಬ್ರಹ್ಮಾದೀನಾಮಪಿ ಸ್ಫುಟಂ ॥೧೦॥

ಗಂಧರ್ವಾಣಾಂ ಮನುಷ್ಯಾಣಾಂ ಮುನೀನಾಮಪಿ ಕಿಂ ಪುನಃ ।
ರಾಗದ್ವೇಷಾದಿನಿಲಯಾ ಯತಸ್ತೇ ದುಷ್ಟವಿಗ್ರಹಾಃ ॥೧೧॥

ಸರ್ವಥಾಂತರ್ಗೃಹೇ ವಾಸೋ ನ ಕರ್ತವ್ಯಃ ಶರೀರಿಭಿಃ ।
ಯತೋ ಮೂತ್ರಪುರೀಷಾದಿನಿರೋದ್ಧುಂ ನೈವ ಶಕ್ಯತೇ ॥೧೨॥

ಪ್ರಮಾದಾದ್ಯದಿ ಮೋಹಾದ್ವಾ ಮೂತ್ರೋತ್ಸರ್ಗಂ ಕರೋತಿ ಯಃ ।
ಅಂತರ್ಗೃಹೇ ಸ ಪಾಪಿಷ್ಠೋ ಘೋರಾಂ ಪ್ರಾಪ್ನೋತಿ ಯಾತನಾಂ ॥೧೩॥

ಕಿಂ ಚ ತತ್ಕುಲಜಾಃ ಸ್ವಸ್ವಧರ್ಮೇಣೋತ್ತಮಲೋಕಗಾಃ ।
ನೀಯಂತೇ ನರಕಂ ಘೋರಂ ಸರ್ವೇಽಪಿ ಯಮಕಿಂಕರೈಃ ॥೧೪॥

ನರಕೇಷ್ವಪಿ ಘೋರೇಷು ಪಚ್ಯಮಾನಾ ದಿವಾನಿಶಂ ।
ತಿಷ್ಠಂತಿ ಪುನರಾವೃತ್ತಿದುರ್ಲಭಾ ನರಕಾಲಯೇ ॥೧೫॥

---

ಆ ಒಳಮನೆಯು ರಮಣೀಯವಾಗಿದೆ. ಆದುದರಿಂದ ಅದು ನನಗೆ ಪ್ರೀತ್ಯಾಸ್ಪದವಾಗಿದೆ. ಆ ಒಳಮನೆಯಲ್ಲಿ ನಾನು ವಾಸಿಸುತ್ತೇನೆ. ಅದರಿಂದ ಅಲ್ಲಿ ಬ್ರಹ್ಮಾದಿಗಳಿಗೂ ವಾಸಿಸಲು ಶಕ್ಯವಿಲ್ಲವಾಗಿದೆ. ||೮-೯-೧೦||

ಗಂಧರ್ವರು, ಮನುಷ್ಯರು, ಮುನಿಗಳು ಇವರಿಗೆ ಆ ಅಂತರ್ಗೃಹದಲ್ಲಿ ವಾಸಿಸಲು ಶಕ್ಯವಿಲ್ಲ. ಏಕೆಂದರೆ ಅವರು ದ್ವೇಷಾಸೂಯೆಗಳಿಂದ ಕೂಡಿರುತ್ತಾರೆ. ಶರೀರವನ್ನು ಧರಿಸಿರತಕ್ಕ ಮಾನವಾದಿಗಳಿಗೆ ಖಂಡಿತವಾಗಿಯೂ ಅಂತರ್ಗೃಹದಲ್ಲಿ ಇರಲು ಅರ್ಹತೆ ಇಲ್ಲ. ಮಲಮೂತ್ರಾದಿಗಳನ್ನು ನಿರೋಧಿಸಬಲ್ಲವರಿಗೆ ಮಾತ್ರ ಅಲ್ಲಿ ವಾಸಿಸುವುದಕ್ಕೆ ಅನುಕೂಲ. ಮೋಹದಿಂದಾಗಲೀ, ಪ್ರಮಾದದಿಂದಾಗಲೀ, ಮೂತ್ರೋತ್ಸರ್ಗಾದಿಗಳನ್ನು ಅಲ್ಲಿ ಮಾಡಿದವನು ಪಾಪಿಯೆನಿಸುವನು. ಅಲ್ಲದೇ ಘೋರವಾದ ಯಾತನೆಯನ್ನೂ ಹೊಂದುವನು. ||೧೧-೧೩||

ಮತ್ತು ಆ ಅಂತರ್ಗೃಹವನ್ನು ಅಶುಚಿಯನ್ನಾಗಿ ಮಾಡಿದವರು ತಮ್ಮ ಧರ್ಮಗಳ ಬಲದಿಂದ ಉತ್ತಮವಾದ ಲೋಕವನ್ನು ಹೊಂದುವವರಾದರೂ ಅವರು ಶೀಘ್ರವಾದ ನರಕವನ್ನು ಸೇರುತ್ತಾರೆ. ಯಮಕಿಂಕರರು ಹಗಲೂ ರಾತ್ರಿಯೂ

ದುಃಸಹಂ ಕೈಶ್ಚಿದನಿಶಂ ತ್ರಾಸ್ಯಂತೇ ಕೈಶ್ಚಿದುದ್ಭಟೈಃ ।
ಸ್ವಾದ್ಯಂತೇ ತಪ್ತಶೂಲಾಗ್ರೇ ನಿಪಾತ್ಯಂತೇ ಮುಹುರ್ಮುಹುಃ ॥೧೬॥

ಸಂತಪ್ತವಾಲುಕಾಮಧ್ಯೇ ಭರ್ಜ್ಯಂತೇ ನಿರ್ಭಯಂ ಭಟೈಃ ।
ತತಸ್ತಪ್ತಾಯಸೈಃ ಪಿಂಡೈರ್ನಿಪೀಡ್ಯಂತೇ ದುರಾಸದೈಃ ॥೧೭॥

ತತಸ್ತಪ್ತಶಿಲಾಗ್ರೇಷು ನಿಪೀಡ್ಯಂತೇ ಭಟೈರ್ಮುದಾ ।
ಸಂತಪ್ತತೈಲಮಧ್ಯೇಽಪಿ ನಿಕ್ಷಿಪ್ಯಂತೇ ಪುನಃ ಪುನಃ ॥೧೮॥

ಪುನಃ ಸಂತಪ್ತರುಧಿರಂ ಪಾಯಯಂತ್ಯತಿಸಾಹಸಾಃ ।
ತಪ್ತಮೂತ್ರಂ ಪಾಯಯಂತಿ ಬಹುಧಾ ತೀವ್ರಮುದ್ಧತಾಃ ॥೧೯॥

ತಪ್ತಶೂಲೇ ಪ್ರೋಥಯಿತ್ವಾ ಭ್ರಾಮಯಂತಿ ಪುನಃಪುನಃ ।
ಈದೃಶಾನ್ಯತಿಘೋರಾಣಿ ಭುಜ್ಯಂತೇ ನರಕಾನಿ ತೈಃ ॥೨೦॥

ಪುರಾ ಕಶ್ಚಿದ್ದ್ವಿಜವರೋ ವೇದವೇದಾಂಗಪಾರಗಃ ।
ಪೂರ್ವಾರ್ಜಿತೈಃ ಪೂರ್ವಪುಣ್ಯೈಃ ಕಾಶೀಂ ಸಂಪ್ರಾಪ್ಯ ಸಂಸ್ಥಿತಃ ॥೨೧॥

---

ಭಯಂಕರವಾದ ಅಗ್ನಿಕುಂಡದಲ್ಲಿ ಕೆಡವಿ ಬೇಯಿಸುವರು. ಅವರಿಗೆ ಪುನಃ ಜನ್ಮವಿಲ್ಲದೇ ಯಾವಾಗಲೂ ಭಯಂಕರವಾದ ಯಾತನೆಯನ್ನು ಅನುಭವಿಸುತ್ತಿರುವರು. ಮತ್ತು ಸಹಿಸಲಾಗದ ಕಷ್ಟಗಳನ್ನು ಸಹಿಸಬೇಕಾಗುತ್ತದೆ. ಅತಿ ಕ್ರೂರರಾದ ಯಮಭಟರೊಳಗೆ ಕೆಲವರು ಶೂಲಾದ್ಯಾಯುಧಗಳಿಂದ ತಿವಿಯುತ್ತಾರೆ. ಮತ್ತು ಕೆಲವರು ಶೂಲಾಗ್ರದಿಂದ ಚುಚ್ಚಿ ಅವರ ಮಾಂಸಗಳನ್ನು ಭಕ್ಷಿಸುವರು. ||೧೩-೧೪-೧೫-೧೬||

ಮತ್ತು ಚನ್ನಾಗಿ ಕಾದಿರುವ ಮರಳು ರಾಶಿಯ ಮಧ್ಯದಲ್ಲಿ ನಿಲ್ಲಿಸುವರು. ಆ ಯಮಭಟರು ಕಾದಕಬ್ಬಿಣದ ಗುಂಡಿನಿಂದ ಅವರನ್ನು ಪೀಡಿಸುವರು. ಕಾದಕಲ್ಲು ಬಂಡೆಯಮೇಲೆ ಮಲಗಿಸಿ ಹಿಂಸಿಸುವರು. ಕಾದ ಎಣ್ಣೆಯ ಮಧ್ಯಕ್ಕೆ ಎಸೆಯುತ್ತಾರೆ. ಅಲ್ಲದೆ ಸಾಹಸಪಟ್ಟು ಕಾದ ರಕ್ತವನ್ನು ಕುಡಿಸುವರು. ಮತ್ತು ತಪ್ತವಾದ ಮೂತ್ರವನ್ನು ಕುಡಿಸುತ್ತಾರೆ. ||೧೭-೧೮-೧೯||

ಕಾದಕಬ್ಬಿಣದ ಶೂಲದಲ್ಲಿ ಅವರನ್ನು ಪೋಣಿಸಿ ತಿರುಗಿಸುತ್ತಾರೆ. ಆ ಅಂತಗೃಹವನ್ನು ಅಶುಚಿಯನ್ನಾಗಿ ಮಾಡಿದವರು ನಾನಾ ವಿಧವಾದ ನರಕಯಾತನೆಯನ್ನು ಅನುಭವಿಸುವರು. ಹಿಂದೆ ಒಬ್ಬ ಬ್ರಾಹ್ಮಣನಿದ್ದನು. ಆತನು ವೇದಶಾಸ್ತ್ರ

ಅಂತರ್ಗೃಹಾದ್ಬಹಿರ್ದೇಶೇ ಸ್ಥಿತ್ವಾ ನಿಯತಮಾಶ್ರಿತಃ ।
ಕೃತ್ವಾ ದಾನಾನ್ಯನೇಕಾನಿ ತಪಃ ಕೃತ್ವಾತಿದುಃಸಹಂ ॥೨೨॥

ಜಲಮಾತ್ರಾಶನೋ ನಿತ್ಯಂ ನಿಯತೋ ನಿಯತೇಂದ್ರಿಯಃ ।
ಪ್ರದಕ್ಷಿಣತ್ರಯಂ ಕೃತ್ವಾ ನಿತ್ಯಮಂತರ್ಗೃಹಸ್ಯ ಸಃ ॥೨೩॥

ಪ್ರತ್ಯಹಂ ಬಿಲ್ವಪತ್ರೈರ್ಮಾಂ ಲಿಂಗರೂಪಿಣಮರ್ಚಯನ್ ।
ವರ್ಷಾಣಾಮಯುತಂ ತಸ್ಥೌ ಜ್ವಲದ್ವಹ್ನಿರಿವಾನಿಶಂ ॥೨೪॥

ತತಃ ಕದಾಚಿನ್ಮೋಹೇನ ನಿಯತೋಽಪಿ ದ್ವಿಜೋತ್ತಮಃ ।
ಚಕಾರಾಂತರ್ಗೃಹೇ ಶೈವೇ ಮೂತ್ರೋತ್ಸರ್ಗಂ ಶುಭಾವಹೇ ॥೨೫॥

ತತಃ ಸ ನಿಲಯಂ ಪ್ರಾಪ್ಯ ಸ್ವಕೀಯಂ ದ್ವಿಜಪುಂಗವಃ ।
ಅಂತರ್ಗೃಹೇ ಕೃತಂ ಸ್ವಸ್ಯ ಮೂತ್ರೋತ್ಸರ್ಗಂ ಸ್ಮರನ್ಮುಹಃ ॥೨೬॥

---

ಗಳನ್ನು ಚನ್ನಾಗಿ ಬಲ್ಲವನಾಗಿದ್ದನು. ಆತನು ತನ್ನ ಪೂರ್ವಾರ್ಜಿತ ಪುಣ್ಯದಿಂದ ಕಾಶಿಯನ್ನು ಹೊಂದಿದನು. ಅವನು ಕಾಶಿಯಲ್ಲಿರುವ ಅಂತರ್ಗೃಹದ ಹೊರಬಾಗಲಿನಲ್ಲಿ ಇದ್ದುಕೊಂಡು ಬಗೆಬಗೆಯ ದಾನಗಳನ್ನೂ, ತಪಸ್ಸುಗಳನ್ನೂ ಆಚರಿಸಿದನು. ||೨೦-೨೧-೨೨||

ಆತನು ಪ್ರತಿ ದಿನವೂ ಕೇವಲ ಜಲವನ್ನು ಮಾತ್ರ ಪ್ರಾಶನಮಾಡುತ್ತಿದ್ದನು. ನಿತ್ಯವೂ ಜಿತೇಂದ್ರಿಯನಾಗಿದ್ದನಲ್ಲದೇ ಆ ಒಳಮನೆಗೆ ಪ್ರದಕ್ಷಿಣ ನಮಸ್ಕಾರವನ್ನು ತಪ್ಪದೆ ಮಾಡುತ್ತಿದ್ದನು. ಅವನು ಬಿಲ್ವಪತ್ರೆಗಳಿಂದ ಲಿಂಗಸ್ವರೂಪಿಯಾದ ನನ್ನನ್ನು ಅರ್ಚಿಸುತ್ತ ಹತ್ತು ಸಾವಿರ ವರ್ಷಗಳು ಅಲ್ಲಿ ವಾಸಮಾಡಿದನು. ಆಗ ತಪಸ್ಸಿನ ಮಾಹಾತ್ಮ್ಯೆಯಿಂದ ಜ್ವಲಿಸುತ್ತಿರುವ ಅಗ್ನಿಯಂತೆ ಕಾಣುತ್ತಿದ್ದನು. ಆತನು ಒಂದುಬಾರಿ ಅಜ್ಞಾನವಶಾತ್ ಶಿವನ ಅಂತರ್ಗೃಹದಲ್ಲಿ ಮೂತ್ರೋತ್ಸರ್ಗವನ್ನು ಮಾಡಿದನು. ||೨೩-೨೪-೨೫||

ಬಳಿಕ ಆ ಬ್ರಾಹ್ಮಣ ಶ್ರೇಷ್ಠನು ತನ್ನ ಮನೆಗೆ ಬಂದು ತಾನು ಅಂತರ್ಗೃಹದಲ್ಲಿ ಮಾಡಿದ ಮೈಲಿಗೆ ಕೆಲಸವನ್ನು ನೆನೆಸಿಕೊಂಡು ತುಂಬಾ ರೋದಿಸಿದನು. ತನ್ನ ದೇಹವನ್ನು ತಾನೇ ದಂಡಿಸಿಕೊಂಡನು. ಮತ್ತು ಭೂಮಿಯಲ್ಲಿ ಬಿದ್ದು

ರುರೋದೋಚ್ಚೈಃ ಸ್ವಕಂ ದೇಹಂ ಸ್ವಯಮೇವಹಿತಾಡಯನ್ ।
ಭೂಮೌ ಪತಿತ್ವಾ ವಿಲುಠನ್ ಶಿರಸ್ಸಂತಾಡಯನ್ಮುಹುಃ ॥೨೭॥

ತತ್ಪರ್ಣಶಾಲಾನಿಕಟಾವಾಸಿನೋಽನ್ಯೇ ಮುನೀಶ್ವರಾಃ ।
ಶ್ರುತ್ವಾ ತದ್ರೋದನಂ ಸರ್ವೇ ಕಿಮಾಸೀದಿತಿ ಚೋಚಿರೇ ॥೨೮॥

ಪೃಷ್ಟಸ್ತೈಃ ಸ ರುದನ್ನುಚ್ಚೈರ್ನರಕಾವಾಸಸಾಧನಂ ।
ಸ್ವಕೃತಂ ಪಾಪಜಂ ಕರ್ಮ ತೇಭ್ಯಃ ಸಮ್ಯಕ್ ನಿವೇದಯತ್ ॥೨೯॥

ತತಸ್ತೇ ಶ್ರುತಿತತ್ವಜ್ಞಾಃ ಶ್ರುತ್ವಾ ವಾಚಮುರುಂತುದಾಂ ।
ಹಾ ಹಾ ಹಾ ಹೇತಿ ರುರುದುಃ ನಿಭೃತಂ ತಾಡಿತಾ ಇವ ॥೩೦॥

ತತಃ ಸ ವಿನಯಾನ್ನತ್ವಾ ತಾನೇವ ಋಷಿಸತ್ತಮಾನ್ ।
ಪ್ರಾಯಶ್ಚಿತ್ತಂ ಯಯಾಚೇದಂ ಸ್ವಕೃತಾಘೌಘನಾಶನಂ ॥೩೧॥

ತೇ ವೇದಾನಖಿಲಾನ್ ಸಮ್ಯಕ್ ಆಲೋಡ್ಯಾಪಿ ಪುನಃ ಪುನಃ ।
ತತ್ಪಾಪನಾಶಕಂ ಸಮ್ಯಕ್ ಪ್ರಾಯಶ್ಚಿತ್ತಂ ನ ಸಂಜಗುಃ ॥೩೨॥

---

ತನ್ನ ತಲೆಯನ್ನು ಚಚ್ಚಿಕೊಂಡು ಅತ್ತನು. ಆಗ ಆತನ ಪರ್ಣಶಾಲೆಯ ಸಮೀಪದಲ್ಲಿರುವ ಋಷಿಗಳೆಲ್ಲರೂ ಆತನ ರೋದನವನ್ನು ಕೇಳಿ ಏನಾಯಿತೆಂದು ಕೇಳಿದರು. ॥೨೬-೨೭-೨೮॥

ಆ ಮುನಿಗಳು ಏತಕ್ಕೆ ಅಳುತ್ತೀಯೆಂದು ಕೇಳಿದ ಮೇಲೆ ಆ ಬ್ರಾಹ್ಮಣನು ನರಕಕ್ಕೆ ಸಾಧನವಾದ ತನ್ನ ಪಾಪಕರ್ಮವನ್ನು ಅವರಿಗೆ ನಿವೇದಿಸಿದನು. ಬಳಿಕ ತತ್ವಜ್ಞಾನಿಗಳಾದ ಆ ಮುನಿಗಳು ತೀಕ್ಷ್ಣವಾದ ಆ ಮಾತನ್ನು ಕೇಳಿ ಅಯ್ಯೋ! ಎಂದು ದುಃಖಿಸಿದರು. ॥೨೯-೩೦॥

ಬಳಿಕ ವಿನಯದಿಂದ ಕೂಡಿ ಆತನು ಆ ಋಷಿಗಳನ್ನು ಕುರಿತು ಇದಕ್ಕೆ ಪ್ರಾಯಶ್ಚಿತ್ತವೇನೆಂದು ಕೇಳಿದನು. ಅವರು ಸಮಸ್ತ ವೇದಶಾಸ್ತ್ರಗಳನ್ನು ಆಲೋಚನೆಮಾಡಿ, ಚರ್ಚಿಸಿ ಬಳಿಕ ಇದಕ್ಕೆ ಪ್ರಾಯಶ್ಚಿತ್ತವೇ ಇಲ್ಲವೆಂದರು. ॥೩೧-೩೨॥

ರೇ ವಿಪ್ರ ದುರ್ಮತೇ ದುಷ್ಟ ಮಹತ್ಪಾಪಂ ತ್ವಯಾ ಕೃತಂ ।
ನ ಚಾಸ್ಯ ನಿಷ್ಕೃತಿರ್ದೃಷ್ಟಾ ಸರ್ವವೇದೇಷು ಸರ್ವಥಾ ॥೩೩॥

ಬಹುಕಾಲಂ ತಪಃ ಕೃತ್ವಾ ಧರ್ಮೋಽಯಃ ಸಾಧಿತಸ್ತ್ವಯಾ ।
ಸೋಽಪಿ ನಷ್ಟಃ ಕ್ಷಣೇನೈವ ತತ್ಪಾಪೇನ ಬಲೇನಹಿ ॥೩೪॥

ಯೋ ಯೋ ಧರ್ಮಸ್ತ್ವಯಾ ಸಮ್ಯಕ್ಸಾಧಿತಾಃ ಪೂರ್ವಮಾದರಾತ್ ।
ತೇಽಪಿ ದುಃಖಾರ್ಜಿತಾ ಧರ್ಮಾ ನಷ್ಟಾ ಏವ ನ ಸಂಶಯಃ ॥೩೫॥

ನಾಸ್ತ್ಯೇವ ಶರಣಂ ವಿಪ್ರ ತವೇದೃಕ್ತಾಪಕಾರಿಣಃ ।
ಯಾಮ್ಯಾಯಾಃ ಕಿಂಕರಾಃ ಸರ್ವೇ ನೃತ್ಯಂ ಕುರ್ವಂತಿ ಸಾಹಸಾಃ ॥೩೬॥

ಪುರಾ ಯೇ ತರ್ಜಿತಾಃ ಸಮ್ಯಕ್ ತ್ವಯಾ ತೇ ಯಮಕಿಂಕರಾಃ ।
ನೃತ್ಯಂತ್ಯತೀವ ಸಂತುಷ್ಟಾಶ್ಶೂಲಮುದ್ಗರಪಾಣಯಃ ॥೩೭॥

ಬಹುಕ್ಲೇಶಾರ್ಜಿತಾ ಧರ್ಮಾಃ ಕ್ಷಣೇನೈವ ಕ್ಷಯಂಗತಾಃ ।
ದುರದೃಷ್ಟಸ್ಯ ಮಹಾತ್ಮ್ಯಮಿದಮೇವ ಹಿ ದೃಶ್ಯತೇ ॥೩೮॥

---

ಎಲೈ! ಮೂರ್ಖನೇ! ಮೂಢನೇ, ಎಂತಹ ಮಹಾಪಾಪವನ್ನು ಆಚರಿಸಿದೆ. ಆ ನಿನ್ನ ಪಾಪಕ್ಕೆ ಪ್ರಾಯಶ್ಚಿತ್ತವು ಸಮಸ್ತ ವೇದಶಾಸ್ತ್ರಗಳಲ್ಲಿಯೂ ಸಿಕ್ಕಲಿಲ್ಲ. ನೀನು ಅನೇಕ ವರ್ಷಗಳು ತಪಸ್ಸುಮಾಡಿ ಧರ್ಮವನ್ನು ಸಂಪಾದನೆ ಮಾಡಿದ್ದೀಯಾ. ಆ ಧರ್ಮವೆಲ್ಲವೂ ಒಂದು ಅರೆಗಳಿಗೆಯಲ್ಲಿಯೇ ನಷ್ಟವಾಯಿತು. ಬಹು ಕಷ್ಟದಿಂದ ಸಾಧಿಸಿದ ಸಕಲ ಧರ್ಮಕಾರ್ಯವೂ ಇಂದಿಗೆ ನಷ್ಟವಾದಂತಾಯಿತು. ॥೩೨-೩೩-೩೪-೩೫॥

ಎಲೈ ಬ್ರಾಹ್ಮಣನೇ, ನಿನಗೆ ಬೇರೆ ರಕ್ಷಕರಿಲ್ಲ. ಇಂತಹ ಕ್ರೂರವಾದ ಪಾಪವನ್ನು ನೀನು ಆಚರಿಸಿರುವೆ. ಈಗ ಎಲ್ಲಾ ಯಮಭಟರೂ ನಾಟ್ಯವನ್ನು ಮಾಡುತ್ತಾ ನಿನ್ನನ್ನು ಹಿಂಸಿಸುವುದಕ್ಕಾಗಿ ಕಾದಿರುವರು. ಹಿಂದೆ ನೀನು ಆ ಯಮಭಟರಿಗೆ ತೊಂದರೆಗೊಟ್ಟಿದ್ದೆ. ಆದುದರಿಂದ ಈಗ ಅವರು ಸಮಯ ಸಿಕ್ಕಿದುದರಿಂದ ಸಂತೋಷಗೊಂಡು ಶೂಲ, ಮುದ್ಗರ ಇವೇ ಮೊದಲಾದ ಆಯುಧಗಳನ್ನು ನಿನಗಾಗಿ ಧರಿಸಿ ನಿಂತಿರುವರು. ಅನೇಕ ಕ್ಲೇಶಗಳನ್ನು ಸಹಿಸಿಕೊಂಡು ಸಂಪಾದಿಸಿರುವ ಆ ಧರ್ಮಗಳೆಲ್ಲವೂ ಹೀಗೆ ನಿನ್ನಲ್ಲಿ ನಾಶವನ್ನು ಹೊಂದಿದುವು. ಇದು ದುರದೃಷ್ಟದ ಮಾಹಾತ್ಮ್ಯವೆಂದು ಹೇಳಬೇಕಲ್ಲದೇ ಬೇರೆ ಇಲ್ಲ. ॥೩೬-೩೭-೩೮॥

ಅತ್ಯಂತದುರ್ಲಭೋ ವಿಪ್ರ ಕಾಶೀವಾಸೋ ನ ಸಂಶಯಃ ।
ಮನುಷ್ಯದೇಹಮಾಸಾದ್ಯ ಕಾಶ್ಯಾಂ ಸ್ಥಾತುಂ ನ ಶಕ್ಯತೇ ॥೩೯॥

ಅತಿಧರ್ಮೇಣ ವೈ ನಿತ್ಯಂ ಕಾಶೀವಾಸೋ ಭವಿಷ್ಯತಿ ।
ತತಃ ಕದಾಚಿನ್ನಿಃಶ್ರೇಯೋ ಭವಿಷ್ಯತಿ ಮುದಾವಹಃ ॥೪೦॥

ಕಥಂ ಶಿವಪ್ರಿಯಾಃ ಸ್ಯಾಮೋ ನಿರ್ವಿಘ್ನೇನಾಕ್ಷರಂ ಪರಂ ।
ಶಾಂತಂ ಪ್ರಸನ್ನಮನಘಂ ಕದಾ ವಾ ಕ್ಷಯಧರ್ಮತಃ ॥೪೧॥

ಕಥಮಸ್ಮಾಭಿರಪ್ಯತ್ರ ಕಾಶ್ಯಾಂ ಸ್ಥಾತುಂ ಹಿ ಶಕ್ಯತೇ ।
ಪಾತಕಾನಿ ಬಹೂನ್ಯೇವ ಸಂಭವಿಷ್ಯಂತಿ ತೇ ಸದಾ ॥೪೨॥

ಬಹುಪುಣ್ಯಾರ್ಜಿತಾ ಕಾಶೀ ಕಥಂ ತ್ಯಾಜ್ಯಾ ಮನೀಷಿಭಿಃ ।
ಕಾಶೀಪ್ರಾಪ್ತ್ಯರ್ಥಮೇವಾದ್ಧಾ ತಪಃಕೃತಮನೇಕಧಾ ॥೪೩॥

ದೇಹಪಾತಃ ಕದಾವಾತ್ರ ಭವಿಷ್ಯತಿ ತಪೋಬಲಾತ್ ।
ಶಿವಮೇವ ಪ್ರಯಾಸ್ಯಾಮಃ ಕಾಶೀವಾಸಜಧರ್ಮತಃ ॥೪೪॥

---

ಎಲೈ ದ್ವಿಜನೇ! ಕಾಶೀವಾಸವು ಸಿಗುವುದು ದುರ್ಲಭ. ಈ ಮನುಷ್ಯ ದೇಹವನ್ನು ಹೊಂದಿ ಕಾಶಿಯಲ್ಲಿ ವಾಸಮಾಡಲು ಸಾಧ್ಯವಿಲ್ಲ. ಅನೇಕ ಯಜ್ಞಾದಿ ಧರ್ಮ ಕರ್ಮಗಳ ಆಚರಣೆಯಿಂದ ಕಾಶೀಪ್ರಾಪ್ತಿಯುಂಟಾಗುವುದು. ಹೀಗಿರುವಲ್ಲಿ ಈಗ ನಾವು ಶಂಕರನ ಪ್ರೀತಿಪಾತ್ರರಾಗುವುದಾದರೂ ಹೇಗೆ? ಶಾಂತವಾಗಿಯೂ ಪ್ರಸನ್ನನಾಗಿಯೂ, ನಾಶವಾಗದಿರುವುದೂ ಇರುವ ಬ್ರಹ್ಮರೂಪಿಯಾದ ಶಿವಸ್ವರೂಪ ವನ್ನು ಧರ್ಮದಿಂಡ ಹೊಂದಬಹುದಲ್ಲವೆ? ||೩೯-೪೦-೪೧||

ನಾವು ಹೇಗೆ ಈ ಕಾಶಿಯಲ್ಲಿ ವಾಸಮಾಡೋಣ? ಇಲ್ಲಿ ಯಾವಾಗಲೂ ಅನೇಕ ಪಾಪಕರ್ಮಗಳು ಉಂಟಾಗುತ್ತವೆ. ಹೆಚ್ಚು ಪುಣ್ಯಪರಿಪಾಕದಿಂದ ಸಂಪಾದಿಸಿರುವ ಕಾಶೀವಾಸವನ್ನು ಮುನಿಗಳಾದ ನಾವು ಹೇಗೆ ತ್ಯಜಿಸೋಣ! ಕಾಶಿಯನ್ನು ಹೊಂದುವುದಕ್ಕಾಗಿಯೇ ಅನೇಕ ತಪಸ್ಸುಗಳನ್ನು ಮಾಡಿದೆವು. ಅಯ್ಯೋ! ಯಾವಾಗ ನಮ್ಮ ದೇಹವು ತಪಸ್ಸುಮಾಡಿ ಜೀರ್ಣವಾಗುವುದು? ಆಗಲಾದರೂ ಕಾಶಿವಾಸದಿಂದುಂಟಾದ ಧರ್ಮಬಲದಿಂದ ಶಂಕರನನ್ನು ಹೊಂದೋಣ. ||೪೨-೪೩-೪೪||

ಪುನರಾವೃತ್ತಿರಹಿತಂ ದುಃಖಮಾತ್ರವಿವರ್ಜಿತಂ ।
ಸಾಂಬರೂಪಂ ಕದಾ ಕಾಶೀಮರಣಾತ್ಪ್ರಾಪ್ಸ್ಯಮೀದೃಶಂ ॥೪೫॥

ಬಹುಪುಣ್ಯೈರಿಯಂ ಕಾಶೀ ಲಬ್ಧಾ ತೀವ್ರಮಿದಂ ವಪುಃ ।
ನ ಗೃಹ್ಣಾತಿ ಕಥಂ ಪ್ರೀತ್ಯಾ ಮುಕ್ತಿದಾ ಭಕ್ತವತ್ಸಲಾ ॥೪೬॥

ಇತಿ ತದ್ವಚನಂ ಶ್ರುತ್ವಾ ಬಭಾಷೇ ತಾನಥ ದ್ವಿಜಃ ।
ಪಾಪಂ ಮಯಾ ಕೃತಂ ದುಷ್ಟಮಸ್ಯ ನಾಸ್ತ್ಯೇವ ನಿಷ್ಕೃತಿಃ ॥೪೭॥

ಇತಃ ಪರಂ ಮಯಾ ಕಾರ್ಯಂ ಪಾಪಶಾಂತಿಕರಂ ನಹಿ ।
ಪಾಪಿಷ್ಠೇನ ಕೃತಂ ಕರ್ಮ ಫಲದಂ ಚ ಭವಿಷ್ಯತಿ ॥೪೮॥

ಅನೇನೈವ ಹಿ ಪಾಪೇನ ತತ್ತತ್ಕರ್ಮಸಮುದ್ಭವಂ ।
ವಿನಶ್ಯತಿ ಫಲಂ ನೂನಂ ಪುಣ್ಯವೃದ್ಧಿರ್ನ ಸರ್ವಥಾ ॥೪೯॥

ಕಿಂ ಚಾಸ್ಮತ್ಕುಲಜಾಃ ಕೇಚಿತ್ ಊರ್ಧ್ವಲೋಕಗತಾಃ ಪುರಾ ।
ಮತ್ಪಾಪೇನೈವ ತೇ ಸರ್ವೇ ಯಾಸ್ಯಂತಿ ನರಕಂ ಧ್ರುವಂ ॥೫೦॥

---

ಕಾಶಿಯ ವಾಸದಿಂದ ಪುನಃ ಜನ್ಮವೇ ಇಲ್ಲ. ಮತ್ತು ಅದು ದುಃಖರಹಿತವಾಗಿದೆ. ಅಲ್ಲದೇ, ಈಶ್ವರಸ್ವರೂಪವೇ ಕಾಶಿಯು. ಕಾಶಿಯ ಮರಣದಿಂದ ಮುಕ್ತಿಯು ಲಭಿಸುತ್ತದೆ. ಪೂರ್ವಜನ್ಮದ ಅನೇಕ ಪುಣ್ಯಗಳಿಂದ ಅದು ಲಭಿಸತಕ್ಕುದಾಗಿದೆ. ಈ ಕಾಶೀಕ್ಷೇತ್ರವು ಸ್ಥಿರವಾದ ಮುಕ್ತಿಯನ್ನು ಕೊಡತಕ್ಕದ್ದು. ಭಕ್ತರಿಗೆ ಅದು ಹಿತವೂ ಆಗಿದೆ. ಹೀಗೆ ಹೇಳುವ ಆ ಮುನಿಗಳೊಡನೆ ನಾನು ಕೆಟ್ಟ ಕರ್ಮವನ್ನೆಸಗಿದೆನು. ಇದಕ್ಕೆ ಪ್ರಾಯಶ್ಚಿತ್ತವಿಲ್ಲವೆಂದು ಆ ಬ್ರಾಹ್ಮಣನೆಂದನು. ||೪೫-೪೬-೪೭||

ಇನ್ನು ಮುಂದೆ ನಾನು ಪಾಪವನ್ನು ಕಳೆದುಕೊಳ್ಳುವುದಕ್ಕಾಗಿ ಕೆಲಸಮಾಡಬೇಕು. ಪಾಪಿಯಾದ ನಾನು ಮಾಡಿದ ಕರ್ಮಾಚರಣೆಯಿಂದ ಫಲವು ಲಭಿಸಲಾರದು. ಈ ಪಾಪದ ಪರಿಣಾಮವಾಗಿ ಆಯಾ ಪುಣ್ಯ ಕರ್ಮದಿಂದ ಉಂಟಾದ ಫಲವೂ ನಷ್ಟವಾಯಿತು. ಪುಣ್ಯವೃದ್ಧಿಯಂತೂ ಆಗಲಾರದು. ಮತ್ತು ನನ್ನ ಕುಲದಲ್ಲಿ ಹುಟ್ಟಿದ ಪಿತೃಗಳು ಊರ್ಧ್ವಲೋಕವನ್ನು ಹೊಂದಿದ್ದರು. ಅವರು ನಾನು ಮಾಡಿದ ಪಾಪಕರ್ಮದಿಂದ ಈಗ ನರಕವನ್ನು ಹೊಂದುವರು. ಇದು ನಿಶ್ಚಯು. ||೪೮-೪೯-೫೦||

ಅಹಮೇವ ನ ನಷ್ಟೋಽಸ್ಮಿ ತೇಽಪಿ ಸರ್ವೇ ವಿನಾಶಿತಾಃ ।
ಕ್ವ ಗಂತವ್ಯಂ ಕ್ವ ಮರ್ತವ್ಯಂ ಕಿಂ ಕರ್ತವ್ಯಮತಃ ಪರಂ ॥೫೧॥

ನರಕಾಣ್ಯತಿಘೋರಾಣಿ ಭೋಕ್ತವ್ಯಾನಿ ಕಥಂ ಮಯಾ ।
ಪಿತೃಭಿಶ್ಚಾನುಭೋಜ್ಯಾನಿ ದ್ರಷ್ಟವ್ಯಾನಿ ಕಥಂ ಮಯಾ ॥೫೨॥

ಏವಂ ವಿಲಪ್ಯ ಬಹುಧಾ ಕಾಲೇನ ಸ ಮೃತೋ ದ್ವಿಜಃ ।
ಕಾಶ್ಯಾಮೇವ ಮಹಾದೇವಿ ದುಃಖಿತೋ ವ್ಯಾಧಿಪೀಡಿತಃ ॥೫೩॥

ತತೋ ಯಮಭಟಾ ಸರ್ವೇ ಪ್ರಣಮ್ಯ ಯಮಮುದ್ಧತಂ ।
ಕೃತಾಂಜಲಿಪುಟಾಃ ಭೂತ್ವಾ ಯಮಂ ಪ್ರೋಚುರ್ಮದೋದ್ಧತಾಃ ॥೫೪॥

ಯಮ ಕಶ್ಚಿದ್ದ್ವಿಜಃ ಕಾಶ್ಯಾಂ ಮೃತಃ ಪಾಪಾತ್ಮನಾಂ ಪರಃ ।
ತೇನೈವಾಂತರ್ಗೃಹೇ ಪೂರ್ವಂ ಮೂತ್ರೋತ್ಸರ್ಗಃ ಕೃತೋಽಸ್ತಿ ಹಿ ॥೫೫॥

ತದ್ವಂಶಜಾಃ ಪೂರ್ವಮೇವ ಸ್ವರ್ಗಲೋಕನಿವಾಸಿನಃ ।
ಆನೀತಾ ನರಕೇ ಘೋರೇ ತಾಡಿತಾಸ್ತವ ಶಾಸನಾತ್ ॥೫೬॥

---

ನಾನೊಬ್ಬನೇ ನಾಶವಾಗಲಿಲ್ಲ. ಎಲ್ಲರೂ ಇದರಿಂದ ವಿನಷ್ಟರಾದರು. ಈಗ ಎಲ್ಲಿಗೆ ಹೋಗಲಿ? ಎಲ್ಲಿ ಸಾಯಲಿ? ಏನು ಮಾಡಲಿ? ಅಯ್ಯೋ! ಅತಿ ಭಯಂಕರವಾದ ನರಕವನ್ನು ಹೇಗೆ ಅನುಭವಿಸಲಿ? ಪಿತೃಗಳಾದರೂ ಹೇಗೆ ನರಕವನ್ನು ಅನುಭವಿಸುವರು. ? ||೫೧-೫೨||

ಎಲೌ! ಮಹಾದೇವಿಯೇ, ಆ ಬ್ರಾಹ್ಮಣನು ಹೀಗೆ ಬಹುಕಾಲ ವ್ಯಸನಪಟ್ಟು ಕಾಲಕ್ರಮದಲ್ಲಿ ವ್ಯಾಧಿಗ್ರಸ್ತನಾಗಿ ಕಾಶಿಯಲ್ಲಿಯೇ ಪ್ರಾಣಬಿಟ್ಟನು. ಬಳಿಕ ಗರ್ವಿತರಾದ ಯಮಭಟರು ಕೈಮುಗಿದುಕೊಂಡು ಯಮನಿಗೆ ತಲೆಬಾಗಿ ನಿಂತು ಹೀಗೆ ಹೇಳಿದರು. ||೫೩-೫೪||

"ಯಮದೇವನೇ! ಹಿಂದೆ ಕಾಶಿಯಲ್ಲಿರುವ ಅಂತರ್ಗೃಹದೊಳಗೆ ಮೂತ್ರೋತ್ಸರ್ಜನಮಾಡಿರುವ ಅತಿ ಪಾಪಿಯಾದ ಬ್ರಾಹ್ಮಣನು ಈಗ ಅಲ್ಲಿಯೇ ಮೃತನಾಗಿದ್ದಾನೆ. ಆತನ ವಂಶೀಯರು ಮೊದಲೇ ಸ್ವರ್ಗಲೋಕನಿವಾಸಿಗಳಾಗಿದ್ದರು. ಈಗ ನಿನ್ನ ಆಜ್ಞೆಯಮೇರೆ ಅವರನ್ನು ನರಕಕ್ಕೆ ಹಾಕಿರುತ್ತೇವೆ. ಯಮ

ಪಚ್ಯಂತೇ ತೇ ಸದಾ ಘೋರೇ ನರಕೇ ಯಮಕಿಂಕರೈಃ ।
ಸ ಕಿಮಸ್ಮಾಭಿರಾನೇಯೋ ನ ವಾ ಶಾಸಯ ಶಾಸಕ ॥೫೭॥

ರೇ ರೇ ಕಾಶ್ಯಾಂ ಮೃತೋ ಜಂತುರ್ಬಹುಪಾಪಾಶ್ರಯೋಽಪಿ ಸನ್ ।
ನ ಯಾಮಂ ಲೋಕಮಾಪ್ನೋತಿ ಸತ್ಯಮೇವ ಮಯೋಚ್ಯತೇ॥೫೮॥

ಶ್ರೀಕಾಲಭೈರವಃ ಕಾಶ್ಯಾಂ ಮೃತಾನ್ ಪಾಪರತಾನ್ ಜನಾನ್ ।
ಅಘೋರಯಾತನಾಪ್ರಾಪ್ತ್ಯೈ ಸ್ವಭಟೇಭ್ಯಃ ಪ್ರಯಚ್ಛತಿ ॥೫೯॥

ಭವತಾಂ ಗಮನಂ ಕಾಶ್ಯಾಂ ವ್ಯರ್ಥಮೇವ ಭವಿಷ್ಯತಿ ।
ದುರ್ಧರ್ಷಾಃ ಪ್ರಬಲಾ ವೀರಾಃ ಕಾಲಭೈರವಕಿಂಕರಾಃ ॥೬೦॥

ನಾನಾವಿಧಾನೇಕರೂಪಾ ಯಾತನಾಕಾರಿಣಃ ಸದಾ ।
ತ ಏವ ದುರ್ಮದಾಃ ಸಮ್ಯಕ್ತಾಡಯಿಷ್ಯಂತಿ ತಂ ದ್ವಿಜಂ ॥೬೧॥

ಸೋಢುಂ ನ ಶಕ್ಯತೇ ಲೋಕೇ ಕಾಲಭೈರವಯಾತನಾಂ ।
ತದ್ಯಾತನಾವೀಕ್ಷಣಂ ಚ ದುಃಸಹಂ ದುಃಖದಾಯಕಂ ॥೬೨॥

---

ಕಿಂಕರರು ಅವರನ್ನು ಯಾವಾಗಲೂ ಬೇಯಿಸುವರು. ಮತ್ತು ಹಿಂಸಿಸುವರು. ಈಗ ಆ ಬ್ರಾಹ್ಮಣನನ್ನು ನಾವು ಎಳೆದು ಇಲ್ಲಿಗೆ ತರೋಣವೇ? ಅಥವಾ ಬೇಡವೇ? ಈ ವಿಷಯದಲ್ಲಿ ತಮ್ಮ ಅಪ್ಪಣೆ ಏನು?" ಎಂದು ಯಮದೂತರು ಯಮನನ್ನು ಪ್ರಾರ್ಥಿಸಿದರು. ಆಗ ಯಮನು ತನ್ನ ದೂತರನ್ನು ಕುರಿತು ಹೀಗೆಂದನು. ॥೫೫-೫೬-೫೭॥

ಮೂರ್ಖರೇ! ಕಾಶಿಯಲ್ಲಿ ಮೃತಪಟ್ಟವನು ಹೆಚ್ಚು ಪಾಪಿಯಾಗಿದ್ದರೂ ಆತನನ್ನು ಯಮಲೋಕಕ್ಕೆ ಕರೆದುಕೊಂಡು ಬರಬಾರದು. ಶ್ರೀ ಕಾಲಭೈರವೇಶ್ವರನು ಕಾಶಿಯಲ್ಲಿ ಮೃತರಾದ ಪಾಪಿಗಳಿಗೆ ಯಮಯಾತನೆಗಳನ್ನು ತಪ್ಪಿಸಿ ಅವರ ಪಾಪಪ್ರಾಯಶ್ಚಿತ್ತಕ್ಕಾಗಿ ಅವರನ್ನು ತನ್ನ ಸ್ವಂತ ಭಟರಿಗೆ ಅರ್ಪಿಸುತ್ತಾನೆ. ಆದುದರಿಂದ ನೀವು ಕಾಶಿಗೆ ಹೋಗುವುದು ವ್ಯರ್ಥ. ಅಲ್ಲಿ ಪ್ರಬಲರಾಗಿಯೂ, ಗೆಲ್ಲಲಸಾಧ್ಯರಾಗಿಯೂ ಇರುವ ಕಾಲಭೈರವನ ವೀರರಿರುವರು. ॥೫೮-೫೯-೬೦॥

ಬಗೆ ಬಗೆಯ ರೂಪಗಳುಳ್ಳ ಯಾತನೆಗಳನ್ನು ಕೊಡುವ ಆ ಭಟರು ಆ ಬ್ರಾಹ್ಮಣನನ್ನು ಚನ್ನಾಗಿ ಹೊಡೆಯುತ್ತಾರೆ. ಈ ಲೋಕದಲ್ಲಿ ಕಾಲಭೈರವನ

ಕ್ಷಣೇನ ಜಾಯತೇ ಯತ್ರ ಯಾತನಾ ಯಾದೃಶೀ ಭವೇತ್ ।
ತಾದೃಶೀ ಭೂಯಸಾಪ್ಯತ್ರ ಕಾಲೇನ ನ ಭವಿಷ್ಯತಿ ॥೬೩॥

ಏಕೈಕೋ ಯಃ ಕಶಾಘಾತಃ ಸ ಸೋಢುಂ ಕೇನ ಶಕ್ಯತೇ ।
ತಾದೃಶೋ ಹಿ ಕಶಾಘಾತಃ ಕೇನ ಕರ್ತುಂ ಚ ಶಕ್ಯತೇ ॥೬೪॥

ವಿವಿಧಾ ಯಾತನಾ ಕಾಶ್ಯಾಂ ದುಃಸಹಾ ಜಾಯತೇ ಸದಾ
ಸರ್ವಥಾ ನೈವ ಗಂತವ್ಯಂ ಭವದ್ಭಿರ್ಭಯವಿಹ್ವಲೈಃ ॥೬೫॥

ಕ್ವ ಭವಂತಃ ಕ್ವ ವಾ ಕಾಶೀ ಕ್ವ ವಾ ಕಾಶ್ಯಾಂ ಮೃತೋ ಜನಃ ।
ಸ ಮಾರ್ಗಃ ಸರ್ವಥಾ ತ್ಯಾಜ್ಯೋ ಭವದ್ಭಿರ್ದುರ್ಬಲೈರ್ಭಟೈಃ ॥೬೬॥

ಕಾಶೀಭಿನ್ನಪ್ರದೇಶೇಷು ಯೇ ಮೃತಾಃ ಪಾಪಿನೋ ಜನಾಃ ।
ಭವದ್ಭಿಸ್ತೇ ಸಮಾನೇ ಯಾಸ್ತಾಡನೀಯಾಃ ಪ್ರಯತ್ನತಃ ॥೬೭॥

ಇತ್ಥಂ ಯಮವಚಶ್ಶ್ರುತ್ವಾ ಸರ್ವೇ ತೇ ಯಮಕಿಂಕರಾಃ ।
ತದ್ವಂಶಜಾನ್ನಾಶಯಂತೋ ನರಕೇಷು ಸದಾ ಸ್ಥಿತಾನ್ ॥೬೮॥

---

ಹಿಂಸೆಯು ಸಹಿಸಲು ಸಾಧ್ಯವಾಗುವುದಲ್ಲ. ಆ ಯಾತನೆಯನ್ನು ನೋಡುವುದೂ ದುಷ್ಕರವಾಗುವುದು. ಮತ್ತು ಅದು ದುಃಖದಾಯಕವೂ ಆಗಿದೆ. ಒಂದು ಕ್ಷಣದಲ್ಲಿ ಎಷ್ಟು ಯಾತನೆಗಳು ಅಲ್ಲಿ ಉಂಟಾಗುವುವೋ ಅಷ್ಟು ಕ್ರೂರ ಯಾತನೆಗಳು ಅನೇಕ ಕಾಲಗಳು ಇಲ್ಲಿ ಇದ್ದರೂ ಆ ಪಾಪಿಗಳಿಗೆ ಆಗಲಾರದು. ||೬೨-೬೩-೬೪||

ಆ ಕಾಲಭೈರವನ ಒಂದೊಂದು ಚಾಟಿಯ ಏಟೂ ಬಹು ಕ್ರೂರವಾದುದು. ಸಹಿಸಲು ಶಕ್ಯವಲ್ಲದುದು. ಅಂತಹ ಚಾವುಟೀ ಏಟನ್ನು ಸಹಿಸುವುದಾದರೂ ಹೇಗೆ? ಸಹಿಸಿದರೂ ಅಸಾಧ್ಯ ಯಾತನೆಯುಂಟಾಗುವುದು. ಅತಿ ಭೀರುಗಳಾದ ನೀವು ಆ ಕಾಲಭೈರವನಿರುವ ಸ್ಥಳಕ್ಕೆ ಖಂಡಿತ ಹೋಗಬಾರದು. ಮತ್ತು ಎಲೈ! ದೂತರೇ! ನೀವೆಲ್ಲಿ ಕಾಶಿ ಎಲ್ಲಿ? ಅಥವಾ ಕಾಶಿಯಲ್ಲಿ ಮೃತನಾದವನೆಲ್ಲಿ? ದುರ್ಬಲರಾದ ಯಮಭಟರು ಆ ಮಾರ್ಗವನ್ನು ಖಂಡಿತವಾಗಿಯೂ ಬಿಡಬೇಕು.||೬೫-೬೬||

ಕಾಶಿಯನ್ನು ಬಿಟ್ಟು ಇತರ ಸ್ಥಳಗಳಲ್ಲಿ ಮೃತರಾದ ಪಾಪಿಗಳನ್ನು ಮಾತ್ರ ನೀವು ಇಲ್ಲಿಗೆ ಎಳೆದು ತನ್ನಿರಿ. ಮತ್ತು ಅವರನ್ನು ಕ್ರೂರವಾಗಿ ದಂಡಿಸಿರಿ.

ಸೋಽಪಿ ದ್ವಿಜಸ್ತದಾ ಕಾಶ್ಯಾಂ ಕಾಲಭೈರವಕಿಂಕರೈಃ ।
ತಾಡ್ಯಮಾನಂ ಸ್ವಕಂ ಪಾಪಂ ಭುಕ್ತ್ವಾ ತಿಷ್ಠತ್ಯಸಂಶಯಂ ॥೧೯॥

ಪಾಪಂ ಕೃತ್ವಾ ಮೃತೋ ಯಸ್ತು ಕಾಶ್ಯಾಂ ಜಂತುರ್ಭವಿಷ್ಯತಿ ।
ಸ ಕಾಲಭೈರವೇಣೈವ ಶಿಕ್ಷಿತೋ ಭವತಿ ಧ್ರುವಂ ॥೨೦॥

ಅಲ್ಪಂ ಚಾಪಿ ಕೃತಂ ಕಾಶ್ಯಾಂ ಪಾತಕಂ ಬಹು ಜಾಯತೇ ।
ಪುಣ್ಯಮಪ್ಯೇವಮೇವಾತ್ರ ಜಾಯತೇ ವರವರ್ಣಿನಿ ॥೨೧॥

ಕಾಶ್ಯಾಂ ಕೃತಾನಿ ಪಾಪಾನಿ ನ ನಶ್ಯಂತಿ ಕದಾಚನ ।
ಅಣುಮಾತ್ರಂ ಚ ತತ್ಪಾಪಂ ಮೇರುತುಲ್ಯಂ ಭವಿಷ್ಯತಿ ॥೨೨॥

ಪುಣ್ಯಂ ಪುರಾಕೃತಂ ಕಾಶ್ಯಾಂ ಪಾಪೇನೈಕೇನ ನಶ್ಯತಿ ।
ನ ಚೇತ್ಪಾಪಂ ತದಾ ಪುಣ್ಯಂ ವರ್ಧತೇ ಬಹುಧಾ ಶುಭೇ ॥೨೩॥

---

ಕಾಶೀಕ್ಷೇತ್ರಕ್ಕೆ ಮಾತ್ರ ನೀವು ಎಂದೂ ಹೋಗಬೇಡಿ ಎಂದು ಹೇಳಿದ ಯಮನ ಅಪ್ಪಣೆಯನ್ನು ಪಾಲಿಸಿ ಯಮಭಟರು ಆ ಬ್ರಾಹ್ಮಣನ ಗೋಜಿಗೆ ಹೋಗಲಿಲ್ಲ. ಆದರೆ ಅವನ ವಂಶೀಯರನ್ನು ಮಾತ್ರ ನರಕಲೋಕಕ್ಕೆ ಎಸೆದುಬಿಟ್ಟರು. ॥೬೭-೬೮॥

ಆ ವಿಪ್ರನಾದರೋ ಕಾಶಿಯಲ್ಲಿ ಕಾಲಭೈರವನ ದೂತರಿಂದ ಹೊಡೆಯಲ್ಪಟ್ಟವನಾಗಿ ತನ್ನ ಪಾಪಫಲವನ್ನು ಅನುಭವಿಸುತ್ತಿರುವನು. ಯಾವನು ಕಾಶಿಯಲ್ಲಿ ಹೀಗೆ ಪಾಪಕಾರ್ಯವನ್ನು ಮಾಡುವನೋ ಅವನು ಕಾಶಿಯಲ್ಲಿ ಪ್ರಾಣಿಯಾಗಿ ಅಂದರೆ ತಿರ್ಯಗ್ಯೋನಿಯಲ್ಲಿ ಹುಟ್ಟುವನು. ಅಲ್ಲಿ ಮತ್ತೆ ಕಾಲಭೈರವನಿಂದ ಶಿಕ್ಷೆ ಹೊಂದುವನು. ॥೬೯-೨೦॥

ಕಾಶೀಕ್ಷೇತ್ರದಲ್ಲಿ ಅಲ್ಪ ಪಾಪವನ್ನು ಮಾಡಿದರೂ ಅದು ಬಹುವಾಗಿ ವೃದ್ಧಿಯಾಗುತ್ತದೆ. ಹಾಗೆಯೇ ಸ್ವಲ್ಪ ಪುಣ್ಯವೂ ಅನೇಕ ಮುಖವಾಗಿ ವೃದ್ಧಿ ಹೊಂದುತ್ತದೆ. ಅಣುಮಾತ್ರವಾದ ಪಾಪವೂ ಕಾಶೀಕ್ಷೇತ್ರದಲ್ಲಿ ಮೇರುಪರ್ವತದಷ್ಟು ಬೆಳೆದುಬಿಡುವುದು. ಪೂರ್ವಜನ್ಮದಲ್ಲಿ ಅಥವಾ ಹಿಂದೆ ಮಾಡಿದ ಪುಣ್ಯಸಮುದಾಯಗಳು ಕಾಶಿಯಲ್ಲಿ ಆಚರಿಸಿದ ಒಂದೇ ಒಂದು ಪಾಪಕರ್ಮದಿಂದ ನಾಶಹೊಂದುವುವು. ಪಾಪಮಾಡದೇ ಇದ್ದವರಿಗೆ ಆ ಪುಣ್ಯವು ಅನೇಕ ವಿಧವಾಗಿ ಬೆಳೆಯುತ್ತದೆ. ॥೨೧-೨೨-೨೩॥

ದುರ್ಲಭಾ ಸರ್ವಥಾ ಕಾಶೀ ಕಾಶೀವಾಸೋಽತಿದುರ್ಲಭಃ ।
ದುರ್ಲಭಂ ಮರಣಂ ಕಾಶ್ಯಾಂ ಕಾಶ್ಯಾಂ ಧರ್ಮೋಽತಿದುರ್ಲಭಃ ॥೭೪॥

ಕಾಶ್ಯಾಂ ಧರ್ಮಾರ್ಥಮುದ್ಯುಕ್ತಂ ಪುರುಷಂ ವಿಘ್ನರಾಶಯಃ ।
ಸಮಾಶ್ರಿತ್ಯಾಖಿಲಂ ಧರ್ಮಂ ನಾಶಯಂತಿ ಮುಹುರ್ಮುಹುಃ ॥೭೫॥

ಪ್ರತಿಕ್ಷಣಂ ಪ್ರತಿಪದಂ ವಿಘ್ನಸಂಘಾ ದುರಾಸದಾಃ ।
ಧರ್ಮೋದ್ಯೋಗಮತಿಂ ಮರ್ತ್ಯಂ ನಾಶಯಂತ್ಯೇವ ಸರ್ವಥಾ ॥೭೬॥

॥ ಶ್ರೀಪಾರ್ವತ್ಯುವಾಚ ॥

ಮಹಾದೇವೈವಮನಿಶಂ ವಿಘ್ನೋಪದ್ರುತಮಾನಸಃ ।
ಕಥಂ ಕಾಶೀನಿವಾಸಾರ್ಥಮುದ್ಯೋಗಂ ಕರ್ತುಮಿಚ್ಛತಿ ॥೭೭॥

ಏವಮುಕ್ತಪ್ರಕಾರೇಣ ಭುವಿ ಕಸ್ಯಾಪಿ ಸರ್ವಥಾ ।
ನ ಭವಿಷ್ಯಂತಿ ವಿಶ್ವೇಶ ಕಾಶೀವಾಸೋಽತಿ ದುರ್ಲಭಃ ॥೭೮॥

ಕೀದೃಶಃ ಪುರುಷೋ ಯೋಗ್ಯಃ ಕಾಶ್ಯಾಂ ಸ್ಥಾತುಂ ಪುರಾಂತಕೆ ।
ಕಥಂ ಸ್ಥಾತವ್ಯಮನಿಶಂ ವದ ಸರ್ವಂ ವಿಶೇಷತಃ ॥೭೯॥

---

ಕಾಶಿಯನ್ನು ಹೊಂದುವುದೂ ಕಷ್ಟಸಾಧ್ಯ. ಕಾಶಿಯಲ್ಲಿ ವಾಸಿಸುವುದೂ ದುಷ್ಕರ. ಕಾಶಿಯಲ್ಲಿ ಮೃತಿ ಹೊಂದುವುದೂ ಕಷ್ಟವೇ. ಮತ್ತು ಅಲ್ಲಿ ಧರ್ಮಸಂಪಾದನೆಯೂ ದುರ್ಲಭವಾದುದು. ಧರ್ಮದಲ್ಲಿ ಪ್ರವೃತ್ತನಾದ ಮನುಷ್ಯನನ್ನು ಹೆಜ್ಜೆ ಹೆಜ್ಜೆಗೂ ವಿಘ್ನಗಳು ಬಂದು ಅಲ್ಲಿ ಅಡ್ಡಿಮಾಡುತ್ತವೆ. ಮತ್ತು ಧರ್ಮವನ್ನು ಹಾಳು ಮಾಡುತ್ತವೆ. ಧರ್ಮದಲ್ಲಿ ಶ್ರದ್ಧೆಯುಳ್ಳ ಮನುಷ್ಯನಿಗೆ ಆ ವಿಘ್ನಗಳು ಅಡ್ಡಿ ತರುತ್ತವೆ. ಎಂದು ಶಿವನು ಹೇಳಿದನು. ॥೭೪-೭೫-೭೬॥

"ಎಲೈ! ಮಹಾದೇವನೇ! ವಿಘ್ನಗಳಿಂದ ತೊಂದರೆಗೊಂಡ ಮನುಷ್ಯನು ಕಾಶಿಯಲ್ಲಿ ನಿರ್ವಿಘ್ನವಾಗಿ ವಾಸಮಾಡುವುದು ಹೇಗೆ? ಅಲ್ಲಿ ವಾಸವನ್ನು ಬಯಸುವುದಾದರೂ ಹೇಗೆ? ಹೀಗೆ ನೀನು ಹೇಳಿದಂತೆ ವಿಚಾರಮಾಡಿದರೆ ಈ ಕಾಶಿಯಲ್ಲಿ ವಾಸಮಾಡುವವನು ಯಾವನೂ ಕಾಣಬರುವುದಿಲ್ಲ. ವಿಶ್ವೇಶ್ವರನೇ, ಕಾಶೀವಾಸವು ಬಹು ದುರ್ಲಭವೆಂದು ಹೇಳಿದೆಯಲ್ಲವೆ! ಎಂತಹ ಆಚಾರಶೀಲನಾದ ಪುರುಷನು

ಶೃಣು ಗೌರಿ ವರಾರೋಹೇ ಯಥಾ ಶಾಸ್ತ್ರಂ ವದಾಮ್ಯಹಂ ।
ಕಾಶೀವಾಸಾಯ ಯೋಗ್ಯೋ ಹಿ ಪುರುಷೋ ವಿಜಿತೇಂದ್ರಿಯಃ॥೪೦॥

ನಿಷ್ಕಲ್ಮಷೋ ನೀತಿಯುಕ್ತೋ ನಿಯತೋ ನಿರ್ಗತಸ್ಪೃಹಃ ।
ಜೀರ್ಣವಲ್ಕಲವೀತಾಂಗಪಾಂಡುಪರ್ಣಾಶನಪ್ರಿಯಃ ॥೪೧॥

ದಯಾಯುಕ್ತಃ ಶಾಂತಿಯುಕ್ತೋ ನಿರೀಹೋ ನಿರ್ಗತಸ್ಪೃಹಃ ।
ಅಷ್ಟಾಂಗಯೋಗನಿರತೋ ಮೌನವ್ರತಪರಾಯಣಃ ॥೪೨॥

ವಿಭೂತಿಭೂಷಣೋ ನಿತ್ಯಂ ತ್ರಿಪುಂಡ್ರಾಂಕಿತಮಸ್ತಕಃ ।
ರುದ್ರಾಕ್ಷಮಾಲಾವೀತಾಂಗೋ ಲಿಂಗಪೂಜಾಪರಾಯಣಃ ॥೪೩॥

---

ಕಾಶಿಯಲ್ಲಿ ವಾಸಿಸಲು ಅರ್ಹನಾಗುವನು? ಅಲ್ಲಿರಲು ಯೋಗ್ಯವಾದ ಸ್ಥಾನವು ಯಾವುದು.? ಹೇಗೆ ಆ ಕಾಶಿಯಲ್ಲಿ ವಾಸಮಾಡಬೇಕು? ಎಲ್ಲವನ್ನೂ ಸವಿಶೇಷವಾಗಿ ವಿಸ್ತಾರವಾಗಿ ಹೇಳು". ಎಂದು ಪಾರ್ವತಿಯು ಮತ್ತೆ ಕೇಳಿಕೊಂಡಳು. ||೭೭-೭೮-೭೯||

ಎಲೌ! ಉತ್ತಮ ಯುವತಿಯಾದ ಗೌರಿಯೇ! ಕೇಳು. ಕಾಶಿಯಲ್ಲಿ ವಾಸಿಸಲು ಯಾವನು ಅರ್ಹನೆಂಬುದನ್ನು ಶಾಸ್ತ್ರನಿಯಮದಂತೆ ಹೇಳುವೆನು. ತನ್ನ ಇಂದ್ರಿಯಗಳನ್ನು ಸ್ವಾಧೀನದಲ್ಲಿಟ್ಟುಕೊಂಡ ಪುರುಷನು ಕಾಶಿಯಲ್ಲಿ ವಾಸಿಸಬಲ್ಲನು. ಆತನು ದ್ವೇಷಾಸೂಯೆ ಮೊದಲಾದ ಕಲ್ಮಷಗಳಿಲ್ಲದವನಾಗಿರಬೇಕು. ನೀತಿಯನ್ನು ಬಲ್ಲವನೂ, ಯಾವಾಗಲೂ ನಿಸ್ಪೃಹನೂ, ನಾರು ಬಟ್ಟೆಗಳನ್ನು ಧರಿಸುವವನೂ, ಚಿಗುರೆಲೆಗಳನ್ನು ತಿನ್ನುವವನೂ, ಕರುಣಾಶಾಲಿಯೂ, ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿಗಳೆಂಬ ಎಂಟು ಯೋಗಗಳನ್ನು ಬಲ್ಲವನೂ, ಮೌನವ್ರತವನ್ನು ಆಚರಿಸುವವನೂ ಕಾಶೀವಾಸಕ್ಕೆ ಅರ್ಹನಾಗುವನು. ||೪೦-೪೧-೪೨||

ನಿತ್ಯವೂ ವಿಭೂತಿಯಿಂದ ಅಲಂಕಾರಮಾಡಿಕೊಳ್ಳಬೇಕು. ಭಸ್ಮತ್ರಿಪುಂಡ್ರವನ್ನು ಧರಿಸಿದವನಾಗಿರಬೇಕು. ರುದ್ರಾಕ್ಷಮಾಲಿಕೆಯಿಂದ ಭೂಷಿತನಾಗಿ ಲಿಂಗಾರ್ಚನೆಯಲ್ಲಿ ಆಸಕ್ತನಾಗಿರಬೇಕು. ತೆಗಳಿಕೆ, ಹೊಗಳಿಕೆ, ಇವುಗಳೊಳಗೆ ಒಂದೇ ಸಮನಾದ ಭಾವನೆಯನ್ನು ಹೊಂದಿರಬೇಕು. ಮಾನ ಮತ್ತು ಅಪಮಾನಗಳನ್ನು

ತುಲ್ಯನಿಂದಾಸ್ತುತಿರ್ಧೀರೋ ಸ್ತುತ್ಯೋ ಮಾನಾಪಮಾನಯೋಃ ।
ರಾಗದ್ವೇಷಾದಿರಹಿತೋ ವಿರಕ್ತೋ ವಿಗತಸ್ಪೃಹಃ ॥೮೪॥

ಪಂಚಾಗ್ನಿಸೇವಾನಿರತೋ ನಿತ್ಯಂ ಯಾತ್ರಾರತೋಽನಿಶಂ ।
ನಿತ್ಯಾಂತರ್ಗೃಹಯಾತ್ರಾಯಾಂ ನಿಯುತೋ ದೃಢವಿಗ್ರಹಃ ॥೮೫॥

ಪಂಚಾಕ್ಷರಜಪಾಸಕ್ತಃ ಪಕ್ಷೇ ಪಕ್ಷೇ ಯಥಾವಿಧಿ ।
ಪಂಚಕ್ರೋಶಸ್ಯ ಯಾತ್ರಾಯಾಂ ನಿಯುತಃ ಸತ್ಯಮಾನಸಃ ॥೮೬॥

ಸತ್ಯವ್ರತಃ ಸತ್ಯಪರೋ ನಿತ್ಯಂ ಮತ್ಪೂಜನೇ ರತಃ ।
ಮದ್ಭಕ್ತಜನಸಂಸೇವೀ ಮಲ್ಲಿಂಗೈಕಾರ್ಚನಪ್ರಿಯಃ ॥೮೭॥

ಶಿವಶಾಸ್ತ್ರರತೋ ನಿತ್ಯಂ ಶೈವವ್ರತರತಃ ಸದಾ ।
ಕಾಶೀವಾಸಾಯ ಮುಖ್ಯೋಽಯಂ ಮಾಧ್ಯಮೋಽಪ್ಯುಚ್ಯತೇ ಜನಃ ॥೮೮॥

---

ಸಮಾನವಾದ ದರ್ಜೆಯಿಂದ ನೋಡಬೇಕು. ರಾಗದ್ವೇಷಗಳಿಗೆ ಆಸ್ಪದವಿಲ್ಲದವನಾಗಿರಬೇಕು. ಅಲ್ಲದೆ ವೈರಾಗ್ಯಶಾಲಿಯಾಗಿಯೂ, ನಿಸ್ಪೃಹನಾಗಿಯೂ, ಪಂಚಾಗ್ನಿಗಳ ಮಧ್ಯೆ ತಪಸ್ಸುಮಾಡುವ ಸ್ವಭಾವದವನಾಗಿಯೂ ಇರಬೇಕು. ತೀರ್ಥಯಾತ್ರೆಗಳಲ್ಲಿ ಆಸಕ್ತಿಯುಳ್ಳವನಾಗಬೇಕು. ಮತ್ತು ಅಂತರ್ಗೃಹಯಾತ್ರೆಯನ್ನು ಮಾಡಲು ದೇಹ ಶಕ್ತಿಯುಳ್ಳವನೂ ಆಗಬೇಕು. ಹೀಗಿರುವ ಮನುಷ್ಯನು ಕಾಶೀಕ್ಷೇತ್ರದಲ್ಲಿ ವಾಸ ಮಾಡಲು ಯೋಗ್ಯನಾಗಿರುವನು. ||೮೩-೮೪-೮೫||

ಪ್ರತಿಪಕ್ಷದಲ್ಲಿಯೂ ಪಂಚಾಕ್ಷರ ಜಪವನ್ನು ಶಾಸ್ತ್ರೋಕ್ತವಿಧಿಯಂತೆ ಮಾಡಬೇಕು. ಐದು ಹರಿದಾರಿ ಯಾತ್ರೆಯಲ್ಲಿ ಆಸಕ್ತನಾಗಬೇಕು. ಸತ್ಯವನ್ನು ಹೇಳುವವನೂ ಸತ್ಯದಲ್ಲಿ ಶ್ರದ್ಧೆಯುಳ್ಳವನೂ ಪ್ರತಿದಿನವೂ ನನ್ನ ಪೂಜೆಯಲ್ಲಿ ನಿರತನಾದವನೂ ಅಲ್ಲದೆ ನನ್ನ ಭಕ್ತರ ಸೇವೆಮಾಡುವವನೂ, ಶಿವಲಿಂಗವನ್ನು ಮಾತ್ರ ಪೂಜಿಸತಕ್ಕವನೂ, ಶೈವಶಾಸ್ತ್ರದಲ್ಲಿ ಆಸೆಯುಳ್ಳವನೂ, ಶಿವನ ಸಂಬಂಧವಾದ ವ್ರತಗಳನ್ನು ಆಚರಿಸುವವನೂ, ಆದ ಮನುಷ್ಯನು ಕಾಶಿಯಲ್ಲಿ ವಾಸಿಸಲು ಯೋಗ್ಯನೆಂದು ಹೇಳಬಹುದು. ಈ ರೀತಿಯ ನರನು ಮಧ್ಯಮ ವರ್ಗಕ್ಕೆ ಸೇರಿದವನು. ||೮೬-೮೭-೮೮||

ಅಸಂಚಿತಾಕೃಷ್ಟಪಚ್ಯನೀವಾರಕಣಭೋಜನಃ ।
ಯಥೋಕ್ತಯಾತ್ರಾನಿರತಃ ಸರ್ವಸಂಗವಿವರ್ಜಿತಃ ॥೮೯॥

ನಿರ್ಮಮೋ ನಿರಹಂಕಾರಸ್ತ್ಯಕ್ತಬಂಧುರ್ನಿರಾಕುಲಃ ।
ಸರ್ವದಾ ಧೂಪದೀಪಾದ್ಯೈರ್ಮಂಗಲಾರ್ಚನತತ್ಪರಃ ॥೯೦॥

ವೀತರಾಗೋ ಗತಸ್ನೇಹಃ ಪುತ್ರಸ್ನೇಹಾದಿವರ್ಜಿತಃ ।
ವೇದಾಂತಶ್ರವಣಾಸಕ್ತೋ ವೇದಾಧ್ಯಯನತತ್ಪರಃ ॥೯೧॥

ಯದೃಚ್ಛಾಲಾಭಸಂತುಷ್ಟಃ ಪ್ರತಿಗ್ರಹಪರಾಙ್ಮುಖಃ ।
ಮಿತ್ರೇ ಪುತ್ರೇ ಚ ಶತ್ರೌ ಚ ಸಮದೃಷ್ಟಿರಲೋಲುಪಃ ॥೯೨॥

ವಿಭೂತಿಧಾರಣಪರೋ ರುದ್ರಾಕ್ಷಾಭರಣಃ ಸದಾ ।
ರುದ್ರಾಧ್ಯಾಯಜಪಾಸಕ್ತಃ ಪಂಚಾಕ್ಷರಪರಾಯಣಃ ॥೯೩॥

---

ತಾನಾಗಿಯೇ ಲಬ್ಧವಾಗಿಯೂ, ಕೃಷಿಮಾಡದೇ ತಾನಾಗಿಯೇ ಬೆಳೆಯುವುದಾಗಿಯೂ ಇರುವ ನೀವಾರಧಾನ್ಯವನ್ನು ಭೋಜನಮಾಡುವವನೂ, ಮತ್ತು ಶಾಸ್ತ್ರೋಕ್ತವಾದ ಯಾತ್ರೆಯನ್ನು ಮಾಡುವವನೂ, ಸಮಸ್ತ ದಾರಾಪುತ್ರಾದಿ ಸಂಗವನ್ನು ಬಿಟ್ಟು ನಿರಹಂಕಾರಿಯಾಗಿಯೂ, ಮಮಕಾರವಿಲ್ಲದವನಾಗಿಯೂ ಬಂಧುಗಳನ್ನು ದೂರಮಾಡಿದವನಾಗಿಯೂ, ಮತ್ತು ಯಾವಾಗಲೂ ಧೂಪದೀಪ ನೈವೇದ್ಯಗಳಿಂದ ನನ್ನನ್ನು ಅರ್ಚಿಸುವವನಾಗಿಯೂ, ಮಂಗಳಾರ್ಚನೆಯನ್ನು ಮಾಡುವವನಾಗಿಯೂ, ತಾನಾಗಿಯೇ ದೊರತ ಅಲ್ಪವಸ್ತುವಿನಿಂದಲೇ ಸಂತೋಷವುಳ್ಳವನಾಗಿಯೂ, ದಾನವಸ್ತುವನ್ನು ಪ್ರತಿಗ್ರಹಮಾಡದೇ ಇರುವವನಾಗಿಯೂ ಸ್ನೇಹಿತ, ಶತ್ರು, ಪುತ್ರ ಇವರಲ್ಲಿ ಸಮತಾಭಾವನೆಯುಳ್ಳವನಾಗಿಯೂ ಇರುವ ಮನುಷ್ಯನು ಕಾಶಿಯಲ್ಲಿ ವಾಸಿಸಲು ಯೋಗ್ಯನು. ಮತ್ತು ಅವನು ರಾಗದ್ವೇಷಾದಿಗಳನ್ನು ಬಿಟ್ಟು ಮೋಹವನ್ನು ತ್ಯಜಿಸಿ ವೇದವೇದಾಂತಜ್ಞಾನವನ್ನು ಪಡೆದಿರಬೇಕು. ॥೮೯-೯೦-೯೧-೯೨॥

ಯಾವಾಗಲೂ ಭಸ್ಮವನ್ನು ಧಾರಣೆ ಮಾಡುವವನೂ, ರುದ್ರಾಕ್ಷಿಯನ್ನು ಧರಿಸುವವನೂ, ರುದ್ರಾಧ್ಯಾಯ ಜಪದಲ್ಲಿ ಆಸಕ್ತನೂ, ಪಂಚಾಕ್ಷರ ಜಪವನ್ನು ಮಾಡುವವನೂ, ಮತ್ತು ಚಾಂದ್ರಾಯಣಾದಿ ವ್ರತಗಳನ್ನು ಕೈಗೊಂಡವನೂ, ಶಿವ

ಚಾಂದ್ರಾಯಣಾದ್ಯನೇಕೇಷ್ಟಃ ಶಿವವ್ರತಪರಾಯಣಃ ।
ಶಿವಭಕ್ತಾರ್ಚನರತಃ ಸರ್ವದಾ ಶಿವಚಿಂತಕಃ ॥೯೪॥

ಅನನ್ಯಶರಣೋ ನಿತ್ಯಂ ಮದಾರಾಧನತತ್ಪರಃ ।
ಕಾಲಭೈರವಪೂಜಾಯಾಂ ನಿಯತಃ ಪ್ರತಿವಾಸರಂ ॥೯೫॥

ಇತರೇಽನ್ಯೇ ಮನುಜಾಃ ಕಾಶ್ಯಾಂ ತಿಷ್ಠಂತೋಽಪಿ ನರಾಧಮಾಃ ।
ಕಾಶೀವಾಸಸಮುತ್ಪನ್ನಧರ್ಮಭಾಜೋ ನ ಸರ್ವದಾ ॥೯೬॥

ಪ್ರತ್ಯುತಾಸ್ಯಾಂ ಸ್ಥಿತಾಃ ಕಾಶ್ಯಾಂ ಪಾಪಮೇವಾರ್ಜಯಂತಿ ತೇ ।
ತದನ್ಯೈರ್ಮನುಜೈಃ ಕಾಶ್ಯಾಂ ನ ಸ್ಥಾತವ್ಯಂ ಕದಾಚನ ॥೯೭॥

ತದನ್ಯೈರಾತ್ಮಹತ್ಯೈವ ಕ್ರಿಯತೇ ಸ್ಥೀಯತೇ ಯದಿ ।
ಮದುಕ್ತಕರ್ಮಹೀನೈಸ್ತು ಕಾಶ್ಯಾಂ ನ ಸ್ಥೇಯಮೇವ ಹಿ ॥೯೮॥

ಕಾಶ್ಯಾಂ ಪ್ರತಿಗ್ರಹೋ ನೈವ ಕರ್ತವ್ಯಃ ಸರ್ವಥಾ ಜನೈಃ ।
ಯದಿ ಮೋಹಾತ್ಪ್ರಮಾದಾದ್ವಾ ಕರೋತಿ ಸ ಪತತ್ಯಧಃ ॥೯೯॥

---

ವ್ರತಪರಾಯಣನೂ ಶಿವಪೂಜೆಯಲ್ಲಿ ನಿರತನೂ, ಸರ್ವಕಾಲದಲ್ಲಿಯೂ ಶಿವನನ್ನು ಚಿಂತಿಸುವವನೂ, ನನ್ನನ್ನು ಹೊರತಾಗಿ ಬೇರೆ ದಿಕ್ಕಿಲ್ಲದವನೂ, ನನ್ನ ಪೂಜೆಯಲ್ಲಿ ಆಸಕ್ತನಾದವನೂ, ಪ್ರತಿದಿನವೂ ಕಾಲಭೈರವನ ಪೂಜೆಯಲ್ಲಿ ನಿರತನೂ ಆದ ಮನುಷ್ಯನು ಕಾಶಿಯಲ್ಲಿ ವಾಸಮಾಡಲು ಅರ್ಹನಾಗಿರುತ್ತಾನೆ. ॥೯೩-೯೪-೯೫॥

ಇನ್ನುಳಿದವರೆಲ್ಲರೂ ನರಾಧಮರಾಗಿರುವರು. ಅವರು ಕಾಶಿಯಲ್ಲಿಯೇ ಇದ್ದರೂ ಕಾಶೀ ನಿವಾಸದಿಂದ ಉಂಟಾದ ಪುಣ್ಯಭಾಗಿಗಳಾಗುವುದಿಲ್ಲ. ಅಲ್ಲದೇ ಅವರು ಕಾಶಿಯಲ್ಲಿ ವಾಸಿಸುವರಾಗಿದ್ದರೂ ಪಾಪವನ್ನೇ ಆಚರಿಸುವರು. ಅಂತಹ ಇತರ ಮನುಷ್ಯರು ಕಾಶಿಯಲ್ಲಿ ವಾಸಿಸಕೂಡದು. ಇನ್ನುಳಿದವರು ಆತ್ಮಹತ್ಯ ಮಾಡಿಕೊಳ್ಳುವರು. ನಾನು ಹೇಳಿದ ನಿಯಮಗಳನ್ನು ಪಾಲಿಸದಿರತಕ್ಕವರು ಖಂಡಿತವಾಗಿಯೂ ಕಾಶಿಯಲ್ಲಿ ಇರಬಾರದು. ॥೯೬-೯೭-೯೮॥

ಎಲೌ ! ಪಾರ್ವತಿಯೇ ಕೇಳು, ಕಾಶಿಯಲ್ಲಿ ದಾನವನ್ನು ಪ್ರತಿಗ್ರಹ ಮಾಡಬಾರದು. ಮೋಹದಿಂದಾಗಲೀ ಪ್ರಮಾದದಿಂದಾಗಲೀ ದಾನವನ್ನು, ಸ್ವೀಕರಿಸಿದರೆ

ನೀರಂ ವಾ ಪಾಂಡುಪರ್ಣಾನಿ ಭಕ್ಷಯಿತ್ವಾ ಯಥೋಚಿತಂ ।
ಸ್ಥಾತವ್ಯಮನಿಶಂ ಕಾಶ್ಯಾಂ ಮುಕ್ತಿಕಾಮೇನ ಶೈಲಜೇ ॥೧೦೦॥

ತತ್ತದ್ದಿನಾರ್ಜಿತೈಃ ಸ್ವಲ್ಪೈರ್ನೀವಾರೈರ್ವಾ ಸ್ವಕಂ ವಪುಃ ।
ಪೋಷಣೀಯಂ ನಿತ್ಯಯಾತ್ರಾಶಿವಧ್ಯಾನಪರಾಯಣೈಃ ॥೧೦೧॥

ದಿನಾಂತರಾಶನಾರ್ಥಾಯ ಸಂಗ್ರಹಃ ಸರ್ವದಾ ಜನೈಃ ।
ನ ಕರ್ತವ್ಯೋ ನ ಕರ್ತವ್ಯಃ ಕಾಶ್ಯಾಂ ಪ್ರಯತಮಾನಸೈಃ ॥೧೦೨॥

ಕಾಶ್ಯಾಂ ಪ್ರತಿಗ್ರಹಾಸಕ್ತೈಃ ಧನಸಂಗ್ರಹತತ್ಪರೈಃ ।
ಸ್ಥಿತ್ವಾ ತೈರ್ಯಾತನಾ ಘೋರಾ ಭೋಕ್ತವ್ಯಾತ್ರ ನ ಸಂಶಯಃ॥೧೦೩॥

ದುಷ್ಪ್ರತಿಗ್ರಹಸಂಸಕ್ತೈಃ ದುರನ್ನಾಶನಲೋಲುಪೈಃ ।
ಅನ್ಯಾಯಾರ್ಜಿತವಿತ್ತೈಶ್ಚ ಕಾಶ್ಯಾಂ ನ ಸ್ಥೇಯಮಂಬಿಕೇ ॥೧೦೪॥

ಅಸತ್ಯವಾದಿಭಿರ್ದುಷ್ಟೈರ್ವಿಷಯಾಸಕ್ತಮಾನಸೈಃ ।
ಶಿವಾಚಾರವಿಹೀನೈಶ್ಚ ಕಾಶ್ಯಾಂ ನ ಸ್ಥೇಯಮಂಬಿಕೇ ॥೧೦೫॥

---

ಅವನು ಪತಿತನಾಗುವನು. ಮುಕ್ತಿಯ ಬಯಕೆ ಇದ್ದವನು ನೀರನ್ನಾಗಲೀ ಚಿಗುರು ಎಲೆಯನ್ನಾಗಲೀ ಒಣಎಲೆಯನ್ನಾಗಲಿ ತಿಂದು ಶಾಸ್ತ್ರರೀತಿಯಾಗಿ ತಪಸ್ಸು ಮಾಡುತ್ತ ಕಾಶಿಯಲ್ಲಿ ವಾಸಮಾಡಬೇಕು. ॥೯೯-೧೦೦॥

ಮತ್ತು ಆಯಾ ದಿನದಲ್ಲಿ ಸಂಪಾದಿಸಿದ ಸ್ವಲ್ಪವಾದ ನೀವಾರ ಧಾನ್ಯದಿಂದಲೇ ಶರೀರವನ್ನು ಪೋಷಿಸಬೇಕು. ಶಿವಧ್ಯಾನಾಸಕ್ತರಾಗಿ ನಿತ್ಯ ಯಾತ್ರೆಯನ್ನು ನಡೆಸಬೇಕು. ಮುಂದಿನ ದಿನದ ಜೀವನಕ್ಕಾಗಿ ಇಂದಿನಿಂದಲೇ ದ್ರವ್ಯಸಂಗ್ರಹವನ್ನು ಕಾಶಿಯಲ್ಲಿರುವವರು ಮಾಡಬಾರದು. ಕಾಶಿಯಲ್ಲಿ ವಾಸಮಾಡುತ್ತಾ ದಾನಪ್ರತಿಗ್ರಹವನ್ನು ನಿಜವಾಗಿ ಮಾಡಕೂಡದು. ಹಾಗೆ ಮಾಡುತ್ತಾ ಧನಸಂಪಾದಿಸಿದವರು ತೀವ್ರವಾದ ನರಕಯಾತನೆಯನ್ನು ಅನುಭವಿಸುವರು. ॥೧೦೧-೧೦೨-೧೦೩॥

ದುಷ್ಟವಾದ ದಾನಾದಿಗಳನ್ನು ಮಾಡುವವರೂ, ಶ್ರಾದ್ಧಾದಿಗಳ ದುಷ್ಟ ಅನ್ನವನ್ನು ಊಟಮಾಡುವವರೂ, ಅನ್ಯಾಯದಿಂದ ಹಣ ಸಂಪಾದನೆ ಮಾಡುವವರೂ ಸುಳ್ಳು ಹೇಳುವವರೂ, ಕೆಟ್ಟಕೆಟ್ಟ ಆಚಾರ ವ್ಯವಹಾರಗಳಲ್ಲಿ ನಿರತರಾದವರೂ,

ಮದನ್ಯಪೂಜನಾಸಕ್ತೈಃ ಮದನ್ಯಾಲೋಕನೋತ್ಸುಕೈಃ ।
ಮದನ್ಯಾಶ್ರಯಚಿತ್ತೈಶ್ಚ ಕಾಶ್ಯಾಂ ನ ಸ್ಥೇಯಮಂಬಿಕೇ ॥೧೦೬॥

ಪುತ್ರಸ್ನೇಹರತೈರ್ಲುಬ್ಧೈರ್ಧೀವರ್ಯೈಃ ಪಿಶುನೈರ್ಜಡೈಃ ।
ಸ್ವದೇಹಪೋಷಣಾಸಕ್ತೈಃ ಕಾಶ್ಯಾಂ ನ ಸ್ಥೇಯಮಂಬಿಕೇ ॥೧೦೭॥

ಶಿವದ್ವೇಷರತೈರ್ಮೂರ್ಢೈಃ ಕೃಪಣೈಃ ಶಿವನಾದಕೈಃ ।
ಪಂಚಾಕ್ಷರವಿಹೀನೈಶ್ಚ ಕಾಶ್ಯಾಂ ನ ಸ್ಥೇಯಮಂಬಿಕೇ ॥೧೦೮॥

ಭಸ್ಮೋದ್ಧೂಲನರುದ್ರಾಕ್ಷಜಟಾಹೀನೈರ್ನರಾಧಮೈಃ ।
ಲಿಂಗಪೂಜಾವಿಹೀನೈಶ್ಚ ಕಾಶ್ಯಾಂ ನ ಸ್ಥೇಯಮಂಬಿಕೇ ॥೧೦೯॥

ಪರಸ್ತ್ರೀನಿರತೈರ್ನಷ್ಟೈಃ ಶಿವಶಾಸ್ತ್ರವಿನಾದಕೈಃ ।
ಶೈವದುಃಖಕರೈಃ ಕ್ರೂರೈಃ ಕಾಶ್ಯಾಂ ನ ಸ್ಥೇಯಮಂಬಿಕೇ ॥೧೧೦॥

ರಾಗದ್ವೇಷಾಕ್ರಾಂತಚಿತ್ತೈರ್ಮದನಾಕ್ರಾಂತವಿಗ್ರಹೈಃ ।
ರಾಜಸೈಸ್ತಾಮಸೈಃಶೂನ್ಯೈಃ ಕಾಶ್ಯಾಂ ನ ಸ್ಥೇಯಮಂಬಿಕೇ ॥೧೧೧

---

ಶೈವಾಚಾರಹೀನರೂ ಕಾಶಿಯಲ್ಲಿ ವಾಸಿಸಕೂಡದು. ಎಲೌ! ಅಂಬಿಕೆಯೇ ಕೇಳು. ನನ್ನ ಹೊರತು ಬೇರೆಯವರನ್ನು ಪೂಜೆ ಮಾಡುವವರೂ, ಅಶೈವ ವಿಗ್ರಹ ದರ್ಶನ ಮಾಡುವವರೂ, ಬೇರೆಯವರಲ್ಲಿ ಆಸಕ್ತವಾದ ಮನಸ್ಸುಳ್ಳವರೂ ಕಾಶಿಯಲ್ಲಿ ವಾಸಿಸಬಾರದು. ||೧೦೪-೧೦೫-೧೦೬||

ತಮ್ಮ ಮಕ್ಕಳಲ್ಲಿ ಮಮತೆಯುಳ್ಳವರೂ, ಆಶಾಪರರೂ, ಬೆಸ್ತರೂ, ಚಾಡಿ ಹೇಳುವವರೂ, ಸೋಮಾರಿಗಳೂ, ಇವರು ಕಾಶಿಯಲ್ಲಿ ವಾಸಿಸಕೂಡದು. ತಮ್ಮ ದೇಹಪೋಷಣೆಯಲ್ಲಿಯೇ ಆಸಕ್ತರಾದವರೂ, ಈಶ್ವರನನ್ನು ದ್ವೇಷಿಸತಕ್ಕವರೂ, ಕೃಪಣರೂ, ಶಿವನನ್ನು ನಿಂದಿಸುವವರೂ, ಭಸ್ಮ, ರುದ್ರಾಕ್ಷಿ, ಮೊದಲಾದುವನ್ನು ಧರಿಸದಿರುವವರೂ, ಲಿಂಗಪೂಜೆಯಿಲ್ಲದವರೂ, ಯಾವಾಗಲೂ ವ್ಯಭಿಚಾರಮಾಡುವವರೂ, ಶಿವಸಂಬಂಧವಾದ ಶಾಸ್ತ್ರವನ್ನು ಖಂಡಿಸುವವರೂ, ಕಾಶಿಯಲ್ಲಿ ವಾಸಿಸಲು ಅನರ್ಹರು. ಅಲ್ಲದೇ ಶಿವಭಕ್ತರಿಗೆ ಕೇಡು ಮಾಡುವವರೂ, ಕ್ರೂರ ಸ್ವಭಾವದವರೂ ರಾಗ ದ್ವೇಷಾಸೂಯೆಗಳಿಂದ ಕೂಡಿದವರೂ, ರಾಜಸ, ತಾಮಸ, ಸ್ವಭಾವದವರೂ, ಕಾಶಿಯಲ್ಲಿ ಎಂದೂ ವಾಸಿಸಬಾರದು. ||೧೦೭-೧೦೮-೧೦೯-೧೧೦-೧೧೧||

ಈದೃಶೈಃ ಪಾಪನಿರತೈಃ ಸ್ಥಿತ್ವಾ ಕಾಶ್ಯಾಂ ಯಥೇಪ್ಸಯಾ ।
ದೇಹಾಂತೇ ಯಾತನಾಕ್ರೂರಾಃ ಪ್ರಾಪ್ತವ್ಯಾಃ ಸತ್ಯಮುಚ್ಯತೇ॥೧೧೨॥

ಪಾಪಭೀರುಭಿರುತ್ಕೃಷ್ಟೈಃ ಶೈವಶಾಸ್ತ್ರವಿಶಾರದೈಃ ।
ಲಿಂಗಪೂಜಾರತೈಃ ಶೈವೈಃ ಕಾಶ್ಯಾಂ ಸ್ಥಾತವ್ಯಮಂಬಿಕೇ ॥೧೧೩॥

ಭಸ್ಮತ್ರಿಪುಂಡ್ರನಿಟಿಲೈರ್ಭಸ್ಮೋದ್ಧೂಲನತತ್ಪರೈಃ ।
ಶಿವೈಕದೈವತೈಃ ಶೈವೈಃ ಕಾಶ್ಯಾಂ ಸ್ಥಾತವ್ಯಮಂಬಿಕೇ ॥೧೧೪॥

ಶಿವದೀಕ್ಷಾಪರೈಃ ಶಿಷ್ಟೈಃ ಪಂಚಾಕ್ಷರಪರಾಯಣೈಃ ।
ಮನ್ನಾಮಜೀವನೈಃ ಶೈವೈಃ ಕಾಶ್ಯಾಂ ಸ್ಥಾತವ್ಯಮಂಬಿಕೇ ॥೧೧೫॥

ರುದ್ರಾಧ್ಯಾಯಜಪಾಸಕ್ತೈಃ ಶಿವವೀಕ್ಷಣತತ್ಪರೈಃ ।
ನಿಷ್ಕಲ್ಮಷಪರೈಃ ಶೈವೈಃ ಕಾಶ್ಯಾಂ ಸ್ಥಾತವ್ಯಮಂಬಿಕೇ ॥೧೧೬॥

ರುದ್ರಾಕ್ಷಮಾಲಾಭರಣೈರ್ಜಟಾಮಂಡಲಮಂಡಿತೈಃ ।
ಶಿವಧ್ಯಾನರತೈಃ ಶೈವೈಃ ಕಾಶ್ಯಾಂ ಸ್ಥಾತವ್ಯಮಂಬಿಕೇ ॥೧೧೭॥

---

ಎಲೌ ! ಪಾರ್ವತೀದೇವಿಯೇ, ಇಂತಹ ಪಾಪಿಗಳು ತಮ್ಮ ಮನಸ್ಸಿಗೆ ಬಂದಂತೆ ಕಾಶಿಯಲ್ಲಿ ವಾಸಮಾಡುವರು. ಬಳಿಕ ಅದರಿಂದ ಭಯಂಕರವಾದ ಘೋರಯಾತನೆಯನ್ನು ಅವರು ಅನುಭವಿಸುವರು. ಪ್ರಿಯಳೇ ! ಕೇಳು. ಪಾಪಕ್ಕೆ ಹೆದರುವವರೂ, ಉತ್ತಮರೆನಿಸಿದವರೂ, ಶೈವಶಾಸ್ತ್ರದಲ್ಲಿ ಪಂಡಿತರಾದವರೂ ಲಿಂಗ ಪೂಜಾರತರೂ, ಆದ ಈಶ್ವರ ಭಕ್ತರು ಕಾಶಿಯಲ್ಲಿ ವಾಸಮಾಡಬೇಕು. ವಿಭೂತಿ ರುದ್ರಾಕ್ಷಿಗಳಿಂದ ಕಂಗೊಳಿಸುವವರೂ, ಭಸ್ಮ ಲೇಪನದಲ್ಲಿ ನಿರತರಾದವರೂ, ಶಿವ ನೊಬ್ಬನೇ ತಮ್ಮ ದೇವರೆಂದು ತಿಳಿದವರೂ ಕಾಶಿಯಲ್ಲಿ ವಾಸಮಾಡಬಹುದು. ಶೈವ ದೀಕ್ಷೆಯನ್ನು ಕೈಗೊಂಡವರೂ, ಶಿಷ್ಟರೂ, ಪಂಚಾಕ್ಷರೀ ಜಪವನ್ನು ನಡೆಸುವವರೂ ನನ್ನ ನಾಮಪಾರಾಯಣವೇ ತಮ್ಮ ಜೀವನವೆಂದು ತಿಳಿದವರೂ ಕಾಶೀವಾಸಕ್ಕೆ ಯೋಗ್ಯರು. ॥೧೧೨-೧೧೩-೧೧೪-೧೧೫॥

ರುದ್ರಾಧ್ಯಾಯವನ್ನು ಜಪಿಸುವವರೂ, ಶಿವಲಿಂಗ ದರ್ಶನವನ್ನು ಮಾಡು ವವರೂ, ರಾಗದ್ವೇಷಾದಿಗಳಿಗೆ ಮನಸ್ಸು ಕೊಡದೇ ಶುದ್ಧರಾಗಿರುವವರೂ, ರುದ್ರಾಕ್ಷಿ ಮಾಲೆಯಿಂದ ಅಲಂಕೃತರಾಗಿರುವವರೂ, ಜಟಾಧಾರಿಗಳೂ ಪಶುಪತಿಯ ಸೇವ

ಮಹಾಪಾಶುಪತೈರ್ಧೀರೈರ್ಯೋಗಶಾಸ್ತ್ರವಿಶಾರದೈಃ ।
ಶಿವಾದ್ವೈತಪರೈಃ ಶೈವೈಃ ಕಾಶ್ಯಾಂ ಸ್ಥಾತವ್ಯಮಂಬಿಕೇ ॥೧೧೮॥

ಜಿತೇಂದ್ರಿಯೈರ್ಜಿತಾಹಾರೈಃ ಜೀರ್ಣಪರ್ಣಾಂಬುಭಕ್ಷಣೈಃ ।
ಶಿವೈಕಕಾರಣೈಃ ಶೈವೈಃ ಕಾಶ್ಯಾಂ ಸ್ಥಾತವ್ಯಮಂಬಿಕೇ ॥೧೧೯॥

ರಾಗದ್ವೇಷಾದಿರಹಿತೈಃ ಛಿನ್ನಸಂಸಾರಬಂಧನೈಃ ।
ಸಾತ್ವಿಕೈರನಘೈಃ ಶೈವೈಃ ಕಾಶ್ಯಾಂ ಸ್ಥಾತವ್ಯಮಂಬಿಕೇ ॥೧೨೦॥

ಕಲತ್ರಪುತ್ರಮಿತ್ರೇಷ್ಟಸ್ನೇಹಹೀನೈರನಾಕುಲೈಃ ।
ಶಿವಭಕ್ತಿರತೈಃ ಶೈವೈಃ ಕಾಶ್ಯಾಂ ಸ್ಥಾತವ್ಯಮಂಬಿಕೇ ॥೧೨೧॥

ಯದೃಚ್ಛಾಲಾಭಸಂತುಷ್ಟೈಃ ಸುಖದುಃಖವಿವರ್ಜಿತೈಃ ।
ನಿತ್ಯಯಾತ್ರಾಪರೈಃ ಶೈವೈಃ ಕಾಶ್ಯಾಂ ಸ್ಥಾತವ್ಯಮಂಬಿಕೇ ॥೧೨೨॥

ನಿತ್ಯಂ ಮತ್ಪೂಜನಾಸಕ್ತೈರ್ಮದ್ಭಕ್ತಜನಸೇವಕೈಃ ।
ದೃಷ್ಟಾಂತಃಕರಣೈಃ ಶೈವೈಃ ಕಾಶ್ಯಾಂ ಸ್ಥಾತವ್ಯಮಂಬಿಕೇ ॥೧೨೩॥

---

ಕರೂ, ಯೋಗವನ್ನು ಬಲ್ಲವರೂ, ಶಿವಾದ್ವೈತವನ್ನು ತಿಳಿದವರೂ, ಕಾಶಿಯಲ್ಲಿ ವಾಸಮಾಡಬಹುದು. ॥೧೧೬-೧೧೭-೧೧೮॥

ಪಂಚೇಂದ್ರಿಯುಗಳನ್ನು ಜಯಿಸಿದವರೂ, ನಿಯಮಿತವಾದಷ್ಟು ಆಹಾರವನ್ನು ಸೇವಿಸುವವರೂ, ಮತ್ತು ಜೀರ್ಣವಾದ ಎಲೆ ನೀರು ಮೊದಲಾದುವನ್ನು ಭುಂಜಿಸುವವರೂ, ಶಿವನೇ ಎಲ್ಲಕ್ಕೂ ಕಾರಣನೆಂದು ವಾದಿಸುವವರೂ, ಕಾಶಿಯಲ್ಲಿ ವಾಸಿಸಬೇಕು. ರಾಗದ್ವೇಷಾದಿಗಳಿಲ್ಲದವರೂ, ಸಂಸಾರದ ಎಡರು ತೊಡರುಗಳನ್ನು ತಪ್ಪಿಸಿಕೊಂಡವರೂ, ಸಾತ್ವಿಕಸ್ವಭಾವದವರೂ, ತಮ್ಮ ಹೆಂಡಿರು, ಮಕ್ಕಳು, ಸ್ನೇಹಿತರು ಇವರುಗಳಲ್ಲಿ ಮಮತೆಯಿಲ್ಲದವರೂ, ಶಿವನಲ್ಲಿ ಅತಿಯಾಗಿ ಭಕ್ತಿಯನ್ನಿಟ್ಟುಕೊಂಡವರೂ, ಕಾಶಿಯಲ್ಲಿ ವಾಸಿಸಲು ಅರ್ಹರಾಗಿರುತ್ತಾರೆ. ಸಿಕ್ಕಷ್ಟು ದ್ರವ್ಯವನ್ನು ಸ್ವೀಕರಿಸಿ ಸಂತೋಷಿಸುವವರೂ, ಸುಖದುಃಖಗಳಲ್ಲಿ ಒಂದೇ ಸಮನಾದ ಭಾವನೆಯುಳ್ಳವರೂ, ನಿತ್ಯ ಶಿವಯಾತ್ರೆಯನ್ನು ಮಾಡುವವರೂ, ಈಶ್ವರಭಕ್ತರೂ ಆದ ಜನರು ಕಾಶೀವಾಸಕ್ಕೆ ಅರ್ಹರಾದವರು. ೧೧೯-೧೨೦-೧೨೨॥

ಅಂಬಿಕೆಯೇ ಕೇಳು, ಪ್ರತಿದಿನವೂ ನನ್ನನ್ನು ಅರ್ಚಿಸುವವರೂ, ನನ್ನ ಭಕ್ತ

ನಿತ್ಯಂ ಮತ್ಪೂಜನಾಸಕ್ತೈರ್ಮದ್ಭಕ್ತಜನಸೇವಕೈಃ ।
ಹೃಷ್ಟಾಂತಃಕರಣೈಃ ಶೈವೈಃ ಕಾಶ್ಯಾಂ ಸ್ಥಾತವ್ಯಮಂಬಿಕೇ ॥೧೨೪॥

ಅಂತರ್ಗೃಹಾದಿಯಾತ್ರಾಯಾಂ ನಿತ್ಯಮುದ್ಯುಕ್ತಮಾನಸೈಃ ।
ಮತ್ತತ್ತ್ವಚಿಂತಕೈಃ ಶೈವೈಃ ಕಾಶ್ಯಾಂ ಸ್ಥಾತವ್ಯಮಂಬಿಕೇ ॥೧೨೫॥

ಅತ್ಯುತ್ಸುಕೈರನಿರ್ವಿಣ್ಣೈಃ ಪ್ರತಿಗ್ರಹಪರಾಙ್ಮುಖೈಃ ।
ವಶೀಕೃತೇಂದ್ರಿಯೈಃ ಶೈವೈಃ ಕಾಶ್ಯಾಂ ಸ್ಥಾತವ್ಯಮಂಬಿಕೇ ॥೧೨೬॥

ಹರ ಹರ ಪರಮೇಶಾನಂದಕಂದೇಶಶಂಭೋ
ಶಿವ ಶಿವ ಕರುಣಾಬ್ಧೇ ಶಂಕರಾಶೇಷಹೇತೋ ।
ಭವಭಯಭಯಹಾರಿನ್ ದೇವ ದೇವೇತಿ ನಿತ್ಯಂ
ಶಿವನಗರನಿವಾಸಾಸಕ್ತಚಿತ್ತಾ ವದಂತಿ ॥೧೨೭॥

ಇತಿ ಶ್ರೀಶಿವರಹಸ್ಯೇ ಸಪ್ತಮಾಂಶೇ ಕಾಶೀವಾಸಪ್ರಭಾವವರ್ಣನಂ ನಾಮ
ಚತುರ್ಥೋಽಧ್ಯಾಯಃ

---

ರನ್ನು ಪೂಜಿಸುವವರೂ, ಸಂತುಷ್ಟವಾದ ಮನಸ್ಸುಳ್ಳವರೂ, ಶಿವಭಕ್ತರೂ, ಕಾಶಿಯಲ್ಲಿ ವಾಸಮಾಡಬೇಕು. ಅಂತರ್ಗೃಹ ಯಾತ್ರೆಯೇ ಮೊದಲಾದುವಲ್ಲಿ ಯಾವಾಗಲೂ ಸಿದ್ಧರಾದವರೂ, ಶಿವತತ್ವಪರಾಯಣರಾದವರೂ, ಕಾಶೀವಾಸಕ್ಕೆ ಅರ್ಹರು. ||೧೨೩-೧೨೪-೧೨೫||

ಪರಮೇಶ್ವರನ ಸಾನ್ನಿಧ್ಯವನ್ನು ಬಯಸುವ ಭಕ್ತರು ಅನನ್ಯ ಮನಸ್ಕರಾಗಿ ಯಾವಾಗಲೂ ಹರ! ಶಂಭೋ ನಮ್ಮನ್ನು ಕಾಪಾಡು ಎಂದು ಪ್ರಾರ್ಥಿಸುವರು. ಎಲೈ ಕರುಣಾಸಮುದ್ರನಾದ ಶಂಕರನೇ, ನೀನು ಎಲ್ಲ ಸೃಷ್ಟಿಸ್ಥಿತಿಲಯಗಳಿಗೂ ಕಾರಣನಾಗಿರುತ್ತೀಯೆ. ಸಂಸಾರಭಯವನ್ನು ನಿವಾರಿಸುವವನು ನೀನೇ. ಎಂದು ಆ ಪರಶಿವನನ್ನು ಭಜಿಸುವರು. ಆದರಿಂದ ಅವರು ಸಕಲೇಷ್ಟಾರ್ಥವನ್ನೂ ಸುಲಭವಾಗಿ ಪಡೆಯುವರು. ಎಂದು ಮಹಾದೇವನು ಪಾರ್ವತಿಗೆ ಕಾಶೀವಾಸಮಹಿಮೆಯನ್ನು ತಿಳಿಸಿದನು. ||೧೨೬||

ಇಲ್ಲಿಗೆ ಶ್ರೀ ಶಿವರಹಸ್ಯದ ಏಳನೆಯ ಅಂಶದಲ್ಲಿ ಕಾಶೀವಾಸ ಮಹಿಮೆಯ
ವರ್ಣನೆ ಎಂಬ ನಾಲ್ಕನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

|| ಶ್ರೀಶಿವಾಯ ನಮಃ ||

# ಅಥ ಶ್ರೀಶಿವರಹಸ್ಯೇ

## ಉಗ್ರಾಖ್ಯೇ

### ಸಪ್ತಮಾಂಶೇ ಪೂರ್ವಾರ್ಧೇ

### ಪಂಚಮೋಽಧ್ಯಾಯಃ

|| ಪಾರ್ವತ್ಯುವಾಚ ||

ಮಹೇಶಾಖಿಲದೇವೇಶ ಕಾಶೀವಾಸರತೈರ್ನರೈಃ ।
ಪ್ರತ್ಯಹಂ ನಿಯತಂ ಕಾಶ್ಯಾಂ ಕಿಂ ಕರ್ತವ್ಯಂ ವದ ಪ್ರಭೋ ॥೧॥

ಕಮಲಾಮಲಪತ್ರಾಕ್ಷಿ ಶೃಣು ಶೈಲಸುತೇಽಮಲೇ ।
ವಕ್ಷ್ಯೇ ಪ್ರತ್ಯಾಹ್ನಿಕಂ ಕರ್ಮ ಕಾಶೀವಾಸೇಷ್ಟಚೇತಸಾಂ ॥೨॥

ಅರುಣೋದಯವೇಲಾಯಾಮುತ್ಥಾಯ ಪ್ರತ್ಯಹಂ ಶಿವೇ ।
ಪಂಚಕ್ರೋಶಾದ್ಬಹಿರ್ದೂರಾದ್ಗಂತವ್ಯಂ ನಿಯತೇಂದ್ರಿಯೈಃ ॥೩॥

---

## ಐದನೆಯ ಅಧ್ಯಾಯ

ಸಮಸ್ತ ದೇವತೆಗಳಿಗೂ ಒಡೆಯನಾದ ಮಹೇಶ್ವರನೇ ! ಕಾಶಿಯಲ್ಲಿ ಇರುವವರು ಪ್ರತಿನಿತ್ಯವೂ ಏನುಮಾಡಬೇಕು ? ಅವರ ನಿತ್ಯಕರ್ತವ್ಯಕರ್ಮಗಳಾವುವು ? ಎಂಬುದನ್ನು ದಯೆಯಿಂದ ಹೇಳು ಎಂದು ಪಾರ್ವತಿಯು ಪುನಃ ಪ್ರಶ್ನಿಸಿದಳು.||೧||

ಕಮಲದ ಎಸಳಿನಂತೆ ಸ್ವಚ್ಛವಾದ ಮತ್ತು ಕಾಂತಿಯುತವಾದ ನೇತ್ರವುಳ್ಳವಳೇ! ಓ! ಪ್ರಿಯೇ ಪಾರ್ವತಿಯೆ ! ಕೇಳು. ಪ್ರತಿದಿನವೂ ಕಾಶೀವಾಸಿಗಳಾದ ಜನರು ಮಾಡಬೇಕಾದ ಕೃತ್ಯವನ್ನು ಹೇಳುವೆನು. ಅಲ್ಲಿ ವಾಸಿಸುವವರು ಅರುಣೋದಯ ಕಾಲಕ್ಕೆ ಹಾಸಿಗೆಯಿಂದ ಎದ್ದು ಜಿತೇಂದ್ರಿಯರಾಗಿ ಐದುಕ್ರೋಶ ಅಂದರೆ ಸುಮಾರು

ವಿಲೋಕ್ಯ ನಿರ್ಜನಂ ದೇಶಮೂಷರಂ ತೃಣವರ್ಜಿತಂ ।
ತೃಣೈರಾಚ್ಛಾದ್ಯ ತಂ ದೇಶಂ ಮೃದಮಾದಾಯ ನೂತನಾಂ ॥೪॥

ತೀರ್ಥಾನ್ಯಜಲಮಾಹೃತ್ಯ ಬೃಹತ್ಪಾತ್ರೇಷು ಪೂರಯೇತ್ ।
ಕರ್ಣಸ್ಥಬ್ರಹ್ಮಸೂತ್ರಸ್ಸನ್ ದಕ್ಷಿಣಾಮುಖಮಾಸ್ಥಿತಃ ॥೫॥

ಕುರ್ಯಾನ್ಮೂತ್ರಪುರೀಷೇ ಚ ತತೋಽನ್ಯತ್ರೋಪಸಂವಿಶೇತ್ ।
ಮೃದಂ ತ್ರಿಧಾ ವಿಭಜ್ಯಾಥ ಭಾಗಮೇಕಂ ವಿಭಜ್ಯ ಚ ॥೬॥

ಸ್ಥೂಲಾಮಲಕಮಾನೇನ ಗೃಹೀತ್ವಾ ಮೃದಮಾದರಾತ್ ।
ಶೌಚಂ ಕಾರ್ಯಂ ಪ್ರಯತ್ನೇನ ಗಂಧಲೇಪಕ್ಷಯಾವಧಿ ॥೭॥

ಕರಶೌಚಂ ತತಃ ಕೃತ್ವಾ ಪಾದಶೌಚಂ ನಿವರ್ತಯೇತ್ ।
ಅಪ್ರಮಾದೇನ ಮೌನೇನ ತ್ಯಕ್ತ್ವಾನ್ಯಾಲಾಪನಂ ತದಾ ॥೮॥

---

ಐದು ಮೈಲಿ ದೂರ ಹೊರಕ್ಕೆ ಹೋಗಬೇಕು. ಬಳಿಕ ಮರಳು ಪ್ರದೇಶದಲ್ಲಿ ಹುಲ್ಲು ಇಲ್ಲದಿರುವ ಸ್ಥಳವನ್ನು ಹುಡುಕಬೇಕು. ಅನಂತರ ಆ ಜಾಗವನ್ನು ಒಣಹುಲ್ಲಿನಿಂದ ಮುಚ್ಚಬೇಕು. ಶುದ್ಧವಾದ ಹೊಸಮಣ್ಣನ್ನು ತರಬೇಕು. ದೊಡ್ಡ ಪಾತ್ರೆಯಲ್ಲಿ ತೀರ್ಥೋದಕವಲ್ಲದ ಬೇರೆ ನೀರನ್ನು ತುಂಬಿ ತರಬೇಕು. ಯಜ್ಞೋಪವೀತವನ್ನು ಬಲ ಕಿವಿಗೆ ಸಿಕ್ಕಿಸಿಕೊಳ್ಳಬೇಕು. ಆಮೇಲೆ ತಾನು ಒಣತೃಣಗಳಮೇಲೆ ದಕ್ಷಿಣಾಭಿಮುಖವಾಗಿ ಕುಳಿತುಕೊಳ್ಳಬೇಕು. ||೨-೩-೪-೫||

ಅಲ್ಲಿಯೇ ಮಲಮೂತ್ರೋತ್ಸರ್ಗವನ್ನು ನಡೆಸಬೇಕು. ಅನಂತರ ಶುದ್ಧವಾದ ಬೇರೊಂದು ಕಡೆಯಲ್ಲಿ ಕುಳಿತುಕೊಳ್ಳಬೇಕು. ತಾನು ಹಿಂದೆ ತಂದಿದ್ದ ಮೃತ್ತಿಕೆಯನ್ನು ಮೂರು ಭಾಗಮಾಡಿ ಒಂದು ಭಾಗವನ್ನು ಬೇರೆ ಕಡೆ ಇಡಬೇಕು. ಒಂದು ದೊಡ್ಡ ನೆಲ್ಲಿಕಾಯಿಯ ಪ್ರಮಾಣ ಮೃತ್ತಿಕೆಯನ್ನು ತೆಗೆದುಕೊಂಡು ಶೌಚವನ್ನು ಆಚರಿಸಬೇಕು. ವಾಸನೆ ಮತ್ತು ಲೇಪ ಇವು ಹೋಗುವವರೆಗೆ ಶೌಚಕಾರ್ಯವನ್ನು ನೆರವೇರಿಸಬೇಕು. ಬಳಿಕ ಕೈಗಳನ್ನು ಮೃತ್ತಿಕೆಯಿಂದ ಶುದ್ಧಿಗೊಳಿಸಿ ಅನಂತರ ಕಾಲುಗಳನ್ನು ಇದೇರೀತಿ ತೊಳೆಯಬೇಕು. ಶೌಚಕಾಲದಲ್ಲಿ ಎಚ್ಚರಿಕೆಯಿಂದಲೂ ಮೌನದಿಂದಲೂ ಇರಬೇಕು. ||೬-೭-೮||

ಪೂರ್ವಸ್ಥಾಪಿತಮೃದ್ಭಾಗದ್ವಯೇನೈವ ಯಥಾವಿಧಿ ।
ಅನ್ಯಾಂ ವಾ ಮೃದಮಾನೀಯ ಮರುದೇಶಸ್ಥಿತಂ ಶುಚಿ ॥೯॥

ಅಪಾನೇ ಪಂಚಧಾ ಹಸ್ತೇ ದಶಧಾಂತೇ ಕರದ್ವಯೇ ।
ಸಪ್ತೈಕಪಾದಯೋರೇಕಾ ಶೇಫೈಸ್ತಿಸ್ರಃ ಕರೇ ತ್ರಿಧಾ ॥೧೦॥

ಏವಂ ಗೃಹಸ್ಥೈಃ ಕರ್ತವ್ಯಂ ದ್ವಿಗುಣಂ ಬ್ರಹ್ಮಚಾರಿಣಾ ।
ತ್ರಿಗುಣಂ ವನವಾಸೈಸ್ತು ಯತಿಭಿಸ್ತು ಚತುರ್ಗುಣಂ ॥೧೧॥

ಏತದ್ದಶಗುಣಂ ಕಾರ್ಯಂ ಮಹಾಪಾಶುಪತೈರ್ವರೈಃ ।
ತತಶ್ಚತುರ್ಗುಣಂ ಕಾರ್ಯಂ ಮಹಾಶೈವೈಃ ಶಿವಾರ್ಚಕೈಃ ॥೧೨॥

ತತೋ ದ್ವಾದಶಗಂಡೂಷೈಃ ಕುರ್ಯಾದ್ವಕ್ತ್ರಸ್ಯ ಶೋಧನಂ ।
ಏಕೈಕಗುಣವೃದ್ಧ್ಯೈವಮಾಶೈವಮಿದಮಾದರಾತ್ ॥೧೩॥

---

ಮೊದಲು ಇಟ್ಟ ಎರಡು ಭಾಗ ಮೃತ್ತಿಕೆಯಿಂದಾಗಲಿ, ಅಥವಾ ಶುದ್ಧವಾದ ಮರುಭೂಮಿಯ ಮಣ್ಣಿನಿಂದಾಗಲಿ ಮುಂದೆ ಈರೀತಿ ಮೃತ್ತಿಕಾಶೌಚವನ್ನು ನೆರವೇರಿಸಿಕೊಳ್ಳಬೇಕು. ಗುದಪ್ರದೇಶಕ್ಕೆ ಐದು ಬಾರಿ, ಕೈಗಳಿಗೆ ಹತ್ತು ಬಾರಿ, ಮೃತ್ತಿಕೆಯಿಂದ ಶೌಚವನ್ನು ತೀರಿಸಬೇಕು. ಒಂದೊಂದು ಚರಣಕ್ಕೂ ಏಳು ಸಲ ಮೃತ್ತಿಕೆಯನ್ನು ಹಚ್ಚಬೇಕು. ಕೈಗೆ ಪುನಃ ಮೂರು ಸಲ ಮೃತ್ತಿಕೆಯನ್ನು ಹಚ್ಚಿ, ಶೌಚವನ್ನು ನಡೆಸಬೇಕು. ಹೀಗೆ ಗೃಹಸ್ಥಾಶ್ರಮಿಗಳು ಶೌಚಕರ್ಮಗಳನ್ನು ಆಚರಿಸಬೇಕು. ಬ್ರಹ್ಮಚಾರಿಗಳಿಗೆ ಇದರ ಎರಡರಷ್ಟು ಶೌಚವೂ, ಹಾಗೆಯೇ ವಾನಪ್ರಸ್ಥಾಶ್ರಮಿಗಳಿಗೆ ಮೂರರಷ್ಟೂ, ಸಂನ್ಯಾಸಿಗಳಿಗೆ ನಾಲ್ಕರಷ್ಟು, ಮಹಾ ಪಶುಪತಿಯ ಭಕ್ತರಿಗೆ ಹತ್ತರಷ್ಟೂ ಶೌಚಕರ್ಮವು ವಿಹಿತವಾಗಿದೆ. ಶಿವಾರ್ಚನತತ್ಪರರಾದ ಶೈವರು ಇದರ ನಾಲ್ಕರಷ್ಟು ಶೌಚವನ್ನು ಮಾಡಬೇಕು. ಬಳಿಕ ಹನ್ನೆರಡು ಸಲ ಬಾಯಿ ಮುಕ್ಕಳಿಸಿ ಬಾಯಿಯೊಳಗಿರುವ ಕಶ್ಮಲವನ್ನು ಶೋಧಿಸಬೇಕು. ಇದೂ ಸಹ ಗೃಹಸ್ಥರಿಂದ ಹಿಡಿದು ಶೈವಪರ್ಯಂತವಾಗಿ ಸಂಖ್ಯಾವೃದ್ಧಿಹೊಂದುವುದು.॥೯-೧೦-೧೧-೧೨-೧೩॥

ಕರ್ತವ್ಯಂ ನಿಯತೈರ್ನಿತ್ಯಂ ಶೌಚಂ ಪಾಪಾಪನೋದಕಂ ।
ನೋ ಚೇದಗ್ರತನೇ ಕರ್ಮಣ್ಯಧಿಕಾರೋ ನ ವಿದ್ಯತೇ ॥೧೪॥

ತತಃ ಖದಿರಕಾಷ್ಠಾದ್ಯೈಃ ದಂತಧಾವನಮಾಚರೇತ್ ।
ಪುನಃ ಪ್ರಕ್ಷಾಲ್ಯ ವದನಂ ಪ್ರವಿಶೇತ್ ಸ್ವಾಲಯಂ ತತಃ ॥೧೫॥

ತತ್ರ ಶುದ್ಧಾಸನಾಸೀನಃ ಶಿವಮದ್ವಯಮವ್ಯಯಂ ।
ಚಿಂತಯಿತ್ವಾ ತತೋ ಗಚ್ಛೇತ್ ಸ್ನಾನಾಯಾಹಿತಮಾನಸಃ ॥೧೬॥

ಶಿವಲಿಂಗಪ್ರಾಂತದೇಶವಿಲಸದ್ವಿಮಲೇ ಜಲೇ ।
ಸರ್ವಪಾಪಹರೇ ಶುದ್ಧೇ ಸ್ನಾನಂ ಕಾರ್ಯಂ ವಿಧಾನತಃ ॥೧೭॥

ತೀರ್ಥೇ ದ್ವಾದಶಧಾ ಕಾರ್ಯಂ ಮಜ್ಜನಂ ಪಾಪನಾಶಕೇ ।
ರುದ್ರಸೂಕ್ತೈರ್ಮಾರ್ಜನಂ ಚ ತತಃ ಕಾರ್ಯಂ ಪ್ರಯತ್ನತಃ ॥೧೮॥

ತತಸ್ತೀರ್ಥೇ ಜಲೇ ಸಮ್ಯಕ್ ನಿಮಜ್ಯ ನಿಯತೇಂದ್ರಿಯೈಃ ।
ಸ್ಮರ್ತವ್ಯಃ ಶಂಕರಃ ಸಾಕ್ಷಾದಹಮೇವ ಜಗತ್ಪ್ರಭುಃ ॥೧೯॥

ತರ್ಪಣೀಯಾಸ್ತತಃ ಸಮ್ಯಕ್ ದೇವರ್ಷಿಪಿತೃದೇವತಾಃ ।
ಪರಿಧಾನಂ ಚ ಕರ್ತವ್ಯಂ ತತಶ್ಚಾಹತವಾಸಸಾ ॥೨೦॥

---

ಹೀಗೆ ನಿತ್ಯವೂ ಪಾಪವನ್ನು ಹೋಗಲಾಡಿಸುವ ಈ ಶೌಚವನ್ನು ನೆರವೇರಿಸಬೇಕು. ಇಲ್ಲದಿದ್ದರೆ ಮುಂದಿನ ಸಂಧ್ಯಾದಿಕರ್ಮಗಳಿಗೆ ಈತನು ಅಧಿಕಾರಿಯಾಗಲಾರನು. ಬಳಿಕ ಖದಿರವೇ (ಕಗ್ಗಲಿ) ಮೊದಲಾದ ಕಡ್ಡಿಯಿಂದ ಹಲ್ಲನ್ನು ಉಜ್ಜಬೇಕು. ಪುನಃ ಬಾಯಿಯನ್ನು ತೊಳೆದುಕೊಂಡು ಮುಖವನ್ನು ಪ್ರಕ್ಷಾಲನಮಾಡಿ ಮನೆಗೆ ಬಂದ ನಂತರ ಶುದ್ಧವಾದ ಆಸನದಲ್ಲಿ ಕುಳಿತು, ಅದ್ವಯನೂ, ಅವ್ಯಯನೂ ಆದ ಈಶ್ವರನನ್ನು ಚಿಂತಿಸಬೇಕು. ಬಳಿಕ ಸ್ನಾನಕ್ಕಾಗಿ ಸನ್ನದ್ಧನಾಗಬೇಕು. ಶಿವಲಿಂಗವಿರುವ, ವಿಶುದ್ಧವಾದ ಮತ್ತು ಸಮಸ್ತ ಪಾಪಗಳನ್ನೂ ನಾಶಗೊಳಿಸುವ ಜಲದಲ್ಲಿ ಸ್ನಾನಮಾಡಬೇಕು. ||೧೪-೧೫-೧೬-೧೭||

ಪಾಪವನ್ನು ನಿವಾರಣೆಮಾಡತಕ್ಕ ತೀರ್ಥದಲ್ಲಿ ಹನ್ನೆರಡು ಸಲ ಮುಳುಗು ಹಾಕಬೇಕು. ಬಳಿಕ ರುದ್ರಸೂಕ್ತಗಳಿಂದ ಮಾರ್ಜನಮಾಡಿಕೊಳ್ಳಬೇಕು. ಜಿತೇಂದ್ರಿಯರಾಗಿ ಆ ತೀರ್ಥದಲ್ಲಿ ಚನ್ನಾಗಿ ದೇಹಶುದ್ಧಿನಡೆಸಿಕೊಳ್ಳಬೇಕು. ಬಳಿಕ

ತತಃ ಸಮ್ಯಕ್ಕುಶಾಸೀನಃ ಕುರ್ಯಾದುದ್ಧೂಲನಂ ಕ್ರಮಾತ್ ।
ಆಪಾದಮಸ್ತಕಂ ಶುದ್ಧಸಿತಾರ್ದ್ರೇಣೈವ ಭಸ್ಮನಾ ॥೨೦॥

ವಾಮಹಸ್ತೇ ವಿನಿಕ್ಷಿಪ್ಯ ಭಸ್ಮ ಸಂಪ್ರೋಕ್ಷ್ಯ ಚೋದಕೈಃ ।
ಸದ್ಯೋಜಾತಾದಿಮಂತ್ರೈಸ್ತು ತತಃ ಸಮಭಿಮಂತ್ರಯೇತ್ ॥೨೨॥

ತತೋ ಮೂರ್ಧ್ನಿ ಲಲಾಟೇ ಚ ಕಂಠೇ ಕರ್ಣೇ ಚ ವಕ್ಷಸಿ ।
ನಾಭಾವಂಸೇ ಬಾಹುಮೂಲೇ ಪ್ರಕೋಷ್ಠೇ ಮಣಿಬಂಧಕೇ ॥೨೩॥

ಬಾಹುಪಾರ್ಶ್ವೇ ಪೃಷ್ಠದೇಶೇ ನೇತ್ರಯೋರ್ಗಂಡಮಂಡಲೇ ।
ಕುರ್ಯಾತ್ಪ್ರಯತ್ನತಃ ಸಮ್ಯಕ್ ತ್ರಿಪುಂಡ್ರಂ ಭಸ್ಮನಾ ಶುಚಿಃ ॥೨೪॥

ರುದ್ರಾಕ್ಷಧಾರಣಂ ಕಾರ್ಯಂ ಯಥಾವಿಧಿ ತತಃ ಕ್ರಮಾತ್ ।
ತತಶ್ಚ ಸ್ವಸ್ವಶಾಖೋಕ್ತಸಂಧ್ಯಾ ಕಾರ್ಯಾ ಪ್ರಯತ್ನತಃ ॥೨೫॥

ತತೋ ಹುತ್ವಾ ವಹ್ನಿರೂಪೇ ಮಯ್ಯೇವಾಜ್ಯಾದಿಸಾಧನೈಃ ।
ತತೋ ಮಲ್ಲಿಂಗಮಮಲಂ ಪೂಜನೀಯಂ ಯಥಾವಿಧಿ ॥೨೬॥

---

ಜಗತ್ಪ್ರಭುವಾಗಿ ಶಂಕರನಾದ ನನ್ನನ್ನು ಸ್ಮರಿಸಬೇಕು. ವಿಧಿವತ್ತಾಗಿ ದೇವರ್ಷಿ ಪಿತೃ ತರ್ಪಣಗಳನ್ನೂ ಮಾಡಬೇಕು. ಅನಂತರ ಶುದ್ಧವಾದ ಮಡಿ ವಸ್ತ್ರವನ್ನು ಧರಿಸಬೇಕು. ಧರಿಸುವವಸ್ತ್ರಗಳು ಅಖಂಡವಾಗಿದ್ದು ಹರಿದು ಹೋಗಿರಬಾರದು.॥೧೮-೧೯-೨೦

ಬಳಿಕ ದರ್ಭಾಸನದಲ್ಲಿ ಕುಳಿತು ಭಸ್ಮೋದ್ಧೂಲನ ಮಾಡಿಕೊಳ್ಳಬೇಕು. ಎಡಗೈ ಹಸ್ತದಲ್ಲಿ ಭಸ್ಮವನ್ನು ಇಟ್ಟು ಉದಕದಿಂದ ಅದನ್ನು ಪ್ರೋಕ್ಷಿಸಬೇಕು. ಅದನ್ನು ಸದ್ಯೋಜಾತಾದಿ ಮಂತ್ರಗಳಿಂದ ಅಭಿಮಂತ್ರಿಸಬೇಕು. ॥೨೧-೨೨॥

ಬಳಿಕ ಶಿರಸ್ಸು, ಹಣೆ, ಕಂಠ, ಕಿವಿ, ವಕ್ಷಃಸ್ಥಳ, ನಾಭಿ, ಭುಜ, ಕಂಕಳು, ತೋಳು, ಮುಂಗೈ, ಎಡಬಲ ಬಾಹುಗಳ ಪಾರ್ಶ್ವ, ಪೃಷ್ಠಭಾಗ, ಕಣ್ಣು, ಈ ಪ್ರದೇಶಗಳಲ್ಲಿ ಶುಚಿಯಾದ ಭಸ್ಮವನ್ನು ಧರಿಸಬೇಕು. ವಿಧಿವತ್ತಾಗಿ ರುದ್ರಾಕ್ಷಮಾಲೆಯನ್ನು ಹಾಕಿಕೊಳ್ಳಬೇಕು. ತನ್ನ ಶಾಖೆಗನುಸರಿಸಿ ವಿಧಿಸಿರುವಂತೆ ಸಂಧ್ಯಾವಂದನೆಯನ್ನು ನೆರವೇರಿಸಬೇಕು. ॥೨೩-೨೪-೨೫॥

ಅನಂತರ ವಹ್ನಿರೂಪನಾದ ನನ್ನಲ್ಲಿ ಆಜ್ಯಾಹುತಿಯನ್ನು ಹಾಕಬೇಕು. ಬಳಿಕ ಲಿಂಗಸ್ವರೂಪನಾದ ನನ್ನನ್ನು ಪೂಜಿಸಬೇಕು. ಸುರಶ್ರೇಷ್ಠನಾದ ನನ್ನನ್ನು

ತತೋ ವಿಶ್ವೇಶ್ವರಂ ನತ್ವಾ ಮಾಮೇವ ಸುರಪುಂಗವಂ ।
ಪೂಜಾಂ ಕೃತ್ವಾ ವಿಧಾನೇನ ಪ್ರಣಮ್ಯ ಚ ಪುನಃ ಪುನಃ ॥೨೭॥

ತತಶ್ಚ ನಿತ್ಯಯಾತ್ರಾರ್ಥಂ ಕುರ್ಯಾದುದ್ಯೋಗಮಾದರಾತ್ ।
ನಿಯತೇನ ಸ್ವಾರ್ಜಿತೇನ ಗಂಧಪುಷ್ಪಾಕ್ಷತಾದಿನಾ ॥೨೮॥

ಆದೌ ನಿಯಮಮಾಸ್ಥಾಯ ದಂಡಪಾಣಿಂ ಯಥಾವಿಧಿ ।
ಧೂಪದೀಪಾದಿಭಿಃ ಸಮ್ಯಗರ್ಚಯಿತ್ವಾ ಪ್ರಣಮ್ಯ ಚ ॥೨೯॥

ಧ್ಯಾತ್ವಾ ಸಮ್ಯಗ್ಯಥಾಶಾಸ್ತ್ರಂ ದಂಡಪಾಣಿಂ ಗಣೇಶ್ವರಂ ।
ಕೃತಾಂಜಲಿಪುಟೋ ಭೂತ್ವಾ ತತೋ ಮಂತ್ರಮಿಮಂ ಪಠೇತ್॥೩೦॥

ನಿತ್ಯಯಾತ್ರಾಂ ಕರಿಷ್ಯಾಮಿ ದಂಡಪಾಣೇ ಪ್ರಸೀದ ಮೇ ।
ಕರುಣಾಕರ ಸರ್ವಜ್ಞ ಸುರಾಸುರನಮಸ್ಕೃತ ॥೩೧॥

ಜ್ಞಾನವಾಪ್ಯಾಮಹಂ ಸ್ನಾತುಮುದ್ಯುಕ್ತೋಽಸ್ಮ್ಯಘಶಾಂತಯೇ ।
ಆಜ್ಞಾಂ ದೇಹಿ ಕೃಪಾಸಿಂಧೋ ಶಿವಭಕ್ತೈಕಜೀವನ ॥೩೨॥

ಇತಿ ಸಂಪ್ರಾರ್ಥ್ಯ ನತ್ವಾ ಚ ದಂಡಪಾಣಿಂ ತದಾಜ್ಞಯಾ ।
ಯಥಾವಿಧಿ ತತಃ ಸ್ನಾನಂ ಜ್ಞಾನವಾಪ್ಯಾಂ ಸಮಾಚರೇತ್ ॥೩೩॥

---

ಪುನಃಪುನಃ ಪೂಜಿಸಬೇಕು. ನಿಯಮದಿಂದ ದಂಡಪಾಣೀಶ್ವರನನ್ನು ವಿಧಿವತ್ತಾಗಿ ಧೂಪದೀಪಗಳಿಂದ ಚನ್ನಾಗಿ ಅರ್ಚಿಸಬೇಕು. ॥೨೬-೨೭-೨೮-೨೯॥

ಗಣಗಳಗಧಿಪತಿಯಾದ ದಂಡಪಾಣೀಶ್ವರನನ್ನು ಶಾಸ್ತ್ರರೀತಿಯಾಗಿ ಅರ್ಚಿಸಿ, ಕೈಜೋಡಿಸಿಕೊಂಡು ಈ ಮಂತ್ರವನ್ನು ಹೇಳಬೇಕು. "ಕರುಣಾಮಯನಾದ ಸರ್ವಜ್ಞನೇ, ದಂಡಪಾಣಿಯೇ, ನಿನಗೆ ದೇವಾಸುರರೂ ನಮಸ್ಕರಿಸುವರು. ಈಗ ನಾನು ನಿತ್ಯಯಾತ್ರೆಯನ್ನು ಆರಂಭಿಸುವೆನು-ನೀನು ಪ್ರಸನ್ನನಾಗು. ಪಾಪ ನಿವಾರಣೆಗಾಗಿ ಜ್ಞಾನಪ್ರದವಾದ ಬಾವಿಯಲ್ಲಿ ಸ್ನಾನಮಾಡಲು ಸಿದ್ಧನಾಗಿರುತ್ತೇನೆ. ಈಶ್ವರಭಕ್ತರ ಮುಖ್ಯ ಜೀವನಹೇತುವಾದ ಕರುಣಾಶಾಲಿಯೇ, ನನಗೆ ಅಪ್ಪಣೆಯನ್ನು ಕೊಡು." ಹೀಗೆ ಪ್ರಾರ್ಥಿಸಿ, ದಂಡಪಾಣಿಗೆ ನಮಸ್ಕರಿಸಬೇಕು. ಬಳಿಕ ಜ್ಞಾನವಾಪಿಯಲ್ಲಿ ಶಾಸ್ತ್ರೋಕ್ತರೀತಿಯಿಂದ ಸ್ನಾನಮಾಡಬೇಕು. ॥೩೦-೩೧-೩೨-೩೩॥

ತತಶ್ಚೋದ್ಧೂಲನಂ ಕೃತ್ವಾ ತ್ರಿಪುಂಡ್ರಂ ಚ ತತಃಪರಂ।
ರುದ್ರಾಕ್ಷಧಾರಣಂ ಕೃತ್ವಾ ಶಿವಧ್ಯಾನಪರಾಯಣಃ ॥೩೪॥

ಜ್ಞಾನೇಶ್ವರಾಭಿದಂ ಲಿಂಗಂ ಸರ್ವೇಷ್ಟಫಲದಾಯಕಂ।
ಪ್ರಣಮ್ಯ ಪ್ರಾರ್ಥಯೇದ್ದೇವಂ ಪ್ರಸೀದೇತಿ ಪುನಃ ಪುನಃ ॥೩೫॥

ತತಶ್ಚ ಬಿಲ್ವಪತ್ರಾದ್ಯೈಃ ಸಮಭ್ಯರ್ಚ್ಯ ಯಥಾವಿಧಿ।
ತದಾಜ್ಞಯಾ ತತಃ ಸಮ್ಯಕ್ ನತ್ವಾ ಪಂಚವಿನಾಯಕಾನ್ ॥೩೬॥

ದಧಿದೂರ್ವಾದಿಭಿಃ ಸಮ್ಯಗರ್ಚಯಿತ್ವಾ ಯಥಾವಿಧಿ।
ತದಾಜ್ಞಯಾ ಧುಂಡಿರಾಜಮರ್ಚಯೇನ್ನಿತ್ಯಮಾದರಾತ್ ॥೩೭॥

ಗಂಧಪುಷ್ಪಾಕ್ಷತೈಃ ಶುದ್ಧೈರ್ಬಿಲ್ವಪತ್ರೈರ್ಮನೋರಮೈಃ।
ದೂರ್ವಾಂಕುರೈರ್ಯಥಾ ಯೋಗ್ಯಂ ನೈವೇದ್ಯಂ ಚ ಪ್ರಕಲ್ಪಯೇತ್॥೩೮॥

ಪ್ರದಕ್ಷಿಣಾದಿಕಂ ಕೃತ್ವಾ ಧುಂಢೀಶಂ ತಂ ಪ್ರಣಮ್ಯ ಚ।
ತದಾಜ್ಞಾಂ ಸಮವಾಪ್ಯಾಥ ಪುನರ್ನತ್ವಾ ಗಣೇಶ್ವರಂ ॥೩೯॥

---

ಆಮೇಲೆ ಅಲ್ಲಿ ಭಸ್ಮೋದ್ಧೂಲನ ಮಾಡಿಕೊಂಡು ಭಸ್ಮ ತ್ರಿಪುಂಡ್ರಧಾರಣೆ ಮಾಡಿಕೊಳ್ಳಬೇಕು. ರುದ್ರಾಕ್ಷಿಯನ್ನು ಧರಿಸಿ ಶಿವಧ್ಯಾನದಲ್ಲಿ ಆಸಕ್ತನಾಗಬೇಕು. ಸಮಸ್ತ ಫಲಗಳನ್ನೂ ಕೊಡುವ ಜ್ಞಾನೇಶ್ವರನೆಂಬ ಶಿವಲಿಂಗವನ್ನು ಪೂಜಿಸಿ, ನಮಸ್ಕರಿಸಿ, ಎಲೈ! ದೇವನೇ ಪ್ರಸನ್ನನಾಗೆಂದು ಪ್ರಾರ್ಥಿಸುತ್ತಾ ಶಾಸ್ತ್ರರೀತಿಯಾಗಿ ಬಿಲ್ವಪತ್ರಾದಿಗಳಿಂದ ಅರ್ಚಿಸಬೇಕು. ಅವನ ಅಪ್ಪಣೆಯನ್ನು ಸ್ವೀಕರಿಸಿ ಪಂಚವಿನಾಯಕರನ್ನು ಸೇವಿಸಬೇಕು. ಆ ಪಂಚವಿನಾಯಕರನ್ನು ಮೊಸರೇ ಮೊದಲಾದ ಪಂಚಾಮೃತಗಳಿಂದಲೂ ದೂರ್ವಾದಿಗಳಿಂದಲೂ ತೃಪ್ತಿಪಡಿಸಬೇಕು. ಆ ಪಂಚವಿನಾಯಕರ ಅಪ್ಪಣೆಪಡೆದು ಧುಂಡಿರಾಜ ಗಣಪತಿಯನ್ನು ಪೂಜಿಸಬೇಕು. ||೩೪-೩೫-೩೬-೩೭||

ಹೂವು, ಗಂಧ, ಬಿಲ್ವಪತ್ರೆ, ದೂರ್ವಾಂಕುರ, ಇವುಗಳಿಂದ ಯೋಗ್ಯರೀತಿಯಲ್ಲಿ, ಧುಂಡಿರಾಜನನ್ನು ಪೂಜೆಮಾಡಬೇಕು. ಪೂಜ್ಯ ಆ ಗಣಪತಿಗೆ ನಮಸ್ಕರಿಸಿ ಅವನ ಅಪ್ಪಣೆಯನ್ನು ತೆಗೆದುಕೊಂಡು ಮತ್ತೆ ಗಣೇಶ್ವರನನ್ನು ಪೂಜಿಸಿ ಆಜ್ಞೆಯನ್ನು ಸ್ವೀಕರಿಸಿದನಂತರ, ನನ್ನ ಪೂಜೆಗೆ ಸಿದ್ಧನಾಗಬೇಕು. ಹೊಸ ಪೂಜಾ

ತತೋ ಮತ್ಪೂಜನಾರ್ಥಾಯ ಪೂಜಾದ್ರವ್ಯಂ ನವಂ ಶುಭಂ ।
ಗೃಹೀತ್ವಾ ನಿಯಮೇನೈವ ಮುಕ್ತಿಮಂಟಪಮಾಶ್ರಯೇತ್ ॥೪೦॥

ಕೃತಾಂಜಲಿಪುಟಸ್ತತ್ರ ಪಠೇನ್ಮಂತ್ರಮಿಮಂ ವಚಃ ।
ಪುನಃ ಪುನಃ ಪ್ರಣಮ್ಯೇಶಮುಮೇಶಾನಂ ತಮವ್ಯಯಂ ॥೪೧॥

ಶಿವಾನಂತ ಮಹಾದೇವ ಸೋಮಾರ್ಧಕೃತಶೇಖರ ।
ಯಥಾಶಕ್ತಿ ಮಯಾಪೂಜಾ ಕ್ರಿಯತೇ ಭಕ್ತವತ್ಸಲ ॥೪೨॥

ಇತಿ ಸಂಪ್ರಾರ್ಥ್ಯ ಮಾಮೇವಂ ತತೋ ನಂದೀಶಮರ್ಚಯೇತ್ ।
ತತೋಽಭ್ಯರ್ಚ್ಯ ಮಹಾದೇವದ್ವಾರಪಾಲಾನಪಿ ಕ್ರಮಾತ್ ॥೪೩॥

ತತೋ ಮಾಮಜರಂ ನಿತ್ಯಂ ಸರ್ವಜ್ಞಂ ಸರ್ವತೋಮುಖಂ ।
ಲಿಂಗರೂಪಿಣಮೀಶಾನಂ ಧ್ಯಾತ್ವಾ ಸರ್ವೋತ್ತಮಂ ಶಿವಂ ॥೪೪॥

ಶುದ್ಧೈಸ್ತೀರ್ಥೋದಕೈಃ ಸಮ್ಯಗಭಿಷಿಚ್ಯ ಯಥಾವಿಧಿ ।
ನಮಕಂ ಚಮಕಂ ಚೈವ ಪಠನ್ನನ್ಯಾನ್ಮನೂನಪಿ ॥೪೫॥

ತತಶ್ಚ ಗಂಧಪುಷ್ಪಾದ್ಯೈರ್ಬಿಲ್ವಪತ್ರೈರ್ಮನೋರಮೈಃ ।
ಧೂಪದೀಪೈರನೇಕೈಶ್ಚ ನೈವೇದ್ಯೈರರ್ಚಯೇಚ್ಛಿವಂ ॥೪೬॥

---

ದ್ರವ್ಯವನ್ನು ಹೊಂದಿಸಿಕೊಳ್ಳಬೇಕು. ಅಲ್ಲಿ ಕೈಮುಗಿದುಕೊಂಡು ಈ ಮಂತ್ರವನ್ನು ಹೇಳುತ್ತಾ ಈಶ್ವರನನ್ನು ಪ್ರಾರ್ಥಿಸಬೇಕು. ||೩೮-೩೯-೪೦-೪೧||

"ಎಲೈ! ಶಿವನೇ! ಮಹಾದೇವನೇ, ಚಂದ್ರಶೇಖರನೇ, ನಾನು ನಿನಗೆ ಯಥಾ ಶಕ್ತಿ ಪೂಜೆ ಮಾಡುವೆನು. ಅದನ್ನು ಸ್ವೀಕರಿಸಬೇಕು." ಹೀಗೆ ಪ್ರಾರ್ಥಿಸಿ ನಂದೀಶ ನನ್ನು ಪೂಜಿಸಬೇಕು. ಮಹಾದೇವನನ್ನೂ ದ್ವಾರಪಾಲಕರನ್ನೂ ಕ್ರಮವಾಗಿ ಅರ್ಚಿಸ ಬೇಕು. ಬಳಿಕ ಜರಾಶೂನ್ಯನಾಗಿಯೂ, ಸರ್ವತೋಮುಖನಾಗಿಯೂ, ಸರ್ವಜ್ಞನಾ ಗಿಯೂ, ಶಿವಲಿಂಗಸ್ವರೂಪಿಯಾಗಿಯೂ ಇರುವ( ನನ್ನನ್ನು )ಶಿವನನ್ನು ಪೂಜಿಸಬೇಕು. ಶಂಕರನನ್ನು ಧ್ಯಾನಮಾಡಿ ಶುದ್ಧೋದಕದಿಂದ ಯಥಾವಿಧಿಯಾಗಿ ಅಭಿಷೇಕಮಾಡ ಬೇಕು. ನಮಕ, ಚಮಕಗಳನ್ನು ಪಠಿಸಿ ಅಭಿಷೇಕವನ್ನು ಮುಂದುವರಿಸಬೇಕು. ಬಳಿಕ ಸುವಾಸಿತಗಳಾದ ಹೂವು ಗಂಧ, ಧೂಪದೀಪಾದಿಗಳಿಂದ ಪೂಜಿಸಬೇಕು. ||೪೨-೪೩-೪೪-೪೫-೪೬||

ಪ್ರದಕ್ಷಿಣನಮಸ್ಕಾರನೃತ್ಯೈಶ್ಚ ಕರತಾಡನೈಃ ।
ನಾನಾವಿಧೈ ಸ್ತೋತ್ರಪಾಠೈರ್ಮಾಮಾರಾಧ್ಯ ಯಥಾವಿಧಿ ॥೪೭॥

ಉಪವಿಶ್ಯ ತತಃ ಶುದ್ಧೇ ನಿರ್ಮಲೇ ಮುಕ್ತಿಮಂಟಪೇ ।
ಸ್ವಹೃತ್ಕಮಲಮಧ್ಯಸ್ಥಂ ಚಿಂತಯಿತ್ವಾ ಸದಾಶಿವಂ ॥೪೮॥

ಪಂಚಾಕ್ಷರಜಪಂ ಕುರ್ಯಾದ್ಯಥಾಯೋಗ್ಯಂ ಯಥಾಕ್ರಮಂ ।
ತತಃ ಪರಂ ಪುನರ್ನತ್ವಾ ಪುನಃ ಸಂಪೂಜ್ಯ ಮಾಂ ವಿಭುಂ ॥೪೯॥

ಅಂತರ್ಗೃಹಸ್ಯ ಯಾತ್ರಾರ್ಥಂ ಕುರ್ಯಾತ್ಸಂಕಲ್ಪಮಾದರಾತ್ ।
ತತಃ ಷಷ್ಟಿಸಹಸ್ರೇಷ್ವಗಣನಾಥಾನ್ ಪ್ರಪೂಜಯೇತ್ ॥೫೦॥

ಅಷ್ಟಾಶೀತಿಸಹಸ್ರೇಷ್ವಭೈರವಾಂಶ್ಚ ತತಃ ಪರಂ ।
ಶತಕೋಟಿಮಹಾದುರ್ಗಾಃ ಪೂಜನೀಯಾಃ ಪ್ರಯತ್ನತಃ ॥೫೧॥

ತತಃ ಪುನರ್ಜ್ಞಾನವಾಪ್ಯಾಂ ಸ್ನಾನಂ ಕೃತ್ವಾ ವಿಧಾನತಃ ।
ತತೋಂತರ್ಗೃಹಯಾತ್ರಾಪಿ ಕರ್ತವ್ಯಾ ವಿಧಿಪೂರ್ವಕಂ ॥೫೨॥

ಸ್ವಶಕ್ತ್ಯಾ ಸಂಪ್ರಸಾದ್ಯೈವ ತಾನಂತರ್ಗೃಹರಕ್ಷಕಾನ್ ।
ಅಂತರ್ಗೃಹಸ್ಥಲಿಂಗಾನಿ ಸಂಪೂಜ್ಯಾಥ ಸ್ವಶಕ್ತಿತಃ ॥೫೩॥

---

ಬಳಿಕ ಪ್ರದಕ್ಷಿಣ ನಮಸ್ಕಾರ, ನೃತ್ಯ, ಕರಡಾಡನ, ಇವುಗಳಿಂದಲೂ, ಮತ್ತು ಅನೇಕ ವಿಧದ ಸ್ತೋತ್ರಪಾಠಗಳಿಂದಲೂ ನನ್ನನ್ನು ಯಥಾವಿಧಿಯಾಗಿ ಪೂಜಿಸಬೇಕು. ಪರಿಶುದ್ಧವಾದ ಮಣಿಮಂಟಪದಲ್ಲಿ ಆ ಶಿವಲಿಂಗವನ್ನು ಸ್ಥಾಪಿಸಬೇಕು. ತನ್ನ ಹೃದಯಕಮಲ ಮಧ್ಯದಲ್ಲಿರುವ ಸದಾ ಶಿವನನ್ನು ಚಿಂತಿಸಬೇಕು. ಕ್ರಮವನ್ನನುಸರಿಸಿ ಪಂಚಾಕ್ಷರೀ ಜಪವನ್ನು ಮಾಡಬೇಕು. ಬಳಿಕ ಪುನಃ ಆತನನ್ನು ಪೂಜಿಸಿ ಅಂತರ್ಗೃಹ ಯಾತ್ರೆಯನ್ನು ನಡೆಸಬೇಕು. ಅದಕ್ಕಾಗಿ ಅರುವತ್ತು ಸಾವಿರ ಗಣನಾಥರನ್ನು ಪೂಜಿಸಬೇಕು. ಬಳಿಕ ಎಂಭತ್ತೆಂಟು ಸಾವಿರ ಭೈರವರನ್ನೂ ಅರ್ಚಿಸಬೇಕು. ಹಾಗೆಯೇ ಒಂದುನೂರುಕೋಟಿ ಮಹಾ ದುರ್ಗೆಯರನ್ನೂ ಸೇವಿಸಬೇಕು. ॥೪೭-೪೮-೪೯-೫೦-೫೧॥

ಅನಂತರಜ್ಞಾನವಾಪಿಯಲ್ಲಿ ಸ್ನಾನಮಾಡಬೇಕು. ಬಳಿಕ ವಿಧಿಪೂರ್ವಕವಾಗಿ ಅಂತರ್ಗೃಹಯಾತ್ರೆಯನ್ನು ನಡೆಸಬೇಕು. ತನ್ನ ಶಕ್ತಿಗನುಸರಿಸಿ ಅಂತರ್ಗೃಹದ

ಅಂತರ್ಗೃಹಸ್ಯ ತೀರ್ಥೇಷು ಸ್ನಾನಂ ಕಾರ್ಯಂ ಯಥಾವಿಧಿ ।
ತರ್ಪಣೀಯಾಶ್ಚ ಪಿತರೋ ನಿತ್ಯಂ ಯಾತ್ರಾಪರೈಃ ಶುಭೈಃ ॥೫೪॥

ಪುನಃ ಸ್ನಾತ್ವಾ ಯಥಾಯೋಗಂ ಜ್ಞಾನವಾಪ್ಯಾಂ ಸಮಾಚರೇತ್ ।
ತತೋ ಮಮಾಂತಿಕಂ ಗತ್ವಾ ಮಾಮಾರಾಧ್ಯ ಯಥಾವಿಧಿ ॥೫೫॥

ಯಾತ್ರಾಂ ನಿವೇದ್ಯ ಸ್ವಕೃತಾಂ ಮಹ್ಯಮೇವ ಪ್ರಣಮ್ಯ ಚ ।
ಪುರಾಣವಚನೈರ್ಮಂತ್ರೈಃ ಸ್ತೋತ್ರೈರಾರಾಧ್ಯ ಮಾಮಜಂ ॥೫೬॥

ವಿಶ್ರಮ್ಯಾಥ ಯಥಾಯೋಗ್ಯಂ ವಿಮಲೇ ಮುಕ್ತಿಮಂಟಪೇ ।
ವೀರೇಶ್ವರಾಭ್ಯರ್ಚನಾಯ ಗಂತವ್ಯಂ ಚ ತತಃ ಪರಂ ॥೫೭॥

ವೀರೇಶ್ವರಸಮೀಪಸ್ಥೇ ವೀರತೀರ್ಥೇ ಪುನಃ ಶುಭೇ ।
ಸ್ನಾನಂ ಕೃತ್ವಾ ಪ್ರಯತ್ನೇನ ಭಕ್ತಿಪೂರ್ವಕಮಾದರಾತ್ ॥೫೮॥

ತತೋ ವೀರೇಶ್ವರಂ ಸಮ್ಯಕ್ ಪೂಜಯಿತ್ವಾ ಯಥಾವಿಧಿ ।
ತದಾಜ್ಞಾಂ ಸಮವಾಪ್ಯಾಥ ಗಚ್ಛೇತ್ಪಶುಪತೀಶ್ವರಂ ॥೫೯॥

ತತ್ರ ಪಾಶುಪತೇ ಕುಂಡೇ ಪುನಃ ಸ್ನಾತ್ವಾ ಯಥಾವಿಧಿ ।
ಭಸ್ಮನಾ ಬಿಲ್ವಪತ್ರೈಶ್ಚ ಯಜೇತ್ಪಶುಪತೀಶ್ವರಂ ॥೬೦॥

---

ರಕ್ಷಕರನ್ನೂ ತೃಪ್ತಿಪಡಿಸಬೇಕು. ಅಲ್ಲಿರುವ ಶಿವಲಿಂಗಗಳನ್ನು ಯಥಾಶಕ್ತಿಯಾಗಿ ಪೂಜಿಸಬೇಕು. ॥೫೨-೫೩॥

ಆಮೇಲೆ ಅಂತರ್ಗೃಹದ ತೀರ್ಥದಲ್ಲಿ ವಿಧಿಯಂತೆ ಸ್ನಾನಮಾಡಬೇಕು. ನಿತ್ಯವೂ ಪಿತೃಗಳನ್ನು ತರ್ಪಣದಿಂದ ತೃಪ್ತಿಪಡಿಸಬೇಕು. ಯಾತ್ರಾಸಕ್ತರಾದವರು ಪುನಃ ಜ್ಞಾನವಾಪಿಯಲ್ಲಿ ಸ್ನಾನಮಾಡಬೇಕು. ಮತ್ತೆ ನನ್ನ ಹತ್ತಿರಕ್ಕೆ ಬಂದು ಯಥಾಶಾಸ್ತ್ರವಾಗಿ ನನ್ನನ್ನು ಅರ್ಚಿಸಿ ತಾನು ಮಾಡಿದ ಯಾತ್ರೆಯನ್ನು ನಿವೇದಿಸಬೇಕು. ಪುರಾಣವಚನಗಳಿಂದಲೂ, ಮಂತ್ರಗಳಿಂದಲೂ ಅಜನಾದ ನನ್ನನ್ನು ಪೂಜಿಸಬೇಕು. ॥೫೪-೫೫-೫೬॥

ಬಳಿಕ ಕೊಂಚಕಾಲ ಯೋಗ್ಯರೀತಿಯಿಂದ ಮಣಿಮಂಟಪದಲ್ಲಿ ವಿಶ್ರಾಂತಿ ಹೊಂದಿ ಆಮೇಲೆ ವೀರೇಶ್ವರನನ್ನು ಪೂಜಿಸಲು ಸಿದ್ಧನಾಗಬೇಕು. ವಿಶ್ವೇಶ್ವರಾಲ

ಉಪಹಾರೈರನೇಕೈಶ್ಚ ನೃತ್ಯೈರ್ಗೀತೈರಪಿ ಪ್ರಿಯೈಃ ।
ಸಮಭ್ಯರ್ಚ್ಯ ತತೋ ಗಚ್ಛೇತ್ಸಂಪ್ರಾರ್ಥ್ಯ ಪಶು ಯಥಾವಿಧಿ ॥೬೧॥

ಈಶಮಭ್ಯರ್ಚ್ಯ ತದನು ಗಚ್ಛೇಚ್ಛ್ರೀಕಾಲಭೈರವಂ ।
ಸ್ನಾತ್ವಾ ಚ ಭೈರವೇ ತೀರ್ಥೇ ಯಾತನಾದುಃಖನಾಶಕೇ ॥೬೨॥

ಶ್ರೀಕಾಲಭೈರವಂ ಸಮ್ಯಕ್ ಅರ್ಚಯೇದ್ವಿಧಿಪೂರ್ವಕಂ ।
ಧೂಪದೀಪೋಪಹಾರೈಶ್ಚ ಪುಷ್ಪೈರ್ನಾನಾವಿಧೈರಪಿ ॥೬೩॥

ಪ್ರದಕ್ಷಿಣನಮಸ್ಕಾರೈರ್ನೃತ್ಯಗೀತೈರನೇಕಧಾ ।
ನಾನಾವಿಧೋಪಚಾರೈಶ್ಚ ಪೂಜಯೇತ್ಕಾಲಭೈರವಂ ॥೬೪॥

ತತಸ್ತದಾಜ್ಞಯಾ ಗಚ್ಛೇದ್ವಕ್ರತುಂಡವಿನಾಯಕಂ ।
ತದ್ವಕ್ರತುಂಡತೀರ್ಥೇಽಪಿ ಸ್ನಾತ್ವಾ ವಿಘ್ನವಿನಾಶಕೇ ॥೬೫॥

ದೂರ್ವಾಂಕುರಾದಿಭಿಃ ಸಮ್ಯಕ್ ಅರ್ಚಯಿತ್ವಾ ವಿನಾಯಕಂ ।
ವಕ್ರತುಂಡಂ ಪ್ರಸಾದ್ಯೈವ ತದಾಜ್ಞಾಂ ಸಮವಾಪ್ಯಥ ॥೬೬॥

ಅಗ್ನೀಧ್ರೇಶ್ವರಪೂಜಾರ್ಥಂ ಗಚ್ಛೇನ್ನಿಯಮಪೂರ್ವಕಂ ।
ತತ್ರಾಪಿ ಶಿವಗಂಗಾಯಾಂ ಸ್ನಾನಂ ಕೃತ್ವಾ ವಿಧಾನತಃ ॥೬೭॥

---

ಯಕ್ಕೆ ಹೋಗಿ ಅಲ್ಲಿ ಪುನಃ ವೀರೇಶ್ವರ ತೀರ್ಥದಲ್ಲಿ ಮಿಂದು ಮಡಿಯುಟ್ಟು ಭಕ್ತಿಯಿಂದ ವಿಧಿಪ್ರಕಾರ ಆ ವೀರೇಶನನ್ನು ಪೂಜಿಸಬೇಕು. ಬಳಿಕ ಅವನ ಆಜ್ಞೆಯನ್ನು ಸ್ವೀಕರಿಸಿ, ಪಶುಪತೀಶ್ವರನನ್ನು ಪೂಜಿಸಲು ಹೋಗಬೇಕು. ಭಸ್ಮ, ಬಿಲ್ವಪತ್ರೆ, ಉಪಹಾರ, ಗೀತ, ನೃತ್ಯ ಇವುಗಳಿಂದ ಪಶುಪತೀಶ್ವರನನ್ನು ಅರ್ಚಿಸಬೇಕು. ವಿಧಿಪ್ರಕಾರ ಅವನನ್ನು ಪ್ರಾರ್ಥಿಸಿ ಮುಂದೆ ಯಾತ್ರೆಮಾಡಬೇಕು. ||೫೭-೫೮-೫೯-೬೦-೬೧||

ಬಳಿಕ ಈಶ್ವರನನ್ನು ಅರ್ಚಿಸಿ ಕಾಲಭೈರವನಪೂಜೆಗೆ ಹೋಗಬೇಕು. ಆಮೇಲೆ ಸಮಸ್ತ ಯಾತನೆಯನ್ನೂ ಪಾಪವನ್ನೂ ನಾಶಮಾಡುವ ಕಾಲಭೈರವ ತೀರ್ಥದಲ್ಲಿ ಸ್ನಾನಮಾಡಬೇಕು. ಶ್ರೀಕಾಲಭೈರವನನ್ನು ಧೂಪ, ದೀಪ, ನೈವೇದ್ಯ, ಹೂವುಗಳು, ನೃತ್ಯ, ಗೀತ, ಇವೇ ಮೊದಲಾದವುಗಳಿಂದ ಸಂತೋಷಗೊಳಿಸಬೇಕು.

ಶಿವಗಂಗೋದಕೈಃ ಶುದ್ಧೈಃ ಸಂತರ್ಪ್ಯ ಸ್ವಪಿತೄಂಸ್ತತಃ ।
ಆಗ್ನೀಧ್ರೇಶಂ ತತಃ ಸಮ್ಯಕ್ಪೂಜಯೇದಿಷ್ಟದಾಯಕಂ ॥೬೮॥

ಪುನರ್ಮಾಂ ಸಮ್ಯಗಾರಾಧ್ಯ ತತಶ್ಚ ಮದನುಜ್ಞಯಾ ।
ಅನ್ನಪೂರ್ಣಾಪೂಜನಾರ್ಥಂ ಗಚ್ಛೇದರ್ಘ್ಯಂ ಪ್ರಗೃಹ್ಯ ಚ ॥೬೯॥

ಅನ್ನಪೂರ್ಣಾಮನ್ನದಾತ್ರೀಂ ಮಮ್ಯೈವಾರ್ಧಾಂಗಭಾಗಿನೀಂ ।
ಸರ್ವಸೌಭಾಗ್ಯದಾಂ ನಿತ್ಯಂ ಸ್ವಾಭೀಷ್ಟಫಲದಾಯಿನೀಂ ॥೭೦॥

ಗಂಧೈಃ ಪುಷ್ಪೈಸ್ತಥಾಧೂಪೈರ್ದೀಪೈಶ್ಚ ವಿವಿಧೈಃ ಫಲೈಃ ।
ನೈವೇದ್ಯೈರರ್ಚಯೇದ್ದೇವೀಂ ನಾನಾಪೂಜೋಪಹಾರಕೈಃ ॥೭೧॥

ಪ್ರದಕ್ಷಿಣನಮಸ್ಕಾರೈರರ್ಚಯಿತ್ವಾ ಪ್ರಸಾದ್ಯ ಚ ।
ತತೋ ನಿಜಾಲಯಂ ಗತ್ವಾ ಪುನರಭ್ಯರ್ಚ್ಯ ಶಂಕರಂ ॥೭೨॥

ಪಂಚಯಜ್ಞಾದಿಕಂ ಕೃತ್ವಾ ತತಃ ಸಂಪೂಜ್ಯ ಚಾತಿಥೀನ್ ।
ಪ್ರಣಮ್ಯ ಚ ಗುರೂನ್ ವೃದ್ಧಾನನ್ಯಾಂಶ್ಚೈವೋತ್ತಮಾನಪಿ ॥೭೩॥

---

ಅನಂತರ ಅವನ ಅಪ್ಪಣೆಯನ್ನು ಸ್ವೀಕರಿಸಿ ವಕ್ರತುಂಡ ವಿನಾಯಕನನ್ನು ಪೂಜಿಸಲು ಹೋಗಬೇಕು. ಅಲ್ಲಿ ಸಮಸ್ತ ವಿಘ್ನಗಳನ್ನೂ ನಾಶಮಾಡುವ ವಕ್ರತುಂಡ ತೀರ್ಥದಲ್ಲಿ ಸ್ನಾನಮಾಡಿ ವಿಧಿಪೂರ್ವಕವಾಗಿ ಆತನನ್ನು ಅರ್ಚಿಸಬೇಕು. ವಕ್ರತುಂಡ ನನ್ನು ಸಂತೋಷಗೊಳಿಸಿದ ಬಳಿಕ ಆಗ್ನೀಧ್ರೇಶನಪೂಜೆಗೆ ಹೋಗಬೇಕು. ಅಲ್ಲಿಯೂ ಶಿವಗಂಗೆಯಲ್ಲಿ ವಿಧಿಪೂರ್ವಕವಾಗಿ ಸ್ನಾನಮಾಡಬೇಕು. ||೬೨-೬೩-೬೪-೬೫-೬೬ -೬೭||

ಪವಿತ್ರಗಳಾದ ಗಂಗಾಮೃತಧಾರೆಗಳಿಂದ ತಮ್ಮ ಪಿತೃಗಳಿಗೆ ತರ್ಪಣಮಾಡ ಬೇಕು. ಬಳಿಕ ಇಷ್ಟಾರ್ಥಗಳನ್ನು ಕೊಡುವ ಆಗ್ನೀಧ್ರೇಶನನ್ನು ಅರ್ಚಿಸಿ ಅವನ ಅಪ್ಪಣೆಯಂತೆ ಅನ್ನಪೂರ್ಣೆಯ ಪೂಜೆಗಾಗಿ ಅರ್ಘ್ಯಸಾಮಗ್ರಿಯನ್ನು ತೆಗೆದುಕೊಂಡು ಹೋಗಬೇಕು. ಅನ್ನವನ್ನು ಕೊಡುವವಳೂ, ನನ್ನ ಅರ್ಧಾಂಗಿಯೂ, ಸರ್ವಸೌಭಾಗ್ಯ ಪ್ರದಾಯಕಳೂ, ನಮ್ಮ ಇಷ್ಟಾರ್ಥಗಳನ್ನು ಪೂರೈಸುವವಳೂ ಆದ ಆ ಅನ್ನಪೂರ್ಣೆಗೆ ನಾನಾವಿಧವಾದ ಹೂ, ಗಂಧ, ಧೂಪ, ದೀಪ, ನೈವೇದ್ಯ, ಅನೇಕ ಪೂಜೋಪಕರಣ ಗಳು ಇವುಗಳಿಂದ ಅರ್ಚನೆಮಾಡಬೇಕು. ಪ್ರದಕ್ಷಿಣ ನಮಸ್ಕಾರವನ್ನು ಮಾಡಿ

ಪತ್ರಂ ಫಲಂ ಕ್ಷೀರಮನ್ಯಮನ್ಯದ್ವಾ ಯಾಚಿತಾರ್ಜಿತಂ ।
ಮಹ್ಯಂ ನಿವೇದ್ಯ ತದನು ಭೋಕ್ತವ್ಯಂ ಸ್ವಸ್ಥಮಾನಸೈಃ ॥೭೪॥

ಯದ್ಯದ್ಯದಾ ಯದಾ ಪ್ರಾಪ್ತಂ ಪತ್ರಂ ವಾಫಲಮೇವ ವಾ ।
ತತ್ತನ್ಮಹ್ಯಂ ನಿವೇದ್ಯೈವ ಭೋಕ್ತವ್ಯಂ ಸ್ವಸ್ಥಮಾನಸೈಃ ॥೭೫॥

ಕ್ವಚಿತ್ಫಲಾದಿಕಂ ಭಕ್ಷ್ಯಂ ಬಹು ಚೇತ್ಪ್ರಾಪ್ಯತೇ ತದಾ ।
ತದ್ವಿನಾಶನಮಾತ್ರಾರ್ಥಂ ಗೃಹೀತ್ವಾನ್ಯದ್ವಿಸರ್ಜಯೇತ್ ॥೭೬॥

ಕದಾಚಿದ್ಯದಿ ನ ಪ್ರಾಪ್ತಂ ಕಂದಮೂಲಫಲಾದಿಕಂ ।
ತದಾ ತು ಜಲಮನ್ಯದ್ವಾ ಗೃಹೀತ್ವಾ ಸಂವಸೇದ್ಬುಧಃ ॥೭೭॥

ಸ್ವಸ್ವಾದೃಷ್ಟಾನುರೋಧೇನ ಪ್ರಾಪ್ಯತೇ ಯದ್ಯದಾ ಯದಾ ।
ತದಲ್ಪಮಸ್ತು ಬಹು ವಾ ತುಷ್ಟಸ್ತೇನ ಭವೇತ್ಸದಾ ॥೭೮॥

---

ಆಕೆಯನ್ನು ತುಷ್ಟಿಗೊಳಿಸಿ ತನ್ನ ಮನೆಗೆ ಹೋಗಬೇಕು. ಅಲ್ಲಿ ಪುನಃ ಶಂಕರನನ್ನು ಪೂಜಿಸಿ ಅತಿಥಿ ಅಭ್ಯಾಗತರಿಗೆ ಸತ್ಕಾರಮಾಡಬೇಕು. ಶೈವೋತ್ತಮರೂ, ವೃದ್ಧರೂ, ಆದ ಹಿರಿಯರಿಗೆ ನಮಸ್ಕರಿಸಬೇಕು. ॥೬೮-೬೯-೭೦-೭೧-೭೨-೭೩॥

ಎಲೆ, ಹಣ್ಣು, ಹಾಲು, ಅಥವಾ ಇತರ ಪದಾರ್ಥಗಳು, ಬೇಡಿಸಂಪಾದಿಸಿದ್ದು, ಇವುಗಳಲ್ಲಿ ಯಾವುದಾದರೂ ಸರಿಯೆ, ಅದನ್ನು ನನಗೆ ನಿವೇದನಮಾಡಿ ಸ್ವಸ್ಥ ಚಿತ್ತನಾಗಿ ಬಳಿಕ ಊಟಮಾಡಬೇಕು. ಹಣ್ಣಾಗಲೀ ಪತ್ರವಾಗಲಿ ಯಾವುದಾದರೂ ಸಿಕ್ಕಿದ ಪದಾರ್ಥಗಳನ್ನು ನನಗೆ ನಿವೇದನಮಾಡಿ ಸ್ವಸ್ಥಚಿತ್ತನಾಗಿ ಭೋಜನ ಮಾಡಬೇಕು. ಕೆಲವೆಡೆಗಳಲ್ಲಿ ಭಕ್ಷ್ಯಾದಿಗಳು ಹೆಚ್ಚು ಲಭಿಸಿದಾಗ ಅದನ್ನು ನಿವೇದಿಸಿ ಭಕ್ಷಿಸಬೇಕು. ಅನ್ಯಪದಾರ್ಥವನ್ನು ತ್ಯಜಿಸಬೇಕು. ಒಂದು ವೇಳೆ ಕಂದಮೂಲಾದಿಫಲಗಳು ಸಿಗದಿದ್ದಾಗ ಕೇವಲ ಜಲವನ್ನಾದರೂ ಸಮರ್ಪಿಸಿ ತಾನು ಸುಮ್ಮನೆ ತೃಪ್ತನಾಗಿರಬೇಕು. ॥೭೪-೭೫-೭೬-೭೭॥

ತನ್ನ ಅದೃಷ್ಟವನ್ನನುಸರಿಸಿ ಸ್ವಲ್ಪವಾಗಲೀ ಹೆಚ್ಚಾಗಲೀ ಸಿಕ್ಕಿದ ಫಲಾದಿಗಳನ್ನು ಅರ್ಪಿಸುವುದರಿಂದ ಅವನು ಪ್ರೀತನಾಗಬಹುದು. ಸ್ವಲ್ಪ ಭಕ್ಷ್ಯಾದಿಗಳು ಲಭಿಸಿದಲ್ಲಿ ತಾನು ಅಲ್ಪಾಹಾರವನ್ನು ತಿಂದು ದುಃಖಿಯಾಗಬಾರದು. ಹಾಗೆ ವ್ಯಸನ ಪಡುವುದರಿಂದ ಮಾಡಿದ ತಪಸ್ಸೆಲ್ಲಾ ನಷ್ಟವಾಗುವುದು. ಸುಖವನ್ನು ಹೊಂದುವುದ

ಯದಾಲ್ಪಂ ಪ್ರಾಪ್ಸ್ಯತೇ ಭಕ್ಷ್ಯಂ ತದಾ ದುಃಖೀ ನ ಸಂವಸೇತ್ ।
ದುಃಖೇನ ತಪಸೋ ನಾಶೋ ಭವಿಷ್ಯತಿ ನ ಸಂಶಯಃ ॥೭೯॥

ಸುಖಾರ್ಥಂ ಕಾಮಭೋಗಾರ್ಥಂ ಕಾಶ್ಯಾಂ ನ ಸ್ಥೀಯತೇ ಜನೈಃ ।
ಕಿಂ ತು ಮೋಕ್ಷಾರ್ಥಮೇವಾತ್ರ ಸ್ಥೀಯತೇ ಮೋಕ್ಷಕಾಂಕ್ಷಿಭಿಃ॥೮೦॥

ಪೂರ್ವಮುಕ್ತಾರ್ಥಿನಃ ಸರ್ವೇ ನಿರಾಹಾರಾ ಜಿತೇಂದ್ರಿಯಾಃ ।
ಶೈವಾಸ್ತಜ್ಞಾಃ ಸ್ಥಿತಾಸ್ತೈಸ್ತು ಮತ್ಸ್ವರೂಪಮುಪಾಗತಂ ॥೮೧॥

ಇದಂ ಪ್ರತ್ಯಾಹಿಕಂ ಕರ್ಮ ಕಾಶೀವಾಸರತೈಃ ಸದಾ ।
ಕರ್ತವ್ಯಮತಿಯತ್ನೇನ ಯಾತನಾಭೀರುಭಿಃ ಶಿವೇ ॥೮೨॥

ಅತಿಕ್ರೂರಂ ಕೃಪಾಹೀನಂ ಮತ್ವಾ ಶ್ರೀಕಾಲಭೈರವಂ ।
ಇದಂ ಪ್ರತ್ಯಾಹಿಕಂ ಕರ್ಮ ಕಾಶ್ಯಾಂ ಕರ್ತವ್ಯಮಾದರಾತ್ ॥೮೩॥

ಉಕ್ತಂ ಪ್ರಾತ್ಯಹಿಕಂ ಕರ್ಮ ತ್ಯಕ್ತ್ವಾ ಯದಿ ವಸೇನ್ನರಃ ।
ಸ ಸರ್ವಯಾತನಾಭೋಕ್ತಾ ಭವತ್ಯೇವ ನ ಸಂಶಯಃ ॥೮೪॥

ಆಚಂದ್ರಾರ್ಕಮಹಾಘೋರಂ ನರಕೇ ವಸತಿರ್ನರಾ ।
ಸಾ ಸೋಢುಂ ಶಕ್ಯತೇ ನೇಯಂ ಕ್ಷಣಂ ಭೈರವಯಾತನಾ ॥೮೫॥

---

ಕ್ಕಾಗಲೀ, ಕಾಮಭೋಗಾದಿಗಳನ್ನು ಅನುಭವಿಸುವುದಕ್ಕಾಗಲೀ ಕಾಶಿಯಲ್ಲಿ ವಾಸ ಮಾಡಬಾರದು. ಮೋಕ್ಷವನ್ನು ಅಪೇಕ್ಷಿಸುವವರು ಮಾತ್ರ ಇಲ್ಲಿ ಯಾವಾಗಲೂ ವಾಸಮಾಡಬಹುದು. ಹಿಂದೆ ಹೇಳಿದವರೆಲ್ಲರೂ ಜಿತೇಂದ್ರಿಯರೂ ತಿಳಿದವರೂ ನನ್ನ ಅಂಶವನ್ನು ಹೊಂದಿದವರೂ ಆದ ಈಶ್ವರಭಕ್ತರಾಗುತ್ತಾರೆ. ||೭೮-೭೯-೮೦-೮೧||

ಪಾರ್ವತಿಯೇ ; ಪಾಪಭೀರುಗಳಾದ ಜನರು ಕಾಶೀವಾಸಿಗಳಾದರೆ ಮೇಲೆ ಹೇಳಿದುವೆಲ್ಲಾ ಅವರ ಪ್ರತಿನಿತ್ಯದ ಕೃತ್ಯವಾಗುತ್ತದೆ. ಕಾಲಭೈರವನು ಅತಿ ಕ್ರೂರ ಸ್ವಭಾವದವನು, ದಯೆಯಿಲ್ಲದವನು, ಎಂದು ತಿಳಿದು ಕಾಶಿಯಲ್ಲಿ ಈ ನಿತ್ಯಕರ್ಮ ವನ್ನು ಆಚರಿಸಬೇಕು. ಮೇಲೆ ಹೇಳಿದ ನಿತ್ಯಕರ್ಮಗಳನ್ನು ತ್ಯಜಿಸಿದವನು ಅನೇಕ ತೀವ್ರ ಭೈರವಯಾತನೆಗಳನ್ನು ಅನುಭವಿಸಬೇಕಾಗುತ್ತದೆ. ಅಂತಹವನು ಸೂರ್ಯ ಚಂದ್ರರಿರುವವರೆಗೂ ಘೋರ ನರಕಯಾತನೆಯುನ್ನು ಅನುಭವಿಸುವನು. ಆ ಯಾತ ನೆಯುನ್ನು ಸಹಿಸುವುದು ಯಾವನಿಗೂ ಶಕ್ಯವಿಲ್ಲ. ದಯಾಶೂನ್ಯನಾದ ಕಾಲಭೈರ

ಕೋಪದಾವಾಗ್ನಿನಾ ದಗ್ಧಾನ್ ಕ್ಷಣಾದೇವ ಹಿ ಭೈರವಃ ।
ಕರೋತಿ ಕಾಶ್ಯಾಂ ಪಾಪಿಷ್ಠಾನ್ ದಯಾಮಾತ್ರವಿವರ್ಜಿತಃ ॥೮೬॥

ಕಾಲಭೈರವಪರ್ಯಂತಂ ಕ್ವ ಸಮಾಯಾಂತಿ ಪಾಪಿನಃ ।
ತದ್ಭೃತ್ಯೈರೇವ ನೀಯಂತೇ ಪಾಪಿಷ್ಠಾ ಯಾತನಾಶ್ರಯಾಃ ॥೮೭॥

ಕಾಲಭೈರವಭೃತ್ಯಾನಾಂ ಸಂಖ್ಯಾಂ ಕರ್ತುಂ ನ ಶಕ್ಯತೇ ।
ಮಹಾವೀರಾ ಮದೋನ್ಮತ್ತಾ ದುರ್ಧರ್ಷಾಸ್ತ್ರಿದಶೈರಪಿ ॥೮೮॥

ಕದಾಚಿದ್ಗಣಿತಾಃ ಸಂತಿ ಪಾಂಸುಸೈಕತತಾರಕಾಃ ।
ಕಾಲಭೈರವದೂತಾಸ್ತು ನ ಸಂಖ್ಯೇಯಾ ಹಿ ಸರ್ವಥಾ ॥೮೯॥

ಕಾಶ್ಯಾಂ ಪಾಪರತಂ ಮರ್ತ್ಯಂ ಕಾಲಭೈರವಕಿಂಕರಾಃ ।
ಗೃಹೀತ್ವಾ ಯಾಂತಿ ದುರ್ಧರ್ಷಾಃ ತಮವಿಜ್ಞಾಪ್ಯ ಭೈರವಂ ॥೯೦॥

ನೀತ್ವಾ ಹಸಂತೋ ಗಾಯಂತಃ ಪಾಪಿಷ್ಠಂ ಪ್ರದಹಂತಿ ತೇ ।
ತಪ್ತತೈಲೇ ಪಾತಯಿತ್ವಾ ಪಾಚಯಂತಿ ಪುನಃ ಪುನಃ ॥೯೧॥

---

ವನು ಕೋಪಾಗ್ನಿಯಿಂದ ಒಂದೇ ಒಂದು ಕ್ಷಣಕಾಲದಲ್ಲಿ ಸುಟ್ಟುಬಿಡುವನು. ಪಾಪಿಗಳು ಕಾಲಭೈರವನ ತನಕ ಹೋಗುವುದೇ ಇಲ್ಲ. ಭೈರವನ ದೂತರೇ ಆ ಪಾಪಿಗಳನ್ನು ಎಳೆದು ಹಿಂಸಿಸಿ ಯಾತನೆ ಕೊಡುವುದಕ್ಕಾಗಿ ಎಳೆದು ಒಯ್ಯುವರು. ||೮೨-೮೩-೮೪-೮೫-೮೬-೮೭||

ಕಾಲಭೈರವನ ದೂತರ ಸಂಖ್ಯೆಯನ್ನು ಎಣಿಸಲು ಸಾಧ್ಯವಿಲ್ಲ. ಆ ದೂತರು ಅತಿ ಪರಾಕ್ರಮಶಾಲಿಗಳೂ, ಮದಿಸಿದವರೂ, ಜಯಿಸಲಸಾಧ್ಯರೂ ಆಗಿರುವರು. ದೇವತೆಗಳೂ ಸಹ ಅವರ ಲೆಕ್ಕವನ್ನು ಹೇಳಲಾರರು. ಒಂದುವೇಳೆ ಧೂಳು, ಮರಳು, ನಕ್ಷತ್ರ ಇವುಗಳನ್ನಾದರೂ ಲೆಕ್ಕಮಾಡಬಹುದು. ಆದರೆ ಕಾಲಭೈರವನ ದೂತರನ್ನು ಪರಿಗಣಿಸುವುದು ಅಸಾಧ್ಯವಾದುದು. ಕಾಶಿಯಲ್ಲಿ ಪಾಪಮಾಡಿದವರನ್ನು ಕಾಲಭೈರವನ ಭಟರು ಹಿಡಿದು ಎಳೆದುಕೊಂಡು ಹೋಗುವರು. ಅವರು ಪಾಪಿಷ್ಠರನ್ನು ನಗುತ್ತ ಹಾಡುತ್ತ ದಹಿಸುತ್ತಾರೆ. ಕಾದ ಎಣ್ಣೆಯಲ್ಲಿ ಕೆಡವಿ ಅವರನ್ನು ಬೇಯಿಸುತ್ತಾರೆ. ||೮೮-೮೯-೯೦-೯೧||

ತಾಡಯಂತಿ ಕಶಾಘಾತೈಃ ಶೂಲಾಗ್ರೈಃ ಪ್ರೋಥಯಂತಿ ತೇ ।
ಸಂತಪ್ತಾಯಸಪಿಂಡೈಶ್ಚ ತಾಡಯಂತಿ ಯಥೇಪ್ಸಿತಂ ॥೯೨॥

ಕಥಂ ವಾ ನ ಕೃತಾ ದುಷ್ಟಾ ನಿತ್ಯಯಾತ್ರಾ ತದಾ ಪುರಾ ।
ತತ್ಪಾಪಫಲಮೇವಾದ್ಯ ಭುಂಕ್ಷ್ವೇತ್ಯುಕ್ತ್ವಾ ನಿಹನ್ಯತೇ ॥೯೩॥

ಕಥಮಂತರ್ಗೇಹಯಾತ್ರಾ ದುರ್ಬುದ್ಧೇ ನ ಕೃತಾ ತ್ವಯಾ ।
ತತ್ಪಾಪಫಲಮೇವಾದ್ಯ ಭುಂಕ್ಷ್ವೇತ್ಯುಕ್ತ್ವಾ ನಿಹನ್ಯತೇ ॥೯೪॥

ಅನಭ್ಯರ್ಚ್ಯೈವ ವಿಶ್ವೇಶಂ ಕಥಂ ಭುಕ್ತಂ ತ್ವಯಾ ತದಾ ।
ತತ್ಪಾಪಫಲಮೇವೈತದ್ಭುಂಕ್ಷ್ವೇತ್ಯುಕ್ತ್ವಾ ನಿಹನ್ಯತೇ ॥೯೫॥

ಶ್ರೀಕಾಲಭೈರವಃ ಸಾಕ್ಷಾತ್ ಕಥಂ ವಾ ನಾರ್ಚಿತಸ್ತ್ವಯಾ ।
ತತ್ಪಾಪಫಲಮೇವೈತದ್ಭುಂಕ್ಷ್ವೇತ್ಯುಕ್ತ್ವಾ ನಿಹನ್ಯತೇ ॥೯೬॥

ಅಸ್ನಾತ್ವೈವ ತದಾ ಭುಕ್ತಂ ಜ್ಞಾನವಾಪ್ಯಾಂ ತ್ವಯಾ ಮುದಾ ।
ತತ್ಪಾಪಫಲಮೇವೈತದ್ಭುಂಕ್ಷ್ವೇತ್ಯುಕ್ತ್ವಾ ನಿಹನ್ಯತೇ ॥೯೭॥

ತ್ವಯಾ ನಾಭ್ಯರ್ಚಿತಃ ಪೂರ್ವಂ ತದಾ ಪಶುಪತೀಶ್ವರಃ ।
ತತ್ಪಾಪಫಲಮೇವೈತದ್ಭುಂಕ್ಷ್ವೇತ್ಯುಕ್ತ್ವಾ ನಿಹನ್ಯತೇ ॥೯೮॥

---

ಚನ್ನಾಗಿ ಕಾದಕಬ್ಬಿಣದ ಕೋಲಿನಿಂದ ಮನಸ್ಸಿಗೆ ಬಂದಂತೆ ಹೊಡೆಯುತ್ತಾರೆ. ಎಲೈ ಮೂಢರೇ, ಹಿಂದೆ ನೀವು ಏತಕ್ಕೆ ಈ ಕ್ಷೇತ್ರದಲ್ಲಿ ನಿತ್ಯ ಯಾತ್ರೆಯನ್ನು ಮಾಡಲಿಲ್ಲ? ಅದರ ಫಲವನ್ನೀಗ ಅನುಭವಿಸಿರಿ ಎಂದು ಹೇಳುತ್ತಾ ಶಿಕ್ಷಿಸುತ್ತಾರೆ. ದುಷ್ಟನೇ! ನೀನು ಅಂತರ್ಗೃಹದ ಯಾತ್ರೆಯನ್ನು ಏತಕ್ಕಾಗಿ ಮಾಡಲಿಲ್ಲ? ಅದರ ಫಲವನ್ನೀಗ ಅನುಭವಿಸು ಎಂದು ಹೇಳಿ ದಂಡಿಸುವರು. ಶ್ರೀವಿಶ್ವೇಶ್ವರನನ್ನು ಪೂಜಿಸದೇ ಊಟಮಾಡಿದುದರ ಫಲವನ್ನು ಈಗ ಅನುಭವಿಸು ಎಂದು ಹೊಡೆಯುವರು. ॥೯೨-೯೩-೯೪-೯೫॥

ಎಲೈ! ನೀನು ಹಿಂದೆ ಶಾಸ್ತ್ರವಿಧಿಯಂತೆ ಕಾಲಭೈರವನನ್ನು ಅರ್ಚಿಸಲಿಲ್ಲ. ಮತ್ತು ಪಶುಪತೀಶ್ವರನನ್ನೂ ಪೂಜಿಸಲಿಲ್ಲ. ವೀರೇಶ್ವರನನ್ನೂ ಚೆನ್ನಾಗಿ ಸೇವಿಸಲಿಲ್ಲ.

ತ್ವಯಾ ವೀರೇಶ್ವರಃ ಪೂರ್ವಂ ಸಮ್ಯಕ್ ನಾಭ್ಯರ್ಚಿತಃ ಪುರಾ ।
ತತ್ಪಾಪಫಲಮೇವೈತದ್ಭುಂಕ್ಷ್ವೇತ್ಯುಕ್ತ್ವಾ ನಿಹನ್ಯತೇ ॥೯೯॥

ಅಂತರ್ಗೃಹೇ ತದಾ ದುಷ್ಟ ಮೂತ್ರೋತ್ಸರ್ಗಸ್ತ್ವಯಾ ಕೃತಃ ।
ತತ್ಪಾಪಫಲಮೇವಾದ್ಯ ಭುಂಕ್ಷ್ವೇತ್ಯುಕ್ತ್ವಾ ನಿಹನ್ಯತೇ ॥೧೦೦॥

ತದಾ ಶೈವಜನದ್ರೋಹಸ್ತ್ವಯಾ ದುಷ್ಟ ಪುರಾ ಕೃತಃ ।
ತತ್ಪಾಪಫಲಮೇವೈತದ್ಭುಂಕ್ಷ್ವೇತ್ಯುಕ್ತ್ವಾ ನಿಹನ್ಯತೇ ॥೧೦೧॥

ವಿಭೂತಿಧಾರಣಂ ತ್ಯಕ್ತ್ವಾ ತದಾ ಭುಕ್ತಂ ತ್ವಯಾ ಪುರಾ ।
ತತ್ಪಾಪಫಲಮೇವೈತದ್ಭುಂಕ್ಷ್ವೇತ್ಯುಕ್ತ್ವಾ ನಿಹನ್ಯತೇ ॥೧೦೨॥

ಲಿಂಗಪೂಜಾಮಕೃತ್ವೈವ ತ್ವಯಾ ಭುಕ್ತಂ ತದಾ ಪುರಾ ।
ತತ್ಪಾಪಫಲಮೇವೈತದ್ಭುಂಕ್ಷ್ವೇತ್ಯುಕ್ತ್ವಾ ನಿಹನ್ಯತೇ ॥೧೦೩॥

ಶಿವನಿಂದಾ ಕೃತಾ ಪೂರ್ವಂ ಪಂಚಾಕ್ಷರಜಪಸ್ತ್ವಯಾ ।
ತತ್ಪಾಪಫಲಮೇವೈತದ್ಭುಂಕ್ಷ್ವೇತ್ಯುಕ್ತ್ವಾ ನಿಹನ್ಯತೇ ॥೧೦೪॥

ತದಾ ಜಲಂ ತ್ವಯಾ ಪೀತಮನಿವೇದ್ಯೈವ ಶಂಕರೇ ।
ತತ್ಪಾಪಫಲಮೇವೈತದ್ಭುಂಕ್ಷ್ವೇತ್ಯುಕ್ತ್ವಾ ನಿಹನ್ಯತೇ ॥೧೦೫॥

---

ಅಲ್ಲದೇ ಅಂತರ್ಗೃಹದಲ್ಲಿ ಮೂತ್ರೋತ್ಸರ್ಜನವನ್ನು ಮಾಡಿರುವೆ. ಜ್ಞಾನವಾಪೀ ತೀರ್ಥದಲ್ಲಿ ಸ್ನಾನಮಾಡದೆ ಭೋಜನಮಾಡಿರುವೆ. ಅದರ ಫಲವನ್ನೀಗ ಊಟ ಮಾಡು ಎಂದು ಹೇಳಿ ಶಿಕ್ಷಿಸುತ್ತಾರೆ. ||೯೬-೯೭-೯೮-೯೯-೧೦೦||

ನೀನು ಹಿಂದೆ ಈಶ್ವರಭಕ್ತರಿಗೆ ದ್ರೋಹವನ್ನು ಮಾಡಿರುತ್ತೀಯೆ. ಮತ್ತು ವಿಭೂತಿಯನ್ನು ಹಣೆಯಲ್ಲಿ ನೀನು ಧರಿಸಿದವನಲ್ಲ. ಶಿವಲಿಂಗಪೂಜೆಯನ್ನು ಮಾಡದೇ ನೀನು ಊಟಮಾಡಿರುವೆ. ಅಲ್ಲದೇ ಈಶ್ವರನಿಂದೆಯನ್ನು ಹಿಂದೆ ನೀನು ಎಸಗಿರುವೆ. ಆಕಾರಣದಿಂದ ಈಗ ಈ ಫಲವನ್ನು ಅನುಭವಿಸು ಎಂದು ಹೇಳುತ್ತಾ ಶಿಕ್ಷಿಸುವರು. ಹಿಂದೆ ಏತಕ್ಕಾಗಿ ಶಿವಪಂಚಾಕ್ಷರ ಜಪವನ್ನು ಆಚರಿಸಲಿಲ್ಲ? ಎಂದು ಆಕ್ಷೇಪಿಸಿ ಅದರ ಫಲವನ್ನು ಈಗ ಅನುಭವಿಸು ಎಂದು ಹೇಳಿ ದಂಡಿಸುವರು. ||೧೦೧-೧೦೨-೧೦೩-೧೦೪-೧೦೫||

ಕಥಂ ತ್ವಯಾ ಕೃತಂ ದುಷ್ಟ ಶಿವಕ್ಷೇತ್ರಸ್ಯ ದೂಷಣಂ ।
ತತ್ಪಾಪಫಲಮೇನ್ವೈತದ್ಭುಂಕ್ಷ್ವೇತ್ಯುಕ್ತ್ವಾ ನಿಹನ್ಯತೇ ॥೧೦೬॥

ಕಥಂ ವಾ ನ ಕೃತಂ ಪೂರ್ವಂ ಪಂಚಾಕ್ಷರಜಪಸ್ತ್ವಯಾ ।
ತತ್ಪಾಪಫಲಮೇನ್ವೈತದ್ಭುಂಕ್ಷ್ವೇತ್ಯುಕ್ತ್ವಾ ನಿಹನ್ಯತೇ ॥೧೦೭॥

ಪುರಾ ತ್ವಯಾ ದುಷ್ಟಚಿತ್ತ ಶಿವನಿಂದಾ ಶ್ರುತಾ ಕಥಂ ।
ತತ್ಪಾಪಫಲಮೇನ್ವೈತದ್ಭುಂಕ್ಷ್ವೇತ್ಯುಕ್ತ್ವಾ ನಿಹನ್ಯತೇ ॥೧೦೮॥

ತ್ವಯಾ ದುರ್ಭಗ ದುರ್ಬುದ್ಧೇ ಕಾಶೀ ನಿಂದಾ ಕಥಂ ಕೃತಾ ।
ತತ್ಪಾಪಫಲಮೇನ್ವೈತದ್ಭುಂಕ್ಷ್ವೇತ್ಯುಕ್ತ್ವಾ ನಿಹನ್ಯತೇ ॥೧೦೯॥

ಪುರಾ ಬಿಲ್ವದಳೈಃ ಶಂಭುಸ್ತ್ವಯಾ ನಾಭ್ಯರ್ಚಿತಃ ಪುರಾ ।
ತತ್ಪಾಪಫಲಮೇನ್ವೈತದ್ಭುಂಕ್ಷ್ವೇತ್ಯುಕ್ತ್ವಾ ನಿಹನ್ಯತೇ ॥೧೧೦॥

ಶಿವೇತ್ಯೇವ ಪರಂ ನಾಮ ಕಥಂ ನ ಜಪಿತಂ ತ್ವಯಾ ।
ತತ್ಪಾಪಫಲಮೇನ್ವೈತದ್ಭುಂಕ್ಷ್ವೇತ್ಯುಕ್ತ್ವಾ ನಿಹನ್ಯತೇ ॥೧೧೧॥

ಅಸ್ನಾತ್ವಾ ಶಿವಗಂಗಾಯಾಂ ಕಥಂ ಭುಕ್ತಂ ತ್ವಯಾ ತದಾ ।
ತತ್ಪಾಪಫಲಮೇನ್ವೈತದ್ಭುಂಕ್ಷ್ವೇತ್ಯುಕ್ತ್ವಾ ನಿಹನ್ಯತೇ ॥೧೧೨॥

---

ಎಲೈ ದುಷ್ಟನೇ, ನೀನು ಏತಕ್ಕಾಗಿ ಶಿವಕ್ಷೇತ್ರವನ್ನು ನಿಂದಿಸಿದೆ? ಶಿವ ಪಂಚಾಕ್ಷರೀಜಪವನ್ನು ಏತಕ್ಕೆ ಮರೆತೆ? ಹಿಂದೆ ಶಿವನ ನಿಂದೆಯನ್ನಾದರೂ ಏಕೆ ಕೇಳಿದೆ? ದುರ್ಮತಿಯೇ, ಏತಕ್ಕಾಗಿ ಕಾಶೀಕ್ಷೇತ್ರವನ್ನು ದೂಷಿಸಿದೆ? ಬಿಲ್ವದಳಗಳಿಂದ ಎಂದೂ ಶಂಭುವನ್ನು ನೀನು ಪೂಜಿಸಿದವನಲ್ಲ. ಮತ್ತು ಶಿವ, ಶಿವ ಎಂಬ ಪವಿತ್ರವಾದ ನಾಮವನ್ನೂ ಜಪಿಸಿದವನಲ್ಲ. ಆದುದರಿಂದ ಆ ಪಾಪಫಲವನ್ನು ಈಗ ಅನುಭವಿಸು ಎಂದು ಹೇಳಿ ಅವನಿಗೆ ಭೈರವದೂತರು ನರಕಯಾತನೆಯನ್ನು ಕೊಡುತ್ತಾರೆ. ॥೧೦೭-೧೦೮-೧೦೯-೧೧೦-೧೧೧॥

ಎಲೈ ದುಷ್ಟನೇ, ನೀನು ಶಿವಗಂಗೆಯಲ್ಲಿ ಸ್ನಾನಮಾಡದೇ ಭೋಜನವನ್ನು ಏಕೆ ಮಾಡಿದೆ? ಈಶ್ವರ ಭಕ್ತನಿಗೆ ಏಕೆ ಅಪಮಾನಗೊಳಿಸಿದೆ? ಅಲ್ಲದೇ ಶಿವನಲ್ಲಿ ಆಸಕ್ತರಾದ ಈಶ್ವರ ಭಕ್ತರನ್ನೇಕೆ ಸೇವಿಸಲಿಲ್ಲ? ಮತ್ತು ಪಂಚಕ್ರೋಶಯಾತ್ರೆಯನ್ನೂ ನೀನು ಮಾಡಲಿಲ್ಲ. ಹಿಂದೆ ನೀನು ಜ್ಞಾನವಾಪಿಯಲ್ಲಿ ಏಕೆ ಉಗುಳಿದೆ?

ಕಥಂ ತ್ವಯಾ ಕೃತಂ ಮೂರ್ಖ ಶೈವೇ ನಿಷ್ಠುರಭಾಷಣಂ ।
ತತ್ಪಾಪಫಲಮೇವೈತದ್ಭುಂಕ್ಷ್ವೇತ್ಯುಕ್ತ್ವಾ ನಿಹನ್ಯತೇ ॥೧೧೩॥

ಸೇವಿತಾ ನ ಕಥಂ ಮೂರ್ಖ ಶೈವಾಃ ಶಿವಪರಾಯಣಾಃ ।
ತತ್ಪಾಪಫಲಮೇವೈತದ್ಭುಂಕ್ಷ್ವೇತ್ಯುಕ್ತ್ವಾ ನಿಹನ್ಯತೇ ॥೧೧೪॥

ನ ಪಂಚಕ್ರೋಶಯಾತ್ರಾಪಿ ಪ್ರತಿಪಕ್ಷೇ ತ್ವಯಾ ಕೃತಾ ।
ತತ್ಪಾಪಫಲಮೇವೈತದ್ಭುಂಕ್ಷ್ವೇತ್ಯುಕ್ತ್ವಾ ನಿಹನ್ಯತೇ ॥೧೧೫॥

ಜ್ಞಾನವಾಪ್ಯಾಂ ತ್ವಯಾ ಪೂರ್ವಂ ಕಥಂ ನಿಷ್ಠೀವನಂ ಕೃತಂ ।
ತತ್ಪಾಪಫಲಮೇವೈತದ್ಭುಂಕ್ಷ್ವೇತ್ಯುಕ್ತ್ವಾ ನಿಹನ್ಯತೇ ॥೧೧೬॥

ಶಿವತೀರ್ಥಮಪೀತ್ವೈವ ಕಥಂ ಭುಕ್ತಂ ತ್ವಯಾ ಪುರಾ ।
ತತ್ಪಾಪಫಲಮೇವೈತದ್ಭುಂಕ್ಷ್ವೇತ್ಯುಕ್ತ್ವಾ ನಿಹನ್ಯತೇ ॥೧೧೭॥

ಪ್ರದೋಷೇ ಶಂಕರಃ ಪೂರ್ವಂ ಕಥಂ ನಾಭ್ಯರ್ಚಿತಸ್ತ್ವಯಾ ।
ತತ್ಪಾಪಫಲಮೇವೈತತ್ ಭುಂಕ್ಷ್ವೇತ್ಯುಕ್ತ್ವಾ ನಿಹನ್ಯತೇ ॥೧೧೮॥

ಕಥಂ ತ್ವಯಾ ಕೃತಂ ಮೂರ್ಖ ಬಿಲ್ವಸ್ಯಾಸ್ಕಂದನಂ ಪುರಾ ।
ತತ್ಪಾಪಫಲಮೇವೈತತ್ ಭುಂಕ್ಷ್ವೇತ್ಯುಕ್ತ್ವಾ ನಿಹನ್ಯತೇ ॥೧೧೯॥

ಕಾಶ್ಯಾಂ ಸ್ಥಿತ್ವಾಪಿ ಸತತಂ ನಕೃತಂ ಸತ್ಯಭಾಷಣಂ ।
ತತ್ಪಾಪಫಲಮೇವೈತತ್ ಭುಂಕ್ಷ್ವೇತ್ಯುಕ್ತ್ವಾ ನಿಹನ್ಯತೇ ॥೧೨೦॥

ಏವಮನ್ಯಾನಿ ಪಾಪಾನಿ ಸ್ಮೃತ್ವಾ ಸ್ಮೃತ್ವಾ ಪುನಃ ಪುನಃ ।
ತಪ್ತಶೂಲಾದಿಭಿಃ ಸಮ್ಯಕ್ ತಾಡಯಂತ್ಯತಿದಾರುಣಂ ॥೧೨೧॥

---

ಶಿವತೀರ್ಥವನ್ನು ಪ್ರಾಶನೆಮಾಡದೆ ಊಟವನ್ನೇಕೆ ಮಾಡಿದೆ? ಪ್ರದೋಷಕಾಲದಲ್ಲಿ ಶಂಕರನನ್ನು ಏಕೆ ಪೂಜಿಸಲಿಲ್ಲ? ಬಿಲ್ವವೃಕ್ಷಭೇದನಮಾಡುವಾಗ ನಿನ್ನ ಬುದ್ಧಿ ಎಲ್ಲಿ ಹೋಗಿತ್ತು? ಕಾಶಿಯಲ್ಲಿ ಸುಳ್ಳು ಹೇಳುವುದುಂಟೆ? ಆದುದರಿಂದ ಅದರ ಫಲವನ್ನು ಈಗ ಅನುಭವಿಸು ಎಂದು ಹೇಳಿ ಉಗ್ರವಾಗಿ ತಾಡನಮಾಡುವರು. ||೧೧೨-೧೧೩-೧೧೪-೧೧೫-೧೧೬-೧೧೭-೧೧೮-೧೧೯-೧೨೦||

ಹೀಗೆಯೇ ಆತನ ಉಳಿದ ಬೇರೆ ಬೇರೆ ಪಾಪಗಳನ್ನು ನೆನಪುಮಾಡಿಕೊಂಡು

ಪುರಾ ದ್ವಿಜಾಧಿಪಃ ಕಶ್ಚಿತ್ ಶಿವಭಕ್ತಿಪರಾಯಣಃ ।
ಶರದಾಮಯುತಂ ಚಕ್ರೇ ಕಾಶೀವಾಸಂ ಸ್ವಧರ್ಮತಃ ॥೧೨೨॥

ನಿತ್ಯಾಂತರ್ಗೃಹಯಾತ್ರಾದಿ ಕುರ್ವನ್ ವಿಜಿತಮಾನಸಃ ।
ನಿರಾಹಾರೇಣ ಸತತಂ ನ್ಯವಸದ್ದುಃಖವರ್ಜಿತಃ ॥೧೨೩॥

ಕದಾಚಿತ್ತದ್ಗುರುರ್ವೃದ್ಧಃ ಶಿಷ್ಯಂ ವೀಕ್ಷ್ಯ ಕೃಶಾಕೃತಿಂ ।
ತಮುವಾಚ ತತಃ ಪ್ರೀತ್ಯಾ ಪ್ರಣತಾನತಕಂಧರಂ ॥೧೨೪॥

ಶಿಷ್ಯ ಜೀರ್ಣಂ ಶರೀರಂ ತೇ ಶಕ್ತಿಸ್ತ್ವಯಿ ನ ದೃಶ್ಯತೇ ।
ನ ಕರ್ತವ್ಯೋ ನಿರಾಹಾರಸ್ತ್ವಯಾದ್ಯಾವಧಿ ಸತ್ತಮ ॥೧೨೫॥

ಜಾಲಾನಿ ಜೀರ್ಣಪರ್ಣಾನಿ ಫಲಂ ವಾ ಮೂಲಮೇವ ವಾ ।
ಅಯಾಚಿತಂ ಯದಿ ಪ್ರಾಪ್ತಂ ತದಾ ತದ್ಭುಂಕ್ಷ್ವ ಸಾದರಂ ॥೧೨೬॥

ಶುದ್ಧೈರುಪೋಷಣೈರ್ದೂನಂ ಶರೀರಂ ಜಾಯತೇ ತವ ।
ಯಥೇಚ್ಛಂ ನೋಪಭೋಕ್ತವ್ಯಂ ಅಲ್ಪಂ ಭುಂಕ್ಷ್ವ ಯಥೋಚಿತಂ ॥೧೨೭॥

---

ಆತನನ್ನು ಹಂಗಿಸಿ ಶಿಕ್ಷಿಸುವರು. ಕಾದಕಬ್ಬಿಣದ ಸರಳುಗಳಿಂದ ಭಯಂಕರವಾದ ರೀತಿಯಲ್ಲಿ ಅವರನ್ನು ಹೊಡೆಯುವರು. ಹಿಂದೆ ಒಬ್ಬ ಶೈವದ್ವಿಜಶ್ರೇಷ್ಠನು ಕಾಶಿಯಲ್ಲಿ ವಾಸಿಸುತ್ತಿದ್ದನು. ಆತನು ತನ್ನ ಪುಣ್ಯಪ್ರಭಾವದಿಂದ ಹತ್ತುಸಾವಿರ ವರ್ಷ ಪರ್ಯಂತ ಕಾಶಿಯಲ್ಲಿ ನೆಲಸಿದನು. ಆತನು ನಿತ್ಯಯಾತ್ರೆಯನ್ನು ತಪ್ಪದೆ ಮಾಡುತ್ತ ಜಿತೇಂದ್ರಿಯ ನಾಗಿದ್ದನು. ನಿತ್ಯವೂ ನಿರಶನವ್ರತವನ್ನು ತಪ್ಪದೆ ಆಚರಿಸುತ್ತಿದ್ದನು. ಅದರಿಂದ ಅವನಿಗೆ ಯಾವ ದುಃಖವೂ ಒದಗುತ್ತಿರಲಿಲ್ಲ. ॥೧೨೧-೧೨೨-೧೨೩॥

ಒಂದುಸಲ ಆತನ ಗುರುವು ಕೃಶನಾದ ತನ್ನ ಶಿಷ್ಯನನ್ನು ಕಂಡು, ನಮ್ರ ನಾಗಿ ತಲೆಬಾಗಿರುವ ಆತನನ್ನು ಕುರಿತು, ಪ್ರೀತಿಯಿಂದ ಹೀಗೆ ಮಾತನಾಡಿದನು. "ಎಲೈ ಶಿಷ್ಯನೇ, ನಿನ್ನ ಶರೀರವು ಶಿಥಿಲವಾಗಿದೆ. ನಿನ್ನಲ್ಲಿ ಶಕ್ತಿಯಿರುವಂತೆ ತೋರುವುದಿಲ್ಲ. ಈಗಲೂ ನೀನು ಉಪವಾಸವ್ರತವನ್ನು ಆಚರಿಸುವುದು ಬೇಡ. ನೀರು, ಎಲೆ, ಹಣ್ಣು, ಕಂದಮೂಲ, ಯಾಚನೆಮಾಡದೇ ತಾನಾಗಿಯೇ ಲಭಿಸಿದ ಪದಾರ್ಥ, ಇವುಗಳನ್ನು ಸ್ವೀಕರಿಸಬಹುದು. ಕೇವಲ ನಿರಶನವ್ರತವು ದುಷ್ಕರವಾದುದು. ಶುದ್ಧವಾದ ಉಪವಾಸದಿಂದ ನಿನ್ನ ದೇಹವು ಶುಷ್ಕವಾಗುವುದು. ಆಹಾರಗಳ

ಮಲಾದೀನ್ಯಪಿ ಜಾಯಂತೇ ಜಂತೂನಾಮನ್ನಭಕ್ಷಣಾತ್ ।
ತದ್ಭಯಂ ತು ಮಹತ್ಕಾಶ್ಯಾಂ ಅಪ್ರಮಾದೇನ ಸಂವಸ ॥೧೨೮॥

ಶರ್ವರ್ಯಾಃ ಪಶ್ಚಿಮೇ ಯಾಮೇ ಪಂಚಕ್ರೋಶಾದ್ಬಹಿರ್ವ್ರಜ ।
ಕುರು ತತ್ರೈವ ನಿಯತಂ ಮಲಮೂತ್ರವಿಸರ್ಜನಂ ॥೧೨೯॥

ಶೌಚಾದಿಕಂ ಯಥಾ ಶಾಸ್ತ್ರಂ ಕುರು ಸಂತತಮಾದರಾತ್ ।
ತತಃ ಕಾಶ್ಯಾಂ ಸಮಾಗತ್ಯ ಕರ್ಮ ಪ್ರಾತ್ಯಾಹಿಕಂ ಕುರು ॥೧೩೦॥

ಇತ್ಯುಕ್ತೋ ಗುರುಣಾ ಸೋಽಪಿ ತಚ್ಚಕ್ರೇ ಚ ತತಃ ಪರಂ ।
ಏವಂ ನಿವಸತಸ್ತಸ್ಯ ಭೂಯಾನ್ ಕಾಲೋ ಗತಸ್ತದಾ ॥೧೩೧॥

ಅಂತರ್ಗೃಹಸ್ಯ ಯಾತ್ರಾದಿ ಕೃತ್ವಾ ಸರ್ವಂ ಕದಾಚನ ।
ಪಪಾತಾಂತರ್ಗೃಹೇ ಶ್ರಾಂತೋ ಮೂರ್ಛಿತಃ ಖಿನ್ನವಿಗ್ರಹಃ ॥೧೩೨॥

ತತಸ್ತತ್ರೈವ ತದ್ದೇಹಾನ್ಮಲಮೂತ್ರಾದಿ ನಿಸ್ಸೃತಂ ।
ತತಃ ಸಚೇತನಾಂ ಪ್ರಾಪ್ಯ ಸ್ವಾಶ್ರಮಂ ಪ್ರತಿಸಂಯಯೌ ॥೧೩೩॥

---

ನ್ನಾದರೂ ಬೇಕಾದಷ್ಟು ಸ್ವೇಚ್ಛೆಯಾಗಿ ತಿನ್ನಕೂಡದು. ಅಲ್ಪಾಹಾರವನ್ನು ಭಕ್ಷಿಸಬೇಕು. ಹೀಗೆ ಮಾಡುವುದರಿಂದ ದೇಹದ ಕಶ್ಮಲಗಳು ಹೊರಗೆಬೀಳುವುವು. ಅಲ್ಲದೇ ಅನ್ನಭಕ್ಷಣದಿಂದ ಜಂತುಹುಳುಗಳು ಉತ್ಪನ್ನವಾಗುವುವು. ಈ ಕಾಶಿಯಲ್ಲಿ ಜಂತುಹುಳದಿಂದ ತುಂಬಾ ಕೇಡಾಗುವ ಸಂಭವವುಂಟು. ಜಾಗರೂಕನಾಗಿ ಇರಬೇಕು. ಅಪರರಾತ್ರಿ ಹಾಸಿಗೆ ಬಿಟ್ಟು ಎದ್ದು ಐದುಕ್ರೋಶ (ಮೈಲಿ)ದೂರ ಹೊರಗೆ ನಡೆಯಬೇಕು. ಅಷ್ಟು ದೂರ ನಡೆದು ಬಳಿಕ ಶೌಚಕರ್ಮವನ್ನು ಮುಗಿಸಬೇಕು. ||೧೨೪-೧೨೫-೧೨೬-೧೨೭-೧೨೮-೧೨೯||

ಬಳಿಕ ಶಾಸ್ತ್ರರೀತಿಯಾಗಿ ಶೌಚಾದಿಗಳನ್ನು ಮಾಡಿ ಅನಂತರ ಕಾಶಿಯಲ್ಲಿ ನಿತ್ಯಕರ್ಮಗಳನ್ನೂ ಎಸಗು" ಎಂದು ಗುರುವು ಹೇಳಿದಂತೆ ಆ ಬ್ರಾಹ್ಮಣಶಿಷ್ಯನು ನಡೆದನು. ಹೀಗೆ ವಾಸಿಸುತ್ತಿರುವ ಆತನು ಅನೇಕವರ್ಷಗಳನ್ನು ಅಲ್ಲಿ ಕಳೆದನು. ಅಂತರ್ಗೃಹಯಾತ್ರೆಯನ್ನು ತಪ್ಪದೆ ನಿರ್ವಹಿಸುತ್ತಿದ್ದನು. ಒಂದುಸಲ ಆತನು ಅಶಕ್ತತೆ ಯಿಂದ ಅಂತರ್ಗೃಹದಲ್ಲಿ ಕಾಲುಜಾರಿ ಬಿದ್ದನು. ಬಹಳ ಆಯಾಸಹೊಂದಿ ಅಲ್ಲಿಯೇ ಮೂರ್ಛೆಯನ್ನು ಹೊಂದಿದನು. ಅನಂತರ ಆತನ ದೇಹದಿಂದ ಅಲ್ಲಿಯೇ ಮಲ

ಸ ಚಾಥ ಸ್ವಕೃತಂ ಕರ್ಮ ಸ್ಮೃತ್ವಾ ಸ್ಮೃತ್ವಾ ಪುನಃ ಪುನಃ ।
ರುರೋದ ಬಹುದುಃಖೇನ ಪಾಪಭೀರುರ್ದ್ವಿಜೋತ್ತಮಃ ॥೧೩೪॥

ತದಾ ಪ್ರಭೃತಿ ವಿಪ್ರೋಽಸಾವಾಹಾರಂ ಸಂತ್ಯಜತ್ತತಃ ।
ನಿರಾಹಾರಂ ತಪಶ್ಚಕ್ರೇ ತತ್ಸ್ಮೃತ್ವಾ ಪಾಪಮನ್ವಹಂ ॥೧೩೫॥

ಪ್ರಬುದ್ಧಮಾನಸಸ್ತತ್ಪಾಪಶಾಂತ್ಯೈ ಸಂವತ್ಸರಾಯುತಂ ।
ವಹ್ನಿಮಧ್ಯೇ ಸ್ಥಿತೋ ನಿತ್ಯಂ ಏಕಪಾದೇನ ಸಾದರಂ ॥೧೩೬॥

ತೇನಾಪಿ ಘೋರತಪಸಾ ತಾವತ್ಕಾಲಂ ಕೃತೇನ ಚ ।
ನ ಶಾಂತಂ ತಾದೃಶಂ ಪಾಪಂ ಪ್ರವೃದ್ಧಂ ಚ ಕ್ಷಣೇಕ್ಷಣೇ ॥೧೩೭॥

ತತಃ ಸ ಚಾಯುಷಿ ಕ್ಷೀಣೇ ಕಾಶ್ಯಾಮೇವ ಮೃತೋ ದ್ವಿಜಃ ।
ಅಸಹ್ಯ ದುಃಖಭೋಗಾರ್ಥಂ ಬಹುಕಾಲೇಷು ಸರ್ವದಾ ॥೧೩೮॥

ಮೃತಂ ವಿಲೋಕ್ಯ ತಂ ಕ್ರೂರಾಃ ಕಾಲಭೈರವಕಿಂಕರಾಃ ।
ಗೃಹೀತ್ವಾ ಸಂಯಯುಃ ಶೀಘ್ರಂ ಹೃಷ್ಟಚಿತ್ತಾ ದುರಾಸದಾಃ ॥೧೩೯॥

ನೀತ್ವಾ ತಮಗ್ನೌ ನಿಕ್ಷಿಪ್ಯ ದಗ್ಧ್ವಾ ಸಮ್ಯಕ್ ಪುನಃ ಪುನಃ ।
ತೀವ್ರೈಸ್ತತಃ ಕಶಾಘಾತೈಃ ದದುರ್ದುಃಖಂ ಮುಹುರ್ಮುಹುಃ ॥೧೪೦॥

---

ಮೂತ್ರಗಳು ನಿಃಸೃತವಾದುವು. ಅವನು ಕೆಲವು ಹೊತ್ತಿನಮೇಲೆ ಎಚ್ಚೆತ್ತು ತನ್ನ ಮನೆಗೆ ಹೋದನು. ಅಲ್ಲಿ ತಾನು ಅಂತರ್ಗೃಹದಲ್ಲಿ ಎಸಗಿದ ಕರ್ಮವನ್ನು ಬಾರಿ ಬಾರಿಗೂ ಸ್ಮರಿಸುತ್ತ ವ್ಯಥೆಪಟ್ಟನು. ಆ ಬ್ರಾಹ್ಮಣನು ಅಲ್ಲಿಂದ ಮೊದಲ್ಗೊಂಡು ಆಹಾರವನ್ನೇ ತ್ಯಜಿಸಿದನು. ತನ್ನ ಪಾಪಸ್ಮರಣೆ ಮಾಡಿಕೊಳ್ಳುತ್ತಾ ಪಶ್ಚಾತ್ತಾಪ ಪಟ್ಟು ತಪಸ್ಸುಗೈಯ್ಯಲಾರಂಭಿಸಿದನು. ॥೧೩೦-೧೩೧-೧೩೨-೧೩೩-೧೩೪-೧೩೫॥

ತಾನು ಎಚ್ಚೆತ್ತುಕೊಂಡು ಆ ಪಾಪಪರಿಹಾರಕ್ಕಾಗಿ ಹತ್ತುಸಾವಿರ ಸಂವತ್ಸರ ಪರ್ಯಂತ ವಹ್ನಿಮಧ್ಯದಲ್ಲಿ, ಒಂದು ಕಾಲಿನಿಂದ ನಿಂತುಕೊಂಡು ಘೋರತಪಸ್ಸನ್ನು ಮಾಡಿದನು. ಆದರೆ ಆ ಪಾಪವು ಶಾಂತವಾಗಲಿಲ್ಲ. ಮತ್ತೆ ಹೆಚ್ಚು ಹೆಚ್ಚಾಗಿ ಕ್ಷಣ ಕ್ಷಣಕ್ಕೂ ಅದು ಬೆಳೆಯಿತು. ಅವನ ಆಯುಸ್ಸು ಮುಗಿಯುತ್ತ ಬಂದಿತು. ಅವನು ಕಾಶಿಯಲ್ಲಿಯೇ ಮೃತನಾದನು. ಅಸಹ್ಯದುಃಖವನ್ನು ಅನುಭವಿಸಲು ಯೋಗ್ಯನಾದ ಅವನನ್ನು ಕಾಲಭೈರವನ ದೂತರು ನೋಡಿ ಸಂತೋಷದಿಂದ ಅವನನ್ನು ಹಿಡಿ

ಮಲಮೂತ್ರಾದಿಕಂ ದುಷ್ಟ ಕಥಮಂತರ್ಗೃಹೇ ಕೃತಂ ।
ತತ್ಪಾಪನಾಶಕೋ ಧರ್ಮಃ ಕೋಪಿ ವೇದೇ ನ ದೃಶ್ಯತೇ ॥೧೪೧॥

ತಾದೃಶಂ ಹಿ ಮಹತ್ಪಾಪಂ ಕೇನ ನಾಶಂ ಪ್ರಯಾಸ್ಯತಿ ।
ಕಥಂ ವಾ ಯಾತನಾ ದುಃಖಂ ನಿವೃತ್ತಂ ತೇ ಭವಿಷ್ಯತಿ ॥೧೪೨॥

ಅಂತರ್ಗೃಹೇ ತು ಲಿಂಗಾನಿ ದಿವ್ಯಾನ್ಯತ್ಯದ್ಭುತಾನಿ ಚ ।
ನಿವಸಂತ್ಯತಿಸಂಮರ್ದಸಂಖ್ಯಾ ತೇಷಾಂ ನ ವಿದ್ಯತೇ ॥೧೪೩॥

ಅಂತರ್ಗೃಹೇ ಕೃತಂ ಯತ್ತು ಮಲಮೂತ್ರಾದಿಕಂ ನರೈಃ ।
ಲಿಂಗೇ ಪತತಿ ತದ್ಘೋರಂ ಯಾತನಾಕಾರಣಂ ಸದಾ ॥೧೪೪॥

ತ್ವಯಾ ಕೃತಂ ಮಹತ್ಪುಣ್ಯಂ ಸರ್ವಂ ಯದ್ಯಪಿ ಸರ್ವದಾ ।
ಸ ಧರ್ಮಸ್ತೇನ ಪಾಪೇನ ಸರ್ವೋ ನಷ್ಟೋ ನ ಸಂಶಯಃ ॥೧೪೫॥

ಏವಂ ಸಂತರ್ಜ್ಯ ಸಂತರ್ಜ್ಯ ಭೈರವಸ್ಯೈವ ಕಿಂಕರಾಃ ।
ಅಶೀತಿಯುಗಪರ್ಯಂತಂ ದಗ್ಧ್ವಾ ತಮಥ ತೇ ಭಟಾಃ ॥೧೪೬॥

---

ದೊಯ್ದರು. ಎಳೆದುಕೊಂಡುಹೋಗಿ ಬೆಂಕಿಯಲ್ಲಿ ಹಾಕಿದರು. ಅವನನ್ನು ಚನ್ನಾಗಿ ಸುಟ್ಟು ಚಾವುಟಿಯಿಂದ ಬಾರಿಬಾರಿಗೂ ಹೊಡೆಯುತ್ತಿದ್ದರು. ॥೧೩೬-೧೩೭-೧೩೮-೧೩೯-೧೪೦॥

ಎಲೈ ಮೂರ್ಖನೇ! ಅಂತರ್ಗೃಹದಲ್ಲಿ ಮಲಮೂತ್ರಾದಿಗಳನ್ನು ಏಕೆ ವಿಸರ್ಜಿಸಿದೆ? ಆ ಪಾಪವನ್ನು ಹೋಗಲಾಡಿಸುವಂತಹ ಧರ್ಮವು ವೇದದಲ್ಲೂ ತೋರುವುದಿಲ್ಲ. ಅಂತಹ ಮಹಾಪಾಪವನ್ನು ಹೋಗಲಾಡಿಸುವುದು ಯಾರಿಗೂ ಶಕ್ಯವಿಲ್ಲ. ನಿನಗೆ ಯಾತನಾದುಃಖವಾದರೂ ಹೇಗೆ ಬಿಡುಗಡೆಯಾದೀತು? ಅಂತರ್ಗೃಹದಲ್ಲಿ ಅದ್ಭುತವಾದ ದಿವ್ಯಲಿಂಗಗಳನೇಕವಿವೆ. ಅವುಗಳ ಸಂಖ್ಯೆ ಇಷ್ಟೆಂದು ಹೇಳಲು ಸಾಧ್ಯವಿಲ್ಲ. ಮನುಷ್ಯರು ಅಂತರ್ಗೃಹದಲ್ಲಿ ಮಲಮೂತ್ರಾದಿಗಳನ್ನು ವಿಸರ್ಜಿಸಿದರೆ ಅದು ಶಿವಲಿಂಗದ ಮೇಲೆ ಬೀಳುತ್ತದೆ. ಅದರಿಂದ ಘೋರ ಯಾತನೆಯುಂಟಾಗುವುದು. ॥೧೪೧-೧೪೨-೧೪೩-೧೪೪॥

ಎಲೈ ಅಜ್ಞನೇ! ನೀನು ಮಹಾಪುಣ್ಯಕಾರ್ಯವನ್ನು ಮಾಡಿರುವೆ. ಆದರೆ ಆ ಒಂದು ಪಾಪದಿಂದ ಆ ಪುಣ್ಯಗಳೆಲ್ಲವೂ ನಷ್ಟವಾದುವು. ಎಂದು ಹೇಳಿ ಅವನನ್ನು

ಬಧ್ವಾ ಪಾಶೈಸ್ತಾಡಯಂತಃ ಸಂತಪ್ತಾಯಸಶೃಂಖಲೈಃ ।
ಗೃಹೀತ್ವಾ ಭೈರವಸ್ಯಾಗ್ರೇ ನಿಕ್ಷೇಪುಃ ಕುಪಿತಾ ಭೃಶಂ ॥೧೪೭॥

ಭೈರವೋಽಪಿ ಸ ತಂ ದೃಷ್ಟ್ವಾ ಭ್ರುಕುಟೀಕೃತಲೋಚನಃ ।
ಅಪೃಚ್ಛತ್ಕೋಽಯಮಿತ್ಯೇತಾನ್ ಕುಪಿತಃ ಸ್ವಭಟಾನ್ ಪ್ರತಿ ॥೧೪೮॥

॥ ಭೃತ್ಯಾ ಊಚುಃ ॥

ಶ್ರೀಕಾಲಭೈರವ ಶ್ರೀಮನ್ ಮಹೇಶ ಪ್ರಿಯಕೃದ್ವರ ।
ಪಾಪಿಮತ್ತೇಭಪಂಚಾಸ್ಯ ಪಂಚಾಸ್ಯಪುರರಕ್ಷಕ ॥೧೪೯॥

ಅಯಂ ಮಹಾಪಾತಕಿನಾಮುಗ್ರಗಣ್ಯೋ ದುರಾಸದಃ ।
ಅನೇನಾಂತರ್ಗೃಹೇ ಪೂರ್ವಂ ಮಲಮೂತ್ರಾದಿಕಂ ಕೃತಂ ॥೧೫೦॥

ಇತಿ ತದ್ವಚನಂ ಶ್ರುತ್ವಾ ಭೈರವೋ ಭೀಮವಿಕ್ರಮಃ ।
ಚುಕೋಪಾರುಣದೀರ್ಘಾಕ್ಷಃ ಪ್ರಜ್ವಲತ್ಪರ್ವತೋಪಮಃ ॥೧೫೧॥

ತತಸ್ತತ್ಕೋಪಜೋ ವಹ್ನಿರುತ್ಥಿತಃ ಪ್ರಜ್ವಲೋ ಮಹಾನ್ ।
ತಮಗ್ನಿಮುತ್ಥಿತಂ ದೃಷ್ಟ್ವಾ ಚುಕ್ರೋಶೋಚ್ಚೈಃ ಭಯಾದ್ದ್ವಿಜಃ ।೧೫೨॥

---

ಹೆದರಿಸಿ ಎಂಬತ್ತುಯುಗಗಳವರೆಗೂ ಅವನನ್ನು ಸುಟ್ಟು ಕಾದಕಬ್ಬಿಣದ ಸರಪಣಿಯಿಂದ ಚನ್ನಾಗಿ ಹೊಡೆದರು. ಕಾಯಿಸಿದ ಸರಪಣಿಯಿಂದ ಅವನನ್ನು ಕಟ್ಟಿ ಕೋಪದಿಂದ ಭೈರವನ ಮುಂಗಡೆ ಹಾಕಿದರು. ಭೈರವನೂಕೂಡ ಆತನನ್ನು ಕಂಡು ಹುಬ್ಬುಗಂಟಿಕ್ಕಿದನು. ಬಳಿಕ ಕೋಪದಿಂದ ಈತನು ಯಾವನೆಂದು ತನ್ನ ಭೃತ್ಯರನ್ನು ಕೇಳಿದನು. ಆಗ ಭೃತ್ಯರು ಹೀಗೆ ವಿಜ್ಞಾಪಿಸಿಕೊಂಡರು. ||೧೪೫-೧೪೬-೧೪೭-೧೪೮||

ಕಾಲಭೈರವನೇ! ನೀನು ಮಹೇಶನಿಗೆ ಪ್ರಿಯವನ್ನುಂಟುಮಾಡುವವನೂ, ಪಾಪಿಯೆಂಬ ಮದ್ದಾನೆಗೆ ಸಿಂಹದಂತಿರುವವನೂ, ಪಂಚಮುಖನಾದ ಶಿವನ ಕ್ಷೇತ್ರಗಳನ್ನು ಕಾಪಾಡುವವನೂ ಆಗಿರುತ್ತೀಯೆ. ಈತನು ಮಹಾಪಾಪಿಗಳೊಳಗೆ ಶ್ರೇಷ್ಠನೂ ದುರಾತ್ಮನೂ ಆಗಿದ್ದಾನೆ. ಹಿಂದೆ ಇವನು ಶಿವನ ಅಂತರ್ಗೃಹದಲ್ಲಿ ಮಲಮೂತ್ರೋತ್ಸರ್ಗವನ್ನು ಮಾಡಿರುತ್ತಾನೆ ಎಂದು ದೂರು ಹೇಳಿದರು. ಹೀಗೆ ಹೇಳಿದ ದೂತರ ಮಾತನ್ನು ಕೇಳಿ ಭಯಂಕರನೂ ಪರಾಕ್ರಮಶಾಲಿಯೂ ಆದ

ಸ ಏವ ಧ್ವನಿರತ್ಯುಚ್ಚೈಃ ಬ್ರಹ್ಮಲೋಕಾದಿಲೋಕಗಃ ।
ಸರ್ವೇಷಾಂ ಚ ಭಯಂ ಚಕ್ರೇ ತತ್ತಲ್ಲೋಕನಿವಾಸಿನಾಂ ॥೧೫೩॥

ತಮೇನಾರ್ತಸ್ವರಂ ಶ್ರುತ್ವಾ ತೂಷ್ಣೀಮಾಸಮಹಂ ತದಾ ।
ವಿಧಿಃ ಶ್ರುತ್ವಾ ತು ತಂ ಶಬ್ದಂ ಸಭಯಃ ಕಂಪಮಾಗತಃ ॥೧೫೪॥

ಕೋಽಯಮಾರ್ತಸ್ವರಃ ಕ್ರೂರಃ ಸಂಪ್ರವಿಶ್ಯೋದರಂ ಮಮ ।
ತನೋತಿ ದುಃಖಮತ್ಯಂತಮಿತಿ ಬ್ರಹ್ಮಾ ರುರೋದ ಚ ॥೧೫೫॥

ಮಯಾ ದುಃಖಕರಃ ಶಬ್ದೋ ನ ಶ್ರುತಃ ಪೂರ್ವಮೀದೃಶಃ ।
ಸೋಽಯಂ ಕುತಃ ಸಮುತ್ಪನ್ನಃ ಕಿಮೇತಸ್ಯಾಸ್ತಿ ಕಾರಣಂ ॥೧೫೬॥

ಇತ್ಯಾಶ್ಚರ್ಯಸಮಾಯುಕ್ತೋ ತದಾ ಶಂಕರಕಿಂಕರಂ ।
ಅಪಶ್ಯದೂರ್ಧ್ವಲೋಕೇಷು ಸಂಚರಂತಂ ಶಿವಪ್ರಿಯಂ ॥೧೫೭॥

ತಮಾಲೋಕ್ಯಾಥ ವಿನಯಾತ್ಪ್ರಣಮ್ಯ ಚ ಪುನಃ ಪುನಃ ।
ಉಪವಿಶ್ಯಾಸನೇ ರಮ್ಯೇ ಸಂಪೂಜ್ಯ ಚ ಕೃತಾಂಜಲಿಃ ॥೧೫೮॥

---

ಭೈರವನು ಕೆಂಗಣ್ಣುಳ್ಳವನಾಗಿ ಕೋಪಗೊಂಡನು. ಮತ್ತು ಸುಡುತ್ತಿರುವ ಅಗ್ನಿಯಂತೆ ತೋರುತ್ತಿದ್ದನು. ಆ ಕಾಲಭೈರವನ ಕೋಪಾಗ್ನಿಯನ್ನು ಕಂಡು ಆ ಬ್ರಾಹ್ಮಣನು ಭಯದಿಂದ ಗಟ್ಟಿಯಾಗಿ ಕೂಗಿಕೊಂಡನು. ಆ ಧ್ವನಿಯು ಬ್ರಹ್ಮಲೋಕಾದಿಗಳಿಗೆಲ್ಲಾ ಮುಟ್ಟಿತು. ಆಯಾ ಲೋಕದಲ್ಲಿ ವಾಸಿಸುವರಿಗೆಲ್ಲಾ ಭಯವನ್ನುಂಟುಮಾಡಿತು. ನಾನು ಆ ಶಬ್ದವನ್ನು ಕೇಳಿ ಸುಮ್ಮನೆ ಕುಳಿತು ಕೊಂಡೆನು. ಸಭೆಯಲ್ಲಿರುವ ಬ್ರಹ್ಮನಾದರೋ ಅದನ್ನು ಕೇಳಿ ಗಡಗಡನೆ ನಡುಗಿಹೋದನು. ಈ ಭಯಂಕರವಾದ ಆರ್ತನಾದವು ಎಲ್ಲಿಂದ ಬಂದಿತು? ಇದು ನನ್ನ ಹೃದಯವನ್ನು ಹೊಕ್ಕು ನನಗೆ ತುಂಬಾ ವ್ಯಥೆಯನ್ನುಂಟುಮಾಡುವುದಲ್ಲಾ ಎಂದು ಅತ್ತನು. ॥೧೪೯-೧೫೦-೧೫೧-೧೫೨-೧೫೩-೧೫೪-೧೫೫॥

ನಾನು ಹಿಂದೆ ದುಃಖಕರವಾದ ಶಬ್ದವನ್ನು ಕೇಳಿದವನಲ್ಲ. ಇದು ಆಶ್ಚರ್ಯಕರವಾಗಿದೆ. ಇದು ಎಲ್ಲಿಂದ ಹುಟ್ಟಿತು ಎಂದು ಶಂಕರನ ದೂತನನ್ನು ಕೇಳಿ ತಿಳಿಯಲು ಇಷ್ಟಪಟ್ಟನು. ಅಷ್ಟರಲ್ಲಿ ಊರ್ಧ್ವಲೋಕದಲ್ಲಿ ಸಂಚರಿಸುವ ಶಿವದೂತನೊಬ್ಬ

ವಾಚಸ್ಪತಿರಿವ ಶ್ರಾವ್ಯಂ ಮಧುರಾಕ್ಷರಸಂಯುತಂ ।
ಉವಾಚ ವಚನಂ ಚಾರು ವಿನಯಾನತಕಂಧರಃ ॥೧೫೯॥

॥ ಬ್ರಹ್ಮೋವಾಚ ॥

ಶ್ರೀಮಚ್ಛಿವಪ್ರಿಯಶ್ರೇಷ್ಠ ಶೈವೋತ್ತಮ ಜಿತೇಂದ್ರಿಯ ।
ಕುತಃ ಸಮಾಗತಂ ಕುತ್ರ ಸಂಚಾರಃ ಕ್ರಿಯತೇ ಸದಾ ॥೧೬೦॥

ಅಯಮಾರ್ತಸ್ವರಃ ಕುತ್ರ ಸರ್ವಲೋಕಭಯಾಪಹಃ ।
ಕಿಮಸ್ತಿ ಕಾರಣಂ ಲೋಕೇ ತತ್ಸರ್ವಂ ವಕ್ತುಮರ್ಹಸಿ ॥೧೬೧॥

॥ ಶ್ರೀಶಿವಕಿಂಕರ ಉವಾಚ ॥

ಪುರಾ ಕಶ್ಚಿದ್ದ್ವಿಜಃ ಕಾಶ್ಯಾಮಂತರ್ಗೇಹೇ ಶಿವಾತ್ಮಕೇ ।
ಮಲಮೂತ್ರಾದಿಕಂ ಕೃತ್ವಾ ತತ್ರೈವ ಸತತೋ ಮೃತಃ ॥೧೬೨॥

ಕಾಲಭೈರವಭೃತ್ಯೈಸ್ತು ಪುರಾ ಸಂತಾಡಿತಸ್ತತಃ ।
ಭೈರವಾಗ್ರೇ ಸ್ಥಾಪಿತೋಽಸ್ತಿ ಸ ಏವಾಘೌಘಸಂಶ್ರಯಃ ॥೧೬೩॥

---

ನನ್ನು ಕಂಡನು. ಆತನನ್ನು ನೋಡಿ ಬ್ರಹ್ಮನು ವಿನಯದಿಂದ ನಮಸ್ಕರಿಸಿ ರಮಣೀಯವಾದ ಆಸನದಲ್ಲಿ ಕುಳ್ಳಿರಿಸಿ ಪೂಜಿಸಿ ಕೈಮುಗಿದುಕೊಂಡು ಬೃಹಸ್ಪತಿಯಂತೆ ರಮಣೀಯವಾದ ವಚನವಿನ್ಯಾಸವುಳ್ಳವನಾಗಿ, ವಿನಯದಿಂದ ಹೀಗೆ ಮಾತನಾಡಿದನು. ॥೧೫೬-೧೫೭-೧೫೮-೧೫೯॥

ಎಲೈ ಶಿವನಿಗೆ ಪ್ರಿಯನಾದವನೇ, ಶೈವೋತ್ತಮನೂ, ಜಿತೇಂದ್ರಿಯನೂ ಆದ ಶಿವಕಿಂಕರನೇ, ನೀನು ಎಲ್ಲಿಂದ ಬಂದೆ? ಯಾವ ಕಡೆ ಸಂಚಾರ ಹೊರಟಿರುವೆ? ಈ ಆರ್ತಸ್ವರವು ಎಲ್ಲಿಂದ ಬಂದಿತು? ಇದು ಸಮಸ್ತ ಜನರಿಗೂ ಭಯವನ್ನುಂಟುಮಾಡುವುದಾಗಿದೆ ಎಂದು ಕೇಳಿದ ಬ್ರಹ್ಮನಿಗೆ ಉತ್ತರವಾಗಿ ಶಿವದೂತನು ಹೀಗೆ ನುಡಿದನು. ॥೧೬೦-೧೬೧॥

“ಹಿಂದೆ ಕಾಶಿಯಲ್ಲಿ ಒಬ್ಬ ಬ್ರಾಹ್ಮಣನಿದ್ದನು. ಅವನು ಶಿವಾತ್ಮಕವಾದ ಅಂತರ್ಗೃಹದಲ್ಲಿ ಮಲಮೂತ್ರಾದಿಗಳನ್ನು ವಿಸರ್ಜಿಸಿ, ಅಲ್ಲಿಯೇ ಕೆಲಕಾಲವಿದ್ದು ಅನಂತರ ಮೃತಪಟ್ಟನು. ಬಳಿಕ ಕಾಲಭೈರವನ ಭೃತ್ಯರು ಇವನನ್ನು ಅದಕ್ಕಾಗಿ ಚೆನ್ನಾಗಿ ಹೊಡೆದರು. ಮತ್ತು ಕಡುಪಾಪಿಯಾದ ಈತನನ್ನು ಕಾಲಭೈರವನ

ಇದಾನೀಮಪಿ ಪಾಪಿಷ್ಠೋ ಭೈರವೇಣ ನ ತಾಡಿತಃ ।
ಕಿಂತು ತತ್ಕೋಪಸಂಭೂತಪ್ರಳಯಾನಲತಾಡಿತಃ ॥೧೬೪॥

ಚುಕ್ರೋಶತ್ಯಯಮತ್ಯುಚ್ಚೈಃ ದುಃಸಹಾನಲತಾಡಿತಃ ।
ದುಃಖಶಾಮಕರೋ ಧರ್ಮೋ ನೇದೃಶಸ್ಯೇಹ ವಿದ್ಯತೇ ॥೧೬೫॥

ಅಮುಂ ದಗ್ಧ್ವಾತಿಕೋಪೇನ ಭೈರವಸ್ತದನು ಧ್ರುವಂ ।
ಪಟುದೀರ್ಘಕಶಾಘಾತೈಃ ತಾಡಯಿಷ್ಯತಿ ದಾರುಣಂ ॥೧೬೬॥

ಸ ತಪ್ತತೈಲಪಾತ್ರೇಷು ಪಾತಯಿಷ್ಯತ್ಯಸಂಶಯಂ ।
ತಪ್ತ ಕ್ರಕಚಶೂಲಾಗ್ರೇ ದಾರಯಿಷ್ಯತಿ ತತ್ತನುಂ ॥೧೬೭॥

ಸಂತಪ್ತಭಿಂಡಿಪಾಲಾಗ್ರೇ ಪಾತಯಿತ್ವಾ ತು ದಾರುಣಂ ।
ತತಃ ಪುನಃ ಪುನರ್ದಗ್ಧ್ವಾ ಪುನಃ ಸಂತಾಡಯಿಷ್ಯತಿ ॥೧೬೮॥

ಯಾತನಾ ಬಹುಧಾನೇನ ಭೋಕ್ತವ್ಯಾ ಬಹುಕಾಲಿಕಾಃ ।
ಯತಃ ಶೈವೇ ಶಿವಮಯೇ ಮಲಾದ್ಯಂತರ್ಗೃಹೇ ಕೃತಂ ॥೧೬೯॥

ಇತ್ಯುಕ್ತ್ವಾ ಸ ತತೋತ್ಥಾಯ ಬ್ರಹ್ಮಣಾ ಪೂಜಿತಸ್ತತಃ ।
ಚಚಾರ ವಿವಿಧಾನ್ ಲೋಕಾನ್ ಯಥೇಚ್ಛಂ ಪ್ರೀತಮಾನಸಃ ॥೧೭೦॥

---

ಎದುರಿಗೆ ನಿಲ್ಲಿಸಿದರು. ಕಾಲಭೈರವನು ಆತನನ್ನು ಹೊಡೆಯಲಿಲ್ಲ. ಆದರೆ ಅವನ ಕ್ರೋಧದಿಂದುಂಟಾದ ಪ್ರಳಯಾಗ್ನಿಯಿಂದ ಹೆದರಿ ಹೋಗಿರುವನು. ಅಗ್ನಿಯ ಬೇಗೆಯನ್ನು ತಾಳಲಾರದೆ ಅವನು ಬೊಬ್ಬಿಡುತ್ತಾನೆ. ಅವನ ದುಃಖವನ್ನು ಹೋಗಲಾಡಿಸುವಂತಹ ಪುಣ್ಯವು ಅವನಲ್ಲಿ ಇರಲಿಲ್ಲ. ಆದುದರಿಂದ ಭೈರವನು ತೀವ್ರವಾದ ಕೋಪದಿಂದ ಸುಟ್ಟು, ಬಳಿಕ ತೀಕ್ಷ್ಣವಾದ ಚಾವುಟಿಯಿಂದ ಆತನನ್ನು ತಾಡನಮಾಡುವನು. ||೧೬೨-೧೬೩-೧೬೪-೧೬೫-೧೬೬||

ಆ ಕಾಲಭೈರವನು ಕಾದ ಎಣ್ಣೆಯ ಕೊಪ್ಪರಿಗೆಯಲ್ಲಿ ಬೀಳಿಸಿ ಹೊಡೆಯುವನು. ಮತ್ತು ಕಾದಿರುವ ಗರಗಸ, ಶೂಲ ಇವುಗಳ ಅಗ್ರಭಾಗದಿಂದ ಸೀಳುತ್ತಾನೆಂಬುದು ನಿಶ್ಚಯ. ಕಾದಿರುವ ಭಿಂಡಿಪಾಲದ ಅಗ್ರದಲ್ಲಿ ಅವನನ್ನು ಚುಚ್ಚಿ ಭಯಂಕರವಾಗಿ ಹಿಂಸೆಕೊಡುತ್ತಾನೆ. ಪದೇ ಪದೇ ಸುಟ್ಟು ಹೊಡೆದು

ಬ್ರಹ್ಮಾ ತದ್ವಚನಂ ಶ್ರುತ್ವಾ ಕಾಶೀದರ್ಶನಲಾಲಸಃ ।
ಸಭಾಸದ್ಭಿಃ ಸಹ ಪ್ರೀತ್ಯಾ ಕಾಶೀಂ ಪ್ರತಿ ಸಮಾಯಯೌ ॥೧೨೧॥

ದುರ್ಗಾಗಣಾನ್ ಭೈರವಾಂಶ್ಚ ಗಣೇಶಾನ್ ಪ್ರಮಥಾಧಿಪಾನ್ ।
ಕಾಶೀಸಂರಕ್ಷಕಾನನ್ಯಾನ್ ಪ್ರಸಾದ್ಯ ಚ ಪುನಃ ಪುನಃ ॥೧೨೨॥

ಕಾಶೀಂ ಮಂದಾರಪುಷ್ಪಾದ್ಯೈರಭಿಪೂಜ್ಯ ಯಥಾವಿಧಿ ।
ವಿವೇಶ ಕಾಶೀಮಮಲಾಂ ಸರ್ವಾಭೀಷ್ಟಫಲಪ್ರದಾಂ ॥೧೨೩॥

ತತಃ ಸ ಶಿವಗಂಗಾಯಾಂ ಸ್ನಾನಂ ಚಕ್ರೇ ಯಥಾವಿಧಿ ।
ತತ್ರಾಗ್ನೀಧ್ರೇಶ್ವರಂ ಸಮ್ಯಕ್ ಪೂಜಯಿತ್ವಾ ತದಾಜ್ಞಯಾ ॥೧೨೪॥

ಸ ಸಭಾಸದ್ಭಿರನಘೈಃ ಸಹೈವಾಗ್ರೇ ಸಮಾಯಯೌ ।
ವಿಶ್ವೇಶ್ವರಾಭಿಧಂ ಲಿಂಗಂ ದಿವ್ಯಂ ದ್ರಷ್ಟುಂ ಸಮುದ್ಯತಃ ॥೧೨೫॥

---

ಹಿಂಸಿಸುವನು. ಈತನು ಅನೇಕಕಾಲ ಭಯಂಕರವಾದ ಯಾತನೆಯನ್ನು ಅನುಭವಿಸಬೇಕಾಗುವುದು. ಏಕೆಂದರೆ ಶಿವಸ್ಥಾನವಾದ ಕಾಶಿಯ ಅಂತರ್ಗೃಹದಲ್ಲಿ ಹೇಸಿಗೆ ಮಾಡಿರುವನು'' ಎಂದು ಶಿವಕಿಂಕರನು ಹೇಳಿ ಆತನು ಬ್ರಹ್ಮನಿಂದ ಪೂಜೆಗೊಂಡು ಮುಂದೆ ನಾನಾ ಲೋಕಗಳಲ್ಲಿ ಸಂಚರಿಸಲು ಹೊರಟನು. ||೧೬೭-೧೬೮-೧೬೯-೧೭೦||

ಬಳಿಕ ಬ್ರಹ್ಮನು ಆ ಮಾತನ್ನು ಕೇಳಿ, ಕಾಶಿಯನ್ನು ನೋಡಬೇಕೆಂದು ಬಯಸಿ ತನ್ನ ಸಭ್ಯರೊಡಗೂಡಿ, ಸಂತಸದಿಂದ ಕಾಶಿಗೆ ಹೊರಟನು. ದುರ್ಗಾದೇವಿಯ ಗಣಗಳು, ಭೈರವನ ಪ್ರಮಥಗಣಗಳು, ಕಾಶೀರಕ್ಷಕರು ಇವರೇ ಮೊದಲಾದವರನ್ನು ಬಾರಿಬಾರಿಗೂ ಸಂತೋಷಗೊಳಿಸಿ, ಬಳಿಕ ಮಂದಾರವೇ ಮೊದಲಾದ ಹೂಗಳಿಂದ, ಸಮಸ್ತ ಇಷ್ಟಾರ್ಥಗಳನ್ನೂ ಕೊಡುವಂತಹ ಕಾಶೀಕ್ಷೇತ್ರವನ್ನು ಪೂಜಿಸಿದನು. ಪವಿತ್ರವಾದ ಆ ಕಾಶೀಕ್ಷೇತ್ರವನ್ನು ಪ್ರವೇಶಿಸಿದನು. ಬಳಿಕ ಅಲ್ಲಿ ಅಗ್ನಿಧ್ರೇಶ್ವರನನ್ನು ಪೂಜಿಸಿ, ಅವನ ಅಪ್ಪಣೆಯ ಮೇರೆ ಮುಂದೆ ಪ್ರಯಾಣ ಮಾಡಿ ಪರಮಪವಿತ್ರವಾದ ಶ್ರೀ ವಿಶ್ವೇಶ್ವರಲಿಂಗ ದರ್ಶನಕ್ಕಾಗಿ ಉದ್ಯುಕ್ತನಾದನು. ||೧೭೧-೧೭೨-೧೭೩-೧೭೪-೧೭೫||

ಮಧ್ಯೇ ಮಾರ್ಗೇ ವಕ್ರತುಂಡಮಭ್ಯರ್ಚ್ಯ ತದನುಜ್ಞಯಾ ।
ಶ್ರೀಕಾಲಭೈರವಂ ದ್ರಷ್ಟುಮಾಯಯೌ ಭಯವಿಹ್ವಲಃ ॥೧೨೬॥

ತದಾ ದದರ್ಶ ವೀರಂ ತಂ ಉಗ್ರಶಾಸನಮುನ್ನಯಮ್ ।
ಪ್ರಜ್ವಲದ್ಗಿರಿಸಂಕಾಶಂ ವಿವೃತಾಸ್ಯಂ ಭಯಾನಕಂ ॥೧೨೭॥

ದೀರ್ಘದಂಷ್ಟ್ರಂ ಮಹಾಬಾಹುಂ ದಹಂತಂ ತೇಜಸಾಯುತಂ ।
ಧೃತದೀರ್ಘಕಶಂ ಧೀರಮತ್ಯುಗ್ರಂ ಶೂಲಧಾರಿಣಂ ॥೧೨೮॥

ಅನಂತಕಿಂಕರಾಧೀಶಸಂವೃತಂ ನೀಲಲೋಹಿತಂ ।
ಸ್ವರ್ಗಾದಿಲೋಕಾನಖಿಲಾನ್ ದಹಂತಮಿವ ಸಂಸ್ಥಿತಂ ॥೧೨೯॥

ಸ ಕಾಲಭೈರವಂ ದೃಷ್ಟ್ವಾ ದೂರಾತ್ ತತ್ಕ್ರೋಪವಹ್ನಿನಾ ।
ಸಂತಾಡಿತಃ ಕ್ಷಣಾರ್ಧೇನ ನ್ಯಪತದ್ಭುವಿ ಮೂರ್ಛಿತಃ ॥೧೩೦॥

---

ಮಧ್ಯದಾರಿಯಲ್ಲಿರುವ ವಕ್ರತುಂಡಗಣಪತಿಯನ್ನು ಅರ್ಚಿಸಿ ಅವನ ಅಪ್ಪಣೆಯನ್ನು ತೆಗೆದುಕೊಂಡು ಬಳಿಕ ಭಯಗ್ರಸ್ತನಾಗಿಯೇ ಶ್ರೀ ಕಾಲಭೈರವನ ದರ್ಶನಕ್ಕಾಗಿ ಹೊರಟನು. ಅಲ್ಲಿ ಉಗ್ರಶಾಸಕನೂ, ಮಹಾಪರಾಕ್ರಮಿಯೂ ಆದ ಕಾಲಭೈರವನನ್ನು ದರ್ಶನಮಾಡಿದನು. ಆತನು ಆಗ ಉರಿಯುತ್ತಿರುವ ಬೆಟ್ಟದಂತೆ ತೋರುತ್ತಿದ್ದನು. ಬಾಯಿಯನ್ನು ತೆರೆದುಕೊಂಡೇ ನಿಂತಿದ್ದನು. ಅದರಿಂದ ಆತನು ಅತಿಭಯಂಕರನಾಗಿ ಕಾಣುತ್ತಿದ್ದನು. ಆತನ ಕೋರೆದಾಡೆಗಳು ಬೆಳ್ಳಗೆ ಉದ್ದವಾಗಿದ್ದುವು. ತೋಳುಗಳು ದೀರ್ಘವಾಗಿದ್ದುವು. ತನ್ನ ತೇಜಸ್ಸಿನಿಂದ ಸುಡುವಂತೆ ತೋರುತ್ತಿದ್ದನಲ್ಲದೇ ಕೈಯಲ್ಲಿ ಉದ್ದವಾದ ಒಂದು ಚಾವುಟಿಯನ್ನು ಹಿಡಿದಿದ್ದನು. ಅತಿಭಯಂಕರನೂ, ಶೂಲವನ್ನು ಹಿಡಿದವನೂ ಆಗಿದ್ದನು. ಅನೇಕ ಕಿಂಕರರು ಆತನ ಸುತ್ತುಗಟ್ಟಿದ್ದರು. ನೀಲಿ ಮತ್ತು ಕೆಂಪುಮಿಶ್ರಿತವಾದ ಬಣ್ಣವುಳ್ಳವನಾಗಿದ್ದನು. ಸ್ವರ್ಗವೇ ಮೊದಲಾದ ಲೋಕಗಳನ್ನು ದಹಿಸುವಂತೆ ಕಂಡುಬರುತ್ತಿದ್ದನು. ಬ್ರಹ್ಮನು ಈ ಕಾಲಭೈರವನನ್ನು ದೂರದಿಂದಲೇ ನೋಡಿ ಆತನ ಕ್ರೋಧಾಗ್ನಿಯಿಂದ ದಹಿಸಲ್ಪಟ್ಟವನಾಗಿ ಭೂಮಿಯಲ್ಲಿ ಎಚ್ಚರತಪ್ಪಿ ಬಿದ್ದನು. ||೧೨೬-೧೨೭-೧೨೮-೧೨೯-೧೩೦||

ಸಭಾಸದಾಶ್ಚ ನೃಪತನ್ಬ್ರಹ್ಮಣೋ ಮಿತವಿಕ್ರಮಾಃ ।
ತತ್ಕೋಪವಹ್ನಿಜ್ವಾಲಾಭಿರಾಹತಾಃ ಕ್ಷಣಮಾತ್ರತಃ ॥೧೮೧॥

ತೇ ಸಂಜ್ಞಾಂ ಸಮವಾಪ್ಯೈವಂ ಬಹುಕಾಲೇನ ಪೀಡಿತಾಃ ।
ತತೋ ವಿಶ್ವೇಶ್ವರಂ ದ್ರಷ್ಟುಮನ್ಯಮಾರ್ಗೇಣ ತೇ ಶುಭೇ ॥೧೮೨॥

ಯಯುರಾಶ್ಚರ್ಯಸಂಪನ್ನಾಃ ಕಂಪಮಾನಾಃ ಪುನಃ ಪುನಃ ।
ನಾನಾವಿಧೋಪಚಾರೈಸ್ತೇ ದಂಡಪಾಣಿಂ ಪ್ರಸಾದಯನ್ ॥೧೮೩॥

ತತಸ್ತದಾಜ್ಞಯಾ ಸಮ್ಯಕ್ ಜ್ಞಾನವಾಪೀಂ ಪ್ರಣಮ್ಯ ತೇ ।
ತತ್ರ ಸ್ನಾತ್ವಾ ವಿಧಾನೇನ ಜ್ಞಾನೇಶಂ ಪ್ರಣಿಪತ್ಯ ಚ ॥೧೮೪॥

ವಿನಾಯಕಾನ್ ಸಮಭ್ಯರ್ಚ್ಯ ಧುಂಡಿರಾಜಂ ಪ್ರಪೂಜ್ಯ ಚ ।
ಮುಕ್ತಿಮಂಟಪಮಾಸಾದ್ಯ ಮಾಮಜಂ ವಿಶ್ವತೋಮುಖಂ ॥೧೮೫॥

ವಿಶ್ವತಶ್ಚಕ್ಷುಷಂ ದೇವಂ ವಿಶ್ವತೋಬಾಹುಮವ್ಯಯಂ ।
ನಾನಾವಿಧಾನಂತರತ್ನೈರ್ನಾನಾಪುಷ್ಪೈಃ ಸುಗಂಧಿಭಿಃ ॥೧೮೬॥

---

ಅಮಿತ ಪರಾಕ್ರಮಿಗಳಾದ ಬ್ರಹ್ಮನ ಸಭಾಸದರೂ ಸಹ ಮೂರ್ಛೆ ಹೊಂದಿದರು. ಒಂದು ಕ್ಷಣಕಾಲ ಆತನ ಕೋಪಾಗ್ನಿಜ್ವಾಲೆಯಿಂದ ಸಂತಪ್ತರಾದರು. ಬಹಳ ಕಾಲ ತಾಪದಿಂದ ಪೀಡಿತರಾಗಿ ಬಳಿಕ ಎಚ್ಚೆತ್ತರು. ಅನಂತರ ಅವರು ಶ್ರೀವಿಶ್ವೇಶ್ವರನನ್ನು ನೋಡುವುದಕ್ಕಾಗಿ ಬೇರೆ ಮಾರ್ಗದಿಂದ ಹೊರಟರು. ಎಲ್ಲರೂ ಭಯದಿಂದ ನಡುಗುತ್ತ ಆಶ್ಚರ್ಯಗೊಂಡವರಾಗಿದ್ದರು. ನಾನಾವಿಧೋಪಚಾರಗಳಿಂದ ದಂಡಪಾಣಿಯನ್ನು ಸತ್ಕರಿಸಿ ಅವನ ಆಜ್ಞೆಯನ್ನು ಪಡೆದುಕೊಂಡು ಜ್ಞಾನವಾಪಿಗೆ ನಮಸ್ಕರಿಸಿದರು. ಜ್ಞಾನವಾಪಿಯಲ್ಲಿ ವಿಧಿಪೂರ್ವಕವಾಗಿ ಸ್ನಾನವನ್ನೆಸಗಿ, ಜ್ಞಾನೇಶ್ವರನನ್ನು ಅರ್ಚಿಸಿ, ನಾಯಕ ಮತ್ತು ಧುಂಡಿರಾಜ ಇವರನ್ನು ಪೂಜಿಸಿ ಮುಕ್ತಿಮಂಟಪಕ್ಕೆ ಹೋದರು. ಅಲ್ಲಿ ಅಜನಾಗಿಯೂ ವಿಶ್ವತೋಮುಖನಾಗಿಯೂ ಇರುವ ನನ್ನನ್ನು ವಂದಿಸಿದರು. ॥೧೮೧-೧೮೨-೧೮೩-೧೮೪-೧೮೫॥

ನಾನಾ ನೇತ್ರಗಳುಳ್ಳವನೂ, ಅನೇಕ ಬಾಹುಗಳುಳ್ಳವನೂ, ನಾಶರಹಿತನಾದವನೂ ಆದ ನನ್ನನ್ನು ಅನೇಕ ರೀತಿಯ ಹೂವು, ರತ್ನ, ಅನೇಕೋಪಚಾರ, ಇವುಗಳಿಂದ ಪೂಜಿಸಿ, ಪ್ರದಕ್ಷಿಣ ನಮಸ್ಕಾರ, ನೃತ್ಯ, ಗೀತ, ಸ್ತೋತ್ರಪಾಠ, ಮಂತ್ರಪಾಠ,

ನಾನಾವಿಧೋಪಚಾರೈಶ್ಚ ಸಂಪೂಜ್ಯ ತದನಂತರಂ ।
ಪ್ರದಕ್ಷಿಣನಮಸ್ಕಾರೈರ್ನೃತ್ಯೈರ್ಗೀತೈಶ್ಚ ಮಂಗಲೈಃ ॥೧೮೭॥

ಸ್ತೋತ್ರಪಾಠೈರ್ಮಂತ್ರಪಾಠೈಃ ಸಮ್ಯಗಾರಾಧ್ಯ ಮಾಂ ತತಃ ।
ಅಂತರ್ಗೃಹಾದಿಯಾತ್ರಾಂ ಚ ಕೃತ್ವಾ ಸಮ್ಯಕ್ ಯಥಾವಿಧಿ ॥೧೮೮॥

ದಿನಾಷ್ಟಕಮುಷಿತ್ವಾ ತೇ ಬ್ರಹ್ಮಲೋಕಮುಪಾಗತಾಃ ।
ಬ್ರಹ್ಮಾದ್ಯಾಶ್ಚ ತತಃ ಸರ್ವೇ ಭೈರವಾನಲತಾಪಿತಾಃ ॥೧೮೯॥

ವಿಕ್ರಮಂ ಭೈರವಸ್ಯೇವ ಶಂಸಂತೋ ನ್ಯವಸನ್ಮುದಾ ॥೧೯೦॥

ಧರ್ಮೇಣೈವ ಸದಾ ವಸಂತಿ ಮುನಯಃ ಕಾಶ್ಯಾಂ ಪ್ರಕಾಶ್ಯಾಂ ಮುದಾ
ಭೀಮಂ ಭೈರವಮುಗ್ರಶಾಸನಮಜಂ ಮತ್ವಾ ಪ್ರಮಾದೈರ್ವಿನಾ ।
ಮಾಮಾರಾಧ್ಯಮನಂತಮವ್ಯಯಮಜಂ ಮೋಕ್ಷಪ್ರದಂ ಶಾಶ್ವತಂ
ಸಂಪೂಜ್ಯಾನ್ವಹಮಂಬಿಕೇ ಬಹುವಿಧೈರರ್ಚ್ಯೋಪಚಾರೈರ್ಭೃಶಂ ॥೧೯೧॥

ಇತಿ ಶ್ರೀ ಶಿವರಹಸ್ಯೇ ಉಗ್ರಾಖ್ಯೇ ಸಪ್ತಮಾಂಶೇ ಕಾಶೀಮಾಹಾತ್ಮ್ಯೇ
ಅಂತರ್ಗೃಹಕೃತಪುರೀಷಾದಿಪಾಪಿಶಾಸನವರ್ಣನಂ
ನಾಮ ಪಂಚಮೋಽಧ್ಯಾಯಃ

---

ಇವುಗಳಿಂದ ಚನ್ನಾಗಿ ಆರಾಧಿಸಿದರು. ಮತ್ತು ಅಂತರ್ಗೃಹ ಯಾತ್ರಾದಿಗಳನ್ನು ನೆರವೇರಿಸಿಕೊಂಡು ಅಲ್ಲಿ ಎಂಟು ದಿನ ಪರ್ಯಂತವಿದ್ದು ಬ್ರಹ್ಮಲೋಕಕ್ಕೆ ಎಲ್ಲರೂ ತೆರಳಿದರು. ಬ್ರಹ್ಮನೇ ಮೊದಲಾದವರು ಭೈರವನ ಕೋಪಾಗ್ನಿಯಿಂದ ಸಂತಪ್ತರಾಗಿ ಆತನ ವಿಕ್ರಮವನ್ನು ಹೊಗಳುತ್ತ ಸಂತೋಷದಿಂದ ತಮ್ಮ ತಮ್ಮ ಲೋಕಗಳಲ್ಲಿ ವಾಸಮಾಡಿದರು. ॥೧೮೬-೧೮೭-೧೮೮-೧೮೯-೧೯೦॥

ಶಿವಸಾನ್ನಿಧ್ಯದಿಂದ ಪ್ರಕಾಶಿಸುವ ಆ ಕಾಶಿಯಲ್ಲಿ ಮುನಿಗಳು ಧರ್ಮದಿಂದ ವಾಸಮಾಡುತ್ತಾರೆ. ಅವರು ಉಗ್ರಶಾಸನನೂ, ಅಜನೂ, ಭಯಂಕರನೂ ಆದ ಭೈರವನ ಸ್ವಭಾವವನ್ನು ತಿಳಿದು ಪ್ರಮಾದಕ್ಕೆ ಆಸ್ಪದವಿಲ್ಲದಂತಿರುವರು. ಎಲೌ ಅಂಬಿಕೆಯೇ, ಕೊನೆಮೊದಲಿಲ್ಲದವನೂ, ಮೋಕ್ಷವನ್ನು ಕೊಡತಕ್ಕವನೂ, ಆದ ನನ್ನನ್ನು ಅನೇಕ ವಿಧವಾದ ಉಪಚಾರಗಳಿಂದ ಅರ್ಚಿಸುವರು. ಅದರಿಂದ ಅವರು

ಧನ್ಯರೂ ಮುಕ್ತರೂ ಆಗುವರು. ಎಂದು ಪರಶಿವನು ಪಾರ್ವತಿಗೆ ಭೈರವನ ದರ್ಪವನ್ನು ಕಾಶೀಮಹಿಮೆಯೊಂದಿಗೆ ತಿಳಿಯಹೇಳಿದನು. ||೯೧||

ಇಲ್ಲಿಗೆ ಶ್ರೀಶಿವರಹಸ್ಯದ ಉಗ್ರಾಖ್ಯವಾದ ಏಳನೆಯ ಅಂಶದಲ್ಲಿ ಕಾಶೀಮಾಹಾತ್ಮ್ಯೆಗೆ ಸೇರಿದ ಅಂತರ್ಗೃಹದಲ್ಲಿ ಮಲಮೂತ್ರೋತ್ಸರ್ಗಮಾಡಿದ ಪಾಪಿಗಳ ಶಿಕ್ಷೆಯನ್ನು ವರ್ಣಿಸುವ ಐದನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

|| ಶ್ರೀಶಿವಾಯ ನಮಃ ||

# ಅಥ ಶ್ರೀಶಿವರಹಸ್ಯೇ

## ಉಗ್ರಾಖ್ಯೇ

### ಸಪ್ತಮಾಂಶೇ ಪೂರ್ವಾರ್ಧೇ

### ಷಷ್ಠೋಽಧ್ಯಾಯಃ

|| ಶ್ರೀಪಾರ್ವತ್ಯುವಾಚ ||

ಶಿವ ಕಲ್ಯಾಣದ ಶ್ರೀಮನ್ ಸರ್ವಜ್ಞಾಮಿತವಿಕ್ರಮ ।
ಜ್ಞಾನವಾಪೀತಿ ಸಂಜ್ಞೇಯಂ ಅಸ್ಯಾಃ ಕಥಮಭೂದ್ವದ ॥೧॥

|| ಶ್ರೀಶಿವ ಉವಾಚ ||

ತ್ರಿಶೂಲಾಗ್ರೇಣ ಸುಭಗೇ ಸಾ ವಾಪೀ ಖನಿತಾ ಪುರಾ ।
ಆಪಾತಾಲಂ ಜಲಂ ತತ್ರ ತಿಷ್ಠತ್ಯತಿಮನೋಹರಂ ॥೨॥

ಕಾಶ್ಮೀರಮಣಿಭಿಃ ಶುಭ್ರೈಃ ಪುಷ್ಯರಾಗೈರ್ಮನೋಹರೈಃ ।
ರತ್ನೈರನ್ಯೈಶ್ಚ ವಿವಿಧೈರ್ಬದ್ಧಾ ಸಾ ತದನಂತರಂ ॥೩॥

---

## ಆರನೆಯ ಅಧ್ಯಾಯವು

ಶಿವನೇ, ಕಲ್ಯಾಣಪ್ರದನೇ, ನೀನು ಎಲ್ಲವನ್ನೂ ಬಲ್ಲವನು. ಈ ಕಾಶಿಗೆ ಜ್ಞಾನವಾಪಿ ಎಂದು ಹೆಸರು ಏತಕ್ಕೆ ಬಂದಿತೆಂಬುದನ್ನು ಹೇಳು, ಎಂದು ಪಾರ್ವತಿಯು ಶಂಕರನನ್ನು ಪ್ರಶ್ನಿಸಿದಳು. ಆಗ ಪರಮೇಶ್ವರನು ಹೀಗೆಂದು ಹೇಳಿದನು. ||೧||

ಎಲೌ ಪ್ರಿಯಳೇ! ಪಾರ್ವತಿಯೆ, ಹಿಂದೆ ತ್ರಿಶೂಲದ ಅಗ್ರದಿಂದ ಆ ಭಾವಿಯನ್ನು ನಾನು ನಿರ್ಮಿಸಿರುವೆನು. ಪಾತಾಳದವರೆಗೂ ನೀರು ಅದರಲ್ಲಿ ತುಂಬಿರುತ್ತದೆ. ಅದು ಅತಿ ಮನೋಹರವಾಗಿದೆ. ಕಾಶ್ಮೀರದ ಮಣಿ, ಪುಷ್ಯರಾಗ, ಇನ್ನೂ ಅನೇಕ ಬೇರೆಬೇರೆಜಾತಿಯ ರತ್ನಗಳು ಇವುಗಳಿಂದ ಆ ಜ್ಞಾನವಾಪಿಯು ಪೂರ್ಣವಾಗಿದೆ.

ತತ್ರಾದ್ಭುತಂ ಸಮುಭವದ್ಧೇಮಪದ್ಮಂ ವರಾನನೇ ।
ವಿಚಿತ್ರಗಂಧಸಂಬದ್ಧಂ ಶತಯೋಜನಮಾಯುತಂ ॥೪॥

ಸಹಸ್ರದಳಸಂಯುಕ್ತಕೇಸರಾಗರುರಾಜಿತಂ ।
ತತ್ಸುಗಂಧೇನ ನಿರ್ಗಂಧಂ ಸುಗಂಧಮುಭವಜ್ಜಲಂ ॥೫॥

ತತ್ಪ್ರಾಂತಕಲ್ಪತರವಸ್ತತ್ಸುಗಂಧಸಮನ್ವಿತಾಃ ।
ಸ್ವತಃ ಸುಗಂಧಾ ಇವ ತೇ ಭಾಂತಿ ನಿತ್ಯಂ ವರಾನನೇ ॥೬॥

ತತ್ಪದ್ಮಮಕರಂದೇನ ಸಂಯುತಂ ರಾಜತೇ ಜಲಂ ।
ತತ್ತಿರಸ್ಕೃತಪೀಯೂಷಂ ಸುರಾಣಾಮಪಿ ದುರ್ಲಭಂ ॥೭॥

ಸದಾ ವಿಕಾಸಮಾಪನ್ನಂ ಸದಾ ಪ್ರೇಕ್ಷ್ಯಮನುತ್ತಮಂ ।
ಕದಾಚಿದಪಿ ತನ್ಮ್ಲಾನಂ ನ ಭವತ್ಯೇವ ಸರ್ವದಾ ॥೮॥

ಕನತ್ಕನಕನಾಲಾಢ್ಯಂ ತದ್ಧೇಮಕಮಲಂ ಶುಭಂ ।
ಹೇಮಚ್ಛತ್ರಮಿವಾಭಾತಿ ಕಾಶ್ಯಾಃ ಕಮಲಲೋಚನೇ ॥೯॥

ತತ್ಕರ್ಣಿಕಾಮಧ್ಯದೇಶೇ ಸುಂದರೇ ಮೃದುಲೇ ಸದಾ ।
ಕದಾಚಿಲ್ಲೀಲಯಾ ಸಮ್ಯಗುಪವಿಶ್ಯ ವಸಾಮ್ಯಹಂ ॥೧೦॥

---

ಅದರಲ್ಲಿ ಅದ್ಭುತವಾದ ಬಂಗಾರದ ಕಮಲವಿರುತ್ತದೆ. ಅದು ಒಂದುನೂರುಯೋಜನ ದೂರ ವಿಶಾಲವಾಗಿದೆ. ಅಲ್ಲದೆ ಅದು ಸುವಾಸನೆಯನ್ನು ಸದಾ ಬೀರುತ್ತಿದೆ. ಒಂದು ಸಾವಿರದಳಗಳಿಂದಲೂ ಅಗರುವಿನಂತೆ ಸುಗಂಧವಾದ ಕೇಸರಗಳಿಂದಲೂ ಆ ಕಮಲವು ಶೋಭಿಸುತ್ತದೆ. ಅದರ ಸಂಬಂಧದಿಂದ ಪರಿಮಳವಿಲ್ಲದ ನೀರು ಕೂಡ ಸುಗಂಧ ಯುತವಾಗಿದೆ. ಅಲ್ಲಿರುವ ಕಲ್ಪವೃಕ್ಷಗಳು ಆ ಪದ್ಮದ ಸುವಾಸನೆಯಿಂದ ವಾಸಿತ ಗಳಾಗಿವೆ. ಆದುದರಿಂದ ಆ ಕಲ್ಪವೃಕ್ಷಗಳು ಸ್ವತಃ ಸುಗಂಧವುಳ್ಳವುಗಳಾಗಿವೆಯೋ ಎನ್ನುವಂತಿದೆ. ||೨-೩-೪-೫-೬||

ಆ ಪದ್ಮದ ಮಕರಂದವು ನೀರಿನೊಡನೆ ಸೇರಿಹೋಗಿದೆ. ಅದು ಅಮೃತ ಕ್ಕಿಂತಲೂ ರುಚಿಕರವಾಗಿಯೂ ಸುವಾಸಿತವಾಗಿಯೂ ಇದೆ. ಅದು ದೇವತೆಗಳಿಗೂ ಸಹ ದುರ್ಲಭವಾಗಿರುವುದು. ಆ ಕಮಲವು ಯಾವಾಗಲೂ ಅರಳಿರುತ್ತದೆ. ಮತ್ತು

ಸಂವಿಷ್ಟಂ ತತ್ರ ಮಾಮೇಕಾ ಕದಾಚಿದ್ವರವರ್ಣಿನಿ ।
ಸ್ತುತ್ವಾ ತು ಬಹುಧಾ ಸ್ತೋತ್ರೈಃ ಸಂಪೂಜ್ಯ ವಿಧಿಪೂರ್ವಕಂ ॥೧೧॥

ಕೃತಾಂಜಲಿಪುಟಾ ತಸ್ಥೌ ಪೀನವಕ್ಷೋಜಭಾಸುರಾ ।
ವಿದ್ಯುಲ್ಲತೇವ ವಿಮಲಾ ಕಮಲಾಮಲಲೋಚನಾ ॥೧೨॥

ತತೋ ಮಯೈವ ಸಾ ಪೃಷ್ಟಾ ಕಾಸಿ ತ್ವಮಿತಿ ಸಾ ತತಃ ।
ಉವಾಚ ವಚನಂ ಚಾರು ಸರ್ವಲೋಕಹಿತಾವಹಂ ॥೧೩॥

ಶಂಕರಾಹಮಿಹ ಸ್ವಾಮಿನ್ ತೇ ತೀರ್ಥಾಧಿದೇವತಾ ।
ಮತ್ಪ್ರಾರ್ಥಿತಂ ವರಂ ದೇಹಿ ವರದಾನವಿಚಕ್ಷಣ ॥೧೪॥

ಇದಂ ಜಲಂ ಮಹಾದೇವ ಶೈವೋ ಯಃ ಪಾತುಮಿಚ್ಛತಿ ।
ತಸ್ಯಾಸ್ತ್ವಚಂಚಲಾ ಭಕ್ತಿಃ ತ್ವಯಿ ತದ್ವಮತಿಸ್ತಥಾ ॥೧೫॥

---

ಸರ್ವಕಾಲದಲ್ಲಿಯೂ ದರ್ಶನೀಯವಾಗಿರುವುದು. ಅದು ಎಂದಿಗೂ ಬಾಡುವುದಿಲ್ಲ. ಆ ಹೇಮಪದ್ಮದ ನಾಳವೂ ಸ್ಫುರಿಸುವ ಬಂಗಾರದಿಂದ ನಿರ್ಮಿತವಾಗಿದೆ. ಎಲೌ ಕಮಲದ ಎಸಳಂತೆ ಕಣ್ಣುಳ್ಳ ಪ್ರಿಯಳೇ, ಆ ಕಮಲವು ಕಾಶಿಗೆ ಶ್ವೇತಚ್ಛತ್ರದಂತಿರುವುದು. ಅದರ ಕರ್ಣಿಕೆಯು ಮತ್ತೂ ಸುಂದರವಾಗಿದೆ. ಅದರ ಮಧ್ಯಪ್ರದೇಶದಲ್ಲಿ ನಾನು ವಿನೋದಕ್ಕಾಗಿ ಆಗಾಗ ನಿಲ್ಲುವುದುಂಟು. ॥೭-೮-೯-೧೦॥

ಎಲೌ! ವರವರ್ಣಿನಿ! ಗೌರಿಯೇ ಕೇಳು. ನಾನು ಆ ಕಮಲದಲ್ಲಿ ಕುಳಿತುಕೊಂಡಿರುವಾಗ ಒಬ್ಬ ಸುಂದರಿಯು ಅನೇಕ ಸ್ತೋತ್ರಗಳಿಂದ ಸ್ತುತಿಸಿ ಪೂಜೆಮಾಡಿ ನನ್ನ ಮುಂದೆ ನಮ್ರಳಾಗಿನಿಂತಳು. ಆಕೆಯು ಉನ್ನತಗಳಾದ ಸ್ತನಗಳಿಂದ ಸುಂದರಿಯಾಗಿ ಕಂಗೊಳಿಸುತ್ತಿದ್ದಳು. ಕಮಲದಂತೆ ಸ್ವಚ್ಛವಾದ ನೇತ್ರವುಳ್ಳವಳಾಗಿ ಮಿಂಚಿನಂತಿರುವ ದೇಹಕಾಂತಿಯಿಂದ ಪ್ರಕಾಶಿಸುತ್ತಿದ್ದಳು. ಬಳಿಕ ನಾನು, ನೀನು ಯಾರೆಂದು ಕೇಳಿದೆನು. ಆಗ ಆಕೆಯು ಸಮಸ್ತ ಜನಗಳಿಗೂ ಹಿತಕರವಾದ ಮತ್ತು ಮನೋಹರವಾದ ಒಂದುಮಾತನ್ನು ನುಡಿದಳು. "ಭಗವನ್ ಶಂಕರನೇ, ಸ್ವಾಮಿಯೇ ! ನಾನು ತೀರ್ಥದ ಅಧಿದೇವತೆಯಾಗಿರುವೆನು. ನೀನು ವರಪ್ರದಾನಕುಶಲನು. ಆದುದರಿಂದ ನಾನು ಕೇಳಿದ ವರವನ್ನು ನೀಡು. ॥೧೧-೧೨-೧೩-೧೪॥

ಮಹೇಶ್ವರನೇ, ಈಶ್ವರಭಕ್ತನಾದವನು ಈ ಸರೋವರದ ನೀರನ್ನು ಕುಡಿದ ಮಾತ್ರಕ್ಕೆ ಆತನಿಗೆ ನಿನ್ನಲ್ಲಿ ಅಚಲವಾದ ಭಕ್ತಿಯುಂಟಾಗುವಂತೆ

ಜ್ಞಾನವಾಪೀತಿ ಮನ್ನಾಮ ಪ್ರಸಿದ್ಧಂ ಭವತು ಪ್ರಭೋ ।
ಸರ್ವಪಾಪಕ್ಷಯಕರಂ ಜಲಂ ಭವತು ಸರ್ವಥಾ ॥೧೬॥

ಇತಿ ಸಂಪ್ರಾರ್ಥಿತಃ ಸಮ್ಯಕ್ ತಯಾ ಲೋಕೇಷ್ಟಸಿದ್ಧಯೇ ।
ತದ್ಯಾಚಿತಂ ವರಂ ದತ್ವಾ ತಾಮಾಶ್ವಾಸ್ಯ ಪುನಃ ಪುನಃ ॥೧೭॥

ಮಯಾ ತತ್ರೈವ ಸತತಂ ಸ್ಥೀಯತೇ ವರವರ್ಣಿನಿ ।
ರೋಚತೇ ವಸತಿಸ್ತತ್ರ ಕಮಲೇ ಗಂಧಸಂವೃತೇ ॥೧೮॥

ತಾದೃಶಂ ತೀರ್ಥಮಮಲಂ ಸರ್ವಲೋಕೇಷು ದುರ್ಲಭಂ ।
ಸ್ನಾನಂ ಕೃತ್ವಾ ಪ್ರಯತ್ನೇನ ದ್ವಾದಶೀ ಸೋಮವಾಸರೇ ॥೧೯॥

ತತ್ರ ದೇವಾನ್ ಋಷೀನ್ ಸಮ್ಯಕ್ ತರ್ಪಯಿತ್ವಾ ಪಿತೄನಪಿ ।
ತಜ್ಜಲೈಃ ಸ್ವಾದುಭಿಃ ಸಮ್ಯಕ್ ಜ್ಞಾನೇಶಮಭಿಷಿಚ್ಯ ಚ ॥೨೦॥

ಗಂಧಪುಷ್ಪಾಕ್ಷತಾದ್ಯೈಶ್ಚ ಪೂಜಯಿತ್ವಾ ಯಥಾವಿಧಿ ।
ಪ್ರದಕ್ಷಿಣನಮಸ್ಕಾರೈರಾರಾಧ್ಯ ತದನಂತರಂ ॥೨೧॥

---

ಅನುಗ್ರಹಿಸು. ಈ ನನ್ನ ಹೆಸರು ಜ್ಞಾನವಾಪೀ ಎಂದು ಪ್ರಸಿದ್ಧವಾಗಲಿ. ಇದರ ನೀರು ಸಮಸ್ತಪಾಪಗಳನ್ನು ಹೋಗಲಾಡಿಸುವಂತಹುದಾಗಲಿ" ಎಂದು ಕೇಳಿಕೊಂಡಳು. ನಾನು ಆಗ ಆಕೆ ಕೇಳಿಕೊಂಡ ವರಗಳನ್ನು ಅನುಗ್ರಹಿಸಿದೆನು. ಬಳಿಕ ನಾನು ಅಂದಿನಿಂದ ಆ ಜ್ಞಾನವಾಪಿಯಲ್ಲಿರಲು ಆರಂಭಿಸಿದೆನು. ಪಾರ್ವತಿಯೇ, ಸುಗಂಧಪೂತವಾದ ಆ ಕಮಲದಲ್ಲಿ ವಾಸಿಸಲು ನನಗೆ ಆಸೆಯಾಗುವುದು. ಅಂತಹ ಜ್ಞಾನವಾಪೀತೀರ್ಥವು ಇತರ ಎಲ್ಲಾ ಲೋಕಗಳಲ್ಲಿಯೂ ಸಿಗಲಾರದು. ದ್ವಾದಶೀ ಸೋಮವಾರ ಆ ತೀರ್ಥದಲ್ಲಿ ಮಿಂದು ಮಡಿಯುಟ್ಟು, ದೇವ, ಋಷಿ, ಪಿತೃಗಳಿಗೆ ತರ್ಪಣಮಾಡಿ ಮಧುರವಾದ ಅದರ ನೀರಿನಿಂದ ಜ್ಞಾನೇಶ್ವರನನ್ನು ಅಭಿಷೇಕ ಮಾಡಬೇಕು. ಅದು ವಿಶೇಷಫಲಪ್ರದವಾದುದು. ||೧೫-೧೬-೧೭-೧೮-೧೯-೨೦||

ಬಳಿಕ ಗಂಧ, ಹೂ, ಅಕ್ಷತೆ ಇವುಗಳಿಂದ ಪ್ರದಕ್ಷಿಣ ನಮಸ್ಕಾರವನ್ನೆಸಗಿ ಮುಕ್ತಿಬೇಕಾದವನು ಮೂರು ಸಲ ಜ್ಞಾನೇಶ್ವರದ ತೀರ್ಥವನ್ನು ಪಾನಮಾಡಬೇಕು. ಅದರಿಂದ ಆತನ ಹೃದಯಕಮಲದಲ್ಲಿ ಉತ್ತಮವಾದ ಶಿವಲಿಂಗವು

ಮುಕ್ತ್ಯಾರ್ಥಂ ತ್ರಿಃ ಪಿಬೇತ್ಸಮ್ಯಕ್ ಜ್ಞಾನೇಶಸ್ನಾಪನೋದಕಂ ।
ತತೋ್ಽಯಪಾನಮಾತ್ರೇಣ ಶುದ್ಧೋ ಭವತಿ ಮಾನವಃ ॥೨೨॥

ತತಸ್ತದ್ಧೃದಯೇ ಶುದ್ಧೇ ಜಾಯತೇ ಲಿಂಗಮುತ್ತಮಂ ।
ಅತ ಏವ ಹಿ ತತ್ತೀರ್ಥಂ ತೀರ್ಥೋತ್ತಮಮಿತಿ ಶ್ರುತಂ ॥೨೩॥

ತತ್ತೀರ್ಥರಾಜರಕ್ಷಾರ್ಥಂ ದಂಡಪಾಣಿರ್ಬಲೋನ್ನತಃ ।
ಮಯಾ ಸಂಸ್ಥಾಪಿತಃ ಶಕ್ತಸ್ತತ್ತೀರೇ ವಿಮಲೇ ಶುಭೇ ॥೨೪॥

ವಿನಾ ತದಾಜ್ಞಯಾ ಲೋಕೇ ಯೇನ ಕೇನಾಪಿ ವಾ ಶುಭೇ ।
ಸ್ಪ್ರಷ್ಟುಂ ನ ಶಕ್ಯತೇ ನೂನಂ ತತ್ತೀರ್ಥಂ ಮುಕ್ತಿಸಾಧನಂ ॥೨೫॥

ಪುರಾ ಬ್ರಹ್ಮಾದಿಭಿಃ ಸಾಕಂ ವಿಷ್ಣುಃ ಕಾಶೀದಿದೃಕ್ಷಯಾ ।
ಸಮಾಯಯೌ ತತೋ ದೃಷ್ಟ್ವಾ ದೂರಾತ್ಕಾಶೀಂ ಮನೋಹರಾಂ ॥೨೬॥

ಪ್ರಣಮ್ಯ ದಂಡವದ್ಭೂಮೌ ಭೂಯೋ ಭೂಯಃ ಕೃತಾಂಜಲಿಃ ।
ಅವಾಪ ಪರಮಾನಂದಂ ದೃಷ್ಟ್ವಾ ಕಾಶೀತಿ ಸಾದರಂ ॥೨೭॥

ಇದಮಕ್ಷಿಯುಗಂ ಧನ್ಯಂ ಪುಂಡರೀಕನಿಭಂ ಮಮ ।
ಯತಃ ಶಿವಸ್ವರೂಪೇಯಂ ಕಾಶೀ ದೃಷ್ಟಾ ಮಯಾಧುನಾ ॥೨೮॥

---

ಆವಿರ್ಭವಿಸುವುದು. ಆದುದರಿಂದಲೇ ಆ ತೀರ್ಥವು ಎಲ್ಲಾ ತೀರ್ಥಗಳಿಗೂ ಶ್ರೇಷ್ಠ ವೆನಿಸಿರುವುದು. ಆ ತೀರ್ಥರಾಜನ ರಕ್ಷಣೆಗಾಗಿ ದಂಡಪಾಣಿಯನ್ನು ನಾನು ನಿಯಮಿಸಿದ್ದೇನೆ. ಅವನು ಬಲಶಾಲಿಯು. ಆ ತೀರ್ಥವನ್ನು ರಕ್ಷಿಸಲು ಶಕ್ತನಾಗಿರುವನು. ಲೋಕದಲ್ಲಿ ದಂಡಪಾಣಿಯಿಲ್ಲದೇ ಮುಕ್ತಿಸಾಧನವಾದ ಆ ತೀರ್ಥವನ್ನು ಮುಟ್ಟಲು ಯಾರಿಗೂ ಸಾಧ್ಯವಾಗುವುದಿಲ್ಲ. ॥೨೧-೨೨-೨೩-೨೪-೨೫॥

ಹಿಂದೆ ಒಂದುಸಾರಿ ವಿಷ್ಣುವು ಕಾಶಿಯನ್ನು ನೋಡಬೇಕೆಂದು ಬ್ರಹ್ಮನೇ ಮೊದಲಾದವರೊಂದಿಗೆ ಕಾಶೀಕ್ಷೇತ್ರಕ್ಕೆ ಪ್ರಯಾಣಮಾಡಿದನು. ಬಳಿಕ ಆತನು ಅತಿ ಮನೋಹರವಾದ ಕಾಶಿಯನ್ನು ದೂರದಿಂದಲೇ ನೋಡಿ ಪರಮಾನಂದವನ್ನು ಹೊಂದಿದನು. ಆಹಾ! ಈ ನನ್ನ ಎರಡು ಕಣ್ಣುಗಳು ಸಫಲವಾದುವು. ಶಿವಸ್ವರೂಪವಾದ ಈ ಕಾಶಿಯ ದರ್ಶನದಿಂದ ನಾನು ಧನ್ಯನಾದೆನು. ಈಗ ರತ್ನಕಮಲದಂತಿರುವ

ರತ್ನಪಂಕಜಸಂಕಾಶಾವಿಮೌ ಧನ್ಯೌ ಕರೌ ಮಮ ।
ಯೇನ ಕಾಶೀ ಮಯಾ ಪೂಜ್ಯಾ ಮಹೇಶಸ್ಯಾಪರಾ ತನುಃ ॥೨೯॥

ಇದಂ ಧನ್ಯಂ ಶರೀರಂ ಮೇ ಯೇನ ಕಾಶೀ ಶಿವಾತ್ಮಿಕಾ ।
ಆಲಿಂಗನೀಯಾ ಯತ್ನೇನ ಸರ್ವಪಾಪಾಪನೋದಿನೀ ॥೩೦॥

ಧನ್ಯೋಽಸ್ಮ್ಯಹಂ ಪುನೀತೋಽಸ್ಮಿ ಭಾಗ್ಯವಾನಸ್ಮಿ ಸರ್ವಥಾ ।
ಯತಃ ಶಿವಸ್ವರೂಪೇಯಂ ಕಾಶೀ ಸಂಪ್ರಾಪಿತಾ ಮಯಾ ॥೩೧॥

ಮದನ್ಯೋ ಭಾಗ್ಯವಾನ್ ಲೋಕೇ ನಾಸ್ತಿ ನಾಸ್ತ್ಯೇವ ಸರ್ವಥಾ ।
ಯತೋ ಮೋಕ್ಷಪ್ರದಾ ದಿವ್ಯಾ ಕಾಶೀ ಸಂಪ್ರಾಪಿತಾ ಮಯಾ ॥೩೨॥

ಕೃತಾರ್ಥೋಽಸ್ಮಿ ಕೃತಾರ್ಥೋಽಸ್ಮಿ ಕೃತಾರ್ಥೋಽಸ್ಮಿ ನ ಸಂಶಯಃ ।
ಯತಃ ಸಾಂಬಮಯೀ ಕಾಶೀ ಪ್ರಾಪ್ಯತೇ ಪುಣ್ಯಸಂಶ್ರಯಾತ್ ॥೩೩॥

ಮಹದ್ಭಾಗ್ಯಂ ಮಹದ್ಭಾಗ್ಯಂ ಮಹದ್ಭಾಗ್ಯಂ ಮಮಾಧುನಾ ।
ಯತೋ ಮಯಾ ಶಿವಾಕಾರಾ ಕಾಶೀ ಸಂಪ್ರಾಪ್ಯತೇ ಶುಭಾ ॥೩೪॥

---

ಈ ನನ್ನೆರಡು ಹಸ್ತಗಳು ಪವಿತ್ರಾಂಗಗಳಾದವು. ಮಹೇಶ್ವರನ ಪರಮಶರೀರವೆನಿಸಿದ ಈ ಕಾಶೀದರ್ಶನದಿಂದ ನನ್ನ ಶರೀರವು ಧನ್ಯವಾಯಿತು. ಶಿವಸ್ವರೂಪವಾದ ಕಾಶಿಯನ್ನು ಯತ್ನಪಟ್ಟಾದರೂ ಹೊಂದಬೇಕು. ಅದು ಎಲ್ಲಾ ಕಲ್ಮಷಗಳನ್ನೂ ಹೋಗಲಾಡಿಸುವುದು. ನಿಜವಾಗಿಯೂ ನಾನು ಈಗ ಧನ್ಯನಾದೆ. ಪವಿತ್ರನೂ ಆಗಿರುವೆನು. ನಾನೇ ಅದೃಷ್ಟಶಾಲಿ. ಶಿವಸ್ವರೂಪವಾದ ಕಾಶೀದರ್ಶನದಿಂದ ಭಾಗ್ಯವಂತನಾಗಿರುವೆನು. ನನಗಿಂತಲೂ ಅದೃಷ್ಟಶಾಲಿಯಾದವನು ಬೇರೊಬ್ಬನಿಲ್ಲ. ಮೋಕ್ಷವನ್ನು ಕೊಡುವ ಕಾಶಿಯನ್ನು ನಾನು ಈಗ ಸೇರಿರುವೆನು. ||೨೬-೨೭-೨೮-೨೯-೩೦-೩೧-೩೨||

ಸಾಂಬಸ್ವರೂಪವಾದ ಕಾಶೀಕ್ಷೇತ್ರದ ದರ್ಶನದಿಂದ ನಾನು ಕೃತಾರ್ಥನಾದೆನು. ಈ ಶಿವಾಕಾರವಾದ ಕಾಶಿಯ ನೋಟದಿಂದ ನಾನು ಭಾಗ್ಯವಂತನಾದೆನು. ಒಂದು ಬಾರಿ ಕಾಶಿಯೆಂದು ನಾಮಸ್ಮರಣಮಾಡಿದರೆ ಪಾಪಿಯ ಸಮಸ್ತ ಪಾಪವೂ ದೂರವಾಗುವುದು. ಶಿವಸ್ವರೂಪವನ್ನು ಹೊಂದಿದ ಕಾಶಿಯನ್ನು ನಾನು ನೋಡುತ್ತಲಿ

ಸಕೃತ್ಕಾಶೀತಿ ನಾಮ್ನೈವ ಸ್ಮೃತ್ವಾ ಪಾತಕಿನಃ ಪುರಾ ।
ಶಿವಸಾರೂಪ್ಯಮಾಪನ್ನಾಃ ಸಾ ಕಾಶೀ ದೃಶ್ಯತೇ ಮಯಾ ॥೩೫॥

ಯಸ್ಯಾಂ ಸರ್ವೇಶ್ವರಃ ಶಂಭುಃ ಸಾಂಬಃ ಸಂಸಾರಮೋಚಕಃ ।
ವಸತಿಂ ಸರ್ವದಾ ಚಕ್ರೇ ಸಾ ಕಾಶೀದೃಶ್ಯತೇ ಮಯಾ ॥೩೬॥

ಯಸ್ಯಾಂ ವಿಶ್ವೇಶ್ವರಂ ಲಿಂಗಂ ಜ್ಯೋತೀರೂಪಂ ಸನಾತನಂ ।
ನಿವಸತ್ಯನಿಶಂ ಶ್ರೇಷ್ಠಂ ಸಾ ಕಾಶೀ ದೃಶ್ಯತೇ ಮಯಾ ॥೩೭॥

ಯಸ್ಯಾಮಂಬಾಸಮೇತಃ ಸನ್ ದಿವ್ಯರೂಪಧರೋ ಹರಃ ।
ಕರೋತಿ ಲೀಲಾಮನಿಶಂ ಸಾ ಕಾಶೀ ದೃಶ್ಯತೇ ಮಯಾ ॥೩೮॥

ಯಸ್ಯಾಂ ಜ್ಞಾನಪ್ರದಾ ನಿತ್ಯಂ ಜ್ಞಾನವಾಪೀ ಮನೋಹರಾ ।
ತಿಷ್ಠತ್ಯಮಲಕಲ್ಲೋಲಾ ಸಾ ಕಾಶೀ ದೃಶ್ಯತೇ ಮಯಾ ॥೩೯॥

ಯಸ್ಯಾಂ ಪೂರ್ಣೇಂದುವದನಾ ಪರಮಾನ್ನಪ್ರದಾಯಿನೀ ।
ಅನ್ನಪೂರ್ಣಾಸ್ಥಿತಿಂ ಚಕ್ರೇ ಸಾ ಕಾಶೀ ದೃಶ್ಯತೇ ಮಯಾ ॥೪೦॥

---

ದ್ದೇನೆ. ಸಂಸಾರಬಂಧಮೋಚಕನಾದ ಶಂಭುವೂ ಸರ್ವೇಶ್ವರನೂ ಆದ ಶಿವನು ಇಲ್ಲಿ ವಾಸಿಸುತ್ತಿರುವನು. ಅಂತಹ ಕಾಶಿಯನ್ನು ನಾನು ನೋಡುತ್ತಲಿದ್ದೇನೆ. ಯಾವುದರಲ್ಲಿ ಜ್ಯೋತಿರ್ಮಯವಾದ ವಿಶ್ವೇಶ್ವರಲಿಂಗವು ಯಾವಾಗಲೂ ಪ್ರಕಾಶಿಸುತ್ತಿರುವುದೋ ಅಂಥ ಕಾಶಿಯನ್ನು ನೋಡುವ ನಾನೇ ಧನ್ಯನಲ್ಲವೆ! ||೩೩-೩೪-೩೫-೩೬-೩೭||

ಯಾವುದರಲ್ಲಿ ಪಾರ್ವತೀಸಹಿತನಾಗಿ ಶ್ರೀಶಂಕರನು ಲೀಲಾವಿನೋದದಿಂದ ಇರುವನೋ ಆ ಕಾಶಿಯನ್ನು ಈಗ ನೋಡುತ್ತಿದ್ದೇನೆ. ಎಲ್ಲಿ ಜ್ಞಾನಪ್ರದವಾಗಿಯೂ ಮನೋಹರವಾಗಿಯೂ ಸ್ವಚ್ಛತರಂಗಶೋಭಿತವಾಗಿಯೂ ಇರುವ ಜ್ಞಾನವಾಪಿಯು ಪ್ರಕಾಶಿಸುತ್ತಿದೆಯೋ, ಮತ್ತು ಪೂರ್ಣಚಂದ್ರನಂತೆ ಕಂಗೊಳಿಸುವಂತಹ ಮುಖವುಳ್ಳವಳಾಗಿ ಭಕ್ತರಿಗೆ ಪರಮಾನ್ನವನ್ನು ಕೊಡುವ ಸಾಕ್ಷಾದನ್ನಪೂರ್ಣೇಶ್ವರೀದೇವಿಯು ನೆಲಸಿರುವಳೋ, ಅಲ್ಲದೇ ಸರ್ವವಿಘ್ನಗಳನ್ನು ಪರಿಹರಿಸುವ ಡುಂಢೀಶನು ಎಲ್ಲಿ ವಾಸಿಸುತ್ತಾನೋ, ಮತ್ತೆ ಶಿವಪ್ರೀತಿಯಾಗಿಯೂ ಶಂಕರನಿಗೆ ಬೇಕಾದವನಾಗಿಯೂ

ಯಸ್ಯಾಂ ತಿಷ್ಠತಿ ಧುಂಡೀಶಃ ಸರ್ವೇಷ್ಟಫಲದಾಯಕಃ ।
ಸರ್ವವಿಘ್ನಹರೋ ನಿತ್ಯಂ ಸಾ ಕಾಶೀ ದೃಶ್ಯತೇ ಮಯಾ ॥೪೧॥

ಯಸ್ಯಾಂ ಶಿವವ್ರತೋ ನಿತ್ಯಂ ದಂಡಪಾಣಿಃ ಶಿವಪ್ರಿಯಃ ।
ತಿಷ್ಠತ್ಯತೀವ ಸಂತುಷ್ಟಃ ಸಾ ಕಾಶೀ ದೃಶ್ಯತೇ ಮಯಾ ॥೪೨॥

ಯಸ್ಯಾಂ ವೀರೇಶ್ವರಃ ಶ್ರೀಮಾನ್ ಕರುಣಾನಿಧಿರವ್ಯಯಃ ।
ಚಕಾರ ವಸತಿಂ ನಿತ್ಯಂ ಸಾ ಕಾಶೀ ದೃಶ್ಯತೇ ಮಯಾ ॥೪೩॥

ಯಸ್ಯಾಂ ತಿಷ್ಠತಿ ವೇದೇಡ್ಯಃ ಸದಾ ಪಶುಪತೀಶ್ವರಃ ।
ಪಶುಪಾಶವಿಮೋಕ್ಷಾಯ ಸಾ ಕಾಶೀ ದೃಶ್ಯತೇ ಮಯಾ ॥೪೪॥

ಯಸ್ಯಾಂ ತಿಷ್ಠತಿ ಸರ್ವೇಷಾಂ ಶಾಸ್ತಾ ಶ್ರೀಕಾಲಭೈರವಃ ।
ಭಕ್ತಕಲ್ಪತರುಃ ಶ್ರೀಮಾನ್ ಸಾ ಕಾಶೀ ದೃಶ್ಯತೇ ಮಯಾ ॥೪೫॥

ಯಸ್ಯಾಮಂತರ್ಗೃಹಂ ನಾಮ ಕ್ಷೇತ್ರಂ ಶಿವಮಯಂ ಶಿವಂ ।
ತಿಷ್ಠತಿ ಶ್ರೀಕರಾವಾಸಂ ಸಾ ಕಾಶೀ ದೃಶ್ಯತೇ ಮಯಾ ॥೪೬॥

ಯಸ್ಯಾಮಸ್ತಿ ವಿಶಾಲಾಕ್ಷೀ ಶಿವಸ್ಯಾರ್ಧಾಂಗಭಾಗಿನೀ ।
ಭಕ್ತಾಭೀಷ್ಟಪ್ರದಾ ನಿತ್ಯಂ ಸಾ ಕಾಶೀ ದೃಶ್ಯತೇ ಮಯಾ ॥೪೭॥

ಯಸ್ಯಾಂ ತ್ಯಕ್ತತನುರ್ಮರ್ತ್ಯಃ ಶೈವಃ ಶಿವಪರಾಯಣಃ ।
ಶಿವಾಕಾರಮವಾಪ್ನೋತಿ ಸಾ ಕಾಶೀ ದೃಶ್ಯತೇ ಮಯಾ ॥೪೮॥

---

ಇರುವ ದಂಡಪಾಣೀಶ್ವರನು ಸಂತೋಷದಿಂದ ಎಲ್ಲಿ ನೆಲಸಿರುತ್ತಾನೋ ಅಂತಹ ಕಾಶೀಕ್ಷೇತ್ರವನ್ನು ನಾನು ನೋಡಿದೆನು. ಯಾವುದರಲ್ಲಿ ಕರುಣಾನಿಧಿಯಾದ ವೀರೇಶ್ವರನು ಪ್ರತಿನಿತ್ಯವೂ ವಾಸಮಾಡುತ್ತಾನೋ ಆ ಕಾಶಿಯನ್ನು ನಾನು ಈಗ ನೋಡಿದೆನು. ||೩೮-೩೯-೪೦-೪೧-೪೨-೪೩||

ಯಾವ ಕಾಶಿಯಲ್ಲಿ ವೇದಸ್ತುತ್ಯನಾದ ಪಾಶುಪತೇಶ್ವರನು ವಾಸಿಸುತ್ತಾನೋ ಆ ಕಾಶಿಯನ್ನು ನಾನು ನೋಡುತ್ತಲಿದ್ದೇನೆ. ಮತ್ತು ಎಲ್ಲರನ್ನು ಶಿಕ್ಷಿಸುವ, ಭಕ್ತರಿಗೆ ಕಲ್ಪವೃಕ್ಷದಂತಿರುವ ಕಾಲಭೈರವನು ಎಲ್ಲಿ ನೆಲಸಿರುವನೋ, ಅಲ್ಲದೆ, ಶಿವಸ್ವರೂಪವಾದ ಅಂತರ್ಗೃಹವೂ ಮತ್ತು ಶಂಕರನ ಅರ್ಧಾಂಗಿಯೂ, ಸಮಸ್ತ ಇಷ್ಟಾರ್ಥಗಳನ್ನು

ಯಸ್ಯಾಂ ಮೋಕ್ಷಾರ್ಥಿನಃ ಶೈವಾಃ ನಿರಾಹಾರಾ ಶ್ಶಿವಾರ್ಚಕಾಃ ।
ನಿವಸಂತ್ಯನಿಶಂ ಶುದ್ಧಾಃ ಸಾ ಕಾಶೀ ದೃಶ್ಯತೇ ಮಯಾ ॥೪೯॥

ಯಸ್ಯಾಂ ಪ್ರತ್ಯಾಹಿಕಂ ಕರ್ಮ ಕೃತ್ವಾ ತಿಷ್ಠತಿ ಸಾದರಂ ।
ಪಾಪಲೇಪವಿಹೀನಾಶ್ಚ ಸಾ ಕಾಶೀ ದೃಶ್ಯತೇ ಮಯಾ ॥೫೦॥

ಯಸ್ಯಾಃ ಪ್ರಭಾವಂ ವೇದಾಶ್ಚ ನ ಜಾನಂತ್ಯೇವ ಸರ್ವಥಾ ।
ಕಿಮನ್ಯಾನಿ ಪುರಾಣಾನಿ ಸಾಕಾಶೀ ದೃಶ್ಯತೇ ಮಯಾ ॥೫೧॥

ಏವಂ ವದನ್ ತದಾ ವಿಷ್ಣುಃ ಕಾಶೀನಿಕಟಮಾದರಾತ್ ।
ತತಶ್ಚಕ್ರೇ ಪ್ರಮಾಣಾನಿ ದಂಡವತ್ಸ ಪುನಃ ಪುನಃ ॥೫೨॥

ಯಯಾ ತುಲಯಿತುಂ ವಸ್ತು ನಾಸ್ತಿ ಬ್ರಹ್ಮಾಂಡಗೋಲಕೇ ।
ಸರ್ವಾರ್ತಿನಾಶಿನೀ ಧನ್ಯಾ ಸಾ ಕಾಶೀ ದೃಶ್ಯತೇಮಯಾ ॥೫೩॥

ತತೋ ನಾನಾವಿಧೈಃ ಪುಷ್ಪೈಃ ದಿವ್ಯೈರತ್ನೈರ್ಮನೋಹರೈಃ ।
ನಾನಾವಿಧೋಪಚಾರೈಶ್ಚ ಕಾಶೀಪೂಜಾಂ ಚಕಾರ ಸಃ ॥೫೪॥

---

ಕೊಡುವವಳಾದ ವಿಶಾಲಾಕ್ಷಿಯೂ ಎಲ್ಲಿ ಕಾಣುತ್ತಿರುವರೋ, ಮತ್ತು ಮನುಷ್ಯನು ಎಲ್ಲಿ ಪ್ರಾಣತ್ಯಾಗಮಾಡಿದರೆ ಅವನು ಶಿವಸ್ವರೂಪನಾಗುವನೋ ಅಂತಹ ಪವಿತ್ರ ಕಾಶಿಯನ್ನು ನಾನು ಆನಂದದಿಂದ ಈಗ ನೋಡುತ್ತಿದ್ದೇನೆ.॥೪೪-೪೫-೪೬-೪೭-೪೮॥

ಯಾವ ಕಾಶೀಕ್ಷೇತ್ರದಲ್ಲಿ ಮುಮುಕ್ಷುಗಳು ನಿರಾಹಾರರಾಗಿ ಶಿವನನ್ನು ಪೂಜೆಮಾಡುತ್ತ ಶುದ್ಧಶೈವರಾಗಿ ವಾಸಿಸುತ್ತಾರೋ, ಮತ್ತು ಅಲ್ಲಿ ದೈನಂದಿನಕರ್ಮಗಳನ್ನು ಆಚರಿಸಿ ಅವರು ಪಾಪದಿಂದ ವಿಮುಕ್ತರಾಗುವರೋ ಮತ್ತು ಯಾವುದರ ಮಹಿಮೆಯನ್ನು ವೇದಗಳೂ ಸುಲಭವಾಗಿ ತಿಳಿಯಲಾರವೋ, ಅಂತಹ ಕ್ಷೇತ್ರ ಮಹಿಮೆಯನ್ನು ಉಳಿದ ಪುರಾಣಾದಿಗಳು ತಿಳಿಸಬಲ್ಲವೆ! ಹೀಗಿರುವ ಆ ಕಾಶೀ ಕ್ಷೇತ್ರವನ್ನು ನಾನು ಈಗ ನೋಡುತ್ತಿದ್ದೇನೆ. ಈ ಕ್ಷೇತ್ರಕ್ಕೆ ಸಮಾನವಾದ ಪವಿತ್ರ ವಸ್ತುವು ಬೇರೊಂದು ಈ ಬ್ರಹ್ಮಾಂಡದಲ್ಲಿ ಸಿಕ್ಕಲಾರದು. ಇದು ಸರ್ವ ಪೀಡಾ ಪರಿಹಾರಕವಾದುದು. ಎಂದು ಹೇಳುತ್ತ ವಿಷ್ಣುವು ಕಾಶೀಕ್ಷೇತ್ರದ ಸಮೀಪಕ್ಕೆ ಬಂದನು. ಬಳಿಕ ವಿಷ್ಣುವು ಭೂಮಿಯಲ್ಲಿ ನಿಂತು ದಂಡಪ್ರಣಾಮವನ್ನು ಮಾಡಿ,

ತತೋ ನಾನಾವಿಧಾನ್ ಕ್ರೂರಾನ್ ಕಾಶೀಸಂರಕ್ಷಕಾನ್ ಗಣಾನ್ ।
ಸಂಪೂಜ್ಯ ತದನುಜ್ಞಾತಃ ಕಾಶೀಮುವಿಶದಂಬಿಕೇ ॥೫೫॥

ತತಃ ಸ ಶಿವಗಂಗಾಯಾಂ ಯಥಾಶಾಸ್ತ್ರಂ ಯಥಾಕ್ರಮಂ ।
ಸ್ನಾನಂ ಕೃತ್ವಾ ಪ್ರಯತ್ನೇನ ಚಕಾರೋದ್ಧೂಲನಂ ತತಃ ॥೫೬॥

ತ್ರಿಪುಂಡ್ರಧಾರಣಂ ಕೃತ್ವಾ ಮಂತ್ರಪೂತೇನ ಭಸ್ಮನಾ ।
ರುದ್ರಾಕ್ಷಧಾರಣಂ ಚಕ್ರೇ ಸರ್ವಪಾತಕನಾಶನಂ ॥೫೭॥

ಅಗ್ನೀಧ್ರೇಶ್ವರಮಾಸಾದ್ಯ ಪೂಜಾ ದ್ರವ್ಯೇಣ ಸಾದರಂ ।
ಸಂಪೂಜ್ಯ ನತ್ವಾ ವಿವಿಧೈಃ ಸ್ತೋತ್ರೈಃ ಸ್ತುತ್ವಾ ಸದಾಶಿವಂ ॥೫೮॥

ತತಸ್ತದಾಜ್ಞಯಾ ವಿಷ್ಣುರ್ವಕ್ರತುಂಡಮುಪಾಗತಃ ।
ತತ್ರ ಸ್ನಾತ್ವಾ ವಿಧಾನೇನ ವಕ್ರತುಂಡಂ ವಿನಾಯಕಂ ॥೫೯॥

ಸಮ್ಯಗಾರಾಧ್ಯ ವಿಧಿವತ್ಪುನಃ ಸಾದರಪೂರ್ವಕಂ ।
ಸಮಭ್ಯರ್ಚ್ಯಾತಿಯತ್ನೇನ ಕಾಲಭೈರವಮಾಗತಃ ॥೬೦॥

---

ಬಗೆಬಗೆಯ ಹೂಗಳಿಂದಲೂ ದಿವ್ಯರತ್ನಗಳಿಂದಲೂ ಕಾಶೀಕ್ಷೇತ್ರವನ್ನು ಪೂಜಿಸಿದನು. ॥೪೯-೫೦-೫೧-೫೨-೫೪॥

ಬಳಿಕ ವಿಷ್ಣುವು ಕಾಶಿಯನ್ನು ರಕ್ಷಿಸುವ ನಾನಾಬಗೆಯ ಕ್ರೂರಗಣಗಳನ್ನು ಪೂಜಿಸಿ ಅವರ ಅಪ್ಪಣೆಯನ್ನು ತೆಗೆದುಕೊಂಡು ಕಾಶೀಯ ಒಳಹೊಕ್ಕನು. ಅಲ್ಲಿ ವಿಷ್ಣುವು ಮೊದಲು ಶಿವಗಂಗೆಯಲ್ಲಿ ಶಾಸ್ತ್ರೋಕ್ತ ರೀತಿಯಾಗಿ ಸ್ನಾನಮಾಡಿ ಬಳಿಕ ಭಸ್ಮೋದ್ಧೂಲನಮಾಡಿಕೊಂಡನು. ತ್ರಿಪುಂಡ್ರಧಾರಣೆಯನ್ನು ಮಾಡಿ, ಸಮಸ್ತ ಪಾಪಶಾಮಕವಾದ ರುದ್ರಾಕ್ಷಿಯನ್ನು ಧರಿಸಿದನು. ಪೂಜಾದ್ರವ್ಯಗಳನ್ನು ತೆಗೆದು ಕೊಂಡು ಅಗ್ನೀಧ್ರೇಶ್ವರನನ್ನು ಅರ್ಚಿಸಿದನು. ಸದಾಶಿವನಿಗೆ ಪೂಜಿಸಿ ನಮುಸ್ಕರಿಸಿ ಅವನನ್ನು ಸ್ತೋತ್ರಗಳಿಂದ ಸ್ತುತಿಸಿದನು. ಬಳಿಕ ಅವನ ಅಪ್ಪಣೆ ಮೇರೆಗೆ ವಕ್ರತುಂಡನ ಸಮೀಪಕ್ಕೆ ಹೋದನು. ಅಲ್ಲಿ ವಿಧ್ಯುಕ್ತ ರೀತಿಯಾಗಿ ಸ್ನಾನಮಾಡಿ ಅವನನ್ನು ಆರಾಧಿಸಿ ಅತಿ ಯತ್ನದಿಂದ ಸಂತೋಷಗೊಳಿಸಿ ಕಾಲಭೈರವನನ್ನು ಆರಾಧಿಸಲು ಅಲ್ಲಿಂದ ಮುಂದೆ ಹೊರಟನು. ॥೫೫-೫೬-೫೭-೫೮-೫೯-೬೦॥

ಕಾಲಕುಂಡೇ ಯಥಾ ಶಾಸ್ತ್ರಂ ಸ್ನಾತ್ವಾ ವಿಷ್ಣುಸ್ತಥಾ ಪರಂ ।
ಕ್ಷೀರಾಜ್ಯಮಧುಭಿಃ ಸಮ್ಯಕ್ ಅಭಿಷಿಚ್ಯ ಚ ಭೈರವಂ ॥೬೧॥

ದಿವ್ಯಮಂದಾರಪುಷ್ಪೌಘೈರುಪಹಾರೈಶ್ಚ ಶೋಭನೈಃ ।
ಪ್ರಸಾದ್ಯ ಭೈರವಂ ದೇವಂ ಪ್ರಣಮ್ಯ ಚ ತದಾಜ್ಞಯಾ ॥೬೨॥

ತತ್ಪ್ರಾಂತದಿವ್ಯಲಿಂಗಾನಿ ಪೂಜಯಾಮಾಸ ಸಾದರಂ ।
ಪಾಪಭಕ್ಷ್ಯೇಶ್ವರಂ ಚೈವ ಸಂಪೂಜ್ಯ ತದನಂತರಂ ॥೬೩॥

ತತಃ ಸಂತೋಷಮಾಶ್ರಿತ್ಯ ವೀರೇಶಂ ಸಮುಪಾಗತಃ ।
ತತ್ರ ವೀರೇಶಕುಂಡೇಽಪಿ ಪುನಃ ಸ್ನಾತ್ವಾ ವಿಶೇಷತಃ ॥೬೪॥

ತತೋ ದದರ್ಶ ವೀರೇಶಂ ಭಕ್ತವತ್ಸಲಮವ್ಯಯಂ ।
ದೃಷ್ಟ್ವಾ ಪ್ರಣಮ್ಯ ಬಹುಧಾ ಪೂಜಾಂ ಚಕ್ರೇ ಸಸಾದರಂ ॥೬೫॥

ತತಸ್ತದಾಜ್ಞಾಂ ಸಂಪ್ರಾಪ್ಯ ಯಯೌ ಪಶುಪತೀಶ್ವರಂ ।
ತತ್ರ ಪಾಶುಪತಂ ಕುಂಡಂ ವಿಲೋಕ್ಯಾತಿಮನೋಹರಂ ॥೬೬॥

---

ಅನಂತರ ವಿಷ್ಣುವು ಕಾಲಭೈರವ ತೀರ್ಥದಲ್ಲಿ ಮಿಂದು ಮಡಿಯುಟ್ಟು ಹಾಲು ತುಪ್ಪ ಮೊದಲಾದ ಪಂಚಾಮೃತಗಳಿಂದ ಅಭಿಷೇಕಮಾಡಿ, ಮನೋಹರವಾದ ಮಂದಾರವೇ ಮೊದಲಾದ ಹೂಗಳಿಂದ ಅರ್ಚಿಸಿ, ಭೈರವದೇವನ ಅನುಗ್ರಹವನ್ನು ಸಂಪಾದಿಸಿ, ಬಳಿಕ ಅವನ ಅಪ್ಪಣೆಯನ್ನು ತೆಗೆದುಕೊಂಡನು. ಮತ್ತು ಅದರ ಸಮೀಪದಲ್ಲಿರುವ ದಿವ್ಯಶಿವಲಿಂಗಗಳನ್ನು ಪೂಜಿಸಿದನು. ಪಾಪಭಕ್ಷ್ಯೇಶ್ವರನ ದರ್ಶನವಾದ ಬಳಿಕ ಆ ವಿಷ್ಣುವು ಭಕ್ತವತ್ಸಲನೂ, ನಾಶರಹಿತನೂ, ಆದ ವೀರೇಶ್ವರನನ್ನು ಅರ್ಚಿಸಲು ಹೊರಟನು. ಪುನಃ ವೀರೇಶಕುಂಡದಲ್ಲಿ ಸ್ನಾನಮಾಡಿ ವೀರೇಶನ ದರ್ಶನಮಾಡಿದನು. ವೀರೇಶ್ವರನಿಗೆ ನಮಸ್ಕರಿಸಿ ಅನೇಕ ವಿಧವಾಗಿ ಪೂಜೆಗೈದನು. ||೬೨-೬೩-೬೪-೬೫||

ಬಳಿಕ ಆ ವಿಷ್ಣುವು ವೀರೇಶನ ಅಪ್ಪಣೆಯನ್ನು ತೆಗೆದುಕೊಂಡು ಪಶುಪತೀಶ್ವರನ ಬಳಿಗೆ ಹೋದನು. ಅಲ್ಲಿರುವ ಮನೋಹರವಾದ ಪಾಶುಪತಕುಂಡದಲ್ಲಿ ವಿಧಿಪೂರ್ವಕವಾಗಿ ಸ್ನಾನಮಾಡಿ ಪೂಜಾದ್ರವ್ಯಗಳಿಂದ ಪಶುಪತೀಶ್ವರನನ್ನು ಅರ್ಚಿಸಿದನು. ಅವನ ಅಪ್ಪಣೆಯಿಂದ ತುಷ್ಟನಾದ ವಿಷ್ಣುವು ದಂಡಪಾಣಿಯ

ಸ್ನಾನಂ ಚಕ್ರೇ ವಿಧಾನೇನ ನತ್ವಾ ಪಾಶುಪತೇಶ್ವರಂ ।
ಚಕ್ರೇ ಪೂಜಾಂ ವಿಧಾನೇನ ಪೂಜಾದ್ರವ್ಯೇಣ ಸಾದರಂ ॥೬೭॥

ತತಸ್ತದಾಜ್ಞಯಾ ತುಷ್ಟೋ ದಂಡಪಾಣಿಮುಪಾಗತಃ ।
ದಂಡಪಾಣಿಂ ಸಮಭ್ಯರ್ಚ್ಯ ಪ್ರಸಾದ್ಯ ತದನುಜ್ಞಯಾ ॥೬೮॥

ಜ್ಞಾನವಾಪೀಂ ಪ್ರಣಮ್ಯಾಗ್ರೇ ಸಂಪೂಜ್ಯ ಚ ಯಥೋಚಿತಂ ।
ಸ್ನಾನಂ ಚಕ್ರೇ ತತಃ ಸಮ್ಯಕ್ ವಿಧಿಪೂರ್ವಕಮಾದರಾತ್ ॥೬೯॥

ತತೋ ಜ್ಞಾನೇಶಮಭ್ಯರ್ಚ್ಯ ನತ್ವಾ ಪಾಪವಿನಾಶಕಂ ।
ಧುಂಢಿರಾಜಾರ್ಚನಂ ಚಕ್ರೇ ಸ ವಿಷ್ಣುರ್ವಿಧಿಪೂರ್ವಕಂ ॥೭೦॥

ತತಃ ಸ ತದನುಜ್ಞಾತೋ ಮುಕ್ತಿಮಂಟಪಮಾಯಯೌ ।
ತತೋ ನಂದೀಶಮಭ್ಯರ್ಚ್ಯ ದ್ವಾರಪಾಲಾನಪಿ ಕ್ರಮಾತ್ ॥೭೧॥

ಚಕಾರ ಮದನುಜ್ಞಾತೋ ಮಮಾರಾಧನಮಾದರಾತ್ ।
ಆದೌ ಪಂಚಾಮೃತೈಃ ಸಮ್ಯಕ್ ಅಭಿಷಿಚ್ಯ ಯಥಾವಿಧಿ ॥೭೨॥

ಕಾಮಧೇನುಪ್ರಸಾದೇನ ಸಂಪ್ರಾಪ್ತೈರಮಲೈರ್ನವೈಃ ।
ತೀರ್ಥೋದಕಂ ಸಮಾಹೃತ್ಯ ಸ್ವಯಮೇವ ಜನಾರ್ದನಃ ॥೭೩॥

---

ದರ್ಶನಕ್ಕಾಗಿ ಮುಂದೆ ಸಾಗಿದನು. ಆ ದಂಡಪಾಣಿಯನ್ನು ಪೂಜಿಸಿ ಅವನ ಅಪ್ಪಣೆಯನ್ನು ಪಡೆದು ಜ್ಞಾನವಾಪಿಯನ್ನು ಸೇರಿದನು. ಆ ಜ್ಞಾನವಾಪಿಗೆ ನಮಿಸಿ ಯಥೋಚಿತವಾಗಿ ಪೂಜಿಸಿ, ಆದರದಿಂದ ಅಲ್ಲಿ ವಿಧಿಪೂರ್ವಕವಾಗಿ ಸ್ನಾನಮಾಡಿದನು. ಬಳಿಕ ಪಾಪಗಳನ್ನು ಹೋಗಲಾಡಿಸುವ ಜ್ಞಾನೇಶ್ವರನನ್ನು ಅರ್ಚಿಸಿ ಅನಂತರ ವಿಘ್ನಗಳನ್ನು ನಾಶಮಾಡುವ ಧುಂಡಿರಾಜಗಣಪತಿಯನ್ನು ಅರ್ಚಿಸಿದನು. ॥೬೬·೬೭-೬೮-೬೯-೭೦॥

ಆ ಮೇಲೆ ವಿಷ್ಣುವು ಧುಂಡಿರಾಜನ ಅನುಜ್ಞೆಯನ್ನು ತೆಗೆದುಕೊಂಡು ಮುಕ್ತಿಮಂಟಪಕ್ಕೆ ತೆರಳಿದನು. ಅಲ್ಲಿ ನಂದೀಶ್ವರನನ್ನೂ ದ್ವಾರಪಾಲಕರನ್ನೂ ಅರ್ಚಿಸಿ ನನ್ನ ಪೂಜೆಗೆ ಸಿದ್ಧನಾದನು. ಮೊದಲು ಪಂಚಾಮೃತಗಳಿಂದ ಚನ್ನಾಗಿ ಅಭಿಷೇಕಮಾಡಿ, ಬಳಿಕ ತಾನೇ ತೀರ್ಥೋದಕವನ್ನು ಹೊತ್ತುತಂದು ರುದ್ರಸೂಕ್ತ

ಅಭಿಷೇಕಂ ತತಶ್ಚಕ್ರೇ ರುದ್ರಸೂಕ್ತೇನ ಸಾದರಂ ।
ತತಃ ಪರಿಮಳದ್ರವ್ಯೈರಭಿಪೂಜ್ಯ ಯಥಾವಿಧಿ ॥೨೪॥

ಅನರ್ಘ್ಯರತ್ನೈರಕರೋತ್ಪೂಜಾಂ ತದನು ಸಾದರಂ ।
ನವೈಃ ಸ್ವೋಪಹೃತೈಃ ಶುದ್ಧೈಃ ಬಿಲ್ವಪತ್ರೈರ್ಮನೋಹರೈಃ ॥೨೫॥

ಮಂದಾರಪುಷ್ಪೈರಮಲೈರನ್ಯೈಶ್ಚ ಕುಸುಮೈರ್ನವೈಃ ।
ವಿಚಿತ್ರರತ್ನಮಾಲಾಭಿಃ ಸುವರ್ಣಾಭರಣೈರಪಿ ॥೨೬॥

ಭಕ್ತ್ಯಾ ಸ ಪೂಜಯಾಮಾಸ ವಿಷ್ಣುಃ ಶ್ರದ್ಧಾಸಮನ್ವಿತಃ ।
ತತೋ ಮನೋಹರೈರ್ದಿವ್ಯೈರ್ನೈವೇದ್ಯೈರತಿಶೋಭನೈಃ ॥೨೭॥

ಧೂಪದೀಪಾದಿಭಿಶ್ಚಾಪಿ ತೋಷಯಾಮಾಸ ಮಾಂ ಶುಭೇ ।
ತತಃ ಪ್ರದಕ್ಷಿಣಾದೀನಿ ಕೃತ್ವಾ ನತ್ವಾ ಯಥಾವಿಧಿ ॥೨೮॥

ಸ್ತೋತ್ರೈಶ್ಚ ವಿವಿಧೈಃ ಸ್ತುತ್ವಾ ಚಕಾರಾಂತರ್ಗೃಹಾದಿಕಂ ।
ಏವಂ ವರ್ಷಾಯುತಂ ವಿಷ್ಣುರ್ನಿತ್ಯಯಾತ್ರಾಪರಾಯಣಃ ॥೨೯॥

ಉಪಾಸ್ಯ ಕಾಶ್ಯಾಂ ಸಂತುಷ್ಟಃ ಶೃಣ್ವನ್ ಶಿವಕಥಾಃ ಶುಭಾಃ ।
ಶಿವೈಕಶರಣೋ ನಿತ್ಯಂ ಸ್ಥಿರೋ ಲಿಂಗಾರ್ಚನೇ ರತಃ ॥೩೦॥

---

ದಿಂದ ಅಭಿಷೇಕಮಾಡಿದನು. ಆಮೇಲೆ ವಿಧಿವತ್ತಾಗಿ ಪರಿಮಳದ್ರವ್ಯಗಳಿಂದ ಅರ್ಚಿಸಿದನು. ಬಳಿಕ ಅಮೂಲ್ಯರತ್ನಗಳಿಂದಲೂ ತಾನು ತಂದಿರುವ ಹೊಸ ಬಿಲ್ವ ತಳಿರುಗಳಿಂದಲೂ ಶಿವಲಿಂಗವನ್ನು ಅಲಂಕರಿಸಿದನು. ಬಿಳಿಯದಾದ ಮಂದಾರವೇ ಮೊದಲಾದ ಹೊಸ ಹೂಗಳಿಂದ ಶಿವನನ್ನು ಸಿಂಗರಿಸಿದನು. ವಿಚಿತ್ರರತ್ನಹಾರಗಳು ಬಂಗಾರದ ಆಭರಣಗಳು ಇವುಗಳನ್ನು ಭಕ್ತಿಯಿಂದ ಶಿವಲಿಂಗಕ್ಕೆ ಅರ್ಪಿಸಿದನು. ||೨೧-೨೨-೨೩-೨೪-೨೫-೨೬||

ವಿಷ್ಣುವು ಶ್ರದ್ಧೆಯಿಂದಲೂ, ಭಕ್ತಿಯಿಂದಲೂ, ಧೂಪ, ದೀಪ ನೈವೇದ್ಯಗಳಿಂದಲೂ, ರುಚಿಕರಗಳಾದ ಅನ್ನಗಳಿಂದಲೂ ನನ್ನನ್ನು ಸಂತೋಷಗೊಳಿಸಿದನು. ಬಳಿಕ ಪ್ರದಕ್ಷಿಣನಮಸ್ಕಾರಗಳನ್ನು ಮಾಡಿ ಬಗೆಬಗೆಯಾದ ಸ್ತೋತ್ರಗಳಿಂದ ಸ್ತುತಿಸಿದನು. ಅಂತರ್ಗೃಹ ಯಾತ್ರಾದಿಗಳನ್ನೂ ವಿಧಿವತ್ತಾಗಿ ನೆರವೇರಿಸಿದನು. ಹೀಗೆ

ಗಂತುಕಾಮಸ್ತತೋ ವಿಷ್ಣುಃ ಕದಾಚಿದಿದಮಬ್ರವೀತ್ ।
ಜ್ಞಾನವಾಪೀತಟೇ ರಮ್ಯೇ ತಪಃ ಕೃತ್ವಾ ಯಥಾವಿಧಿ ॥೮೧॥

ಗಮಿಷ್ಯೇ ಯತ್ರ ಕುತ್ರಾಪಿ ಶಿವೇನ ಪ್ರೇರಿತಸ್ತತಃ ।
ತ್ಯಕ್ತ್ವೇವಾನೀಮಿಯಂ ಕಾಶೀ ದುಃಖಂ ದಾಸ್ಯತ್ಯಸಂಶಯಂ ॥೮೨॥

ಅನಂತಜನ್ಮತಪಸಾ ಸಂಪ್ರಾಪ್ತಾ ಶಿವರೂಪಿಣೀ
ಇತ್ಯುಕ್ತ್ವಾ ತದನುಪ್ರೀತ್ಯಾ ಜ್ಞಾನವಾಪೀತಟೇ ಶುಭೇ । ॥೮೩॥

ಸಾಗ್ರಂ ಯುಗಾಯುತಂ ಚಕ್ರೇ ವಿಷ್ಣುರ್ಘೋರತರಂ ತಪಃ ।
ತಂ ದೃಷ್ಟ್ವಾ ಮುನಯಃ ಸರ್ವೇ ತಪೋನಿಷ್ಠಂ ಜಿತೇಂದ್ರಿಯಂ॥೮೪॥

ತಪೋನಿಧಿರಿತಿಪ್ರೀತ್ಯಾ ನಾಮ ಚಕ್ರುರಕಲ್ಮಷಾಃ ।
ಏವಂ ನಿವಸತಸ್ತಸ್ಯ ಕಾಲೋ ಭೂಯಾನತಿಕ್ರಮಾತ್ ॥೮೫॥

---

ವಿಷ್ಣುವು ಹತ್ತುಸಾವಿರ ವರ್ಷಗಳು ಕಾಶಿಯಲ್ಲಿದ್ದುಕೊಂಡು ನಿತ್ಯಯಾತ್ರಾದಿಗಳನ್ನು ಆಚರಿಸುತ್ತ ಶಿವಕಥೆಗಳನ್ನು ಕೇಳುತ್ತಿದ್ದನು. ಯಾವಾಗಲೂ ಶಿವನು ತನ್ನ ರಕ್ಷಕನೆಂದು ಭಾವಿಸಿ, ನಿತ್ಯವೂ ಲಿಂಗಾರ್ಚನೆಯಲ್ಲಿಯೇ ನಿರತನಾಗಿದ್ದನು. ಒಂದು ಸಲ ತಾನು ಪುನಃ ಸ್ವಸ್ಥಳಕ್ಕೆ ಹೋಗಬೇಕೆಂಬುದು ಬಯಸಿ ವಿಷ್ಣುವು, ಜ್ಞಾನವಾಪಿಯ ರಮಣೀಯವಾದ ತೀರದಲ್ಲಿ ಯಥಾವಿಧಿಯಾಗಿ ಶಿವಾರಾಧನೆಮಾಡಿ ಈ ರೀತಿ ಯೋಚಿಸಿದನು. ||೭೭-೭೮-೭೯-೮೦-೮೧||

ಈಗ ಈಶ್ವರ ಪ್ರೇರಿತನಾಗಿ ಎಲ್ಲಿಗಾದರೂ ನಾನು ಹೊರಟುಹೋಗಲಿರುವೆನು. ನಾನು ಈ ಕಾಶೀಯನ್ನು ತ್ಯಜಿಸಿದರೆ ನನಗೆ ವ್ಯಸನವಾಗಬಹುದು. ಅನೇಕ ಜನ್ಮಗಳಿಂದಲೂ ಮಾಡಿದ ತಪಸ್ಸಿನಿಂದ ಶಿವರೂಪಿಣಿಯಾದ ಕಾಶಿಯು ಈಗ ಲಬ್ಧವಾಗಿದೆ. ಹೀಗೆಂದು ಯೋಚಿಸಿ ಮತ್ತೆ ವಿಷ್ಣುವು ಜ್ಞಾನವಾಪಿಯ ರಮ್ಯತೀರದಲ್ಲಿ ಅನೇಕಯುಗಪರ್ಯಂತ ಘೋರತರವಾದ ತಪಸ್ಸನ್ನಾಚರಿಸಿದನು. ತಪೋಧನರಾದ ಋಷಿಗಳು ವಿಷ್ಣುವನ್ನು ನೋಡಿ ವೀತಕಲ್ಮಷರಾದ ಅವರು ಈತನು ಒಬ್ಬ ತಪೋನಿಧಿಯೆಂದು ಭಾವಿಸಿದರು. ಹೀಗೆ ತಪಸ್ಸುಮಾಡುತ್ತ ವಿಷ್ಣುವು ಅಲ್ಲಿಯೇ ಬಹಳ ಕಾಲ ಕಳೆದನು. ||೮೨-೮೩-೮೪-೮೫||

ತತಸ್ತ್ಯಕ್ತ್ವಾ ತಪೋನಿಷ್ಠೂರೂರೀಕೃತ್ಯ ಸ್ವಕಂ ವಪುಃ ।
ಪ್ರಜ್ವಾಲ್ಯ ಪಾವಕಾನ್ ಸಮ್ಯಕ್ ಏಕಪಾದೇನ ಸಂಸ್ಥಿತಃ ॥೮೬॥

ಪುನರ್ವೀರೇಶನಿಕಟೇ ತಪಸ್ತಪ್ತುಂ ಸಮಾರಭತ್ ।
ತತೋ ನಿಷ್ಠಂ ತತೋ ಭಾನುಃ ಪ್ರಣಿಪತ್ಯ ಜನಾರ್ದನಂ ॥೮೭॥

ಉವಾಚ ವಚನಂ ಚಾರು ಸನ್ನತಾಂಸಃ ಕೃತಾಂಜಲಿಃ ॥೮೮॥

॥ ಸೂರ್ಯ ಉವಾಚ ॥

ಜನಾರ್ದನ ತಪೋನಿಷ್ಠ ಸರ್ವದಾ ಸರ್ವದೇಹಿಭಿಃ ।
ಕಃ ಪೂಜನೀಯೋ ಯತ್ನೇನ ಕೋ ವಾ ದೇವೋತ್ತಮಃ ಪರಃ ॥೮೯॥

ದೇವಾನಾಂ ಬ್ರಾಹ್ಮಣಾನಾಂ ಚ ಕೋ ವಾ ಪೂಜ್ಯೋ ವಿಶೇಷತಃ ।
ಸರ್ವವೇದೇಷು ವಿಖ್ಯಾತಃ ಸರ್ವದೇವೈಶ್ಚ ಕಃ ಸ್ತುತಃ ॥೯೦॥

ಕಃ ಸ್ಮರ್ತವ್ಯೋ ಮುಕ್ತಿಕಾಮ್ಯೈಃ ಕೋ ವಾ ಜಪ್ಯೋ ಮನುಃ ಸದಾ ।
ಏತತ್ಸರ್ವಂ ವಿಶೇಷೇಣ ವಕ್ತುಮರ್ಹಸಿ ಸಾದರಂ ॥೯೧॥

---

ಬಳಿಕ ವಿಷ್ಣುವು ತಪಸ್ಸನ್ನು ತ್ಯಜಿಸಿ, ತನ್ನ ಮೊದಲಿನ ಶರೀರವನ್ನು ಧರಿಸಿ, ಸುತ್ತಲೂ ಅಗ್ನಿಯನ್ನು ಸ್ಥಾಪಿಸಿಕೊಂಡು, ಅವುಗಳ ಮಧ್ಯೇ ಒಂದು ಪಾದದಿಂದ ನಿಂತುಕೊಂಡು ಪಂಚಾಗ್ನಿಮಧ್ಯೆ ವೀರೇಶನ ಹತ್ತಿರ ತಪಸ್ಸಿಗಾರಂಭಿಸಿದನು. ಬಳಿಕ ನಿಯಮದಿಂದಿರುವ ಜನಾರ್ದನನಾದ ವಿಷ್ಣುವನ್ನು ಸೂರ್ಯನು ಕಂಡು ನಮಸ್ಕಾರಮಾಡಿ ಅಂಜಲಿಬದ್ಧನಾಗಿ ಈ ರೀತಿ ಪ್ರಾರ್ಥಿಸಿಕೊಂಡನು. ॥೮೬-೮೭-೮೮॥

ದೇವ ಜನಾರ್ದನನೇ, ನೀನು ತಪೋನಿಷ್ಠನಾಗಿರುವೆ. ಯಾವಾಗಲೂ ಮನುಷ್ಯರು ಯಾರನ್ನು ಪೂಜಿಸಬೇಕು? ಯಾವನು ದೇವತೆಗಳೊಳಗೆ ಶ್ರೇಷ್ಠನೆನಿಸಿದವನು? ದೇವಬ್ರಾಹ್ಮಣರಿಗೆ ವಿಶೇಷವಾಗಿ ಪೂಜ್ಯನಾದವನಾವನು? ದೇವತೆಗಳಲ್ಲಿ ವಿಖ್ಯಾತನು ಯಾರು? ದೇವತೆಗಳಲ್ಲಿ ಸ್ತುತ್ಯನಾದವನಾರು? ಮುಮುಕ್ಷುಗಳು ಯಾವನನ್ನು ಸ್ಮರಿಸಬೇಕು? ಇವೆಲ್ಲವನ್ನೂ ವಿಸ್ತಾರವಾಗಿ ತಿಳಿಸಬೇಕು ಎಂದು ಸೂರ್ಯನು ಕೇಳಿಕೊಂಡನು. ॥೮೯-೯೦-೯೧॥

|| ವಿಷ್ಣುರುವಾಚ ||

ದೇವೋತ್ತಮೋ ಮಹಾದೇವಃ ಪೂಜನೀಯಃ ಪ್ರಯತ್ನತಃ ।
ಸ ಏವ ಸರ್ವದೇವೇಶಃ ಸ ಏವ ಜಗದೀಶ್ವರಃ ||೯೨||

ನ ತಸ್ಮಾದಧಿಕೋ ದೇವಃ ಸ ಏವಾಖಿಲಪುಂಗವಃ ।
ವೇದವೇದಾಂತಸಂವೇದ್ಯಃ ಸ ಏವ ಶ್ರುತಿಸಂಸ್ತುತಃ ||೯೩||

ಸ ಏವ ಸರ್ವಲೋಕಾನಾಂ ಮೋಕ್ಷದೋ ಮುಕ್ತಿನಾಯಕಃ ।
ಸ ಏವ ಸರ್ವಭಾವೇನ ಪೂಜನೀಯೋ ದ್ವಿಜಾಮರೈಃ ||೯೪||

ಜಗದುತ್ಪದ್ಯತೇ ಯಸ್ಮಾತ್ತಸ್ಮಿನ್ನೇವ ಪ್ರಲೀಯತೇ ।
ತಸ್ಯೈಶ್ವರ್ಯಾಣ್ಯನಂತಾನಿ ಸ ಏವ ಪರಮೇಶ್ವರಃ ||೯೫||

ಶಂಕರಾದಧಿಕೋ ದೇವೋ ನಾಸ್ತಿ ನ ಶ್ರೂಯತೇಽಪಿ ಚ ।
ಶಂಕರಃ ಸರ್ವದೇವಾನಾಮಧಿಕಃ ಶಂಕರೋ ಧ್ರುವಂ ||೯೬||

ಪುನಃ ಪುನರ್ವಿಚಾರ್ಯೈವ ವೇದಶಾಸ್ತ್ರಾಣಿ ತತ್ತ್ವತಃ
ಶಿವ ಏವ ಸದಾ ಪೂಜ್ಯೋ ಇತಿ ಪೂರ್ವಂ ವಿನಿಶ್ಚಿತಂ । ||೯೭||

ಸತ್ಯಂ ಸತ್ಯಂ ಪುನಃ ಸತ್ಯಂ ಸತ್ಯಮೇವೋಚ್ಯತೇ ಮಯಾ
ಶಿವ ಏವ ಸದಾ ಸೇವ್ಯೋ ಸೇವ್ಯಸ್ಸೇವ್ಯೋ ಸ ಏವ ಹಿ ||೯೮||

---

ಎಲೈ ಸೂರ್ಯನೇ, ದೇವೋತ್ತಮನಾದ ಮಹಾದೇವನನ್ನು ಪ್ರಯತ್ನದಿಂದಾದರೂ ಪೂಜಿಸಬೇಕು. ಆತನೇ ಸರ್ವದೇವೇಶ್ವರನು. ಆತನೇ ಜಗದೀಶ್ವರನು. ಆತನಿಗಿಂತಲೂ ಶ್ರೇಷ್ಠನಾದವನಿಲ್ಲ. ಶಂಭುವೇ ಎಲ್ಲರಿಗಿಂತಲೂ ಉತ್ತಮನು. ಎಲ್ಲಾ ಲೋಕಗಳೊಳಗೂ ಮುಕ್ತಿದಾಯಕನಾಗಿರುವವನು ಅವನೇ. ದೇವತೆಗಳು, ಬ್ರಾಹ್ಮಣರು ಸರ್ವಭಾವದಿಂದಲೂ ಮಹಾದೇವನನ್ನು ಪೂಜಿಸಬೇಕು. ಯಾವನಿಂದ ಈ ಪ್ರಪಂಚವು ಹುಟ್ಟುತ್ತದೆಯೋ ಯಾವನಲ್ಲಿಯೇ ಲಯವನ್ನು ಹೊಂದುವುದೋ ಅಂತಹ ಪರಮೇಶ್ವರನೇ ಶ್ರೇಷ್ಠನಾದವನು. ||೯೨-೯೩-೯೪-೯೫||

ಎಲೈ ರವಿಯೇ, ಶಂಕರನಿಗಿಂತಲೂ ಹೆಚ್ಚಿನವನು ಈ ಮೂರು ಲೋಕದಲ್ಲಿ ಎಲ್ಲಿಯೂ ಕಾಣುವುದಿಲ್ಲ. ಕೇಳಿಯೂ ಇಲ್ಲ. ಎಲ್ಲಾ ದೇವರೊಳಗೂ ಶಂಕರನೇ ಅಧಿಕನಾದವನು. ಸಮಸ್ತ ಶಾಸ್ತ್ರಗಳನ್ನೂ ಪುನಃ ಪುನಃ ವಿಚಾರಿಸಿದರೂ ಶ್ರೀಸದಾ

ಶಿವ ಏವ ಸದಾ ಪೂಜ್ಯಃ ಸ್ಮರ್ತವ್ಯಃ ಶಿವ ಏವ ಹಿ ।
ಶಿವ ಏವ ಸದಾ ಧ್ಯೇಯೋ ಮುಕ್ತಿರೂಪಫಲೇಪ್ಸುಭಿಃ ॥೯೯॥

ಶಿವಾನ್ಯೋ ಮುಕ್ತಿದೋ ನಾಸ್ತಿ ಶಿವ ಏವ ತತೋ ಜನೈಃ ।
ಸಂಪ್ರಾಪ್ಯಃ ಸರ್ವಭಾವೇನ ಯತ್ನೈಶ್ಚ ವಿವಿಧೈರಪಿ ॥೧೦೦॥

ವೇದೈರಪಿ ಶಿವೋ ಧ್ಯೇಯೋ ನ ಜ್ಞಾತಸ್ತತ್ವತೋಽನಘೈಃ ।
ಸ ಏವ ಸರ್ವದಾ ಪೂಜ್ಯೋ ಧ್ಯೇಯಃ ಸ್ಮರ್ತವ್ಯ ಏವ ಚ ॥೧೦೧॥

ಶಿವೋ ಧನಂ ಶಿವೋ ಬಂಧುಃ ಶಿವಸ್ತ್ರಾತಾ ಶಿವಃ ಪ್ರಭುಃ ।
ಶಿವಃ ಪಿತಾ ಶಿವೋ ದಾತಾ ಶಿವಾನ್ನಾಸ್ತ್ಯಧಿಕಃ ಪರಃ ॥೧೦೨॥

ಶಿವಲಿಂಗಂ ಮಯಾ ಪೂರ್ವಮರ್ಚಿತಂ ಬಹುಸಾಧನೈಃ ।
ಇದಾನೀಮಪಿ ಪಶ್ಯೈತಲ್ಲಿಂಗಂ ಸಂಪೂಜ್ಯತೇ ಮಯಾ ॥೧೦೩॥

ಲಿಂಗಾರ್ಚನಜಪುಣ್ಯೇನ ಕಾಶೀ ಸಂಪ್ರಾಪ್ಯತೇ ಮಯಾ ।
ನೋಚೇಚ್ಛಿವಸ್ವರೂಪೇಯಂ ಕಾಶೀ ಸಂಪ್ರಾಪ್ಯತೇ ಕಥಂ ॥೧೦೪॥

ಶಿವಲಿಂಗಂ ಬಿಲ್ವಪತ್ರೈಃ ಕೋಮಲೈರಮಲೈಃ ಶುಭೈಃ ।
ನಿಯತಂ ಪೂಜಯೇದ್ಯಸ್ತು ಸ ಧನ್ಯಃ ಪುರುಷೋತ್ತಮಃ ॥೧೦೫॥

---

ಶಿವನೇ ಶ್ರೇಷ್ಠನೆಂದು ನಿಶ್ಚಿತವಾಗುವುದು. ನಿಜವಾಗಿಯೂ ನಾನು ಹೇಳುವುದಾದರೆ ಶಿವನೇ ಪೂಜ್ಯನು. ಶಿವನೇ ಸ್ಮರಣೀಯನು. ಇದು ನಿಜ. ಮುಕ್ತಿಪ್ರದನೂ ಧ್ಯೇಯನೂ ಶಿವನೇ ಆಗಿರುವನು. ಶಿವನ ಹೊರತು ಮುಕ್ತಿಯನ್ನು ಕೊಡುವವ ನಿಲ್ಲ. ಸರ್ವಭಾವದಿಂದಲೂ ಅನೇಕ ಯತ್ನಗಳಿಂದಲೂ ಶಿವನೇ ಸರ್ವರಿಗೂ ಶರಣ ನಾಗಿರುವವನು. ವೇದಗಳಲ್ಲಿಯೂ ಶಿವನೇ ಧ್ಯೇಯನೂ ಸ್ಮರ್ತವ್ಯನೂ ಆಗಿರುವ ನೆಂದು ಹೇಳಿದೆ. ||೯೬-೯೭-೯೮-೯೯-೧೦೦-೧೦೧||

ಶಿವನೇ ಧನ, ಶಿವನೇ ಬಂಧುವು, ರಕ್ಷಕನು. ಅಧೀಶನೂ, ತಂದೆಯೂ, ಕೊಡುವವನೂ ಅವನೇ ಆಗಿರುತ್ತಾನೆ. ನಾನು ಹಿಂದೆ ಅನೇಕ ಸಾಮಗ್ರಿಗಳಿಂದ ಶಿವನನ್ನು ಅರ್ಚಿಸಿರುತ್ತೇನೆ. ಈಗಲೂ ಕೂಡ ನಾನು ಶಿವಲಿಂಗವನ್ನು ಅರ್ಚಿಸಲು ಯತ್ನಿಸುತ್ತಿದ್ದೇನೆ. ನಾನು ಶಿವನನ್ನು ಅರ್ಚಿಸದಿದ್ದರೆ ಕಾಶೀಪ್ರಾಪ್ತಿಯಾದರೂ

ಅಭಿಷಿಚ್ಯ ಮಹಾದೇವಂ ತ್ರಿಧಾ ತತ್ಸ್ನಪನೋದಕಂ ।
ಪಿಬೇತ್ಸರ್ವಾರ್ಥಸಿದ್ಧ್ಯರ್ಥಂ ಸರ್ವಂ ಪಾಪೌಘಶಾಂತಯೇ ॥೧೦೬

ಲಿಂಗಪೂಜೈವ ಕರ್ತವ್ಯಾ ಮುಮುಕ್ಷುಭಿರಹರ್ನಿಶಂ ।
ಬಹವೋ ಮೋಕ್ಷಮಾಪನ್ನಾಃ ಶಿವಲಿಂಗಸ್ಯ ಪೂಜಯಾ ॥೧೦೭॥

ದೇವೈರ್ನರೈಶ್ಚ ಗಂಧರ್ವೈರ್ಮುನಿಭಿಶ್ಚ ಮುಮುಕ್ಷುಭಿಃ ।
ಅಪ್ರಮಾದೇನ ಕರ್ತವ್ಯಾ ಲಿಂಗಪೂಜೈವ ಸರ್ವಥಾ ॥೧೦೮॥

ಊರ್ಧ್ವಾಯ ನಮ ಇತ್ಯಾದಿಮಂತ್ರೈರ್ಲಿಂಗಸ್ಯ ಪೂಜನಂ ।
ಕರ್ತವ್ಯಮನಿಶಂ ವಿಪ್ರೈರ್ದೇವೈಶ್ಚ ಶಿವತತ್ಪರೈಃ ॥೧೦೯॥

ಶಿವಸ್ಯ ಸನ್ನಿಧಿಂ ಲಿಂಗೇ ಸರ್ವಲೋಕೇಷು ಸರ್ವದಾ ।
ಶಿಷ್ಮೃತ್ಯತೋ ಲಿಂಗಪೂಜಾ ಕರ್ತವ್ಯಾ ಸತತಂ ಬುಧೈಃ ॥೧೧೦॥

ವೇದೋಕ್ತಲಿಂಗಪೂಜೈವ ಕರ್ತವ್ಯಾ ಸತತಂ ದ್ವಿಜೈಃ ।
ವೇದಮಾರ್ಗರತೈಃ ಶುದ್ಧೈಃ ಮೋಕ್ಷರೂಪಫಲಾರ್ಥಿಭಿಃ ॥೧೧೧॥

---

ನನಗೆ ಹೇಗಾದೀತು. ಪ್ರತಿದಿನವೂ ಕೋಮಲವಾದ ಬಿಲ್ವಪತ್ರೆಗಳಿಂದ ಶಿವಲಿಂಗವನ್ನು ಅರ್ಚಿಸಿದವನೇ ಧನ್ಯನಾಗಿರುವನು. ಆತನೇ ಪುರುಷೋತ್ತಮನು. ||೧೦೨-೧೦೩-೧೦೪-೧೦೫||

ಶ್ರೀಮಹಾದೇವನಿಗೆ ಅಭಿಷೇಕಮಾಡಿ ಬಳಿಕ ಸಮಸ್ತ ಇಷ್ಟಾರ್ಥಸಿದ್ಧಿಗಾಗಿಯೂ, ಪಾಪನಾಶಕ್ಕಾಗಿಯೂ ಆ ತೀರ್ಥವನ್ನು ಪ್ರಾಶನಮಾಡಬೇಕು. ಮುಮುಕ್ಷುಗಳು ಶಿವಲಿಂಗಪೂಜೆಯನ್ನು ಮಾಡಬೇಕು. ಅನೇಕರು ಶಿವಲಿಂಗಪೂಜೆಮಾಡಿ ಮೋಕ್ಷವನ್ನು ಹೊಂದಿರುವರು. ದೇವತೆಗಳು, ಮನುಷ್ಯರು, ಗಂಧರ್ವರು, ಮುಮುಕ್ಷುಗಳು ಇವರು ಶಿವಲಿಂಗಪೂಜೆಯನ್ನು ತಪ್ಪದೆ ಮಾಡುತ್ತಾರೆ. ಖಂಡಿತವಾಗಿಯೂ ಎಚ್ಚರಿಕೆಯಿಂದ ಲಿಂಗಪೂಜೆಯನ್ನು ಮಾಡಲೇಬೇಕು. ಶಿವತತ್ಪರರಾದವರೂ, ದೇವತೆಗಳೂ, ಊರ್ಧ್ವಾಯನಮಃ ಇತ್ಯಾದಿ ಮಂತ್ರಗಳಿಂದ ಶಿವಪೂಜೆಯನ್ನು ಆಚರಿಸುವರು. ತಿಳಿವಳಿಕೆಯುಳ್ಳ ಶೈವರು ಯಾವಾಗಲೂ ಶಿವಪೂಜೆಯನ್ನು ತಪ್ಪದೆ ಮಾಡುವರು. ಬ್ರಾಹ್ಮಣರು

ಶಿವಲಿಂಗಮನಭ್ಯರ್ಚ್ಯ ಯೋ ಭುಂಕ್ತೇ ಮೋಹಸಂಗತಃ ।
ಸ ಯಾತಿ ನರಕಂ ಘೋರಂ ಯಾವದಾಚಂದ್ರತಾರಕಂ ॥೧೧೨॥

ಆರ್ಯಾವರ್ತೇ ಪುರಾ ಕಶ್ಚಿತ್ ಬ್ರಾಹ್ಮಣೋ ವೇದವಿತ್ತಮಃ ।
ಸರ್ವಸೌಭಾಗ್ಯಸಂಪನ್ನಃ ಸರ್ವಶಾಸ್ತ್ರವಿಶಾರದಃ ॥೧೧೩॥

ಕಲತ್ರಪುತ್ರಪೌತ್ರಾದಿಸೌಖ್ಯವೃದ್ಧಿಕರಃ ಸದಾ ।
ನಿತ್ಯಂ ಶಿವಾರ್ಚನರತಃ ಕೃತಜ್ಞಃ ಸರ್ವಸಂಮತಃ ॥೧೧೪॥

ಕದಾಚಿತ್ ಕ್ಷುಧಿತಃ ಶ್ರಾಂತೋ ವಿಸ್ಮೃತ್ಯ ಶಿವಪೂಜನಂ ।
ಚಕಾರ ಭೋಜನಂ ಮತ್ತಃ ಪ್ರದೋಷೇ ಬಲವದ್ಬಲೀ ॥೧೧೫॥

ತತಃ ಸದ್ಯೈವ ಯೋಗೇನ ಪಂಚತ್ವಮುಗಮತ್ ದ್ವಿಜಃ ।
ತತೋ ಯಮಭಟೈರ್ನೀತಃ ಶೂಲೈಃ ಸಂತಾಡಿತೋ ಭೃಶಂ ॥೧೧೬॥

ಯಮಾಗ್ರೇ ಸನ್ನಿವೇಶ್ಯೈನಂ ಪುನಃ ಸಂತಾಡಯನ್ಮುದಾ ।
ತಾನುವಾಚ ಯಮಃ ಪ್ರೀತ್ಯಾ ತದಾ ಕೋಽಯಮಿತಿ ಸ್ಫುಟಂ ॥೧೧೭॥

---

ವೇದೋಕ್ತ ಮಂತ್ರಗಳಿಂದ ಪೂಜಿಸಬೇಕು. ಅದರಿಂದ ಅವರಿಗೆ ಮೋಕ್ಷರೂಪ ಫಲವು ಸಿದ್ಧಿಸುವುದು. ॥೧೦೬-೧೦೭-೧೦೮-೧೦೯-೧೧೦-೧೧೧॥

ಶಿವಲಿಂಗವನ್ನು ಪೂಜಿಸದೇ ಯಾವನು ಊಟಮಾಡುವನೋ ಅವನು ಚಂದ್ರನಕ್ಷತ್ರಗಳಿರುವವರೆಗೂ ಘೋರನರಕವನ್ನು ಹೊಂದುವನು. ॥೧೧೨॥

ಇದಕ್ಕೆ ನಿದರ್ಶನವಾಗಿ ಹಿಂದೆ ಆರ್ಯಾವರ್ತದಲ್ಲಿ ಒಬ್ಬ ಬ್ರಾಹ್ಮಣನಿದ್ದನು. ಆತನು ವೇದಪಾರಂಗತನು. ಸಮಸ್ತ ಸೌಭಾಗ್ಯಗಳನ್ನೂ ಪಡೆದವನಾಗಿದ್ದನು. ಎಲ್ಲಾ ಶಾಸ್ತ್ರಗಳಲ್ಲಿಯೂ ಆತನು ಪಂಡಿತನಾಗಿದ್ದನು. ಮಕ್ಕಳು, ಮೊಮ್ಮಕ್ಕಳು ಮೊದಲಾಗಿ ಅನೇಕ ಸಂಪತ್ತೂ ಆತನಿಗಿತ್ತು. ಅವನು ಪ್ರತಿನಿತ್ಯವೂ ಭಕ್ತಿಯಿಂದ ಶಿವಲಿಂಗವನ್ನು ಅರ್ಚಿಸುತ್ತಲಿದ್ದನು. ಕೃತಜ್ಞನೂ ಸರ್ವ ಸಂಮತನೂ ಆದ ಆತನು ಒಂದು ಸಾರಿ ಹಸಿವಿನಿಂದ ನೊಂದು ಮೈಮರೆತು ಶಿವತೀರ್ಥವನ್ನು ಪ್ರಾಶನಮಾಡದೇ ಶಿವಪೂಜೆಯನ್ನೂ ಮರೆತು ಭೋಜನಮಾಡಿಬಿಟ್ಟನು. ಆತನು ಅದೃಷ್ಟವಶದಿಂದ ಮೃತನಾಗಲು ಯಮಭಟರು ಆತನನ್ನು ಚನ್ನಾಗಿ ಹೊಡೆದು

॥ ಯಮದೂತಾ ಊಚುಃ ॥

ಯಮಾಯಂ ಬ್ರಾಹ್ಮಣಃ ಪೂರ್ವಂ ವಿಹಾಯ ಶಿವಪೂಜನಂ ।
ಉಪಾಸ್ಯೈಕದಿನಂ ಮತ್ತಃ ಶಂಕರಸ್ಮರಣಂ ವಿನಾ ॥೧೧೮॥

ಅನೇನ ಭುಕ್ತಂ ಮತ್ತೇನ ಶ್ರಾಂತೇನ ಕ್ಷುಧಿತೇನ ಚ ।
ಶಿವಾಯಾನರ್ಪಿತಂ ದಿವ್ಯಮನ್ನಂ ಸ್ವಪ್ರಿಯಮಾದರಾತ್ ॥೧೧೯॥

ಕಿಯತ್ಪರ್ಯಂತಮೇವಾಸ್ಯ ನರಕೇ ವಸತಿರ್ಮತಾ ।
ಕೀದೃಶೇ ನರಕೇ ಯೋಜ್ಯೋ ವದ ಸರ್ವಂ ವಿಶೇಷತಃ ॥೧೨೦॥

॥ ಯಮ ಉವಾಚ ॥

ಶಿವಲಿಂಗಾರ್ಚನಂ ನಿತ್ಯಂ ತ್ಯಕ್ತಂ ನಿತ್ಯಮನೇನ ಕಿಂ ।
ಕದಾಚಿದುತ ವಾ ತ್ಯಕ್ತಂ ಮಹ್ಯಂ ತತ್ ಜ್ಞಾಪಯಂತು ವಃ ॥೧೨೧॥

---

ಪೀಡಿಸುತ್ತ ಯಮನ ಬಳಿಗೆ ಒಯ್ದರು. ಅವನನ್ನು ಅಲ್ಲಿಯೂ ನಿಲ್ಲಿಸಿ ಚನ್ನಾಗಿ ಹೊಡೆಯಲಾರಂಭಿಸಿದರು. ಆಗ ಈತನು ಯಾರೆಂದು ಯಮನು ಕೇಳಿದನು. ॥೧೧೩-೧೧೪-೧೧೫-೧೧೬-೧೧೭॥

"ಯಮರಾಜನೇ, ಬ್ರಾಹ್ಮಣನಾದ ಇವನು ಹಿಂದೆ ವಿಹಿತಕಾಲದಲ್ಲಿ ಶಿವಪೂಜೆಯನ್ನು ಪ್ರಮಾದದಿಂದ ಒಂದು ದಿನ ಬಿಟ್ಟುಬಿಟ್ಟನು. ಬಳಿಕ ಹಸಿವಿನಿಂದ ಬಳಲಿದ ಈತನು ಶಿವನಿಗೆ ನೈವೇದ್ಯಮಾಡದೇ ದಿವ್ಯಾನ್ನವನ್ನು ತಾನು ಭುಂಜಿಸಿದನು. ಆ ಅಪರಾಧಕ್ಕಾಗಿ ಈಗ ಈತನು ಎಷ್ಟುದಿನಗಳವರೆಗೆ ನರಕದಲ್ಲಿರಲು ಯೋಗ್ಯನು? ಯಾವ ನರಕದಲ್ಲಿ ಈತನನ್ನು ಸೇರಿಸಬೇಕು? ಎಂಬುದನ್ನು ನಮಗೆ ಆಜ್ಞಾಪಿಸು." ಎಂದು ಯಮದೂತರು ಕೇಳಿಕೊಂಡರು. ಆಗ ಯಮನು ತನ್ನ ದೂತರನ್ನು ಕುರಿತು, ॥೧೧೮-೧೧೯-೧೨೦॥

'ದೂತರೇ, ಶಿವಲಿಂಗಾರ್ಚನೆಯನ್ನು ಈತನು ನಿತ್ಯವೂ ಬಿಟ್ಟಿರುತ್ತಾನೆಯೇ? ಅಥವಾ ಒಂದು ದಿನ ಮಾತ್ರ ಶಿವಲಿಂಗಾರ್ಚನೆಯನ್ನು ಬಿಟ್ಟನೋ ಎಂಬುದನ್ನು ನೀವು ನನಗೆ ತಿಳಿಯಪಡಿಸಿರಿ' ಎಂದು ನುಡಿದನು. ॥೧೨೧॥

॥ ಯಮದೂತಾ ಊಚುಃ ॥

ಶಿವಲಿಂಗಾರ್ಚನಂ ನಿತ್ಯಂ ಕೃತ್ವಾನೇನ ಸ್ಥಿತಂ ಪುರಾ ।
ಕದಾಚಿದೇಕದಾ ತ್ಯಕ್ತಂ ಕ್ಷುಧಿತೇನ ಭೃಶಂ ಯಮ ॥೧೨೨॥

ಇತಿ ತದ್ವಚನಂ ಶ್ರುತ್ವಾ ವಿಚಾರ್ಯ ಬಹುಧಾ ಯಮಃ ।
ಧರ್ಮಶಾಸ್ತ್ರಾವಿರೋಧೇನ ವಚಃ ಪ್ರಾಹ ವಿಚಕ್ಷಣಃ ॥೧೨೩॥

ಪಂಚವತ್ಸರಪರ್ಯಂತಂ ತಪ್ತಶೈಲೇ ನಿರಂತರಂ ।
ತಿಷ್ಠತ್ವಯಂ ತತೋ ಭೂಮೌ ಸ್ವಯಮೇವ ಭವಿಷ್ಯತಿ ॥೧೨೪॥

ಇತಿ ಪೂರ್ವಂ ಯಮೇನೋಕ್ತಂ ತದಾ ತದಭವತ್ತದಾ ।
ತತೋ ಯತ್ನೇನ ಕರ್ತವ್ಯಾ ಲಿಂಗಪೂಜಾ ನಿರಂತರಂ ॥೧೨೫॥

ಸ್ನಾನಂ ಸಂಧ್ಯಾ ಲಿಂಗಪೂಜಾ ಹೋಮಂ ಚ ಪಿತೃತರ್ಪಣಂ ।
ಸ್ವಾಧ್ಯಾಯಶ್ಚೇತಿ ಷಡ್ವಿಪ್ರೈಃ ಕರ್ತವ್ಯಾ ನಿಯಮೇನ ಹಿ ॥೧೨೬॥

ನಿತ್ಯತ್ವೇನೈವ ವಿಧಿನಾ ಪ್ರಾಪ್ತಂ ಮಲ್ಲಿಂಗಪೂಜನಂ ।
ತದಾ ಯದ್ಯಪಿ ನ ತ್ಯಾಜ್ಯಂ ನ ತ್ಯಾಜ್ಯಂ ಸರ್ವಥಾ ದ್ವಿಜೈಃ ॥೧೨೭॥

---

ಆಗ ದೂತರು, "ಈತನು ಹಿಂದೆ ನಿತ್ಯವೂ ಶಿವಲಿಂಗಾರ್ಚನೆಯನ್ನು ಮಾಡುತ್ತಿದ್ದನು. ಒಂದು ಸಲ ಮಾತ್ರ ಈತನು ಹಸಿವಿನಿಂದ ಕ್ಷುಬ್ಧನಾಗಿ ಶಿವಪೂಜೆಯನ್ನು ಮರೆತುಬಿಟ್ಟನು" ಎಂದರು. ಹೀಗೆ ಹೇಳಿದ ದೂತರ ಮಾತನ್ನು ಕೇಳಿ ಯಮನು ಬಹಳವಾಗಿ ಯೋಚಿಸಿ ಧರ್ಮಶಾಸ್ತ್ರಕ್ಕೆ ವಿರೋಧವಿಲ್ಲದಂತೆ ಈತನು ಐದುವರ್ಷಪರ್ಯಂತ ಕಾದ ಪರ್ವತದಲ್ಲಿ ಬಿದ್ದಿರಲಿ. ಬಳಿಕ ಭೂಮಿಯಲ್ಲಿ ಜನ್ಮವೆತ್ತುವನು ಎಂದು ಆಜ್ಞೆಯಿತ್ತನು. ಹೀಗೆ ಯಮನು ಅಪ್ಪಣೆ ಮಾಡಿರುವುದನ್ನು ನೋಡಿದರೆ ಎಲ್ಲರೂ ಶಿವಲಿಂಗಪೂಜೆಯನ್ನು ತಪ್ಪದೆ ಮಾಡಬೇಕೆಂದು ತೋರಿಬರುವುದು. ॥೧೨೨-೧೨೩-೧೨೪-೧೨೫॥

ಬ್ರಾಹ್ಮಣರಾದವರು ಸ್ನಾನ, ಸಂಧ್ಯಾವಂದನೆ, ಶಿವಲಿಂಗಪೂಜೆ, ಹೋಮ, ಪಿತೃತರ್ಪಣ, ಅಧ್ಯಯನ ಈ ಆರು ನಿಯಮಗಳನ್ನು ತಪ್ಪದೆ ನಡೆಸಬೇಕು. ಈ ನನ್ನ ಶಿವಲಿಂಗಪೂಜೆಯು ಅವರಿಗೆ ನಿತ್ಯಕರ್ಮವಾಗಿ ವಿಧಿಸಲ್ಪಟ್ಟಿದೆ. ಆದುದರಿಂದ

ಲಿಂಗಾರ್ಚನವಿಹೀನಸ್ಯ ಸಮಸ್ತಾಃ ನಿಷ್ಫಲಾಃ ಕ್ರಿಯಾಃ ।
ತತಃ ಸರ್ವಾರ್ಥಸಿದ್ಧ್ಯರ್ಥಂ ಲಿಂಗಪೂಜಾ ವಿಧೀಯತೇ ॥೧೨೮॥

ನಿತ್ಯಕರ್ಮಸಮೃದ್ಧ್ಯರ್ಥೇ ನಿತ್ಯತ್ವೇನ ಶ್ರುತಂ ಶ್ರುತೌ ।
ಶಿವಲಿಂಗಾರ್ಚನಂ ಕಾರ್ಯಂ ಯತ್ನೇನ ಪ್ರತ್ಯಹಂ ದ್ವಿಜೈಃ ॥೧೨೯॥

ವಿಭೂತಿಧಾರಣಂ ನಿತ್ಯಂ ನಿತ್ಯಂ ರುದ್ರಾಕ್ಷಧಾರಣಂ ।
ಶಿವಲಿಂಗಾರ್ಚನಂ ನಿತ್ಯಂ ನಿತ್ಯಮಧ್ಯಯನಂ ತಥಾ ॥೧೩೦॥

ಶಿವಲಿಂಗಾರ್ಚನಂ ನಿತ್ಯಂ ಕುರ್ವನ್ನಪಿ ಕದಾಚನ ।
ಯದಿ ತ್ಯಕ್ಷ್ಯತಿ ಮೋಹೇನ ಪ್ರತ್ಯವೈತಿ ನ ಸಂಶಯಃ ॥೧೩೧॥

ಸರ್ವೇಪ್ಸಿತಾರ್ಥದಂ ನಿತ್ಯಂ ಸುಲಭಂ ಲಿಂಗಪೂಜನಂ ।
ತ್ಯಕ್ತ್ವಾ ವೃಥಾ ಜನಾಃ ಸರ್ವೇ ನರಕೇ ನಿಪತಂತ್ಯಹೋ ॥೧೩೨॥

ಲಿಂಗಪೂಜನಮಾತ್ರೇಣ ಬಹವೋ ಮುನಯಃ ಪುರಾ ।
ಯಯುಃ ಕೈಲಾಸನಿಲಯಮಯತ್ನೇನೈವ ದುರ್ಲಭಂ ॥೧೩೩॥

---

ಬ್ರಾಹ್ಮಣರು ಸರ್ವಥಾ ಅದನ್ನು ತ್ಯಜಿಸಬಾರದು. ಶಿವಲಿಂಗವನ್ನು ಪೂಜಿಸದಿರುವವನಿಗೆ ಕರ್ಮಗಳೆಲ್ಲಾ ಫಲಗಳನ್ನು ಕೊಡಲಾರವು. ಸರ್ವಸಮೃದ್ಧಿಯನ್ನು ಅಪೇಕ್ಷಿಸುವವರು ಶಿವಲಿಂಗಪೂಜೆಮಾಡಬೇಕು. ವೇದದಲ್ಲಿ ಶಿವಲಿಂಗಪೂಜೆಯು ಸಮೃದ್ಧಿದಾಯಕವೆಂದು ಹೇಳಲ್ಪಟ್ಟಿದೆ. ಬ್ರಾಹ್ಮಣರು ಪ್ರತಿನಿತ್ಯವೂ ಲಿಂಗಾರ್ಚನೆಯನ್ನು ಮಾಡಲೇಬೇಕು. ಮತ್ತು ರುದ್ರಾಕ್ಷಿಮಾಲೆಗಳನ್ನು ಧರಿಸಬೇಕು. ಪ್ರತಿನಿತ್ಯವೂ, ಶಿವಲಿಂಗಾರ್ಚನೆ, ಅಧ್ಯಯನ ಇವುಗಳನ್ನು ಆಚರಿಸಬೇಕು. ಅಜ್ಞಾನವಶದಿಂದ ಎಲ್ಲಿಯಾದರೂ ಶಿವಲಿಂಗಾರ್ಚನೆಯನ್ನು ತ್ಯಜಿಸಿದರೆ ಪಾಪವನ್ನು ಹೊಂದುವನು. ಸಮಸ್ತ ಇಷ್ಟಾರ್ಥಗಳನ್ನೂ ಕೊಡುವ ಶಿವಲಿಂಗಪೂಜೆಯನ್ನು ಜನರು ವೃಥಾ ತ್ಯಜಿಸಿ ಘೋರನರಕದಲ್ಲಿ ಬೀಳುವರು. ಅಯ್ಯೋ! ಆಶ್ಚರ್ಯ.
||೧೨೬-೧೨೭-೧೨೮-೧೨೯-೧೩೦-೧೩೧-೧೩೨||

ಹಿಂದೆ ಅನೇಕ ಮುನಿಗಳು ಶಿವಲಿಂಗಪೂಜೆಯೊಂದರಿಂದಲೇ ಕೈಲಾಸಸ್ಥಾನವನ್ನು ಹೊಂದಿದರು. ಶಿವಲಿಂಗಪೂಜೆಯಲ್ಲಿ ನಿರತರಾದ ಈಶ್ವರಭಕ್ತರನ್ನು ಯಮಭಟರು ನೋಡಿ ದೂರದಿಂದಲೇ ಯಮಶಾಸನವನ್ನು ಹಂಬಲಿಸಿಕೊಳ್ಳುತ್ತ ಓಡಿ

ಲಿಂಗಪೂಜಾಪರಂ ಶೈವಂ ನಿರೀಕ್ಷ್ಯ ಯಮಕಿಂಕರಾಃ ।
ದೂರಾದೇವ ಪಲಾಯಂತೇ ಸ್ಮರಂತೋ ಯಮಶಾಸನಂ ॥೧೩೪॥

ನ ಲಿಂಗಪೂಜಾದನ್ಯನ್ನಿಃಶ್ರೇಯಸಕರಂ ಪರಂ ।
ಸತ್ಯಮೇತತ್ಸತ್ಯಮೇತತ್ ಸತ್ಯಮೇತನ್ನ ಸಂಶಯಃ ॥೧೩೫॥

ಇತಿ ತದ್ವಚನಂ ಶ್ರುತ್ವಾ ಭಾನುಃ ಸಂತುಷ್ಟಮಾನಸಃ ।
ಲಿಂಗಾರ್ಚನಪರೋ ಭೂತ್ವಾ ಕಾಶ್ಯಾಂ ನ್ಯವಸದಾದರಾತ್ ॥೧೩೬॥

ವೀರೇಶನಿಕಟೇ ವಿಷ್ಣುರೇಕಪಾದೇನ ಸಾದರಂ ।
ಚಕಾರೋಗ್ರತಪಸ್ತೀವ್ರಂ ಜ್ವಲತ್ಪಂಚಾಗ್ನಿಮಧ್ಯಗಃ ॥೧೩೭॥

ಅಶೀತಿಯುಗಪರ್ಯಂತಂ ತಪಃ ಕೃತ್ವಾ ಪುನರ್ಮುದಾ ।
ಇದಾನೀಂ ಶಿವಗಂಗಾಯಾಂ ಕರೋತ್ಯುಗ್ರತಪೋಽಂಬಿಕೇ ॥೧೩೮॥

ಬ್ರಹ್ಮಾದಯೋಽಪಿ ತೇ ದೇವಾ ತೇನೈವ ಸಹ ಸಾದರಂ ।
ತಥೈವೋಗ್ರಂ ತಪಃ ಕೃತ್ವಾ ತಿಷ್ಠಂತ್ಯವಿಕಲಂ ಸದಾ ॥೧೩೯॥

---

ಹೋಗುವರು. ಶಿವಲಿಂಗಪೂಜೆಗಿಂತಲೂ ಶ್ರೇಯಃಪ್ರದವಾದುದು ಇನ್ನೊಂದಿಲ್ಲ. ಈ ಮಾತು ಖಂಡಿತವಾಗಿಯೂ ನಿಜವಾಗಿರುತ್ತದೆ ಎಂದು ಹೇಳಿದ ವಿಷ್ಣುವಿನ ಮಾತನ್ನು ಕೇಳಿ ಸೂರ್ಯನು ಸಂತೋಷಗೊಂಡನು. ಮತ್ತು ಶಿವಲಿಂಗಾರ್ಚನಾಸಕ್ತನಾಗಿ ಕಾಶಿಯಲ್ಲಿ ವಾಸಿಸಿದನು. ಎಲೌ ಪಾರ್ವತಿಯೇ, ವಿಷ್ಣುವು ಬಳಿಕ ವೀರೇಶನ ಹತ್ತಿರ ಒಂದು ಪಾದದಲ್ಲಿ ನಿಂತುಕೊಂಡು ಉಗ್ರತಪಸ್ಸನ್ನು ಆಚರಿಸಿದನು. ಮತ್ತು ಚನ್ನಾಗಿ ಉರಿಯುವ ಪಂಚಾಗ್ನಿಗಳ ನಡುವೆ ನಿಂತು ತಪಿಸಿದನು. ಎಂಬತ್ತು ಯುಗಗಳವರೆಗೆ ತಪಸ್ಸುಮಾಡಿ ಬಳಿಕ ವಿಷ್ಣುವು ಶಿವಗಂಗೆಯ ಬಳಿಯಲ್ಲಿ ತಪಸ್ಸು ಮಾಡುತ್ತಿದ್ದಾನೆ. ||೧೩೩-೧೩೪-೧೩೫-೧೩೬-೧೩೭-೧೩೮||

ಬ್ರಹ್ಮನೇ ಮೊದಲಾದ ದೇವತೆಗಳೂ ಆ ವಿಷ್ಣುವಿನ ಜೊತೆಯಲ್ಲಿಯೇ ಇದ್ದು ಉಗ್ರತಪಸ್ಸನ್ನು ಆಚರಿಸುತ್ತ ಯಾವಾಗಲೂ ಇರುವರು. ಆ ಎಲ್ಲಾ ದೇವತೆಗಳೂ ಆ ಜ್ಞಾನವಾಪಿಯ ಜಲವನ್ನು ಪಾನಮಾಡುತ್ತಾ ಯಾವಾಗಲೂ ಜ್ಞಾನರೂಪವಾದ ಮತ್ತು ಪರಿಶುದ್ಧವಾದ ಆ ನೀರನ್ನು ಸೇವಿಸುತ್ತ ಹೃದಯಕಮಲ

ತಜ್ಞಾನವಾಪೀಜಲಮಾದರೇಣ ದೇವಾಸ್ಸಮುಸ್ನಾಃ ಸತತಂ ವರೇಣ್ಯಂ ।
ಜ್ಞಾನೈಕರೂಪಂ ವಿಮಲಂ ಪಿಬಂತಿ ಹೃಲ್ಲಿಂಗವೃದ್ಧ್ಯೈ ಶಿವಲಿಂಗನಿಷ್ಠಾಃ ॥೧೪೦॥

ಇತಿ ಶ್ರೀ ಶಿವರಹಸ್ಯೇ ಸಪ್ತಮಾಂಶೇ ಷಷ್ಠೋಽಧ್ಯಾಯಃ

---

ದಲ್ಲಿ ಪರಶಿವನನ್ನು(ನನ್ನನ್ನು)ಸದಾ ಧ್ಯಾನಿಸುತ್ತ ಇರುವರು. ಎಂದು ಮಹಾದೇವನು ಪಾರ್ವತಿಗೆ ಕಾಶೀಪ್ರಾಶಸ್ತ್ಯವನ್ನು ವಿವರಿಸಿದನು. ॥೧೩೯-೧೪೦॥

ಇಲ್ಲಿಗೆ ಶ್ರೀಶಿವರಹಸ್ಯದಲ್ಲಿ ಏಳನೆಯ ಅಂಶದಲ್ಲಿ
ಆರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಉಗ್ರಾಖ್ಯೇ

### ಸಪ್ತಮಾಂಶೇ ಪೂರ್ವಾರ್ಧೇ

### ಸಪ್ತಮೋಽಧ್ಯಾಯಃ

॥ ಪಾರ್ವತ್ಯುವಾಚ ॥

ವಿಶ್ವೇಶ್ವರಾಖಿಲಾರಾಧ್ಯ ಸರ್ವಜ್ಞ ಕರುಣಾನಿಧೇ ।
ಕ್ವ ಮುಕ್ತಿಮಂಟಪಸ್ಥಾನಂ ತತ್ಪ್ರಮಾಣಂ ಕಿಯನ್ಮತಂ ॥೧॥

ಮುಕ್ತಿಮಂಟಪಸಂಜ್ಞಾಪಿ ಕಥಮಸ್ಯಾಭವಚ್ಛುಭಾ ।
ಏತತ್ಸರ್ವಂ ವಿಶೇಷೇಣ ಶ್ರೋತುಮಿಚ್ಛಾಮಿ ಶಂಕರ ॥೨॥

॥ ಶ್ರೀಸದಾಶಿವ ಉವಾಚ ॥

ಅತಿಮಿಷ್ಟಮಿದಂ ಪೃಷ್ಟಂ ಇದಾನೀಂ ವರವರ್ಣಿನಿ ।
ಮುಕ್ತಿಮಂಟಪಮಾಹಾತ್ಮ್ಯಂ ಶೃಣು ವಕ್ಷ್ಯೇ ಮನೋಹರಂ ॥೩॥

---

## ಏಳನೆಯ ಅಧ್ಯಾಯ

ಬಳಿಕ ಎಲೈ ಕರುಣಾನಿಧಿಯೇ, ಸಕಲವನ್ನೂ ಬಲ್ಲ ವಿಶ್ವೇಶ್ವರನೇ, ಕಾಶಿಯಲ್ಲಿ ಮುಕ್ತಿಮಂಟಪವಿರುವುದೆಲ್ಲಿ? ಅದರ ಪ್ರಮಾಣವೆಷ್ಟು? ಅದಕ್ಕೆ ಮುಕ್ತಿಮಂಟಪವೆಂದು ಹೆಸರು ಬರಲು ಕಾರಣವೇನು? ಈ ಎಲ್ಲವನ್ನೂ ನಾನು ಕೇಳಬಯಸುತ್ತೇನೆ, ಎಂದು ಪಾರ್ವತಿಯು ಬೇಡಿದಳು. ॥೧-೨॥

ಎಲೌ ಸ್ತ್ರೀಶ್ರೇಷ್ಠಳಾದ ಗೌರಿಯೇ ಕೇಳು, ನೀನು ನನಗೆ ಅತ್ಯಂತ ಪ್ರಿಯವಾದ ವಿಷಯವನ್ನು ಕುರಿತು ಪ್ರಶ್ನೆಮಾಡಿರುತ್ತೀಯೆ. ಮನೋಹರವಾದ ಮುಕ್ತಿಮಂಟಪದ ಮಾಹಾತ್ಮ್ಯೆಯನ್ನು ಹೇಳುವೆನು ಕೇಳು. ಮುಕ್ತಿಮಂಟಪದಲ್ಲಿ

ಯತ್ರ ಜ್ಯೋತಿರ್ಮಯಂ ಲಿಂಗಂ ಮಮ ವಿಶ್ವೇಶ್ವರಾಭಿಧಂ ।
ತತ್ರಾಸ್ತಿ ರತ್ನಪ್ರಾಸಾದಃ ಸರ್ವಲೋಕಮನೋಹರಃ ॥೪॥

ತತ್ಪ್ರಾಸಾದಪ್ರಭಾಸಂಘೈಃ ದಿಶಃ ಪ್ರತಿದಿಶಸ್ತಥಾ ।
ಅತ್ಯೂರ್ಧ್ವಲೋಕಾಃ ಸರ್ವೇಽಪಿ ದೀಪಿತಾಃ ಸಮಲಂಕೃತಾಃ ॥೫॥

ಪ್ರಾಸಾದೋಽಪಿ ಸರತ್ನಾಢ್ಯೋ ಲಿಂಗಾಕಾರೋ ವಿರಾಜತೇ ।
ತನ್ಮೂಲಮಗ್ರಭಾಗೋ ವಾ ನ ಕೇನಾಪಿ ಚ ದೃಶ್ಯತೇ ॥೬॥

ಅನರ್ಘ್ಯರತ್ನಮಾಲಾಭಿಃ ಸರ್ವದಾಲಂಕೃತಃ ಶುಭಃ ।
ಮುಕ್ತಾಮಾಲಾಪರಿವೃತೋ ಮೂಲಭಾಗೋಽಸ್ಯ ಸರ್ವದಾ ॥೭॥

ಪ್ರಾಸಾದದಿವ್ಯರತ್ನಾನಿ ರಾತ್ರೌ ದೀಪ ಇವಾಂಬಿಕೇ ।
ತಿಷ್ಠಂತ್ಯತ್ಯಂತರಮ್ಯಾಣಿ ನೇತ್ರೋತ್ಸವಕರಾಣಿ ಚ ॥೮॥

ಕದಾಚಿದಪ್ಯಂಧಕಾರಸಂಬಂಧಸ್ತತ್ರ ಸರ್ವಥಾ ।
ನಾಸ್ತ್ಯೇವ ರತ್ನದೀಪೌಘಸಂಬಂಧೇನ ವರಾನನೇ ॥೯॥

---

ಜ್ಯೋತಿರ್ಮಯನಾದ ಲಿಂಗರೂಪಿ ಶ್ರೀವಿಶ್ವೇಶ್ವರನು ವಾಸಿಸುತ್ತಿರುವನು. ಅಲ್ಲಿ ಮನೋಹರವಾದ ರತ್ನ ಸೌಧವಿದೆ. ಆ ಸೌಧದ ಧವಳಕಾಂತಿಗಳಿಂದ ದಿಗ್ವಿದಿಕ್ಕುಗಳು, ಊರ್ಧ್ವಲೋಕ ಇವೆಲ್ಲಾ ಮನೋಹರವಾಗಿ ಪ್ರಕಾಶಿಸುತ್ತಿವೆ. ಆ ದೊಡ್ಡ ಉಪ್ಪರಿಗೆಯ ಮನೆಯೂ ಶಿವಲಿಂಗಾಕಾರವಾಗಿ ಶೋಭಿಸುತ್ತಿದೆ. ಅದರ ಮೂಲ ಅಥವಾ ಕೊನೆಯ ಭಾಗವನ್ನು ಯಾವನೂ ಕಂಡವನಿಲ್ಲ. ಅಮೂಲ್ಯ ರತ್ನಾಭರಣ ಗಳಿಂದಲೂ ಮುತ್ತಿನ ಮಾಲೆಗಳಿಂದಲೂ ಅಲಂಕೃತವಾಗಿ ಅದರ ಮೂಲಭಾಗವು ಕಂಗೊಳಿಸುತ್ತಿದೆ. ||೩-೪-೫-೬-೭||

ಎಲೌ ಅಂಬಿಕೆಯೇ, ಆ ಪ್ರಾಸಾದದಲ್ಲಿ ಕೆತ್ತಿರುವ ದಿವ್ಯರತ್ನಗಳು ರಾತ್ರಿಕಾಲ ದಲ್ಲಿ ದೀಪಗಳಂತೆ ಹೊಳೆಯುತ್ತಾ ನೋಡಲು ಅತಿ ಮನೋಹರಗಳಾಗಿ ನೇತ್ರಗಳಿಗೆ ಆತ್ಮಾನಂದವನ್ನುಂಟುಮಾಡುವುವು. ಅಲ್ಲಿ ಯಾವ ಕಾಲದಲ್ಲಿಯೂ ಕತ್ತಲೆಯ ಸಂಪರ್ಕ ಕಂಡುಬರುವುದಿಲ್ಲ. ರತ್ನದೀಪಗಳ ಸಂಬಂಧದಿಂದ ಒಂಭು ಸಾವಿರ ಶಿಖರ ಭಾಗಗಳಿದ್ದಂತೆ ಕಂಗೊಳಿಸುತ್ತಿವೆ. ಆ ಶೃಂಗಗಳು ಅತ್ಯಂತ ಶುದ್ಧಗಳಾಗಿವೆ.

ಸಹಸ್ರಂ ರತ್ನಶೃಂಗಾಣಾಂ ರಾಜತೇ ತತ್ರ ಸರ್ವದಾ ।
ಲಿಂಗಾಕಾರಾಣಿ ಶೃಂಗಾಣಿ ಶುದ್ಧಾನ್ಯಪ್ರತಿಮಾನಿ ಚ ॥೧೦॥

ತೇಜಃಪುಂಜಮಿವಾಭಾತಿ ಪ್ರಾಸಾದಃ ಸರ್ವದಾ ಶುಭೇ ।
ರತ್ನಪುಂಜಮಯಃ ಪ್ರೀತಿಂ ಸ ತನೋತಿ ನಿರಂತರಂ ॥೧೧॥

ರಾಶೀಕೃತಮಹಾರತ್ನಪ್ರಭೇಯಮಿತಿ ಧೀಃ ಸದಾ ।
ಸರ್ವೇಷಾಂ ಭವತಿ ಸ್ಪಷ್ಟಂ ತತ್ಪ್ರಾಸಾದಾವಲೋಕನಾತ್ ॥೧೨॥

ವಿಲಾಸಸದನಂ ರಮ್ಯಂ ಮಮ ತಾದೃಶಮಂಬಿಕೇ ।
ನಾನ್ಯತ್ರ ಲಭ್ಯತೇ ಭವ್ಯಂ ನಿತ್ಯೋತ್ಸವಕರಂ ಪರಂ ॥೧೩॥

ಸಹಸ್ರಕೋಟಿಗಣಪೈರತ್ಯುಗ್ರೈರುದ್ಯತಾಯುಧೈಃ ।
ವೀರೈಃ ಸಂರಕ್ಷ್ಯತೇ ನಿತ್ಯಂ ಪ್ರಾಸಾದೋ ವಿಮಲೋ ಮಮ ॥೧೪॥

ಶ್ರಾವ್ಯೋ ದುಂದುಭಿನಿರ್ಹ್ರಾದೋ ಜಾಯತೇ ತತ್ರ ಸರ್ವದಾ ।
ಗಾಯಂತಿ ಗಾಯಕಾ ನಿತ್ಯಂ ಶಿವನಾಮಾನಿ ಸಾದರಂ ॥೧೫॥

---

ಅವಕ್ಕೆ ಸಮಾನವಾದುವುಗಳು ಎಲ್ಲೂ ಲಭಿಸಲಾರದು. ಆ ಪ್ರಾಸಾದವು ತೇಜಸ್ಸಿನ ಸಮುದಾಯದ ಹಾಗೆ ತೋರುತ್ತದೆ. ಆ ರತ್ನಸಮೂಹವು ಯಾವಾಗಲೂ ನನಗೆ ಪ್ರೀತಿಯನ್ನುಂಟು ಮಾಡುತ್ತ, ಆ ಸೌಧವನ್ನು ನೋಡಿದೊಡನೇ ಇದೇನಾದರೂ ರತ್ನಗಳ ಪ್ರಭಾಪುಂಜವೋ ಎಂದು ಭ್ರಾಂತಿಯುಂಟಾಗುವಂತಿದೆ. ||೮-೯-೧೦-೧೧-೧೨||

ಅಂತಹ ಆ ಮಂದಿರವು ನನ್ನ ವಿಲಾಸದ ಭವನವಾಗಿರುತ್ತದೆ. ಎಲೌ ಅಂಬಿಕೆಯೇ, ಕೇಳು. ನಿತ್ಯವೂ ಸಂತೋಷವನ್ನುಂಟುಮಾಡುವ ಈ ಭವ್ಯವಾದ ಭವನಕ್ಕಿಂತ ಬೇರೆಯದು ಅನ್ಯತ್ರ ಕಂಡುಬರುವುದಿಲ್ಲ. ಈ ನನ್ನ ಪ್ರಾಸಾದವನ್ನು ಉಗ್ರರಾದ ಒಂದುಕೋಟಿ ಗಣಗಳು ಸಶಸ್ತ್ರರಾಗಿ ರಕ್ಷಿಸುತ್ತಿದ್ದಾರೆ. ಅಲ್ಲಿ ಯಾವಾಗಲೂ ರಮಣೀಯವಾದ ದುಂದುಭಿಗೆ ಸದೃಶವಾದ ನಾದವು ಕೇಳಿಬರುತ್ತಿದೆ. ಅಲ್ಲಿ ಗಾಯಕರು ನಿತ್ಯವೂ ಶಿವನಾಮಗಳನ್ನು ಆದರದಿಂದ ಗಾನಮಾಡುತ್ತಾರೆ. ವಿವಿಧ ನಾಟ್ಯಗಳಲ್ಲಿ ಕುಶಲರಾದ ನರ್ತಕರು ನಿತ್ಯವೂ ಅಲ್ಲಿ ಕುಣಿತಿರುತ್ತಾರೆ. ಮಂದಾರ ಹೂಗಳಿಂದ ವ್ಯಾಪ್ತವಾಗಿಯೂ, ಅನೇಕ ರತ್ನಗಳಿಂದ ಅಲಂಕೃತವಾಗಿಯೂ, ಸರ್ವ

ನೃತ್ಯಂತಿ ನರ್ತಕಾಶ್ಚಾತ್ರ ಚಿತ್ರನೃತ್ಯವಿಶಾರದಾಃ ।
ಮಂದಾರಪುಷ್ಪಸಂಛನ್ನೋ ರತ್ನತೋರಣಸಂವೃತಃ ॥೧೬॥

ನಿತ್ಯಾನಂದಕರೋ ಭವ್ಯಃ ಸರ್ವಮಂಗಳಸಂಶ್ರಯಃ ।
ದೇವೈರಾರಾಧಿತೋ ನಿತ್ಯಂ ಧ್ಯಾತಶ್ಚ ಸಕಲೈಃ ಸುರೈಃ ॥೧೭॥

ತತ್ಪ್ರಾಸಾದಸಮೋ ಲೋಕೇ ಪ್ರಾಸಾದೋ ನೈವ ದೃಶ್ಯತೇ ।
ಸರ್ವೇಷಾಂ ಮುಕ್ತಿದೋ ನಿತ್ಯಂ ದರ್ಶನಾದೇವ ಸರ್ವಥಾ ॥೧೮॥

ತತ್ರ ಲಿಂಗಂ ಮಮಾಸ್ತ್ಯೇಕಂ ರಮ್ಯಂ ವಿಶ್ವೇಶ್ವರಾಭಿಧಂ ।
ತತ್ಪ್ರಭಾವೋ ನ ದೇವೈಶ್ಚ ಶಕ್ಯತೇ ಜ್ಞಾತುಮಂಬಿಕೇ ॥೧೯॥

ತಲ್ಲಿಂಗತತ್ತ್ವಮಮಲೈರ್ವೇದೈರಪಿ ನ ನಿಶ್ಚಿತಂ ।
ತತ್ಸ್ವರೂಪಂ ಕಥಂ ಜ್ಞೇಯಂ ತದನ್ಯೈರಲ್ಪಬುದ್ಧಿಭಿಃ ॥೨೦॥

ವೇದೈರಪಿ ಯಥಾಶಕ್ತಿ ತದೇವ ಪ್ರತಿಪಾದ್ಯತೇ ।
ತದೇವೋಪಾಸ್ಯಮಖಿಲೈಸ್ತದೇವಾಭೀಷ್ಟದಾಯಕಂ ॥೨೧॥

---

ಮಂಗಳವನ್ನು ಕೊಡುವುದಾಗಿಯೂ, ನಿತ್ಯವೂ ಸಂತೋಷವನ್ನುಂಟುಮಾಡುವುದಾಗಿಯೂ ಇರುವ ಆ ಸೌಧವನ್ನು ದೇವತೆಗಳು ಕೂಡ ಪೂಜಿಸುವರು. ಇತರ ದೇವಯೋನಿಗಳು ಅದನ್ನು ವಿಶೇಷವಾಗಿ ಧ್ಯಾನಿಸುವರು. ಆ ಪ್ರಾಸಾದಕ್ಕೆ ಸಮಾನವಾದುದು ಈ ಮೂರುಲೋಕದಲ್ಲಿ ಇನ್ನೊಂದಿಲ್ಲ. ಅದು ದರ್ಶನಮಾತ್ರದಿಂದಲೇ ಎಲ್ಲರಿಗೂ ಮುಕ್ತಿಯನ್ನು ಕೊಡಬಲ್ಲುದಾಗಿದೆ.॥೧೩-೧೪-೧೫-೧೬-೧೭-೧೮॥

ಆ ಪ್ರಾಸಾದದಲ್ಲಿ ರಮಣೀಯವಾದ ವಿಶ್ವೇಶ್ವರನೆಂಬ ಹೆಸರಿನ ಶಿವಲಿಂಗವಿರುತ್ತದೆ. ಅದರ ಮಾಹಾತ್ಮ್ಯೆಯು ದೇವತೆಗಳಿಂದಲೂ ತಿಳಿಯಲಸಾಧ್ಯವಾಗಿದೆ. ಪರಿಶುದ್ಧಗಳಾದ ವೇದಗಳೂ ಆ ಲಿಂಗದ ತತ್ವವನ್ನು ತಿಳಿಯಲಾರವು. ಹಾಗೆಂದ ಮೇಲೆ ಅದರ ಸ್ವರೂಪವು ಮಂದಮತಿಗಳಾದವರಿಗೆ ಹೇಗೆ ತೋರೀತು ? ವೇದಗಳೂ ಕೂಡ ಕೊಂಚಮಟ್ಟಿಗೆ ತಮ್ಮ ಶಕ್ತಿಯನ್ನನುಸರಿಸಿ ಆ ತತ್ವವನ್ನೇ ಪ್ರತಿಪಾದಿಸುತ್ತವೆ. ಎಲ್ಲಾ ದೇವತೆಗಳಿಗೂ ಸಕಲ ಇಷ್ಟಾರ್ಥಗಳನ್ನೂ ನೆರವೇರಿಸುವ ಆ ಲಿಂಗವೇ ಉಪಾಸ್ಯದೇವತೆಯಾಗಿದೆ. ಅದನ್ನು ನಿರ್ದೇಶಿಸಿ ತೋರಿಸಲು ಸಾಧ್ಯವಿಲ್ಲ. ಅದು ಪರಿಶುದ್ಧವಾದುದು ಮತ್ತು ಅದು ಪ್ರತ್ಯಕ್ಷಾದಿ ಯಾವ ಪ್ರಮಾಣಗಳಿಗೂ ಗೋಚರಿ

ತದನಿರ್ದೇಶ್ಯಮಮಲಮಪ್ರಮೇಯಮನಾಮಯಂ ।
ನಿಷ್ಕಲಂಕಂ ನಿರಾಕಾರಂ ತದೇವ ಹಿ ನಿರಂಜನಂ ॥೨೩॥

ತದೇವ ನಿಧನೇತ್ಯಾದಿ ಮಂತ್ರವೇದ್ಯಂ ಮದಾತ್ಮಕಂ ।
ದರ್ಶನಾದೇವ ಸರ್ವೇಷಾಂ ಮೋಕ್ಷದಂ ತತ್ಸನಾತನಂ ॥೨೩॥

ಅನೇಕಕಾಲಮತ್ಯುಗ್ರಂ ತಪಃಕುರ್ವಂತಿ ಸಾದರಂ ।
ವಿಶ್ವೇಶ್ವರಾಭಿಧಂ ಲಿಂಗಂ ದ್ರಷ್ಟುಮೇವ ಮನೀಷಿಣಃ ॥೨೪॥

ಅನೇಕಕಲ್ಪಪರ್ಯಂತಮುಪವಿಶ್ಯ ಮಯಾಪಿ ಚ ।
ಪ್ರಭಾವಸ್ತಸ್ಯ ಲಿಂಗಸ್ಯ ವಕ್ತವ್ಯಃ ಕಥಮಂಬಿಕೇ ॥೨೫॥

ಕದಾಚಿದಪಿ ತಲ್ಲಿಂಗಂ ನ ದೃಷ್ಟಂ ಯೇನ ಸರ್ವದಾ ।
ನ ತಸ್ಯ ಮುಕ್ತಿಸ್ತತ್ಸತ್ಯಂ ಸತ್ಯಂ ಸತ್ಯಂ ನ ಸಂಶಯಃ ॥೨೬॥

ಯದ್ದರ್ಶನಾರ್ಥಂ ಮುನಯಃ ಕುರ್ವಂತಿ ಬಹುಧಾ ತಪಃ ।
ತದ್ಧಿ ವೈಶ್ವೇಶ್ವರಂ ಲಿಂಗಂ ದ್ರಷ್ಟವ್ಯಂ ಬಹುಯತ್ನತಃ ॥೨೭॥

---

ಸಲಾರದು. ಯಾವ ವಿಪತ್ತೂ ಸಾಂಸಾರಿಕ ದುಃಖಗಳೂ ಅದಕ್ಕೆ ಸಂಘಟಿಸಲಾರವು. ಅದಕ್ಕೆ ಕಲಂಕವೂ ಆಕಾರವೂ ಇಲ್ಲ. ಯಾವ ಬಗೆಯ ಕರ್ಮಾದಿಗಳಿಗೂ ಅದು ಅನುಬಂಧಿಯಾಗುವುದಿಲ್ಲ. ಇದೇ ಅರ್ಥವೇ ನಿಧನ ಪತಯೇನಮಃ ಮುಂತಾದ ವೇದಮಂತ್ರಗಳಿಂದ ಪ್ರತಿಪಾದಿಸಲ್ಪಟ್ಟಿದೆ. ನನ್ನ ಸ್ವರೂಪವಾದ ಆ ಲಿಂಗವು ದರ್ಶನ ಮಾತ್ರದಿಂದ ಮುಕ್ತಿಯನ್ನು ಎಲ್ಲರಿಗೂ ಕೊಡುತ್ತದೆ. ||೧೯-೨೦-೨೧-೨೨-೨೩||

ವಿದ್ವಾಂಸರು ಈ ವಿಶ್ವೇಶ್ವರಲಿಂಗ ದರ್ಶನಕ್ಕಾಗಿ ಅನೇಕ ಕಾಲ ಉಗ್ರವಾದ ತಪಸ್ಸನ್ನು ಮಾಡುತ್ತಾರೆ. ನಾನೂ ಕೂಡ ಅನೇಕ ಕಲ್ಪಗಳ ವರೆಗೂ ಇದ್ದು ಅದನ್ನು ದರ್ಶನಮಾಡಿದೆನು. ಆ ಶಿವಲಿಂಗದ ಪ್ರಭಾವವನ್ನು ಏನೆಂದು ಹೇಳೋಣ? ಎಲೌ ಅಂಬಿಕೆಯೇ, ಒಂದು ಸಾರಿಯಾದರೂ ಜೀವಿತಕಾಲದಲ್ಲಿ ಆ ಲಿಂಗದರ್ಶನ ಮಾಡದವನಿಗೆ ಮುಕ್ತಿಯುಂಟಾಗುವುದಿಲ್ಲ. ಇದು ನಿಜವೆಂದು ಒತ್ತಿ ಒತ್ತಿ ಹೇಳು ತ್ತೇನೆ. ಇದರಲ್ಲಿ ಸಂದೇಹಬೇಡ, ಯಾವುದರ ದರ್ಶನಕ್ಕಾಗಿ ಮುನಿಗಳು ಅನೇಕ ವರ್ಷ ತಪಸ್ಸು ಮಾಡುವರೋ ಅಂತಹ ಆ ವಿಶ್ವೇಶ್ವರಲಿಂಗವನ್ನು ಪ್ರಯತ್ನ ಪಟ್ಟಾದರೂ ಪೂಜಿಸಬೇಕು. ಯಾವುದನ್ನು ದೇವತೆಗಳೂ, ಋುನಿಗಳೂ, ವೇದಗಳೂ

ಯಂ ನ ಪಶ್ಯಂತಿ ಮುನಯೋ ಯಂ ನ ಪಶ್ಯಂತಿ ದೇವತಾಃ ।
ಯಂ ನ ಜಾನಂತಿ ದೇವಾಶ್ಚ ತಲ್ಲಿಂಗಂ ಪ್ರೇಕ್ಷ್ಯಮನ್ನಹಂ ॥೨೮॥

ದ್ವಿತ್ರಾಣ್ಯತೀವ ರಮ್ಯಾಣಿ ಬಿಲ್ವಪತ್ರಾಣಿ ಸಾದರಂ ।
ಯೇನಾರ್ಪಿತಾನಿ ತಲ್ಲಿಂಗೇ ತೇನ ಮುಕ್ತಿರವಾಪ್ಯತೇ ॥೨೯॥

ಅಭಿಷಿಚ್ಯ ವಿಧಾನೇನ ಯೋ ಮಾಂ ಬಿಲ್ವದಳೈರ್ಮುದಾ ।
ಪೂಜಯಿಷ್ಯಂತಿ ಪುಣ್ಯಾತ್ಮಾ ಸ ಮೋಕ್ಷಮಧಿಗಚ್ಛತಿ ॥೩೦॥

ಮದ್ಭಕ್ತೇನ ಮಯಿ ಪ್ರೇಮ್ಣಾ ಪತ್ರಂ ವಾ ಫಲಮೇವ ವಾ ।
ದತ್ತಂ ಸ್ಯೋಪಹೃತಂ ಯತ್ತು ತದ್ಗೃಹೀಷ್ಯಾಮಿ ಸಾದರಂ ॥೩೧॥

ಏಕಂ ಬಿಲ್ವದಳಂ ರಮ್ಯಂ ಮದ್ಭಕ್ತೇನಾರ್ಪಿತಂ ಮಯಿ ।
ಅನಂತಾಘಹರಂ ನೂನಂ ಸತ್ಯಮೇವೋಚ್ಯತೇ ಮಯಾ ॥೩೨॥

ಮದ್ಭಕ್ತೋಪಿ ಸ ವಿಜ್ಞೇಯಃ ಸರ್ವಭಾವೇನ ಸರ್ವಥಾ ।
ಸರ್ವಂ ವಿಹಾಯ ಮಾಮೇವ ಭಜತೇ ಯಃ ಸದಾ ಮುದಾ ॥೩೩॥

ವಿಭೂತಿರುದ್ರಾಕ್ಷಪರೋ ಲಿಂಗಮೇವಾರ್ಚಯನ್ಮುದಾ ।
ಮಾಮೇವ ಶರಣಂ ಪ್ರಾಪ್ತೋ ಯಃ ಸ ಏವ ಮಮ ಪ್ರಿಯಃ ॥೩೪॥

---

ತಿಳಿಯಲಾರವೋ ಆ ಲಿಂಗದ ಮಹಿಮೆಯನ್ನು ಹೇಳುವೆನು ಕೇಳು. ರಮಣೀಯವಾದ ಎರಡು ಮೂರು ಬಿಲ್ವಪತ್ರೆಗಳನ್ನು ಭಕ್ತಿಯಿಂದ ಆ ಲಿಂಗಕ್ಕೆ ಅರ್ಪಿಸಿದವನಿಗೆ ಮೋಕ್ಷವುಂಟಾಗುವುದು. ಶಾಸ್ತ್ರಕ್ರಮವನ್ನನುಸರಿಸಿ ಯಾವನು ಬಿಲ್ವದಳಗಳಿಂದ ವಿಶ್ವೇಶ್ವರಲಿಂಗವನ್ನು ಅರ್ಚಿಸುವನೋ ಅವನು ಸ್ಥಿರವಾದ ಮೋಕ್ಷವನ್ನು ಹೊಂದುವನು. ||೨೪-೨೫-೨೬-೨೭-೨೮-೨೯-೩೦||

ನನ್ನ ಭಕ್ತನಾದವನು ನನ್ನಲ್ಲಿ ಭಕ್ತಿಯಿಂದ ಅರ್ಪಿಸಿದ ಪತ್ರವನ್ನಾಗಲೀ ಫಲವನ್ನಾಗಲೀ ಆದರದಿಂದ ನಾನು ಸ್ವೀಕರಿಸುತ್ತೇನೆ. ಒಂದೇ ಒಂದು ಬಿಲ್ವದಳವನ್ನು ನನ್ನ ಭಕ್ತನು ನನಗೆ ಅರ್ಪಿಸುವುದಾದರೂ ಅದು ಅನಂತ ಪಾಪಗಳನ್ನೂ ನಾಶಮಾಡುತ್ತದೆ ಎಂದು ಸತ್ಯವಾಗಿ ಹೇಳುತ್ತೇನೆ. ಯಾವನು ಇತರ ಎಲ್ಲಾ ವಿಷಯಾದಿಗಳನ್ನೂ ತೊರೆದು ಕೇವಲ ನನ್ನನ್ನೇ ಎಲ್ಲಾ ಭಾವನೆಯಿಂದಲೂ ಭಾವಿಸುವನೋ

ಮಹಾಪಾಶುಪತಾಃ ಶುದ್ಧಾಃ ಮಹಾಶೈವಾಶ್ಚ ಸರ್ವದಾ ।
ಮಾಮರ್ಚಯಂತಿ ಮಾಮೇವ ಶರಣಂ ಪ್ರಾಪ್ನುವಂತಿ ಚ ॥೩೫॥

ಮದ್ಭಕ್ತವರ್ಯೈಃ ಸತತಂ ಮದರ್ಚನಪರಾಯಣೈಃ ।
ಅವಿಮುಕ್ತಮಿದಂ ಕ್ಷೇತ್ರಂ ಆಶ್ರಿತ್ಯ ಸ್ಥೀಯತೇ ಮುದಾ ॥೩೬॥

ಶೈವೈಃ ಪಾಶುಪತೈಃ ಶುದ್ಧೈಃ ಮಲ್ಲಿಂಗಂ ಪೂಜ್ಯತೇ ಸದಾ ।
ತೈರೇವ ಕೃತಪೂಜಾಪಿ ಗೃಹ್ಯತೇ ಸಾದರಂ ಮಯಾ ॥೩೭॥

ಪತ್ರಂ ಫಲಂ ವಾ ಪುಷ್ಪಂ ವಾ ಜಲಂ ವಾ ಸ್ವಾರ್ಜಿತಂ ಶುಭಂ ।
ಮದ್ಭಕ್ತೇನಾರ್ಪಿತಂ ಮಹ್ಯಮನಂತಾಯೋಪಕಲ್ಪ್ಯತೇ ॥೩೮॥

ಪತ್ರೇಣಾಪ್ಯರ್ಚಿತಂ ಲಿಂಗಂ ಮೋಕ್ಷದಂ ಸರ್ವದೇಹಿನಾಂ ।
ವಿಶ್ವೇಶ್ವರಾಭಿದಂ ತತ್ತು ತತ್ಪ್ರಸಾದೇಽಧಿತಿಷ್ಠತಿ ॥೩೯॥

ತತ್ಪ್ರಸಾದವರಸ್ಯೈವ ದಕ್ಷಿಣಾದಿಶಿ ಭಾಸ್ವರಂ ।
ರಮ್ಯಂ ಮಣಿಮಯಸ್ಥಾನಮೇಕಂ ತಿಷ್ಠತಿ ಪಾಪಹಂ ॥೪೦॥

---

ಅವನನ್ನೇ ನನ್ನ ಭಕ್ತನೆಂದು ತಿಳಿಯಬೇಕು. ವಿಭೂತಿ, ರುದ್ರಾಕ್ಷಿಗಳನ್ನು ಧರಿಸಿ ಲಿಂಗಪೂಜಾಸಕ್ತನಾಗಿರುವವನು ನನ್ನ ಭಕ್ತನು. ಆತನೇ ನನಗೆ ಪ್ರಿಯನು. ಮಹಾಪಶುಪತಿಯ ಭಕ್ತರೂ, ಮಹಾಶಂಕರನ ಕಿಂಕರರೂ ಪರಿಶುದ್ಧರಾಗಿ ನನ್ನನ್ನು ಅರ್ಚಿಸಿ ನನ್ನನ್ನೇ ಶರಣುಹೊಂದುವರು. ||೩೧-೩೨-೩೩-೩೪-೩೫||

ನನ್ನ ಪೂಜಾಸಕ್ತರಾದ ಭಕ್ತಾಗ್ರಣಿಗಳನೇಕರು ಈ ಕ್ಷೇತ್ರದಲ್ಲಿ ಸದಾ ವಾಸಿಸುತ್ತಿರುವರು. ಶೈವರೂ, ಪಾಶುಪತರೂ, ಕೂಡ ನನ್ನ ಶಿವಲಿಂಗವನ್ನು ಯಾವಾಗಲೂ ಪೂಜಿಸುವರು. ಅವರು ಮಾಡಿದ ಪೂಜೆಯನ್ನು ನಾನು ಆದರದಿಂದ ಸ್ವೀಕರಿಸುತ್ತೇನೆ. ತಾನು ಸಂಪಾದಿಸಿದ ಪತ್ರ, ಫಲ, ಹೂವು, ಸ್ವಾದೂದಕ, ಇವುಗಳನ್ನು ಭಕ್ತಿಯಿಂದರ್ಪಿಸಿದರೆ ಅದು ನನಗೆ ಅಪರಿಮಿತವಾಗಿ ಪರಿಣಮಿಸುವುದು, ಬಿಲ್ವಪತ್ರದಿಂದ ಪೂಜಿಸಿದರೆ ಅದು ಮೋಕ್ಷಪ್ರದವಾಗುತ್ತದೆ. ವಿಶ್ವೇಶ್ವರಲಿಂಗಕ್ಕೆ ಸಮರ್ಪಿಸಿದುದೇ ಆದರೆ ಆಗ ವಿಶ್ವೇಶನ ಅನುಗ್ರಹವೂ ಲಭಿಸುತ್ತದೆ. ಆ ವಿಶ್ವೇಶ್ವರ ಸ್ಥಾನದ ದಕ್ಷಿಣದಿಕ್ಕಿನಲ್ಲಿ ಒಂದು ರಮ್ಯವಾದ ಪ್ರದೇಶವಿದೆ. ಅದು ಸಮಸ್ತ ಪಾಪಗಳನ್ನೂ ನಾಶಮಾಡಬಲ್ಲದು. ||೩೬-೩೭-೩೮-೩೯-೪೦||

ತತ್ಸಹಸ್ರಮಣಿಸ್ತಂಭೈರುತ್ತಮೈರುನ್ನತೈಶ್ಶುಭೈಃ ।
ರಂಜಿತಂ ರಾಜತೈಃ ಶೃಂಗೈಃ ಹೇಮಶೃಂಗೈಶ್ಚ ರಾಜಿತಂ ॥೪೧॥

ಕ್ವಚಿತ್ ಸ್ಫಟಿಕಶೃಂಗಾಢ್ಯೈಃ ಲಿಂಗಾಕಾರೈರ್ಮನೋರಮೈಃ ।
ಸ್ಥಾನಂ ತದ್ಭ್ರಾಜತೇ ದೇವಿ ನೇತ್ರೋತ್ಸವಕರಂ ಸದಾ ॥೪೨॥

ತಸ್ಮಿನ್ನೇವ ಮಹಾಸ್ಥಾನೇ ರುದ್ರಾಕ್ಷಾಭರಣಪ್ರಿಯಾಃ ।
ರುದ್ರಸೂಕ್ತಜಪಾಸಕ್ತಾಃ ತಿಷ್ಠಂತಿ ವಿಮಲಾಶಯಾಃ ॥೪೩॥

ತತ್ಪಾಲಕಾಶ್ಚತುಃಷಷ್ಟಿಕೋಟಿಪ್ರಮಥನಾಯಕಾಃ ।
ಉಪಾಯುಧಾ ಮಹಾವೀರಾ ಮಮಪ್ರಿಯಕರಾಸ್ಸದಾ ॥೪೪॥

ಸಾದರಂ ಭಸ್ಮದಿಗ್ಧಾಂಗಾ ರುದ್ರಾಕ್ಷಾಭರಣಪ್ರಿಯಾಃ ।
ಉಪನಿಶ್ಯಾತಿಸಂತುಷ್ಟಾಃ ತಿಷ್ಠಂತಿ ಶಿವಪೂಜಕಾಃ ॥೪೫॥

ಶೈವಂ ಮಹಾಮನುಂ ನಿತ್ಯಂ ಸರ್ವಪಾಪೌಘನಾಶಕಂ ।
ಜಪಂತಃ ಸತತಂ ಸಂತೋ ವಸಂತ್ಯತ್ಯಂತಮಾದರಾತ್ ॥೪೬॥

---

ಆ ಮಣಿಮಯವಾದ ಸ್ಥಾನವು ಎತ್ತರವಾಗಿಯೂ ಉತ್ತಮವಾಗಿಯೂ ಇರುವ ಒಂದು ಸಾವಿರಸ್ತಂಭಗಳಿಂದ ಕೂಡಿದೆ. ಮತ್ತು ಬಂಗಾರ ಬೆಳ್ಳಿಯಿಂದ ನಿರ್ಮಿತಗಳಾದ ಅನೇಕ ಶಿಖರಗಳು ಅಲ್ಲಿ ಶೋಭಿಸುತ್ತಿವೆ. ಎಲೌ ದೇವಿಯೇ, ಒಂದುಕಡೆ ಸ್ಫಟಿಕ ಶಿಲಾಶಿಖರಗಳು ಲಿಂಗಾಕಾರವಾಗಿ ಮನೋಹರಗಳಾಗಿವೆ. ಹೀಗೆ ನೇತ್ರೋತ್ಸವವನ್ನು ಕೊಡುವ ಆಸ್ಥಾನವು ವಿಶೇಷವಾಗಿ ಶೋಭಿಸುತ್ತಿದೆ. ಆ ಮಣಿಮಯ ಸ್ಥಾನವಲ್ಲಿ ರುದ್ರಾಕ್ಷಿಯಿಂದ ಅಲಂಕೃತರಾಗಿಯೂ, ರುದ್ರಸೂಕ್ತಗಳನ್ನು ಪಠಿಸುವವರಾಗಿಯೂ, ನಿರ್ಮಲಚಿತ್ತರಾಗಿಯೂ ಇರುವ ಈಶ್ವರಭಕ್ತರನೇಕರಿರುತ್ತಾರೆ. ಅವರು ಸಮಸ್ತ ಪಾಪಗಳನ್ನು ಹೋಗಲಾಡಿಸುವ ಶಿವಮಂತ್ರವನ್ನು ಜಪಿಸುತ್ತಾ ವಾಸಿಸುತ್ತಾರೆ. ಆ ಮಣಿಯ ಸ್ಥಾನವನ್ನು ಈಶ್ವರನ ಪ್ರಮಥಗಣಗಳೆನಿಸಿದ ಅರವತ್ತುಕೋಟಿ ಮಹಾವೀರರು ಆಯುಧಪಾಣಿಗಳಾಗಿ ನಿಂತು ಸಂರಕ್ಷಿಸುತ್ತಿದ್ದಾರೆ. ಆ ಪ್ರಮಥಗಣವು ನನಗೆ ಬಹು ಪ್ರಿಯಕರವಾದುದು. ಇಂತಹ ಮಂಟಪದಲ್ಲಿ ಅನೇಕ ಶೈವರು ಶಿವಮಂತ್ರೋಚ್ಚಾರಣೆಯಿಂದ ಶಿವಾನುಗ್ರಹವನ್ನು ಪಡೆಯುತ್ತಿರುವರು. ॥೪೧-೪೨-೪೩-೪೪-೪೫-೪೬॥

ಶುದ್ಧಾಂತಃಕರಣೈರತ್ರ ಜಪಃ ಶೈವೈರ್ಮಹಾಮನುಃ ।
ಶೈವೋ ಮೋಕ್ಷಪ್ರದೋ ನೂನಂ ಭವತ್ಯೇವ ನ ಸಂಶಯಃ ॥೪೭॥

ಏಕದಾಪ್ಯತ್ರ ಶೈವೇನ ಜಪ್ತಃ ಶೈವೋ ಮನುರ್ಮುದಾ ।
ಅನಂತಗುಣಿತೋ ನೂನಂ ಪಾಪದಾವಾಗ್ನಿಶಾಮಕಃ ॥೪೮॥

ಶೈವೋ ಮನುಃ ಸ್ವತಃ ಶುದ್ಧಃ ಪಾಪತೂಲಾದ್ರಿನಾಶಕಃ ।
ಸೋಽಪ್ಯತ್ರ ಜಪ್ತಃ ಶೈವೇಂದ್ರೈಃ ಸರ್ವಾಭೀಷ್ಟಪ್ರದೋ ಧ್ರುವಂ ॥೪೯॥

ಶೈವ ಏವ ಮಹಾಮಂತ್ರೋ ಜಪ್ತಃ ಪಂಚಾಕ್ಷರಃ ಪರಃ ।
ಶೈವೈರ್ಮೋಕ್ಷಾರ್ಥಿಭಿರ್ನಿತ್ಯಂ ಯತ್ರ ಮಲ್ಲಿಂಗಪೂಜಕೈಃ ॥೫೦॥

ತನ್ಮಧ್ಯೇ ಕರ್ಣಿಕಾಕಾರಾ ರತ್ನರಾಜಿವಿರಾಜಿತಾ ।
ಅತ್ಯುನ್ನತಾ ವೇದಿಕೈಕಾ ತಿಷ್ಠತಿ ಪ್ರಿಯದರ್ಶನಾ ॥೫೧॥

ತನ್ಮಧ್ಯ ಏವ ಕಾಶ್ಮೀರಮಣಿರಾಜಿತಮಾಸನಂ ।
ಸ್ಥಿತಂ ತದುಪರಿ ಸ್ಪಷ್ಟಮುಪವಿಷ್ಟಂ ಮಯಾ ಪುರಾ ॥೫೨॥

---

ಶಿವಮಹಾಪಂಚಾಕ್ಷರೀಮಂತ್ರವು ನಿತ್ಯವೂ ಶುದ್ಧಹೃದಯರಾದ ಈಶ್ವರ ಭಕ್ತರಿಂದ ಜಪಿಸಲ್ಪಡುವುದು. ಈಶ್ವರಸಂಬಂಧವಾದ ಈ ಮಂತ್ರವು ನಿಜವಾಗಿಯೂ ಮುಕ್ತಿಯನ್ನು ಕೊಡಬಲ್ಲುದಾಗಿದೆ. ಒಂದುಸಲ ಈಶ್ವರಭಕ್ತನು ಶಿವಮಂತ್ರವನ್ನು ಭಕ್ತಿಯಿಂದ ಜಪಿಸಿದರೂ ಅದು ಅನೇಕ ರಾಶಿರಾಶಿಯಾಗಿರುವ ಪಾಪವೆಂಬ ಕಾಡು ಗಿಚ್ಚನ್ನು ನಾಶಮಾಡೀತು. ಆ ಶೈವಮಂತ್ರವು ತಾನು ಸ್ವತಃ ಪವಿತ್ರವಾಗಿದೆ ಯಲ್ಲದೇ ಇತರ ಪಾಪಗಳನ್ನೂ ಹೋಗಲಾಡಿಸಬಲ್ಲುದು. ಆದುದರಿಂದ ಶಿವಮಹಾ ಮಂತ್ರವಾದ ಆ ಪಂಚಾಕ್ಷರಜಪವನ್ನು ಮೋಕ್ಷಾರ್ಥಿಗಳು ಆಚರಿಸುವುದು ಮೇಲು. ||೪೭-೪೮-೪೯-೫೦||

ಆ ಪ್ರಾಸಾದದ ಮಧ್ಯಭಾಗದಲ್ಲಿ ಕರ್ಣಿಕೆಯ ಆಕಾರದ ಹಾಗೆ ರತ್ನಖಚಿತ ವಾದ ಒಂದು ಜಗಲಿ ಇದೆ. ಆದು ನೋಡಲು ಬಹಳ ಸುಂದರವಾಗಿದೆ. ಅದರ ಮಧ್ಯದಲ್ಲಿ ಕಾಶ್ಮೀರಮಣಿಗಳಿಂದ ನಿರ್ಮಿತವಾದ ಒಂದು ಪೀಠವಿದೆ. ಹಿಂದೆ ನಾನು ಆದರಲ್ಲಿ ಸುಖಾಸೀನನಾಗಿದ್ದೆನು. ಆಗ ಅಲ್ಲಿಗೆ ಸ್ತ್ರೀಯೊಬ್ಬಳು ಬಂದಳು. ಆಕೆಯು ಚಂದ್ರನನ್ನು ಹೋಲುವ ಮುಖದಿಂದ ಕೂಡಿದ್ದಳು. ಅರಳಿದ ಕಮಲದೆಸಳಿನಂತೆ

ತದಾನೀಮಾಗತಾ ಕಾಚಿದಿಂದುಬಿಂಬನಿಭಾನನಾ ।
ವಿಶಾಲಪದ್ಮಪತ್ರಾಭನಯನಾ ನಯನಪ್ರಿಯಾ ॥೫೩॥

ಮಂದಾರಮಾಲಾಮಮಲಾಮಮ್ಲಾನಾಂ ಮಧುಪಾವೃತಾಂ ।
ಧೃತ್ವಾ ಪದ್ಮಾಭಹಸ್ತೇನ ಕ್ಷೌಮಾಂಬರವಿರಾಜಿತಾ ॥೫೪॥

ಸಾ ಮಾಂ ದೃಷ್ಟ್ವಾ ನತಗ್ರೀವಾ ಪ್ರಣಮ್ಯ ಮುಹುರಾದರಾತ್ ।
ಬಿಲ್ವೈರ್ಮಂದಾರಪುಷ್ಪೈಶ್ಚ ಚಕ್ರೇ ಪೂಜಾಂ ಯಥಾವಿಧಿ ॥೫೫॥

ಪೂಜಯಿತ್ವಾ ತತಃ ಸಾ ಮಾಂ ಕೃತಾಂಜಲಿಪುಟಾ ತದಾ ।
ಇದಮೇವ ವಚಃ ಪ್ರಾಹ ಸ್ತುತ್ವಾ ಸ್ತೋತ್ರೈರನೇಕಧಾ ॥೫೬॥

ಮಹೇಶದಿವ್ಯಸ್ಥಾನಾನಿ ಸಂತಿ ಕಾಶ್ಯಾಮನೇಕಧಾ ।
ಕಿಮತ್ರ ರೋಚತೇ ನಿತ್ಯಂ ವಸತಿಸ್ತವ ಶಂಕರ ॥೫೭॥

ವಿಶೇಷಃ ಕೋತ್ರ ದೇವೇಶ ಸರ್ವಸ್ಥಾನವಿಲಕ್ಷಣಃ ।
ಕಿಮಸ್ತಿ ತತ್ವಮೇತಸ್ಯ ವದ ಸರ್ವಂ ವಿಶೇಷತಃ ॥೫೮॥

---

ಆಕೆಯ ಕಣ್ಣು ವಿಶಾಲವಾಗಿತ್ತು. ವಿಶೇಷ ರೂಪಲಾವಣ್ಯದಿಂದ ಮನೋಹರಳಾಗಿದ್ದಳು. ಆಕೆಯು ಬಾಡದಿರುವ, ಸ್ವಚ್ಛವಾಗಿರುವ ಮತ್ತು ಭ್ರಮರಗಳಿಂದ ಆವೃತವಾಗಿದ್ದ ಮಂದಾರಮಾಲಿಕೆಯನ್ನು ಕಮಲದಂತಿರುವ ತನ್ನ ಎಡಗೈಯಿಂದ ಧರಿಸಿದ್ದಳು. ಅವಳು ನನ್ನನ್ನು ನೋಡಿ, ತಲೆಬಾಗಿಸಿಕೊಂಡವಳಾಗಿ ಬಾರಿಬಾರಿಗೂ ನಮಸ್ಕರಿಸಿ, ಬಿಲ್ವಮಂದಾರ ಹೂಗಳಿಂದ ಶಾಸ್ತ್ರರೀತಿಯಾಗಿ ನನ್ನನ್ನು ಅರ್ಚಿಸಿದಳು. ॥೫೧-೫೨-೫೩-೫೪-೫೫॥

ಆ ಯುವತಿಯು ನನ್ನನ್ನು ಪೂಜಿಸಿ, ಅಂಜಲಿಬದ್ಧಳಾಗಿ, ಅನೇಕ ಸ್ತೋತ್ರಗಳಿಂದ ಸ್ತುತಿಸಿ ಹೀಗೆಂದಳು. ಎಲೈ ಶಂಕರನೇ, ಈ ಕಾಶಿಯಲ್ಲಿ ದಿವ್ಯಸ್ಥಾನಗಳನೇಕವಿವೆ. ಅವುಗಳಲ್ಲಿ ನಿನಗೆ ಯಾವುದು ಇಷ್ಟವಾದುದು? ನಿತ್ಯವೂ ನೀನು ಎಲ್ಲಿ ವಾಸಮಾಡುತ್ತೀಯೆ? ಮತ್ತು ಇತರ ದೇವವಿಲಕ್ಷಣನಾದ ದೇವಶ್ರೇಷ್ಠನು ಯಾರು? ಇದರಲ್ಲಿ ಯಾವ ತತ್ತ್ವವಿರುತ್ತದೆ. ಈ ಎಲ್ಲವನ್ನೂ ವಿಸ್ತಾರವಾಗಿ ನನಗೆ ಹೇಳು, ಎನಲು ನಾನು ಆದರವುಳ್ಳವನಾಗಿ ಆಗ ಹೀಗೆ ಉತ್ತರವಿತ್ತನು. ಅದನ್ನು

ಪೃಷ್ಟೋಽಹಮೇವಂ ಸುಭಗೇ ತಯಾ ತದನು ಸಾದರಂ ।
ಉತ್ತರಂ ದತ್ತವಾನಸ್ಮಿ ತವೇವಂ ಶೃಣು ಸಾದರಂ ॥೫೯॥

ಕಾಶೀಯಂ ಸರ್ವಲೋಕೇಭ್ಯೋ ಮಮ ಪ್ರಿಯಕರಾನಘೇ ।
ತತ್ರಾಪ್ಯಂತರ್ಗೃಹಂ ನಾಮ ಕ್ಷೇತ್ರಂ ರುಚಿಕರಂ ಮಮ ॥೬೦॥

ತನ್ಮಧ್ಯಗಮಿದಂ ರಮ್ಯಂ ಸ್ಥಾನಂ ಪ್ರಿಯತರಂ ಮಮ ।
ತತ್ತು ಲಿಂಗಮಯಂ ಯಸ್ಮಾತ್ ತತ್ರ ಪ್ರೀತಿರ್ಮಮಾನಘೇ ॥೬೧॥

ಯಥಾತ್ರವಸತಿರ್ನಿತ್ಯಂ ಯಥಾ ನಾನ್ಯತ್ರ ಶೋಭನೇ ।
ಅನಿಶಂ ಪ್ರೀತಿರತ್ರೈವ ಮಮ ತಿಷ್ಠತ್ಯನಾಮಯೇ ॥೬೨॥

ಕಿಂಚ ಕಾಶ್ಯಾಂ ಮೃತಾಂಶ್ಚೈವಾಂಚ್ಛಿವದೇವಾನ್ ಶಿವಾರ್ಚಕಾನ್ ।
ಶಿವೈಕಶರಣಾನತ್ರ ಸಮಾನೀಯ ತತಃ ಪರಂ ॥೬೩॥

ಏತತ್ಸಿಂಹಾಸನೇ ಸಮ್ಯಗುಪದಿಶ್ಯ ಯಥಾಸುಖಂ ।
ಮಮಾಂಕೇ ವಿಮಲೇ ಶುದ್ಧಂ ಶೈವಂ ಸಂವೇಶ್ಯ ಸಾದರಂ ॥೬೪॥

ಶೈವಾಯಾತ್ಯಂತಶುದ್ಧಾಯ ಮುಕ್ತ್ಯರ್ಥಂ ತದನಂತರಂ ।
ಶೈವಃ ಪಂಚಾಕ್ಷರೋ ಮಂತ್ರೋ ಮಯಾ ಹ್ಯತ್ರೋಪದಿಶ್ಯತೇ॥೬೫॥

---

ಸಾವಧಾನದಿಂದ ಕೇಳು. ಈ ಕಾಶೀಕ್ಷೇತ್ರವು ಇತರ ಎಲ್ಲಾ ಲೋಕಗಳಿಗೂ ಪ್ರಿಯಕರವಾದುದು. ಅದರಲ್ಲಿಯೂ ಅಂತರ್ಗೃಹವೆಂಬ ಶಿವಸ್ಥಾನವು ನನಗೆ ಅತ್ಯಂತ ಪ್ರಿಯಕರವಾದುದು. ನನಗೆ ಆದು ತುಂಬಾ ಹಿತಕರವೆನಿಸಿದೆ. ||೫೬-೫೭-೫೮-೫೯-೬೦||

ಆ ಕಾಶೀಕ್ಷೇತ್ರದ ಮಧ್ಯದಲ್ಲಿರುವ ಈ ಅಂತರ್ಗೃಹಸ್ಥಾನವು ಅತ್ಯಂತ ರಮ್ಯವಾಗಿ ನನಗೆ ಬಹು ಪ್ರಿಯವಾಗಿದೆ. ಈ ಸ್ಥಾನದಲ್ಲಿ ವಿಶ್ವೇಶ್ವರಲಿಂಗವಿರುವುದರಿಂದ ನನಗೆ ಇದು ಹಿತವಾಗಿರುತ್ತದೆ. ಎಲೌ ಪಾಪಶೂನ್ಯಗಳಾದ ಸ್ತ್ರೀಯೆ, ಕೇಳು, ಇಲ್ಲಿರಲು ನನಗೆ ವಿಶ್ವಾಸವಿರುವ ಹಾಗೆ ಬೇರೆ ಕಡೆಯಲ್ಲಿ ವಾಸಿಸಲು ಇಷ್ಟವಿಲ್ಲ. ಈ ಸ್ಥಳದಲ್ಲಿ ನೆಲಸಲು ನನಗೆ ಯಾವಾಗಲೂ ಪ್ರೀತಿಯುಂಟಾಗುವುದು. ಮತ್ತು ಕಾಶಿಯಲ್ಲಿ ಮೃತಪಟ್ಟ ಶಿವೋಪಾಸಕರನ್ನೂ, ಶಿವನೇ ರಕ್ಷಕನೆಂದು ತಿಳಿದಿರುವ ಜನರನ್ನೂ ಕೂಡ ಇಲ್ಲಿಗೆ ಕರೆತಂದು ನಾನು ಇಲ್ಲಿರಬೇಕೆಂದಿರುವೆನು. ಈ

ಮುಕ್ತಿಮಂಟಪಸಂಜ್ಞಾಸ್ಯ ಸ್ಥಾನಸ್ಯ ಶ್ರುತಿಸಂಮತಾ ।
ಯತೋ ಮಯಾ ಮನುಃ ಶೈವೋ ಮೋಕ್ಷಾಯಾತ್ರೈವ ದೀಯತೇ ॥೬೬॥

ಅತಃ ಶೈವೋ ಮಹಾಮಂತ್ರೋ ಮುಕ್ತ್ಯರ್ಥಂ ಶಿವತತ್ಪರೈಃ ।
ಜಪನೀಯಃ ಪ್ರಯತ್ನೇನ ಶೈವೈರ್ಮುಕ್ತ್ಯರ್ಥಿಭಿಃ ಪುರಾ ॥೬೭॥

ಅತಿಘೋರತಪಃ ಸಾಧ್ಯಂ ಕಾಶ್ಯಾಂ ಮರಣಮಂಬಿಕೇ ।
ಯತೋತ್ರ ಮರಣಾದೇವ ಶೈವೈರ್ಮೋಕ್ಷೋಹ್ಯವಾಪ್ಯತೇ ॥೬೮॥

ಪುರಾ ಕಶ್ಚಿತ್ ದ್ವಿಜಾಧೀಶಃ ಶಿವಲಿಂಗಾರ್ಚನಪ್ರಿಯಃ ।
ಜನ್ಮಕೋಟಿಸಹಸ್ರೇಷು ತಪಃ ಕೃತ್ವಾ ಹಿಮಾಲಯೇ ॥೬೯॥

ಅತಿಶ್ರಾಂತಃ ಕ್ಷುಧಾಕ್ರಾಂತೋ ಜಂಗಮಂ ಲಿಂಗಮರ್ಚಯನ್ ।
ಜಗಾಮ ಹಿಮವದ್ಗೇಹಂ ಸರ್ವಸೌಭಾಗ್ಯಸಂಯುತಂ ॥೭೦॥

---

ಸಿಂಹಾಸನದಲ್ಲಿ ನಾನು ಮಂಡಿಸಿದವನಾಗಿ ನನ್ನ ಶುದ್ಧವಾದ ತೊಡೆಯ ಮೇಲೆ ಈಶ್ವರೋಪಾಸಕನಾದವನನ್ನು ಕೂಡಿಸಿಕೊಂಡು ಮುಕ್ತಿಗಾಗಿ ಆತನಿಗೆ ಶಿವಪಂಚಾಕ್ಷರಜಪವನ್ನು ನಾನು ಉಪದೇಶಿಸುತ್ತೇನೆ. ॥೬೧-೬೨-೬೩-೬೪-೬೫॥

ಎಲೌ! ಅಂಬಿಕೆಯೇ! ಈ ಸ್ಥಳಕ್ಕೆ ಮುಕ್ತಿಮಂಟಪವೆಂಬ ಹೆಸರು ವೇದಪ್ರಸಿದ್ಧವಾಗಿರುವುದು. ಏಕೆಂದರೆ ನನ್ನ ಭಕ್ತರಿಗೆ ಮೋಕ್ಷಪ್ರದವಾದ ಮಂತ್ರವನ್ನು ಇಲ್ಲಿ ಉಪದೇಶಿಸುವೆನು. ಮುಮುಕ್ಷುಗಳಾದವರು ಪ್ರಯತ್ನಪಟ್ಟಾದರೂ ಅಲ್ಲಿ ಆ ಮಹಾಮಂತ್ರಗಳನ್ನು ಜಪಿಸಬೇಕು. ಅತ್ಯಂತ ಕಠಿಣ ತಪಸ್ಸು ಮಾಡಿದರೆ ಆಗ ಅವನಿಗೆ ಕಾಶಿಯಲ್ಲಿ ಮೃತಿಯು ಲಭಿಸಬಹುದು. ಈ ಕಾಶೀಕ್ಷೇತ್ರದಲ್ಲಿ ಕೇವಲ ಮರಣದಿಂದಲೇ ನನ್ನ ಭಕ್ತನು ಮೋಕ್ಷವನ್ನು ಹೊಂದುತ್ತಾನೆ. ॥೬೬-೬೭-೬೮॥

ಭೂಮಿಯಲ್ಲಿ ಹಿಂದೆ ಒಬ್ಬ ಬ್ರಾಹ್ಮಣಶ್ರೇಷ್ಠನು ಶಿವಲಿಂಗಾರ್ಚನೆಯಲ್ಲಿ ಪ್ರೀತಿಯುಳ್ಳವನಾಗಿದ್ದನು. ಆತನು ಹಿಮಾಲಯಪರ್ವತದಲ್ಲಿ ಒಂದು ಕೋಟಿ ಜನ್ಮಗಳು ಅನೇಕ ಘೋರ ತಪಸ್ಸುಗಳನ್ನಾಚರಿಸಿದನು. ಹೀಗಿರುವಲ್ಲಿ ಒಂದು ದಿನ ಆತನು ಬಹು ಬಳಲಿ ಹಸಿವಿನಿಂದ ಕ್ಲಾಂತನಾದನು. ಜಂಗಮರೂಪವಾದ ಶಿವಲಿಂಗವನ್ನು ಅರ್ಚಿಸುತ್ತಿದ್ದ ಆತನು ಸಂಪದ್ಭರಿತವಾದ ಹಿಮವತ್ಪರ್ವತದ ಕಂದರಗಳನ್ನು

ತದಾ ತಮಾಗತಂ ದೃಷ್ಟ್ವಾ ಹಿಮವಾನ್ ಶೈವಪುಂಗವಃ ।
ಅಭ್ಯುತ್ಥಾಯ ಯಥಾಶಾಸ್ತ್ರಂ ಪೂಜಯಾಮಾಸ ಸಾದರಂ ॥೨೦॥

ಪ್ರೀತಸ್ತದನು ಪೂಜಾಂತೇ ಹಿಮವಂತಂ ನಯಾನ್ವಿತಂ ।
ಸಂವೀಕ್ಷ್ಯ ವಚನಂ ಚಾರು ಜಗಾದ ದ್ವಿಜಪುಂಗವಃ ॥೨೨॥

ಹಿಮವನ್ ಸರ್ವಶಾಸ್ತ್ರಜ್ಞ ಸರ್ವವೇದಾಶ್ರಯಾನಘ ।
ಸರ್ವಲಕ್ಷಣಸಂಪನ್ನ ಶಿವಭಕ್ತವರಾಮಲ ॥೨೩॥

ಬಹುಕಾಲಂ ತಪಸ್ತಪ್ತಮತ್ರೈವ ಗಿರಿಗಹ್ವರೇ ।
ಲಿಂಗಪೂಜೈವ ಸತತಂ ಯಥಾಶಾಸ್ತ್ರಂ ಮಯಾ ಕೃತಾ ॥೨೪॥

ಜನ್ಮಕೋಟಿಸಹಸ್ರಾಣಿ ಗತಾನಿ ಪ್ರತಿಜನ್ಮನಿ ।
ಲಿಂಗಪೂಜೈವ ಸತತಂ ಕೃತಾ ವಿಧಿವದಾದರಾತ್ ॥೨೫॥

ಲಿಂಗಪೂಜಾಪ್ರಭಾವೇನ ಜನ್ಮಾದ್ಯಂ ಯನ್ಮಮಾಭವತ್ ।
ತದಾ ಪ್ರಭೃತಿ ಜನ್ಮಾನಿ ಸ್ಮರ್ಯತೇ ನಾತ್ರ ಸಂಶಯಃ ॥೨೬॥

---

ನೋಡುತ್ತಾ ಸಂಚರಿಸಿ ಹಿಮವಂತನ ಮನೆಗೆ ಬಂದನು. ಹಾಗೆ ಬರುತ್ತಿರುವ ಬ್ರಾಹ್ಮಣನನ್ನು ನೋಡಿ ಶೈವಶ್ರೇಷ್ಠನಾದ ಹಿಮವಂತನು ಆಸನದಿಂದೆದ್ದು ಅಭ್ಯುತ್ಥಾನಾದಿಗಳನ್ನು ಮಾಡಿ ಶಾಸ್ತ್ರರೀತಿಯಾಗಿ ಆದರದಿಂದ ಅವನನ್ನು ಪೂಜಿಸಿದನು. ॥೯-೨೦-೨೧॥

ಪೂಜೆಯಾದ ಬಳಿಕ ಆ ಬ್ರಾಹ್ಮಣಶ್ರೇಷ್ಠನು ವಿನೀತನಾದ ಹಿಮವಂತನನ್ನು ನೋಡಿ ಈರೀತಿ ಮನೋಹರವಾದ ಮಾತನ್ನು ಹೇಳಿದನು. "ಎಲೈ! ಹಿಮವಂತನೇ! ನೀನು ಸರ್ವಶಾಸ್ತ್ರವನ್ನೂ ಬಲ್ಲವನಾಗಿರುತ್ತೀಯೆ. ಮತ್ತು ಸಮಸ್ತ ಲಕ್ಷಣಗಳೂ ನಿನ್ನಲ್ಲಿವೆ. ನೀನು ಶಿವಭಕ್ತಾಗ್ರಣಿಯೂ, ವಿಮಲನೂ ಆಗಿರುವೆ. ನಾನು ಈ ಬೆಟ್ಟದ ಗುಹೆಗಳಲ್ಲಿ ಬಹುಕಾಲ ತಪಸ್ಸನ್ನು ಮಾಡಿದೆನು. ವಿಧಿಗನುಸರಿಸಿ ಶಿವಲಿಂಗಪೂಜೆಯನ್ನೂ ಮಾಡಿರುವೆನು. ॥೨೨-೨೩-೨೪॥

ನಾನು ಒಂದು ಸಾವಿರ ಕೋಟಿ ಜನ್ಮವನ್ನು ಕಳೆದಾಯಿತು. ಪ್ರತಿಯೊಂದು ಜನ್ಮದಲ್ಲಿಯೂ ನಿತ್ಯವೂ ಶಿವಲಿಂಗಪೂಜೆಯನ್ನು ವಿಧಿವತ್ತಾಗಿ ಎಸಗಿದೆನು. ಆ ಲಿಂಗಪೂಜೆಯ ಪ್ರಭಾವದಿಂದ ನನ್ನ ಮೊದಲಿನ ಜನ್ಮದಿಂದ ಹಿಡಿದು ಎಲ್ಲಾ ಜನ್ಮಗಳ

ತತ ಏವ ಮಯಾ ನಿತ್ಯಂ ಕ್ರಿಯತೇ ಲಿಂಗಪೂಜನಂ ।
ಪಾತಕಾನಿ ವಿಚಿತ್ರಾಣಿ ವಿನಷ್ಟಾನಿ ಬಹೂನಿ ಮೇ ॥೭೭॥

ಕಾಶೀಪ್ರಾಪ್ತ್ಯರ್ಥಮುದ್ಯೋಗಃ ಕ್ರಿಯತೇ ಸರ್ವದಾ ಮಯಾ ।
ಜಾಯಂತೇ ಬಹವೋ ವಿಘ್ನಾಃ ಕಿಂ ಕರ್ತವ್ಯಮತಃ ಪರಂ ॥೭೮॥

ಕುತ್ರ ಕಾರ್ಯಾ ತಪಶ್ಚರ್ಯಾ ಕರ್ತವ್ಯಂ ಕೀದೃಶಂ ತಪಃ ।
ಕೋ ವಾ ವಿಘ್ನಹರೋ ಮಂತ್ರೋ ವದ ಸರ್ವಂ ವಿಶೇಷತಃ ॥೭೯॥

॥ ಹಿಮವಾನುವಾಚ ॥

ಗೌರೀಶೃಂಗಮಿತಿ ಖ್ಯಾತಂ ಏಕಂ ಶೃಂಗಪರಂ ಮುನೇ ।
ತತ್ರಾಸ್ತ್ಯೇಕಂ ಸರೋ ರಮ್ಯಂ ದಿವ್ಯೋದಕವಿರಾಜಿತಂ ॥೮೦॥

ತತ್ತೀರೇ ವಿಮಲಂ ಲಿಂಗಮೇಕಂ ಗೌರ್ಯಾ ವಿನಿರ್ಮಿತಂ ।
ತತ್ರ ಕಾಶ್ಮೀರಗಣಪಃ ಕಶ್ಚಿದ್ಗೌರ್ಯಾ ವಿನಿರ್ಮಿತಃ ॥೮೧॥

ತತ್ರ ಗೌರ್ಯಾಃ ಸರಸ್ತೀರೇ ಸ್ನಾನಂ ಕೃತ್ವಾ ವಿಶೇಷತಃ ।
ಲಿಂಗಂ ಸಂಪೂಜ್ಯ ಯತ್ನೇನ ಯಥಾಶಾಸ್ತ್ರಂ ತತಃ ಪರಂ ॥೮೨॥

---

ವೃತ್ತಾಂತವೂ ಸ್ಮರಣೆಗೆ ಬರುತ್ತದೆ. ಆದುದರಿಂದಲೇ ನಾನು ಪ್ರತಿನಿತ್ಯವೂ ಶಿವಲಿಂಗ ಪೂಜೆಯನ್ನು ಮಾಡುತ್ತಿದ್ದೇನೆ. ವಿಚಿತ್ರಗಳಾದ ಅನೇಕ ಪಾಪಗಳು ನಷ್ಟವಾದುವು. ನಾನು ಯಾವಾಗಲೂ ಕಾಶೀಪ್ರಾಪ್ತಿಗಾಗಿಯೇ ಕೆಲಸಮಾಡುತ್ತಿದ್ದೇನೆ. ಆದರೂ ತೊಂದರೆಗಳು ನನಗೆ ಬಂದು ಒದಗುವುವು. ಆದುದರಿಂದ ಇನ್ನು ಮುಂದೆ ಏನು ಮಾಡಬೇಕು? ನಾನೆಲ್ಲಿ ತಪಸ್ಸುಮಾಡಲಿ? ಎಂತಹ ತಪಸ್ಸನ್ನು ಎಸಗಲಿ? ವಿಘ್ನನಾಶಕವಾದ ಮಂತ್ರವಾದರೂ ಯಾವುದು? ಎಂಬುದನ್ನೆಲ್ಲಾ ವಿಸ್ತಾರವಾಗಿ ಹೇಳು" ಎಂದು ಆ ಬ್ರಾಹ್ಮಣನು ಕೇಳಿದನು. ಆಗ ಹಿಮವಂತನು ಮುನಿಯೊಡನೆ, ॥೭೫-೭೬-೭೭-೭೮-೭೯॥

ಎಲೈ ಮುನಿಯೇ ಕೇಳು, ಗೌರೀಶಿಖರವೆಂದು ಪ್ರಸಿದ್ಧವಾದ ಒಂದು ಶೃಂಗವಿದೆ. ಅಲ್ಲಿ ನಿರ್ಮಲೋದಕಪೂರಿತವಾದ ಒಂದು ಕೊಳವಿರುತ್ತದೆ. ಆದರ ತೀರದಲ್ಲಿ ಶ್ರೀಗೌರಿಯು ನಿರ್ಮಿಸಿದ ಒಂದು ಶಿವಲಿಂಗವಿದೆ. ಮತ್ತು ಗೌರಿಯಿಂದ ರಚಿಸಲ್ಪಟ್ಟ ಕಾಶ್ಮೀರ ಗಣಪತಿಯೂ ಅಲ್ಲಿ ಪ್ರತಿಷ್ಠಿತವಾಗಿದೆ. ಬಳಿಕ ಗೌರೀಕೊಳ

ಯಥಾಶಾಸ್ತ್ರಂ ವಿಧಾನೇನ ಕಾಶ್ಮೀರಗಣನಾಯಕಂ ।
ಪೂಜಯಸ್ವಾತಿಯತ್ನೇನ ಗಣಾನಾಂತ್ವೇತಿ ಮಂತ್ರತಃ ॥೮೩॥

ತತ್ಪ್ರೀತ್ಯರ್ಥಂ ತಪಶ್ಚರ್ಯಾ ತತ್ರ ಕಾರ್ಯಾ ನಿರಂತರಂ ।
ಪಂಚಾಗ್ನಿಮಧ್ಯೇ ಪಂಚಾಸ್ಯಪುತ್ರಧ್ಯಾನಪುರಃಸರಂ ॥೮೪॥

ಗಣಾನಾಂತ್ವೇತಿ ಮಂತ್ರೋಯಂ ಸರ್ವವಿಘ್ನವಿನಾಶಕಃ ।
ಜಪನೀಯಃ ಪ್ರಯತ್ನೇನ ಸರ್ವವಿಘ್ನೋಪಶಾಂತಯೇ ॥೮೫॥

ಇತ್ಯುಕ್ತಸ್ತದನುಜ್ಞಾತಃ ಸಂತುಷ್ಟಃ ಶೈವಪುಂಗವಃ ।
ಮತ್ವಾ ಕೃತಾರ್ಥಮಾತ್ಮಾನಂ ಗೌರೀಶೃಂಗೇ ಜಗಾಮ ಚ ॥೮೬॥

ತಸ್ಮಿನ್ ಸರೋವರೇ ರಮ್ಯೇ ಸ್ನಾತ್ವಾಥ ವಿಧಿಪೂರ್ವಕಂ ।
ಗೌರೀಲಿಂಗಮಿತಿ ಖ್ಯಾತಂ ತಲ್ಲಿಂಗಮತಿಶೋಭನಂ ॥೮೭॥

ತತೋ ಬಿಲ್ವದಳೈಃ ಶುದ್ಧೈಃ ತತ್ಸರೋವಿಮಲೈರ್ಜಲೈಃ ।
ಪೂಜಯಾಮಾಸ ಪೂತಾತ್ಮಾ ಗೌರೀಲಿಂಗಮಘಾಪಹಂ ॥೮೮॥

---

ದಲ್ಲಿ ಮಿಂದು ತೀರದಲ್ಲಿರುವ ಲಿಂಗವನ್ನು ಶಾಸ್ತ್ರರೀತಿಯಾಗಿ ಪೂಜಿಸಿ ಅನಂತರ ಶಾಸ್ತ್ರನಿಯಮವನ್ನನುಸರಿಸಿ, ಗಣಾನಾಂತ್ವಾ ಎಂಬ ಮಂತ್ರದಿಂದ ಗಣಪತಿಯನ್ನು ಅರ್ಚಿಸು. ಆ ಗಣೇಶನ ಪ್ರೀತಿಗಾಗಿ ಪಂಚಾಗ್ನಿಗಳ ನಡುವೆ ಶ್ರೀಶಿವಪುತ್ರನಾದ ಗಣೇಶನ ಧ್ಯಾನವನ್ನು ಮಾಡುತ್ತ ತಪಸ್ಸುಮಾಡಬೇಕು. ಗಣಾನಾಂತ್ವಾ ಎಂಬ ಮಂತ್ರವು ಸಮಸ್ತ ವಿಘ್ನಗಳನ್ನೂ ಪರಿಹರಿಸುವುದಾಗಿದೆ. ಸಮಸ್ತ ವಿಘ್ನನಿವೃತ್ತಿಗಾಗಿ ಶ್ರೀಗಣೇಶನನ್ನು ಪೂಜಿಸಬೇಕು. ||೮೦-೮೧-೮೨-೮೩-೮೪-೮೫||

ಹೀಗೆ ಹಿಮವಂತನು ಹೇಳಲು ಆ ಬ್ರಾಹ್ಮಣನು ಆತನ ಅನುಜ್ಞೆಯನ್ನು ಪಡೆದು ಸಂತೋಷದಿಂದ ತಾನು ಧನ್ಯನಾದೆನೆಂದು ತಿಳಿದು ಗೌರೀಶಿಖರಕ್ಕೆ ಪ್ರಯಾಣ ಬೆಳಸಿದನು. ಅಲ್ಲಿರುವ ಮನೋಜ್ಞವಾದ ಆ ಸರೋವರದಲ್ಲಿ ವಿಧಿಯಂತೆ ಸ್ನಾನಮಾಡಿ, ಗೌರೀಲಿಂಗವೆಂದು ಪ್ರಸಿದ್ಧವಾಗಿರುವ ಆ ಶಿವಲಿಂಗವನ್ನು ಬಿಲ್ವದಳಗಳಿಂದಲೂ, ಆ ಸರೋವರದ ಶುದ್ಧೋದಕದಿಂದಲೂ ಪೂಜಿಸಿದನು. ಪಾಪನಾಶಕವಾದ ಆ ಗೌರೀಲಿಂಗವನ್ನು ಅರ್ಚಿಸಿದುದರಿಂದ ಆತನು ಪೂತನಾದನು. ಬಳಿಕ

ತತೋ ಗಣಾಧಿಪಂ ಸಮ್ಯಕ್ ಅಭಿಷಿಚ್ಯ ಯಥಾವಿಧಿ ।
ಚಕಾರ ಪೂಜಾಂ ವಿಮಲೈರ್ಬಿಲ್ವದೂರ್ವಾಂಕುರೈರಪಿ ॥೮೯॥

ಪ್ರಣಮ್ಯ ಬಹುಧಾ ಸ್ತುತ್ವಾ ಮನುಂ ವಿಘ್ನಹರಂ ಜಪನ್ ।
ಪಂಚಾಗ್ನಿಮಧ್ಯೇ ಸಂವಿಶ್ಯ ತಪಶ್ಚಕ್ರೇ ದೃಢವ್ರತಃ ॥೯೦॥

ಶೈವಮುಗ್ರತಪೋನಿಷ್ಠಂ ವಿಲೋಕ್ಯೇಂದ್ರಾದಯಃ ಸುರಾಃ ।
ಕಂಪಾಯಮಾನಾಸ್ತಿಷ್ಠಂತಿ ಕೃತಾಂಜಲಿಪುಟಾಃ ಸದಾ ॥೯೧॥

ಏವಮೇವ ಸಶೈವೇಂದ್ರಂ ತ್ರಿಪಂಚಾಶದ್ಯುಗಾವಧಿ ।
ಚಕಾರೋಗ್ರಂ ತಪಃ ಸಮ್ಯಕ್ ತ್ಯಕ್ತಾಹಾರೋ ಭೃಶಂ ಮುದಾ ॥೯೨॥

ತತಃ ಪ್ರಸಾದಿತಸ್ತೇನ ಗಣೇಶೋ ವಿಘ್ನನಾಶಕಃ ।
ವಿಘ್ನಾಂಧಕಾರಮಾರ್ತಂಡಃ ಶುಂಡಾದಂಡವಿರಾಜಿತಃ ॥೯೩॥

ಪ್ರಸನ್ನೇ ಸತಿ ವಿಘ್ನೇಶೇ ಸ್ತುತ್ವಾ ನತ್ವಾ ಮುಹುರ್ಮುಹುಃ ।
ಯಯಾಚೇ ಸ ವರಂ ಸ್ವೇಷ್ಟಂ ಸರ್ವವಿಘ್ನೌಘನಾಶಕಂ ॥೯೪॥

---

ಗಣಾಧಿಪನಿಗೆ ಅಭಿಷೇಕಮಾಡಿ ವಿಶುದ್ಧವಾದ ಬಿಲ್ವ, ದೂರ್ವಾಂಕುರ ಇವುಗಳಿಂದ ಅಲಂಕರಿಸಿದನು. ವಿಘ್ನನಾಶಕನಾದ ಆ ಗಣಪತಿಯ ಮಂತ್ರವನ್ನು ಅನೇಕ ಬಗೆಯಾಗಿ ಜಪಿಸಿ, ಬಳಿಕ ಪಂಚಾಗ್ನಿಗಳ ಮಧ್ಯೇ ದೃಢಮನಸ್ಕನಾಗಿ ತಪಸ್ಸನ್ನಾರಂಭಿಸಿದನು. ||೮೬-೮೭-೮೮-೮೯-೯೦||

ಹೀಗೆ ಉಗ್ರತಪೋನಿಷ್ಠನಾಗಿ ಆ ಈಶ್ವರೋಪಾಸಕನಾದ ಬ್ರಾಹ್ಮಣನನ್ನು ನೋಡಿ ಇಂದ್ರಾದಿ ದೇವತೆಗಳು ಗಡಗಡನೆ ನಡುಗುತ್ತಾ ಕೈಜೋಡಿಸಿಕೊಂಡು ನಿಂತಿದ್ದರು. ಹೀಗೆ ಆ ಶಂಭುಭಕ್ತಾಗ್ರಣಿಯು ಅನ್ನಾಹಾರಗಳನ್ನು ತ್ಯಜಿಸಿ ಐವತ್ತುಮೂರು ಯುಗಪರ್ಯಂತ ಘೋರತಪಸ್ಸನ್ನು ನೆರವೇರಿಸಿದನು. ಬಳಿಕ ವಿಘ್ನಗಳನ್ನು ಹೋಗಲಾಡಿಸುವ ವಿಘ್ನೇಶ್ವರನನ್ನು ಬಹಳವಾಗಿ ಸಂತೋಷಪಡಿಸಿದನು. ವಿಘ್ನವೆಂಬ ಕತ್ತಲೆಗೆ ಸೂರ್ಯಸ್ವರೂಪನೂ, ಶುಂಡಾದಂಡದಿಂದಭೂಷಿತನೂ, ಆದ ಗಣೇಶನು ಪ್ರಸನ್ನನಾಗಲು ಪುನಃಪುನಃ ಆತನಿಗೆ ನಮಿಸಿ ತನಗೆ ಬೇಕಾದ ವರಗಳನ್ನು ಕೇಳಿದನು. ||೯೧-೯೨-೯೩-೯೪||

ಗೌರೀಸುತ ಗಣಾಧೀಶ ಗಜವಕ್ತ್ರ ಶಿವಪ್ರಿಯ ।
ವಿಷ್ಣುಪೂಜಿತಪಾದಾಬ್ಜ ಪ್ರಸೀದ ವರದೋ ಭವ ॥೯೫॥

ಕಾಶೀಪ್ರಾಪ್ತ್ಯರ್ಥಮುದ್ಯುಕ್ತಂ ಯಥಾ ಮಾಂ ವಿಘ್ನರಾಶಯಃ ।
ನ ಬಾಧಂತೇ ತಥಾ ಸಮ್ಯಕ್ ತಥಾ ಕುರು ಗಣೇಶ್ವರ ॥೯೬॥

ಗಣೇಶ ಸರ್ವವಿಘ್ನೇಶ ವಿಘ್ನಾನ್ ಸಂಹರ ಸಂಹರ ।
ಕಾಶೀಪ್ರಾಪ್ತಿರ್ಯಥಾ ಭೂಯಾತ್ ತಥಾ ಕುರು ಗಣೇಶ್ವರ ॥೯೭॥

ಇತಿ ಸಂಪ್ರಾರ್ಥಿತಸ್ತೇನ ವಿಘ್ನೇಶೋ ವಿಘ್ನನಾಶಕಃ ।
ಸ ಪ್ರೀತೋ ವರದಸ್ತಸ್ಮೈ ದದೌ ವರಮನುತ್ತಮಂ ॥೯೮॥

ತತಸ್ತದಾಜ್ಞಯಾ ಶೈವಃ ಸಂತುಷ್ಟಸ್ತಂ ಪ್ರಣಮ್ಯ ಚ ।
ಕಾಶೀಂ ಶಿವಪುರೀಂ ರಮ್ಯಾಮಾಜಗಾಮ ಮಹಾಮತಿಃ ॥೯೯॥

ತತಃ ಕಾಶೀರಕ್ಷಕಾಂಶ್ಚ ಸಂಪ್ರಸಾದ್ಯ ದ್ವಿಜೋತ್ತಮಃ ।
ಸ್ನಾತ್ವಾ ಚ ಶಿವಗಂಗಾಯಾಂ ಆಗ್ನೀಧ್ರೇಶಂ ಪ್ರಣಮ್ಯ ಚ ॥೧೦೦॥

ವಕ್ರತುಂಡೇಶಮಭ್ಯರ್ಚ್ಯ ನತ್ವಾ ಶ್ರೀಕಾಲಭೈರವಂ ।
ವೀರೇಶಮಭಿವಾದ್ಯೈವ ನತ್ವಾ ಪಶುಪತೀಶ್ವರಂ ॥೧೦೧॥

---

"ಗೌರಿಯ ಮಗನಾದ ಗಣಪತಿಯೇ! ನನಗೆ ಪ್ರಸನ್ನನಾಗು, ಬೇಕಾದ ವರವನ್ನು ನೀಡು. ನೀನು ಸಮಸ್ತ ತೊಂದರೆಗಳನ್ನೂ ನಿವಾರಣೆಮಾಡತಕ್ಕವನು. ಆದುದರಿಂದ ನನಗೆ ಒದಗುವ ವಿಘ್ನಗಳನ್ನು ನಿವಾರಿಸು. ನನಗೆ ಕಾಶೀ ಪ್ರಾಪ್ತಿ ಯಾಗುವಂತೆ ಅನುಗ್ರಹಿಸು." ಹೀಗೆ ಪ್ರಾರ್ಥಿಸಲ್ಪಟ್ಟ ವಿಘ್ನನಾಶಕನಾದ ಗಣಪತಿಯು ಸುಪ್ರೀತನಾಗಿ ಆತನಿಗೆ ಹಾಗೆಯೇ ವರಗಳನ್ನು ಕೊಟ್ಟನು. ||೯೫-೯೬-೯೭-೯೮||

ಬಳಿಕ ಶೈವವರೇಣ್ಯನು ವಿಘ್ನೇಶ್ವರನ ಅಪ್ಪಣೆಯನ್ನು ಪಡೆದು ಆತನಿಗೆ ನಮಿಸಿ ಶಿವನ ನಗರಿಯಾದ ಕಾಶೀಪಟ್ಟಣವನ್ನು ಹೊಕ್ಕನು. ಅಲ್ಲಿ ಆ ದ್ವಿಜನು ಕಾಶೀರಕ್ಷಕರನ್ನು ಅರ್ಚಿಸಿ ಶಿವಗಂಗೆಯಲ್ಲಿ ಸ್ನಾನಮಾಡಿ ಆಗ್ನೀಧ್ರೇಶನನ್ನು ಪೂಜಿಸಿದನು. ಅಮೇಲೆ ವಕ್ರತುಂಡ, ಕಾಲಭೈರವ, ವೀರೇಶ, ಇವರನ್ನು ಪೂಜಾದಿ

ದಂಡಪಾಣಿಪ್ರಸಾದೇನ ಜ್ಞಾನವಾಪೀಜಲೇಽಮಲೇ ।
ಸ್ನಾತ್ವಾ ಜ್ಞಾನೇಶಮಭ್ಯರ್ಚ್ಯ ನತ್ವಾ ಪಂಚವಿನಾಯಕಾನ್ ॥೧೦೨॥

ಢುಂಢಿರಾಜಂ ಸಮಭ್ಯರ್ಚ್ಯ ಸರ್ವವಿಘ್ನೌಘನಾಶಕಂ ।
ತತೋ ವಿವೇಶ ಧರ್ಮಾತ್ಮಾ ಮಹಾಶೈವಾಶ್ರಯಂ ಸದಾ ॥೧೦೩॥

ಇದಮೇವ ಮಹಾಸ್ಥಾನಂ ಮುಕ್ತಿಮಂಟಪಸಂಜ್ಞಕಂ ।
ಯತ್ರೋಪದಿಶ್ಯತೇ ಮಂತ್ರಂ ಶೈವಾನಾಂ ಮುಕ್ತಿಕಾಂಕ್ಷಿಣಾಂ॥೧೦೪॥

ಅನನ್ಯಶರಣಾನಾಂ ತು ಮದ್ಭಕ್ತಾನಾಮಘಾಪಹಂ ।
ತತಃ ಪ್ರವಿಶ್ಯ ಧರ್ಮಾತ್ಮಾ ಮಹಾಶೈವಾಶ್ರಯಂ ಸದಾ ॥೧೦೫॥

ಮುಕ್ತಿಮಂಟಪಮತ್ಯಂತಂ ಸುಖಂ ಪ್ರಾಪ್ಯ ದ್ವಿಜೋತ್ತಮಃ ।
ತತೋ ಮಮಾಂತಿಕಂ ಪ್ರಾಪ್ಯ ಚಕಾರಾಭ್ಯರ್ಚನಂ ಮುದಾ ॥೧೦೬॥

ಮಮ್ಯೆವ ಲಿಂಗೇ ವಿಮಲೇ ಮುಕ್ತಿದೇ ವೇದಸಂಸ್ತುತೇ ।
ತತಃ ಪ್ರಣಮ್ಯ ಬಹುಧಾ ಸ್ತುತ್ವಾ ಸ್ತೋತ್ರೈರನೇಕಧಾ ॥೧೦೭॥

---

ಗಳಿಂದ ತೃಪ್ತಿಪಡಿಸಿ, ದಂಡಪಾಣಿಯ ಪ್ರಸಾದದಿಂದ ಜ್ಞಾನವಾಪಿಯ ನಿರ್ಮಲ ಜಲದಲ್ಲಿ ಮಿಂದು ಜ್ಞಾನೇಶನನ್ನು ಅರ್ಚಿಸಿದನು. ಆಮೇಲೆ ಪಂಚವಿನಾಯಕರನ್ನೂ ಸರ್ವವಿಘ್ನನಾಶಕನಾದ ಢುಂಡಿರಾಜನನ್ನೂ ಪೂಜಿಸಿ, ಆ ಮಹಾಶೈವಶ್ರೇಷ್ಠನು ಶಿವಾಲಯುವನ್ನು ಹೊಕ್ಕನು. ||೯೯-೧೦೦-೧೦೧-೧೦೨-೧೦೩||

ಇದೇ ಮುಕ್ತಿಮಂಟಪವೆಂದು ಹೆಸರುಳ್ಳ ಮಹಾಸ್ಥಾನವಾಗಿದೆ. ಇಲ್ಲಿ ಮುಮುಕ್ಷುಗಳಾದ ಈಶ್ವರಾರಾಧಕರಿಗೆ ಶಿವಮಂತ್ರೋಪದೇಶವು ಕೊಡಲ್ಪಡುತ್ತದೆ. ಅನನ್ಯ ಶರಣರಾದ ನನ್ನ ಸೇವಕರಿಗೆ ಇದು ಪಾಪಹರವಾದುದು. ಬಳಿಕ ಆ ಧರ್ಮಾತ್ಮನಾದ ಶಾಂಕರನು ಮಹಾಶೈವಸ್ಥಾನವನ್ನು ಪ್ರವೇಶಿಸಿದನು. ಆ ಮುಕ್ತಿ ಮಂಟಪವು ಅತ್ಯಂತ ಸುಖದಾಯಕವಾದುದು. ಬ್ರಾಹ್ಮಣನಾದ ಆತನು ಅಲ್ಲಿ ಸಂಪೂರ್ಣ ಸುಖವನ್ನು ಹೊಂದಿ ಅನಂತರ ನನ್ನ ಸಮೀಪಕ್ಕೆ ಬಂದು ನನ್ನನ್ನು ಪೂಜಿಸಿದನು. ||೧೦೪-೧೦೫-೧೦೬||

ಅನಂತರ ಆ ಬ್ರಾಹ್ಮಣನು ನಿರ್ಮಲವಾಗಿಯೂ, ಮುಕ್ತಿಪ್ರದವಾಗಿಯೂ ವೇದಗಳಿಂದ ಕೀರ್ತಿತವಾಗಿಯೂ ಇರುವ ಶಿವಲಿಂಗವನ್ನು ಅನೇಕ ಬಾರಿ ಸ್ತುತಿಸಿ

ಚಕಾರ ನೃತ್ಯಂ ಬಹುಧಾ ಸಾದರಂ ಭಕ್ತಿಪೂರ್ವಕಂ ।
ಉಪವಿಶ್ಯ ತತೋಽತ್ರೈವ ಜಪ್ತ್ವಾ ಮಂತ್ರಂ ಶಿವಾತ್ಮಕಂ ॥೧೦೮॥

ತತೋಽಂತರ್ಗೃಹಯಾತ್ರಾದಿ ಕೃತ್ವಾ ಭಕ್ತಿಪುರಃಸರಂ ।
ಜ್ಞಾನವಾಪೀತಟೇ ರಮ್ಯೇ ನಿರಾಹಾರೋ ಜಿತೇಂದ್ರಿಯಃ ॥೧೦೯॥

ಚಕಾರೋಗ್ರಂ ತಪಃ ಸಮ್ಯಕ್ ಮುಕ್ತ್ಯರ್ಥಂ ಶೈವಪುಂಗವಃ ।
ಶಿವೈಕನಿರತೋ ನಿತ್ಯಂ ಷಟ್‌ಸಹಸ್ರ ಯುಗಾವಧಿ ॥೧೧೦॥

ಲಿಂಗಪೂಜಾಂ ಪ್ರಕುರ್ವಾಣೋ ವದನ್ ಶಿವಶಿವೇತಿ ಚ ।
ತತೋ ಮಮಾಂಕೇ ಸಂವಿಶ್ಯ ಮಮೈವಾನುಗ್ರಹಾದ್ದ್ವಿಜಃ ॥೧೧೧॥

ಮಂತ್ರಾಧಿರಾಜಮಮಲಂ ಜಪ್ತ್ವಾ ಪಾಪೌಘನಾಶನಂ ।
ಶೈವಂ ಪ್ರಾಪ್ಯ ಮಹಾಮಂತ್ರಂ ಮೋಕ್ಷಂ ಸಂಪ್ರಾಪ ಶೋಭನೇ ॥೧೧೨॥

ಇತ್ಯುಕ್ತ್ವಾ ಸಾ ಮನೋರಮ್ಯಾ ಮುಕ್ತಿಮಂಟಪದೇವತಾ ।
ಯಯೌ ಸ್ವಸದನಂ ರಮ್ಯಂ ಅಂಬಿಕೇ ವರವರ್ಣಿನಿ ॥೧೧೩॥

---

ನಮಿಸಿದನು. ಬಳಿಕ ಭಕ್ತಿಪೂರ್ವಕವಾಗಿ ನರ್ತನವನ್ನೆಸಗಿದನು. ಈ ಮುಕ್ತಿಮಂಟಪದಲ್ಲಿಯೇ ಕುಳಿತುಕೊಂಡು ಶಿವಮಂತ್ರವನ್ನು ಜಪಿಸಿದನು. ಅನಂತರ ಭಕ್ತಿಯಿಂದ ಕೂಡಿ ಅಂತರ್ಗೃಹವೇ ಮೊದಲಾದ ಯಾತ್ರೆಗಳನ್ನು ನೆರವೇರಿಸಿ ರಮಣೀಯವಾದ ಆ ಜ್ಞಾನವಾಪಿಯ ತೀರದಲ್ಲಿ ಆಹಾರವನ್ನು ಬಿಟ್ಟು ಜಿತೇಂದ್ರಿಯನಾಗಿ ಉಗ್ರ ತಪಸ್ಸನ್ನಾಚರಿಸಿದನು. ಕೇವಲ ಶಿವಧ್ಯಾನಾಸಕ್ತನಾಗಿ ಆರುಸಾವಿರ ಯುಗ ಪರ್ಯಂತ ಮುಕ್ತಿಗಾಗಿ ತಪಸ್ಸನ್ನು ಆಚರಿಸಿದನು. ॥೧೦೭-೧೦೮-೧೦೯-೧೧೦॥

ಬಳಿಕ ಆತನು ಶಿವಲಿಂಗಪೂಜೆಯನ್ನು ಮಾಡುತ್ತಾ, ಶಿವ, ಶಿವ, ಎಂದು ನಾಮೋಚ್ಚಾರಣೆ ಮಾಡುತ್ತಾ ನನ್ನ ಅಂಕದಲ್ಲಿ ಕುಳಿತು ನನ್ನ ಅನುಗ್ರಹದಿಂದ ಮಂತ್ರರಾಜನೂ, ಪಾಪನಾಶಕವೂ, ವಿಮಲವೂ ಆದ ಶಿವಮಂತ್ರವನ್ನು ಜಪಿಸಿ ಮೋಕ್ಷವನ್ನು ಹೊಂದಿದನು. ಎಲೈ ವರವರ್ಣಿನಿಯಾದ ಅಂಬಿಕೆಯೇ ಕೇಳು; ಆ ಮನೋಜ್ಞಳಾದ ರಮಣಿಯು ಹೀಗೆ ನನ್ನೊಡನೆ ಹೇಳಿ ಮುಕ್ತಿಮಂಟಪ ದೇವತೆಯಾದ ಅವಳು ತನ್ನ ಮನೆಗೆ ಹೋದಳು. ॥೧೧೧-೧೧೨-೧೧೩॥

ಯೋ ಮುಕ್ತಿಮಂಟಪಮನರ್ಘ್ಯಮನನ್ಯಲಭ್ಯಂ ।
ಸಂಪ್ರಾಪ್ಯ ಶೈವಮನುಮಪ್ಯತಿಪುಣ್ಯಲಭ್ಯಂ ॥೧೧೪॥

ಸಂಪೂಜಯಂತಿ ಶಿವಮೇಕಮುಪಾಸ್ಯಮೀಶಂ ।
ತೇ ಸರ್ವಥಾ ಮುನಿವರಾಃ ಶಿವಮಾಪ್ನುವಂತಿ ॥೧೧೫॥

**ಇತಿ ಶ್ರೀ ಶಿವರಹಸ್ಯೇ ಸಪ್ತಮಾಂಶೇ ಮುಕ್ತಿಮಂಟಪ ಮಹಿಮಾ ವರ್ಣನೇ ಸಪ್ತಮೋಽಧ್ಯಾಯಃ**

---

ಯಾರು ಇತರರಿಗೆ ಅಲಭ್ಯವೂ, ಅನರ್ಘ್ಯವೂ, ಆದ ಮುಕ್ತಿಮಂಟಪವನ್ನೂ, ಕೇವಲ ಪುಣ್ಯಕರ್ಮಫಲಗಳಿಂದ ಹೊಂದಲು ಯೋಗ್ಯವಾದ ಶಿವಮಂತ್ರವನ್ನೂ ಹೊಂದಿ, ಅದ್ವಿತೀಯನಾಗಿಯೂ ಉಪಾಸನೆಗೆ ಅರ್ಹನಾಗಿಯೂ ಇರುವ ಶಿವನನ್ನು ಅರ್ಚಿಸುತ್ತಾರೋ ಅಂತಹ ಮುನಿಗಳು ಸಂಸಾರಬಂಧನಾದಿಗಳನ್ನು ಬಿಡಿಸಿಕೊಂಡು ಸಾಕ್ಷಾತ್ ಶಿವನನ್ನು ಸೇರುತ್ತಾರೆ. ಎಂದು ಸೂತರು ಸಮಸ್ತ ಮುನಿಗಳಿಗೂ ತಿಳಿಯಪಡಿಸಿದರು. ॥೧೧೪-೧೧೫॥

ಇಲ್ಲಿಗೆ ಶ್ರೀ ಶಿವರಹಸ್ಯದ ಏಳನೆಯ ಅಂಶದಲ್ಲಿ ಮುಕ್ತಿಮಂಟಪ
ವರ್ಣನೆಯಲ್ಲಿ ಏಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀ ಶಿವರಹಸ್ಯೇ

## ಉಗ್ರಾಖ್ಯೇ

### ಸಪ್ತಮಾಂಶೇ ಪೂರ್ವಾರ್ಧೇ

### ಅಷ್ಟಮೋಽಧ್ಯಾಯಃ

॥ ಶ್ರೀಪಾರ್ವತ್ಯುವಾಚ ॥

**ಶಿವಾನಂದಮಯಾನಂದ ಜ್ಞಾನವಾಪೀತಟೇ ಶುಭೇ ।**
**ಕೇನ ಪುಣ್ಯಪ್ರಭಾವೇನ ದಂಡಪಾಣಿಃ ಸ್ಥಿರಂ ಸ್ಥಿತಃ ॥೧॥**

**ಪುರಾ ಚೀರ್ಣಂ ಕಿಮೇತೇನ ತಪಶ್ಚರ್ಯಾ ಕಥಂ ಕೃತಾ ।**
**ಕುತ್ರ ಸ್ಥಿತಂ ಪುರಾನೇನ ತತ್ಸರ್ವಂ ವದ ಶಂಕರ ॥೨॥**

॥ ಶ್ರೀಶಿವ ಉವಾಚ ॥

**ಹರಿಕೇಶವನಂ ನಾಮ ಕಾಶ್ಯಾಮೇವ ವರಾನನೇ ।**
**ಶೀಘ್ರಂ ಸಿದ್ಧಿಕರಂ ರಮ್ಯಂ ವಿಲಾಸಾಶ್ರಮಮಸ್ತಿ ಮೇ ॥೩॥**

---

## ಎಂಟನೆಯ ಅಧ್ಯಾಯ

"ಎಲೈ! ಮಂಗಳಕರನೂ, ಆನಂದರೂಪನೂ ಆದ ಶಂಕರನೇ! ಜ್ಞಾನವಾಪಿಯ ತೀರದಲ್ಲಿ ದಂಡಪಾಣಿಯು ಯಾವ ಪುಣ್ಯಪ್ರಭಾವದಿಂದ ನೆಲಸಿರುವನು? ಹಿಂದೇನಾದರೂ ಆತನು ತಪಶ್ಚರ್ಯೆಯನ್ನು ನೆರವೇರಿಸಿದ್ದನೇ? ಹಿಂದೆ ಅವನು ಎಲ್ಲಿ ಇದ್ದನು? ಹೇಗೆ ತಪಸ್ಸುಮಾಡಿದನು? ಎಂದು ಮೊದಲಾಗಿ ಎಲ್ಲವನ್ನೂ ಹೇಳು" ಎಂದು ಪಾರ್ವತಿಯು ಪುನಃ ಪ್ರಶ್ನಿಸಿದಳು. ಆಗ ಶಂಕರನು ಹೀಗೆಂದನು. ॥೧-೨॥

"ಎಲೌ ಮಂಗಳಕರಳೇ, ಕೇಳು. ಕಾಶಿಯಲ್ಲಿ ತಪಸ್ಸಿಗೆ ಜಾಗ್ರತೆ ಸಿದ್ಧಿಯನ್ನು ಕೊಡುವ ನನ್ನ ವಿಲಾಸಸ್ಥಾನವಾದ ಹರಿಕೇಶ ಎಂಬ ಹೆಸರುಳ್ಳ ಒಂದು ವನವಿರು

ಬಿಲ್ವಮಂದಾರಪುನ್ನಾಗಪೂಗಲೋಧ್ರದ್ರುಮಾವೃತಂ।
ದ್ರಾಕ್ಷಾರಸಾಲರುದ್ರಾಕ್ಷಕೋವಿದಾರವನಾಶ್ರಯಂ ॥೪॥

ಖರ್ಜೂರನಾರಿಕೇಳಾಮ್ರಕರವೀರೈರ್ವಿರಾಜಿತಂ।
ಜಂಬೀರಹೇಮಕದಳೀತಾಲಸಾಲಸಮಾವೃತಂ ॥೫॥

ಆಮ್ರಾತಕಾರ್ಜುನಾಶ್ವತ್ಥಕೇತಕೀತರುಸಂವೃತಂ।
ನಾನಾವಿಧಲತಾಕೀರ್ಣನಾನಾದ್ರುಮವಿರಾಜಿತಂ ॥೬॥

ನಾನಾವಿಧಲತಾಕುಂಜಮಂಜುಲಂ ನಯನಪ್ರಿಯಂ।
ವಸಂತಪ್ರಮುಖಾನೇಕಋತುಭಿಃ ಸಂಶ್ರಿತಂ ಸದಾ ॥೭॥

ನಾನಾವಿಧಾನೇಕಪುಷ್ಪಸಂಕುಲಂ ಸರ್ವದಾ ಶುಭಂ।
ನಾನಾವಿಧಫಲಾಕೀರ್ಣಂ ಘನಚ್ಛಾಯಮಘಾಪಹಂ ॥೮॥

ಏತಾದೃಶವನೇ ರಮ್ಯೇ ಹೇಮರಾಜಿವಿರಾಜಿತಂ।
ನಾನಾವಿಧಲತಾಕೀರ್ಣಂ ನಾನಾದ್ರುಮವಿರಾಜಿತಂ ॥೯॥

---

ವುದು. ಅದು ಬಿಲ್ವ, ಮಂದಾರ, ಪುನ್ನಾಗ, ಅಡಿಕೆ, ಲೋಧ್ರ, ದಾಕ್ಷಾಲತೆ, ಮಾವು, ರುದ್ರಾಕ್ಷ, ಕೋವಿದಾರ, ಇವೇ ಮೊದಲಾದ ವೃಕ್ಷಗಳಿಂದ ಕೂಡಿದೆ. ಮತ್ತು ಖರ್ಜೂರ, ತೆಂಗು, ಮಾವು, ಕರವೀರ ಇವುಗಳಿಂದ ಆ ವನವು ವಿಶೇಷವಾಗಿ ಶೋಭಿಸುತ್ತಿದೆ. ನಿಂಬೆ, ಬಂಗಾರದ ಬಾಳೆ, ತಾಳೆ, ಸಜ್ಜ, ಆಮ್ರಾತಕ, ಅರ್ಜುನ, ಅಶ್ವತ್ಥ, ಕೇದಿಗೆ, ಇವೇ ಮೊದಲಾದ ಮರಗಳಿಂದ ಅದು ನಿಬಿಡವಾಗಿದೆ. ಅಲ್ಲದೇ ಬಗೆಬಗೆಯಾದ ಬಳ್ಳಿಗಳು, ನಾನಾ ತರಹದ ಮರಗಳು ಅಲ್ಲಿ ವಿಶೇಷವಾಗಿ ಸುತ್ತುವರಿದಿವೆ. ॥೩-೪-೫-೬॥

ಮತ್ತು ಆ ಹರಿಕೇಶವೆಂಬ ವನವು ತರತರದ ಬಳ್ಳಿಗಳ ಮನೆಗಳಿಂದ ನಯನ ಮನೋಹರವಾಗಿದೆ. ಅಲ್ಲಿ ವಸಂತ ಮೊದಲಾದ ಎಲ್ಲಾ ಋತುಧರ್ಮಗಳೂ ಸದಾ ಕಂಡುಬರುತ್ತವೆ. ಅನೇಕ ಬಗೆಯ ಹೂಗಳು, ಮತ್ತು ಬಗೆಬಗೆಯ ಹಣ್ಣುಗಳು, ದಟ್ಟವಾದ ನೆರಳು ಇವುಗಳಿಂದ ಕೂಡಿದ ಆ ವನವು ಸರ್ವಪಾಪಗಳನ್ನೂ ನಾಶಗೊಳಿಸುವುದು. ಬಗೆಬಗೆಯ ಬಳ್ಳಿ ಮರಗಳಿಂದ ತುಂಬಿದ ರಮಣೀಯವಾದ ಆ ವನವು ಸುವರ್ಣಮಯವಾಗಿರುವುದು. ॥೭-೮-೯॥

ರತ್ನಸೋಪಾನಸಂಬದ್ಧಂ ಸರಃ ಸಮುಭವಚ್ಛಿವೇ ।
ಚಲದ್ವಿಮಲಕಲ್ಲೋಲಕುಲಸಂಕುಲಿತಂ ಸದಾ ॥೧೦॥

ಪರಾಗಪೂರ್ಣಂ ಪರಿತಃ ಸರಃ ಸುರವರಾರ್ಚಿತಂ ।
ತತ್ಪ್ರಾಂತದೇಶೇ ಸತತಂ ಶೈವಾಃ ಶಿವಪರಾಯಣಾಃ ॥೧೧॥

ಭಸ್ಮೋದ್ಧೂಳಿತಸರ್ವಾಂಗಾಸ್ತ್ರಿಪುಂಡ್ರಾಂಕಿತಮಸ್ತಕಾಃ ।
ರುದ್ರಾಕ್ಷಮಾಲಾಭರಣಾಃ ಶಿವನಾಮಾಮೃತೋತ್ಸುಕಾಃ ॥೧೨॥

ಶಿವೈಕದೇವವಿಮಲಾಃ ಶಿವಾಚಾರರತಾಃ ಸದಾ ।
ಶಿವೈಕಶರಣಾಃ ಶುದ್ಧಾಃ ಪಂಚಾಕ್ಷರಪರಾಯಣಾಃ ॥೧೩॥

ನಿಷ್ಕಲ್ಮಷಾ ನಿರಾತಂಕಾ ನಿವಸಂತಿ ಶಿವಾರ್ಚಕಾಃ ।
ಶಿವಾರಾಧನಸಂಸಕ್ತಾಃ ಶೈವಶಾಸ್ತ್ರವಿಶಾರದಾಃ ॥೧೪॥

ಪಂಚಾಗ್ನಿಮಧ್ಯೇ ಸತತಂ ಕಾಶೀಮರಣಕಾಂಕ್ಷಯಾ ।
ತಪಃ ಕುರ್ವಂತಿ ಸತತಂ ಅನಂತಾ ವಿಜಿತೇಂದ್ರಿಯಾಃ ॥೧೫॥

---

ಎಲೌ ! ಪಾರ್ವತಿಯೇ ಕೇಳು. ರತ್ನಸೋಪಾನವನ್ನೊಳಗೊಂಡ ಒಂದು ಸರೋವರವು ಆ ಹರಿಕೇಶ ವನದಲ್ಲಿದೆ. ಅದು ಚಲಿಸುತ್ತಿರುವ ಅಲೆಗಳಿಂದ ಕೂಡಿ, ಬಹು ರಮಣೀಯವಾಗಿದೆ. ಸುತ್ತಲೂ ಕುಸುಮಧೂಳಿಗಳಿಂದ ಪೂರ್ಣವಾದ ಆ ಸರೋವರವನ್ನು ದೇವತೆಗಳು ಪೂಜಿಸುವರು. ಆದರ ತೀರಭಾಗದಲ್ಲಿ ಕೇವಲ ಶಿವಧ್ಯಾನಾಸಕ್ತರಾದ ಈಶ್ವರಭಕ್ತರು ವಾಸಿಸುತ್ತಾರೆ. ಆವರು ಭಸ್ಮದಿಂದ ಉದ್ಧೂಲನಮಾಡಿಕೊಂಡವರೂ, ತ್ರಿಪುಂಡ್ರದಿಂದ ಶೋಭಿಸುವ ಹಣೆಯುಳ್ಳವರೂ, ರುದ್ರಾಕ್ಷಿಯಿಂದ ಅಲಂಕೃತರೂ ಆಗಿರುವರು. ಮತ್ತು ಶಿವನಾಮೋಚ್ಚಾರಣೆಯಲ್ಲಿ ಅವರು ತುಂಬಾ ಉತ್ಸಾಹಶಾಲಿಗಳಾಗಿರುವರು. ಶಿವನೇ ದೇವದೇವನೆಂದು ತಿಳಿದು ಶಿವನ ಪೂಜಾದಿ ವ್ಯವಹಾರದಲ್ಲಿ ಯಾವಾಗಲೂ ಆವರು ನಿರತರಾಗಿರುವರು. ಅಲ್ಲದೇ ಆವರು ಪಂಚಾಕ್ಷರಜಪಪರಾಯಣರೂ, ಕುಟಿಲಚಿತ್ತರಲ್ಲದವರೂ, ದೋಷವರ್ಜಿತರೂ ಆಗಿದ್ದಾರೆ. ಶಿವಪೂಜೆಯಲ್ಲಿ ನಿರತರಾದ ಅವರು ಶೈವಶಾಸ್ತ್ರದಲ್ಲಿ ದೊಡ್ಡ ಪಂಡಿತರೆನಿಸಿರುವರು. ॥೧೦-೧೧-೧೨-೧೩-೧೪॥

ಆ ಶೈವರೆಲ್ಲರೂ ಕಾಶೀಮರಣವನ್ನಿಚ್ಛಿಸಿ ಪಂಚಾಗ್ನಿಗಳ ನಡುವೆ ನಿಂತು

ಜೀರ್ಣಪರ್ಣಾಶನಾಃ ಕೇಚಿತ್ಕೇಚಿದಂಬುಕಣಾಶನಾಃ ।
ಕೇಚಿದ್ವಾತಾಶನಾಃ ಕೇಚಿನ್ನಿರಾಹಾರಾಃ ಶಿವಪ್ರಿಯಾಃ ॥೧೬॥

ಶುದ್ಧಾಂತಃಕರಣಾಃ ಶುದ್ಧಾಃ ಶಿವತತ್ತ್ವೈಕಚಿಂತಕಾಃ ।
ತತ್ರೈವ ವಿಮಲೇ ಸ್ಥಾನೇ ದಂಡಪಾಣಿರಯಂ ಶುಭೇ ॥೧೭॥

ಪಂಚವಾತ್ಸರಿಕೋ ಬಾಲಸ್ತಪಶ್ಚಕ್ರೇ ದೃಢವ್ರತಃ ।
ಪುರಾ ಹಿಮಾಲಯೇ ರಮ್ಯೇ ನಾನಾಧಾತುವಿರಾಜಿತೇ ॥೧೮॥

ತಪಸ್ತೇಪೇ ಮುನೇನ್ಯೈವ ಮಹದ್ಘೋರತರಂ ಮುದಾ ।
ಸ ಕೋಟಿಯುಗಪರ್ಯಂತಂ ಪಂಚಾಗ್ನ್ಯಂತರಗಃ ಸದಾ ॥೧೯॥

ರುದ್ರಾಧ್ಯಾಯಜಪಾಸಕ್ತಃ ಶಿವಲಿಂಗೈಕಪೂಜಕಃ ।
ನಿಮೀಲಿತಾಕ್ಷೋ ನಿಯತೋ ನಿಃಸಂಗಃ ಶಿವಚಿಂತಕಃ ॥೨೦॥

ಏಕೇನೈವಾಂಘ್ರಿಣಾ ಸ್ಥಿತ್ವಾ ಚಕ್ರೇ ಘೋರತರಂ ತಪಃ ।
ಸರ್ವೋತ್ತಮಂ ವೇದವೇದ್ಯಂ ಸರ್ವಾಧಾರಂ ಜಗತ್ಪ್ರಭುಂ ॥೨೧॥

---

ಕೊಂಡು ತೀವ್ರವಾಗಿ ತಪಸ್ಸುಮಾಡುವರು. ಜಿತೇಂದ್ರಿಯರಾದ ಅವರು ಯಾವಾಗಲೂ ಉಗ್ರವಾಗಿ ತಪಸ್ಸುಮಾಡುತ್ತಾರೆ. ಅವರಲ್ಲಿ ಕೆಲವರು ಜೀರ್ಣವಾದ ಎಲೆಗಳನ್ನು ತಿನ್ನುತ್ತಾರೆ. ಇನ್ನು ಕೆಲವರು ಜಲಕಣಪ್ರಾಶನದಿಂದ ತಪಸ್ಸುಮಾಡುವರು. ಮತ್ತೆ ಉಳಿದ ಕೆಲವರು ಕೇವಲ ಗಾಳಿಯನ್ನು ಸೇವಿಸುತ್ತಾರೆ. ಶಿವಪ್ರಿಯರಾದ ಅವರಲ್ಲಿ ಮತ್ತೆ ಕೆಲವರು ಆಹಾರವನ್ನು ಪೂರ್ಣವಾಗಿ ತ್ಯಜಿಸಿರುವರು. ಹೀಗೆ ಅವರೆಲ್ಲರೂ ನಿರ್ಮಲವಾದ ಮನಸ್ಸುಳ್ಳವರೂ, ಶಿವತತ್ವ ಚಿಂತಕರೂ ಆಗಿರುತ್ತಾರೆ. ಅಲ್ಲಿಯೇ ಪರಿಶುದ್ಧವಾದ ಸ್ಥಾನದಲ್ಲಿ ಐದು ವರ್ಷ ವಯಸ್ಸಿನ ಹುಡುಗನಾದ ಈ ದಂಡಪಾಣಿಯು ತೀವ್ರವಾಗಿ ತಪಸ್ಸನ್ನು ನಡೆಸಿದನು. ಹಿಂದೆ ಈತನು ನಾನಾ ಧಾತುಗಳಿಂದ ರಂಜಿತವಾದ ರಮಣೀಯವಾದ ಹಿಮಾಲಯದಲ್ಲಿ ಘೋರವಾದ ತಪಸ್ಸನ್ನು ಮಾಡಿದ್ದನು. ಆ ದಂಡಪಾಣಿಯು ಒಂದು ಕೋಟಿ ಯುಗಗಳ ತನಕ ಪಂಚಾಗ್ನಿ ಮಧ್ಯೆ ತಪಸ್ಸನ್ನು ಗೆಯ್ಯುತ್ತಾ, ರುದ್ರಾಧ್ಯಾಯವನ್ನು ಜಪಿಸುತ್ತಾ ಶಿವಲಿಂಗವನ್ನು ಪೂಜಿಸುತ್ತಿದ್ದನು. ನಿತ್ಯವೂ ಕಣ್ಣು ಮುಚ್ಚಿಕೊಂಡವನಾಗಿ, ಸಂಗವಿವರ್ಜಿತನಾಗಿ ಶಿವಧ್ಯಾನದಲ್ಲಿ ಆಸಕ್ತನಾಗಿದ್ದನು. ||೧೫-೧೬-೧೭-೧೮-೧೯-೨೦||

ಧ್ಯಾಯನ್ನೇವ ಮಹಾದೇವಂ ಗೌರೀರಮಣಮವ್ಯಯಂ ।
ತದ್ಘೋರತಪಸಾ ಭೀತಾಃ ಭೂತಾಃ ಸರ್ವೇ ದಿವಾನಿಶಂ ॥೨೨॥

ನತ್ವಾ ಕೃತಾಂಜಲಿಪುಟಾಃ ತಿಷ್ಠಂತಿ ನತಕಂಧರಾಃ ।
ಲಿಂಗಪೂಜಾರತಂ ದೃಷ್ಟ್ವಾ ತರವಃ ಪುಷ್ಪಸಂಕುಲಾಃ ॥೨೩॥

ಕಂಪಿತಾಸ್ತರವಃ ಸರ್ವೇ ಸ್ವತ ಏವ ನಮಂತಿ ತೇ ।
ಪ್ರಜ್ವಲಂತ್ಯಗ್ನಯೋ ನಿತ್ಯಂ ಸ್ವತಃ ಕಮಲಲೋಚನೇ ॥೨೪॥

ತಪಃ ಪ್ರಭಾವಭೀತಾಸ್ತೇ ಜ್ವಲಿತಾ ಇವ ಸರ್ವದಾ ।
ಏವಂ ಬಹುವಿಧಂ ಘೋರಂ ತಪಃ ಕೃತ್ವಾ ಸ್ಥಿತಂ ಮುದಾ ॥೨೫॥

ಲಿಂಗಾರ್ಚನರತೇನೇತ್ಥಂ ಬಾಲಿಕೇಸ್ನೈವ ತೇನ ಹಿ ।
ತತಃ ಕದಾಚಿನ್ನಂದೀಶಮಾರುಹ್ಯ ವರವರ್ಣಿನಿ ॥೨೬॥

ಮಯಾ ಗತಂ ತತಸ್ತೇನ ಮಹ್ಯಂ ಪೂಜಾ ಕೃತಾ ಶುಭಾ ।
ಬಹುಧಾ ಚ ಕೃತಂ ಸ್ತೋತ್ರಂ ಕೃತಾಶ್ಚ ತನಯೋ ಮುದಾ ॥೨೭॥

---

ಆ ದಂಡಪಾಣಿಯು ಒಂದೇ ಒಂದು ಪಾದದಿಂದ ನಿಂತುಕೊಂಡು ಘೋರವಾಗಿ, ಸರ್ವಶ್ರೇಷ್ಠನೂ, ವೇದವೇದ್ಯನೂ, ಸರ್ವಾಧಾರನೂ, ಜಗತ್ಪ್ರಭುವೂ ಆದ ಶಂಕರನನ್ನು ಕುರಿತು ತಪಸ್ಸುಮಾಡಿದನು. ಗೌರೀರಮಣನೂ, ನಾಶರಹಿತನೂ ಆದ ಮಹಾದೇವನನ್ನು ಸದಾ ಧ್ಯಾನಿಸುತ್ತಾ ತಪಸ್ಸನ್ನು ಮುಂದುವರಿಸಿದನು. ಈತನ ತಪಸ್ಸಿನಿಂದ ಎಲ್ಲಾ ಪ್ರಾಣಿಗಳೂ ಹೆದರಿದುವು. ಅವರೆಲ್ಲರೂ ತಲೆಬಾಗಿಸಿ, ಅಂಜಲಿಬದ್ಧರಾಗಿ ನಿಂತು ಲಿಂಗಪೂಜೆಯಲ್ಲಿ ಆಸಕ್ತನಾದ ದಂಡಪಾಣಿಯನ್ನು ನೋಡಿ ನಡುಗುತ್ತಿದ್ದರು. ಎಲ್ಲಾ ಹೂಗಳಿಂದ ತುಂಬಿದ ಮರಗಳು ವಿನಯದಿಂದ ತಾವಾಗಿಯೇ ಕೆಳಗೆ ಬಗ್ಗಿ ನಮಿಸುತ್ತಿದ್ದುವು. ಎಲೌ! ಕಮಲನೇತ್ರಳೇ! ಪಾರ್ವತಿಯೆ, ಅಗ್ನಿಯೂ ಕೂಡ ಈತನ ತಪಃ ಪ್ರಭಾವಭೀತನಾಗಿ ಯಾವಾಗಲೂ ಜ್ವಲಿಸುತ್ತಾ ಅಲ್ಲಿಯೇ ಇರುತ್ತಿದ್ದನು. ॥೨೧-೨೨-೨೩-೨೪-೨೫॥

ಶಿವಲಿಂಗಾರ್ಚನಾಸಕ್ತನಾದ ಆ ಬಾಲಕನಿದ್ದಲ್ಲಿಗೆ ನಾನು ಒಂದು ಸಲ ನಂದಿಯ ಮೇಲೆ ಕುಳಿತು ಹೋದೆನು. ಆಗ ಆ ಬಾಲಕನು ನನ್ನನ್ನು ಭಕ್ತಿಯಿಂದ ಪೂಜಿಸಿ ಅನೇಕ ಸ್ತೋತ್ರಗಳಿಂದ ತೃಪ್ತಿಪಡಿಸಿದನು. ಬಳಿಕ ವರವನ್ನೂ ಯಾಚಿ

ವರೋಽಪಿ ಯಾಚಿತಸ್ತೇನ ಶಿವೇ ಭಕ್ತಿರ್ದೃಢಾಸ್ತ್ವಿತಿ ।
ದತ್ತೋ ವರೋ ಮಯಾ ತಸ್ಮೈ ಸತತಂ ಸಾದರಂ ಪುನಃ ॥೨೮॥

ತಪಶ್ಚಕಾರ ವಿಮಲೋ ಮೌನವ್ರತಪರಾಯಣಃ ।
ಬಹುಕಾಲಂ ತಪಸ್ತಪ್ತಂ ತತಃ ಪರಮಪಿ ಪ್ರಿಯೇ ॥೨೯॥

ತತಃ ಪುನರ್ಮಯಾ ತತ್ರ ಗತಂ ತೇನಾರ್ಚಿತಂ ಪ್ರಿಯೇ ।
ತದಾ ಮಯಾ ಸ ಪೃಷ್ಟೋಽಭೂತ್ತಪಸ್ವೀ ವಿಜಿತೇಂದ್ರಿಯಃ ॥೩೦॥

ಶಿವೈಕಶರಣಃ ಶುದ್ಧಃ ಪಂಚಾಕ್ಷರಪರಾಯಣಃ ।
ತಪೋ ಘೋರತರಂ ನಿತ್ಯಂ ಕಿಮರ್ಥಂ ಕ್ರಿಯತೇ ತ್ವಯಾ ॥೩೧॥

ಕಿಂ ತವಾಭೀಪ್ಸಿತಂ ತದ್ಧಿ ದಾಸ್ಯೇ ವೃಣು ವರಂ ಪರಂ ।
ಇತಿ ಪೃಷ್ಟಸ್ತತಃ ಸೋಽಪಿ ವವ್ರೇ ವರಮನುತ್ತಮಂ ॥೩೨॥

ಕಾಶೀಪ್ರಾಪ್ತಿರ್ಮಮ ಶ್ರೀಮನ್ ಅಸ್ತ್ವಿತಿ ಪ್ರೀತಮಾನಸಃ ।
ಶ್ರುತ್ವಾ ತದುಕ್ತಂ ವಚನಂ ವಿವಿಚ್ಯ ಚ ಪುನಃ ಪುನಃ ॥೩೩॥

---

ಸುತ್ತಾ ಆ ಬಾಲಕನು "ನನಗೆ ಶಿವನಲ್ಲಿ ದೃಢವಾದ ಭಕ್ತಿಯುಂಟಾಗಲಿ" ಎಂದು ಬಹುವಾಗಿ ಪ್ರಾರ್ಥಿಸಿದನು. ನಾನು ಆತನಿಗೆ ಸಾದರದಿಂದ ಆ ವರವನ್ನಿತ್ತು ಅಂತರ್ಧಾನನಾದೆನು. ಬಳಿಕ ಆತನು ಮೌನವ್ರತಿಯಾಗಿ ಮತ್ತೂ ಬಹಳ ಕಾಲ ತಪಸ್ಸನ್ನಾಚರಿಸಿದನು. ಆ ಮೇಲೆ ನಾನು ಪುನಃ ಅವನಿಗೆ ಪ್ರತ್ಯಕ್ಷನಾದೆನು. ಆಗಲೂ ಅವನ ತಪಸ್ಸಿಗೆ ಮೆಚ್ಚಿದ ನಾನು ಜಿತೇಂದ್ರಿಯನಾದ ಅವನನ್ನು ಕುರಿತು ಹೀಗೆ ಪ್ರಶ್ನಿಸಿದೆನು. ॥೨೬-೨೭-೨೮-೨೯-೩೦॥

"ಎಲೈ ಬಾಲಕನೆ, ನೀನು ಶಿವನೇ ರಕ್ಷಕನೆಂದು ತಿಳಿದಿರುತ್ತಿಯೆ. ಮತ್ತು ನೀನು ಶುದ್ಧನೂ ಪಂಚಾಕ್ಷರಜಪಾಸಕ್ತನೂ ಆಗಿರುವೆ. ಮತ್ತೂ ಏತಕ್ಕಾಗಿ ನೀನು ಘೋರತಪಸ್ಸನ್ನು ಆಚರಿಸುತ್ತೀಯೆ? ನಿನಗಭಿಮತವಾದುದು ಏನು? ಹೇಳು ಅದನ್ನು ಶೀಘ್ರವಾಗಿ ಕೊಡುವೆನು. ಶ್ರೇಷ್ಠವಾದ ವರವನ್ನು ಬೇಡು." ಎಂದು ಕೇಳಲು ಆ ಬಾಲಕನು ತನಗೆ ಕಾಶೀಪ್ರಾಪ್ತಿಯಾಗಲಿ ಎಂದು ಬೇಡಲು, ಅದನ್ನು ಪುನಃ ಪುನಃ ವಿಚಾರಿಸಿ ಬಳಿಕ, ॥೩೧-೩೨-೩೩॥

ವರೋ ದತ್ತೋ ಮಯಾ ದೇವಿ ತತ್ಸಂತೋಷಾರ್ಥಮುತ್ತಮಂ ।
ಇತೋ ಜನ್ಮಸಹಸ್ರಾಂತೇ ಕಾಶೀ ಸಂಪ್ರಾಪ್ಸ್ಯತೇ ತ್ವಯಾ ॥೩೪॥

ಏವಮೇವ ಮಹದ್ಘೋರಂ ಕರಿಷ್ಯಸಿ ತಪೋಯದಿ ।
ತತಃ ಕಾಶ್ಯಾಂ ಸ್ವಧರ್ಮೇಣ ಸ್ಥಿತ್ವಾ ನಿಯತಮಾನಸಃ ॥೩೫॥

ತತ್ರ ಘೋರತರಂ ಭೂಯಃ ಕರಿಷ್ಯಸಿ ತಪೋನಘ ।
ಇತಿ ದತ್ತವರಸ್ತಸ್ಮೈ ತದನು ಪ್ರತಿಜನ್ಮನಾ ॥೩೬॥

ತತ್ರ ಘೋರತರಂ ಭೂಯೋ ಭೂಯೋಭೂಯಶ್ಚಕಾರ ಸಃ ।
ತತಃ ಕಾಶೀಮಿಮಾಂ ಪ್ರಾಪ್ಯ ತಪಶ್ಚಕ್ರೇ ಸ ಬಾಲಕಃ ॥೩೭॥

ವಿಘ್ನೈಃ ಸಂವಿಘ್ನಿತೋಽಪ್ಯತ್ರ ಭಕ್ತ್ಯಾ ಭೃಶಮನುತ್ತಮಂ ।
ತೇನೈವ ಲಜ್ಜಿತಾಃ ಸರ್ವೇ ಮುನಯೋ ಬ್ರಹ್ಮವಾದಿನಃ ॥೩೮॥

ಆಶ್ಚರ್ಯಂ ಮುನಯಶ್ಚಕ್ರುರ್ದೃಷ್ಟ್ವಾ ಬಾಲಕಮುತ್ತಮಂ ।
ದೃಢವ್ರತಂ ಶಿವರತಂ ನಿಮೀಲಿತವಿಲೋಚನಂ ॥೩೯॥

---

ಅವನ ಸಂತೋಷಕ್ಕಾಗಿ ಹಾಗೆಯೇ ಆಗಲಿ ಎಂದು ವರವನ್ನಿತ್ತೆನು. ಎಲೈ ಬಾಲಕನೇ! ನೀನು ಹೀಗೆ ಘೋರತರವಾದ ತಪಸ್ಸನ್ನು ಮಾಡಿದ್ದೇ ಆದರೆ ಇನ್ನು ಒಂದು ಸಾವಿರ ಜನ್ಮದ ಕೊನೆಗೆ ಕಾಶಿಯನ್ನು ಹೊಂದುವೆ. ಮತ್ತು ಆ ಕಾಶಿಯಲ್ಲಿ ಉಗ್ರವಾಗಿ ತಪಸ್ಸನ್ನು ಮಾಡುವೆ ಎಂದು ವರವನ್ನಿತ್ತೆನು. ಅದರಂತೆ ಆತನು ಕಾಶಿಯನ್ನು ಸೇರಲು ಪ್ರತಿ ಜನ್ಮದಲ್ಲಿಯೂ ತಪಸ್ಸನ್ನಾಚರಿಸಿದನು. ಬಳಿಕ ಆತನು ತನ್ನ ಧರ್ಮದಲ್ಲಿ ನಿಯತವಾದ ಮನಸ್ಸುಳ್ಳವನಾಗಿ ಪುನಃಪುನಃ ಭಯಂಕರವಾಗಿ ತಪಸ್ಸು ಮಾಡುತ್ತಾ ಕೊನೆಗೆ ಈ ಕಾಶಿಯನ್ನು ಸೇರಿ ತಪಸ್ಸಿನಿಂದ ಕಾಲಕಳೆಯುತ್ತಿರುವನು. ॥೩೪-೩೫-೩೬-೩೭॥

ಆ ದಂಡಪಾಣಿಗೆ ಅನೇಕ ವಿಘ್ನಗಳು ಒದಗಿದರೂ ಆತನು ತಪ್ಪದೇ ಭಕ್ತಿಯಿಂದ ಕಾಶಿಯಲ್ಲಿ ತಪಸ್ಸು ಮಾಡಿದನು. ಅದರಿಂದ ಬ್ರಹ್ಮವಾದಿಗಳಾದ ಮುನಿಗಳೂ ಕೂಡ ನಾಚಿಗೆಗೊಂಡರು. ಉತ್ತಮನಾದ ಈ ಬಾಲಕನನ್ನು ನೋಡಿ ಮುನಿಗಳೆಲ್ಲರೂ ಆಶ್ಚರ್ಯಗೊಂಡರು. ದೃಢವಾದ ಅನುಷ್ಠಾನವುಳ್ಳವನಾಗಿಯೂ ಕಣ್ಣು ಮುಚ್ಚಿಕೊಂಡು ಏಕಾಗ್ರಚಿತ್ತನಾಗಿಯೂ ತಪಸ್ಸುಮಾಡುತ್ತಿರುವ ಆ ಬಾಲಕನನ್ನು

ತಂ ದೃಷ್ಟ್ವಾ ಮುನಯಃ ಸರ್ವೇ ಪ್ರಣಮಂತಿ ಪುನಃ ಪುನಃ ।
ಅಸ್ಥಿಮಾತ್ರಾವಶಿಷ್ಟಾಂಗಂ ಲಿಂಗಾಭ್ಯರ್ಚನತತ್ಪರಂ ॥೪೦॥

ದೃಷ್ಟ್ವೈವ ಭೂಯಃ ಸರ್ವೇಽಪಿ ನಮಂತ್ಯನುದಿನಂ ಮುಹುಃ ।
ಕೃತಾಂಜಲಿಪುಟಾ ದೇವಾಃ ನಿವಸಂತಿ ಪ್ರಣಮ್ಯ ತಂ ॥೪೧॥

ಸಿದ್ಧಗಂಧರ್ವಯಕ್ಷಾದ್ಯಾಃ ಪೂಜಯಂತಿ ಮುಹುರ್ಮುಹುಃ ।
ವಿಘ್ನಾನನೇಕಾನ್ ಸಂಹೃತ್ಯ ಲಿಂಗಪೂಜನತತ್ಪರಃ ॥೪೨॥

ತಪಸ್ತೀವ್ರತರಂ ಚಕ್ರೇ ಹರಿಕೇಶವನೇ ಶುಭೇ ।
ಏವಂ ನಿವಸತಸ್ತಸ್ಯ ಪುನಃ ಪ್ರೀತ್ಯಾ ಗತಂ ಮಯಾ ॥೪೩॥

ತತಃ ಸಮಾಗತಂ ದೃಷ್ಟ್ವಾ ಮಾಮಸ್ತೌಷೀತ್ಸ ಬಾಲಕಃ ॥೪೪॥

ವಿಶ್ವೇಶ ಪ್ರಮಥಾಧೀಶ ವೃಷಭಾಧೀಶ ವಾಹನ ।
ವೇದವೇದ್ಯ ಜಗನ್ನಾಥ ನಮಸ್ತೇ ರುದ್ರಮನ್ಯವೇ ॥೪೫॥

---

ನೋಡಿ ಅವರು ಚಕಿತರಾದರು. ಕೇವಲ ಎಲುಬು ಮಾತ್ರಾವಶಿಷ್ಟವಾದ ದೇಹವುಳ್ಳ (ಕೃಶನಾದ) ಮತ್ತು ಲಿಂಗಾರ್ಚನೆಯಲ್ಲಿಯೇ ಆಸಕ್ತನಾದ ಆ ದಂಡಪಾಣಿಯನ್ನು ಬಾರಿಬಾರಿಗೂ ಅವರು ವಂದಿಸುತ್ತಿದ್ದರು. ಆತನನ್ನು ನೋಡಿದೊಡನೆಯೇ ಎಲ್ಲಾ ಮುನಿಗಳೂ ದೇವತೆಗಳೂ ಅಂಜಲಿಬದ್ಧರಾಗಿ ವಿನಯದಿಂದ ನಮಸ್ಕರಿಸುವರು. ॥೩೮-೩೯-೪೦-೪೧॥

ಸಿದ್ಧರು, ಗಂಧರ್ವರು, ಯಕ್ಷರು, ಇವರೇ ಮೊದಲಾದವರು ಅವನನ್ನು ನೋಡಿ ಬಾರಿಬಾರಿಗೂ ಪೂಜಿಸುವರು. ಆ ದಂಡಪಾಣಿಯು ಅನೇಕ ವಿಘ್ನಗಳನ್ನು ಸಹಿಸಿಕೊಂಡು ಲಿಂಗಪೂಜೆಯಲ್ಲಿ ತಪ್ಪದೆ ನಿರತನಾಗಿದ್ದನು. ಹೀಗವನು ಶುಭವಾದ ಹರಿಕೇಶವನದಲ್ಲಿ ಘೋರವಾಗಿ ತಪಸ್ಸುಮಾಡುತ್ತಿದ್ದನು. ಬಳಿಕ ನಾನಲ್ಲಿಗೆ ಹೋದೆನು. ಬಂದ ನನ್ನನ್ನು ಆ ಬಾಲಕನು ಕಂಡು ಈರೀತಿ ಸ್ತುತಿಸಲು ಆರಂಭಿಸಿದನು. ॥೪೨-೪೩-೪೪॥

“ಶಂಕರನೇ! ನೀನು ಪ್ರಪಂಚಕ್ಕೆ ನಿಯಾಮಕನಾಗಿರುವೆ. ಮತ್ತು ಪ್ರಮಥಗಣಗಳಿಗೆ ಒಡೆಯನಾಗಿರುತ್ತೀಯೆ. ವೃಷಭರಾಜನಾದ ನಂದೀಶ್ವರನೇ ನಿನ್ನ ವಾಹನನಾಗಿರುವನು. ನಿನ್ನ ಸ್ವರೂಪವನ್ನು ವೇದಗಳಿಂದಲೇ ತಿಳಿಯಬೇಕು.

ಕಾಲಕೂಟಹರ ಶ್ರೀಮನ್ ಕಾಲಕಾಲ ಕೃಪಾನಿಧೇ ।
ಶ್ರೀನೀಲಕಂಠ ಕಾಮಾರೇ ಉತೋತ ಇಷವೇ ನಮಃ ॥೪೬॥

ತ್ರಿಶೂಲಪಾಣೇ ಸರ್ವಾತ್ಮನ್ ದೀನಬಂಧೋ ದಿಗಂಬರ ।
ಸರ್ವಾಧಾರಸುರಾಧೀಶ ನಮಸ್ತೇ ಅಸ್ತುಧನ್ವನೇ ॥೪೭॥

ಪಿನಾಕಪಾಣೇ ದೇವೇಶ ಸರ್ವದೇವೋತ್ತಮ ಪ್ರಭೋ ।
ಅನಾದಿನಿಧನಾನಂತ ಬಾಹುಭ್ಯಾಮುತ ತೇ ನಮಃ ॥೪೮॥

ನಿರಂಜನ ನಿರಾಧಾರ ನಿರವದ್ಯ ನಿರಾಮಯ ।
ನಿಷ್ಕಲಂಕ ನಿರಾತಂಕ ನಮಃ ಸೋಮಾಯ ತೇ ಸದಾ ॥೪೯॥

ವೇದಾಂತವೇದ್ಯ ತ್ರಿದಶೈಕವಂದ್ಯ
ತ್ರಿಕಾಗ್ನಿಕಾಲತ್ರಿಪುರಾಂತಕೇಶ ।

---

ಎಲೈ ದೇವನೇ, ನೀನು ಶಿಷ್ಟರಕ್ಷಣೆಗಾಗಿ ದುಷ್ಟರನ್ನು ದುಃಖಿಸುವಂತೆ ಮಾಡುತ್ತೀಯೆ. ನಿನ್ನ ಕೋಪಕ್ಕೆ ನಮಸ್ಕಾರ. ಶಂಭುವೇ, ನೀನು ಕಾಲಕೂಟ ವಿಷವನ್ನು ಕುಡಿದು ಅದನ್ನು ಧ್ವಂಸಮಾಡಿರುವೆ. ಕೃಪಾನಿಧಿಯೇ, ನಿನ್ನ ಕಂಠವು ನೀಲವರ್ಣವಾಗಿದೆ. ಮನ್ಮಥನನ್ನು ಧ್ವಂಸಮಾಡಿದವನೇ, ನಿನ್ನ ಬಾಣಗಳಿಗೆ ವಂದಿಸುವೆನು. ನೀನು ತ್ರಿಶೂಲವನ್ನು ಹಸ್ತದಿಂದ ಹಿಡಿದಿರುವೆ. ಅಲ್ಲದೇ ದೀನಬಂಧುವಾದ ನಿನಗೆ ದಿಕ್ಕುಗಳೇ ವಸ್ತ್ರಗಳಾಗಿವೆ. ಎಲ್ಲಾ ಜಗತ್ತಿಗೂ ಆಧಾರಭೂತನಾದ ನೀನು ದೇವತೆಗಳಿಗೂ ಅಧೀಶ್ವರನಾಗಿರುವೆ. ಹೇ ! ಶಂಕರ! ನಿನ್ನ ಧನುಸ್ಸಿಗೆ ನಮಸ್ಕಾರವು. ||೪೫-೪೬-೪೭||

ಎಲೈ ! ಶಂಭುವೆ, ನೀನು ಪಿನಾಕಾಯುಧವನ್ನು ಧರಿಸಿರುವೆ. ಮತ್ತು ದೇವತೆಗಳಿಗೊಡೆಯನಾದ ನೀನು ಎಲ್ಲಾ ದೇವತೆಗಳಲ್ಲೂ ಉತ್ತಮನೆನಿಸಿರುವೆ. ನಿನಗೆ ಆದಿಯೂ ಅಂತ್ಯವೂ ಇಲ್ಲವಾಗಿದೆ. ಸ್ವಾಮಿಯೇ, ನಿನಗೆ ನನ್ನ ಎರಡು ತೋಳುಗಳಿಂದಲೂ ನಮಿಸುವೆನು. ಮಾಯಾ ಅಥವಾ ಅವಿದ್ಯೆಯ ವಶಕ್ಕೆ ಸಿಗದ ನಿನಗೆ ಆಧಾರಭೂತವಾದ ಬೇರೊಂದು ವಸ್ತುವಿಲ್ಲ. ವ್ಯಾಪಕನು ನೀನಾಗಿರುವೆ. ನಿನಗೆ ಯಾವ ಬಗೆಯಾದ ರೋಗಾದಿಗಳೂ ನಿನ್ನಲ್ಲಿ ಇಲ್ಲ. ನೀನು ಕಲಂಕಶೂನ್ಯನಾಗಿರುವೆ. ಸರ್ವಸ್ವತಂತ್ರನಾದ ಸೋಮನೇ, ಇಗೋ ನಿನಗೆ ವಂದಿಸುವೆನು. ||೪೮-೪೯||

ವೇದೋಪನಿಷತ್ತುಗಳಿಂದ ತಿಳಿಯಲು ಅರ್ಹನಾದ ನೀನು ದೇವತೆಗಳಿಗೆ ವಂದ್ಯನಾಗಿರುವೆ. ಗಾರ್ಹಪತ್ಯ, ಆಹವನೀಯ, ದಕ್ಷಿಣಾಗ್ನಿ ಎಂಬ ತ್ರೇತಾಗ್ನಿಸ್ವರೂ

ಅನಂತಕಲ್ಯಾಣಗುಣಾರ್ಣವಾದ್ಯ
ರುದ್ರಾಯ ದೇವಾಯ ನಮೋ ನಮಸ್ತೇ ॥೫೦॥

ಅಣೋರಣೀಯಾನ್ಮಹತೋ ಮಹೀಯಾನ್
ತ್ವಮೇವ ನಾನ್ಯೋ ಜಗದೇಕಹೇತೋ ।
ವಿಶ್ವಾಧಿಕಾಶಾಸ್ಯ ಪರಾಪರೇಶ
ತಾಮ್ರಾಯ ದೇವಾಯ ನಮೋ ನಮಸ್ತೇ ॥೫೧॥

ತ್ವತ್ತೋ ಜಗಜ್ಜನ್ಮಭವತ್ಯನಂತ
ತ್ವತ್ತೋ ಜಗದ್ರಕ್ಷಣಮಿಂದುಮೌಳೇ ।
ತ್ವಯ್ಯೇವ ನಾಶಂ ಸಮುಪೈತಿ ಲೋಕಃ
ಶಂಗಾಯ ದೇವಾಯ ನಮೋ ನಮಸ್ತೇ ॥೫೨॥

ತ್ವಮೇವ ಮೌನೀಂದ್ರಮನಃಸರೋಜ
ಮಧ್ಯಪ್ರವಿಷ್ಟಃ ಶಿಪಿವಿಷ್ಟ ಶಂಭೋ ।

---

ಪನಾದ ನೀನು ಜಗತ್ತನ್ನು ಸಂಹರಿಸುವ ಯಮನಾಗಿರುವೆ. ತ್ರಿಪುರರನ್ನು ಸಂಹರಿಸಿದ ಈಶ್ವರನೇ, ನಿನ್ನ ಗುಣಗಳು ಸಮುದ್ರದ ಹಾಗೆ ಅಪರಿಮಿತವಾಗಿವೆ. ರುದ್ರದೇವನೇ, ನಿನಗೆ ನಮಸ್ಕಾರ. ॥೫೦॥

ಶಂಕರನೇ! ನೀನು ಲೋಕದಲ್ಲಿ ಅತಿ ಸೂಕ್ಷ್ಮವಾದ ಪರಮಾಣುವಿಗಿಂತಲೂ ಸೂಕ್ಷ್ಮನೂ, ಅತಿ ದೊಡ್ಡದಾದ ಪದಾರ್ಥಗಳಿಗಿಂತಲೂ ಅತಿ ದೊಡ್ಡ ಪದಾರ್ಥವೂ ಆಗಿರುವೆ. ನಿನಗಿಂತಲೂ ಈ ಜಗತ್ತಿಗೆ ಕಾರಣಭೂತನಾದವನು ಬೇರೊಬ್ಬನಿಲ್ಲ. ಲೋಕಾತಿರಿಕ್ತನಾದ ಪರಮೇಶ್ವರನೇ, ನೀರಜಃಸ್ವಭಾವದವನಾದ ನಿನಗೆ ವಂದಿಸುವೆನು. (ತಾಮ್ರಾಯ). ॥೫೧॥

ದೇವ, ನಿನಗೆ ಅಂತ್ಯವಿಲ್ಲ. ಈ ಜಗತ್ತು ನಿನ್ನಿಂದ ಉತ್ಪನ್ನವಾಗುತ್ತದೆ. ಚಂದ್ರಶೇಖರನೇ, ಸೃಷ್ಟಿಸಿದ ಈ ಲೋಕವನ್ನು ರಕ್ಷಿಸುವವನೂ ನೀನೇ. ಪ್ರಪಂಚವು ನಿನ್ನಲ್ಲಿಯೇ ನಾಶಹೊಂದುವುದು. ಸರ್ವರಿಗೂ ಸುಖದಾಯಕನಾದ ನಿನಗೆ ವಂದಿಸುವೆನು. ॥೫೨॥

ಶಂಕರನೇ! ನೀನು ಸಕಲ ಮುನಿಗಳ ಹೃದಯಕಮಲಗಳನ್ನು ಪ್ರವೇಶಿಸಿ ನಿಲ್ಲುವವನು. ಮತ್ತು ಸಮಸ್ತ ಪ್ರಾಣಿಗಳ ಹೃದಯಮಂದಿರದಲ್ಲಿ ವಾಸಮಾಡುತ್ತಿ

ತ್ವಮೇವ ಪೂರ್ಣಃ ಪುರುಷಃ ಪುರಾಣೋ
ಮಯೋಭವಾಯ ಪ್ರಣತೋಸ್ಮಿ ನಿತ್ಯಂ ॥೫೩॥

ತ್ವಮೇವ ಯಜ್ಞಾದಿಫಲಪ್ರದಾತಾ
ತ್ವಮೇವ ಶೈವೋತ್ತಮಧರ್ಮಗೋಪ್ತಾ ।
ತ್ವಮೇವ ನಾನಾವಿಧಸೃಷ್ಟಿಕರ್ತಾ
ಉಗ್ರಾಯ ದೇವಾಯ ನಮೋ ನಮಸ್ತೇ ॥೫೪॥

ತ್ವತ್ತೋ ನ ಕಿಂಚಿತ್ಪರಮಸ್ತಿ ಲೋಕೇ
ತ್ವಾಮೇವ ದೇವೋತ್ತಮಮಾಮನಂತಿ ।
ತ್ವಾಮೇವ ಶಾಂತಂ ಶರಣಂ ಪ್ರಪದ್ಯೇ
ಭೀಮಾಯ ದೇವಾಯ ನಮೋ ನಮಸ್ತೇ ॥೫೫॥

ತ್ವಾಮನಂತಮನಾದ್ಯಂತಮಾಮನಂತಿ ಮಹರ್ಷಯಃ ।
ತ್ವಮೇವ ಕರ್ಮಫಲದಃ ಶಕಾರಾಯ ನಮೋಸ್ತುತೇ ॥೫೬॥

---

ರುವೆ. ಸಕಲ ಕಲ್ಯಾಣಗುಣಪೂರ್ಣನೂ, ಅನಾದಿಪ್ರಾಚೀನನೂ ಆದ ಪುರುಷನಾಗಿದ್ದೀಯೆ. ಶಿವನೇ, ಇಹಲೋಕ ಪರಲೋಕಗಳ ಸುಖಗಳಿಗೆ ಕಾರಣನಾದ ನಿನಗೆ ನಮಸ್ಕಾರ. ॥೫೩॥

ಜಗದೀಶನೇ, ಜ್ಯೋತಿಷ್ಟೋಮಾದಿಯಾಗಗಳ ಫಲವನ್ನು ಯಾಜಕರಿಗೆ ದಯಪಾಲಿಸುವವನು ನೀನೇ, ನೀನೇ ನಿನ್ನ ಭಕ್ತರ ಧರ್ಮವನ್ನು ರಕ್ಷಿಸುವವನು. ನೀನೇ ಅನೇಕ ವಿಧವಾದ ಸೃಷ್ಟಿಯನ್ನು ಮಾಡುವವನು. ಆದುದರಿಂದ ದೇವದೇವನೇ, ಉಗ್ರನಾದ ನಿನಗೆ ಬಾರಿಬಾರಿಗೂ ನಮಿಸುವೆನು. ॥೫೪॥

ನಿನಗಿಂತಲೂ ಬೇರೆಯಾದುದು ಈ ಲೋಕದಲ್ಲಿ ಇಲ್ಲ. ಎಲ್ಲರೂ ನಿನ್ನನ್ನೇ ದೇವಶ್ರೇಷ್ಠನೆಂದು ತಿಳಿದಿದ್ದಾರೆ. ಶಾಂತಸ್ವರೂಪವಾದ ನಿನ್ನನ್ನು ನಾನು ಈಗ ಶರಣು ಹೊಂದುವೆನು. ಭೀಮದೇವನಾದ ನಿನಗೆ ನಮಸ್ಕಾರ. ॥೫೫॥

ಮಹರ್ಷಿಗಳು ನಿನ್ನನ್ನು ಆದಿ ಮತ್ತು ಅಂತ್ಯವಿಲ್ಲದವನೆಂದು ತಿಳಿದಿರುವರು. ಉಪಾಸನಾದಿ ಕರ್ಮಗಳಿಗೆ ಫಲಪ್ರದನೂ, ಫಲಸ್ವರೂಪನೂ ನೀನೇ ಆಗಿರುವೆ. ಪಂಚಾಕ್ಷರಗಳಲ್ಲಿ ಆದ್ಯಕ್ಷರರೂಪನಾದ ನಿನಗೆ ವಂದನೆಗಳು. ನೀನೇ ಭಕ್ತರಿಗೆ ಮಂದಾರವೃಕ್ಷಸ್ವರೂಪನು. ಅಲ್ಲದೆ ದೇವತೆಗಳಿಗೆ ವರಪ್ರದಾನಮಾಡಿದವನು ನೀನು.

ತ್ವಮೇವ ಭಕ್ತಮಂದಾರೋ ವೃಂದಾರಕವರಪ್ರದಃ ।
ತ್ವಮೇವಾಭೀಷ್ಟದೋ ನಿತ್ಯಂ ಮಹಾದೇವಾಯ ತೇ ನಮಃ ॥೫೭॥

ತ್ವಾಮೇವಾನಂತಮೀಶಾನಂ ತ್ವಾಮೇವ ಜಗದೀಶ್ವರಂ ।
ವದಂತಿ ನಿಗಮಾಃ ಸರ್ವೇ ಮಹೇಶಾತೋ ನತೋಽಸ್ಮ್ಯಹಂ ॥೫೮॥

ಯಾದೃಶಸ್ತ್ವಂ ಮಹಾದೇವ ನ ಜಾನೇ ತತ್ವತಃ ಶಿವ ।
ವೇದೈರಪಿ ನ ತೇ ರೂಪಂ ಜ್ಞಾತಮೀಶ ನತೋಽಸ್ಮಿ ತೇ ॥೫೯॥

ತ್ವದನ್ಯಂ ನ ಭಜಾಮೀಶ ತ್ವದನ್ಯಂ ನ ಶೃಣೋಮ್ಯಹಂ ।
ತ್ವದನ್ಯಂ ನ ಸ್ಮರಾಮೀಶ ತ್ವದನ್ಯಂ ನ ವದಾಮ್ಯಹಂ ॥೬೦॥

ನ ಶಿವಾನ್ಯಂ ಪೂಜಯಾಮಿ ಶಿವಾನ್ಯಃ ಪೂಜ್ಯ ಏವ ನ ।
ನ ಶಿವಾನ್ಯಂ ಚಿಂತಯಾಮಿ ಶಿವಾನ್ಯಶ್ಚಿಂತ್ಯ ಏವ ನ ॥೬೧॥

ಕರ್ಮಣಾ ಮನಸಾ ವಾಚಾ ತ್ವಮೇವ ಶರಣಂ ಗತಃ ।
ಭೃತ್ಯತ್ವೇನ ಮಹಾದೇವ ಮಾಮಂಗೀಕುರು ಶಂಕರ ॥೬೨॥

---

ಅಭಿಲಷಿತವಾದುದನ್ನು ನೀಡುವ ಮಹಾದೇವನೇ, ನಿನಗೆ ವಂದನೆಗಳು, ಮತ್ತೂ ವಂದನೆಗಳು. ಎಲ್ಲಾ ವೇದಶಾಸ್ತ್ರಗಳೂ ಅನಂತನೂ, ಅಧಿಷ್ಠಾತೃವೂ, ಜಗದೀಶ್ವರನೂ, ನೀನೇ ಎಂದು ಹೇಳುತ್ತಿವೆ. ಅಂತಹ ಮಹೇಶ್ವರನೇ, ಆದಕ್ಕಾಗಿ ನಿನಗೆ ನಮಿಸುವೆನು. ॥೫೬-೫೭-೫೮॥

ಎಲೈ! ಮಹಾದೇವನೇ, ನೀನು ಎಂತಹವನೆಂದು ತತ್ವತಃ ನಾನು ತಿಳಿಯಲಾರೆ. ವೇದಗಳಿಂದಲೂ ನಿನ್ನ ಸ್ವರೂಪವು ತಿಳಿಯಲ್ಪಡುವುದಿಲ್ಲ. ಆದುದರಿಂದ ನಿನಗೆ ನಮಿಸುವೆನು. ನಿನಗಿಂತಲೂ ಇತರರನ್ನು ನಾನು ಭಜಿಸುವುದಿಲ್ಲ. ಅವರ ಹೆಸರನ್ನೂ ಕೇಳುವುದಿಲ್ಲ. ನಿನ್ನ ಹೊರತು ಇತರರನ್ನು ಸ್ಮರಿಸುವುದೂ ಇಲ್ಲ. ಮತ್ತು ಆತನ ಉತ್ಕೀರ್ತನವನ್ನೂ ಮಾಡಲಾರೆನು. ಶಿವನ ಹೊರತಾದವನನ್ನು ನಾನು ಅರ್ಚಿಸುವುದಿಲ್ಲ. ಆತನು ಅರ್ಚಿಸಲು ಯೋಗ್ಯನೂ ಅಲ್ಲ. ಮಹಾದೇವನಲ್ಲದವನನ್ನು ಧ್ಯಾನಮಾಡಲಾರೆನು. ಆತನು ಧ್ಯಾನಿಸಲು ಯೋಗ್ಯನೂ ಆಗಿಲ್ಲ. ॥೫೯-೬೦-೬೧॥

ಶಂಕರನೇ, ಕರ್ಮದಿಂದಲೂ, ಮನಸ್ಸಿನಿಂದಲೂ, ವಾಕ್ಕಿನಿಂದಲೂ ನಾನು ನಿನ್ನನ್ನೇ ಮೊರೆಹೊಕ್ಕಿರುವೆನು. ನನ್ನನ್ನು ದಾಸನೆಂದು ತಿಳಿದು ಸ್ವೀಕರಿಸು.

ಪೂತೋಽಸ್ಮಿ ಪುಣ್ಯದೇಹೋಽಸ್ಮಿ ಧನ್ಯೋಽಸ್ಮಿ ಪರಮೇಶ್ವರ ।
ಯತಸ್ತ್ವತ್ಪಾದಕಮಲಂ ದೃಷ್ಟಮದ್ಯ ಮಯಾ ಶಿವ ॥೬೩॥

ತಪಃ ಫಲಿತಮದ್ಯೈವ ಪುರಾಕೃತಮಹರ್ನಿಶಂ ।
ಯತಸ್ತ್ವತ್ಪಾದಕಮಲಂ ದೃಷ್ಟಮದ್ಯ ಮಯಾ ಶಿವ ॥೬೪॥

ಸಾ ಲಿಂಗಪೂಜಾ ಫಲಿತಾ ಯಾ ಕೃತಾ ಪೂರ್ವಮಾದರಾತ್ ।
ಯತಸ್ತ್ವತ್ಪಾದಯುಗಲಂ ದೃಷ್ಟಮದ್ಯ ಮಯಾ ಶಿವ ॥೬೫॥

ಧನ್ಯಾ ಮಮಾಭವನ್ಮಾತಾ ಪಿತಾ ಧನ್ಯೋಽ ಭವನ್ಮಮ ।
ಯತಸ್ತ್ವತ್ಪಾದಯುಗಲಂ ದೃಷ್ಟಮದ್ಯ ಮಯಾ ಶಿವ ॥೬೬॥

ಧನ್ಯಾ ಮದ್ವಂಶಜಾಃ ಸರ್ವೇ ಧನ್ಯಂ ಮತ್ಕುಲಮುತ್ತಮಂ ।
ಯತಸ್ತ್ವತ್ಪಾದಕಮಲಂ ದೃಷ್ಟಮದ್ಯ ಮಯಾ ಶಿವ ॥೬೭॥

ಜಪ್ತಃ ಪಂಚಾಕ್ಷರಃ ಶುದ್ಧಃ ಫಲಿತಃ ಶ್ರುತಿಸಂಮತಃ ।
ಯತಸ್ತ್ವತ್ಪಾದಕಮಲಂ ದೃಷ್ಟಮದ್ಯ ಮಯಾ ಶಿವ ॥೬೮॥

ಪೂರ್ವಾರ್ಜಿತಾನಿ ಪುಣ್ಯಾನಿ ಫಲಿತಾನಿ ಸದಾಶಿವ ।
ಯತಸ್ತ್ವತ್ಪಾದಕಮಲಂ ದೃಷ್ಟಮದ್ಯ ಮಯಾ ಶಿವ ॥೬೯॥

ಪ್ರಾಯಶೋಽ ವಹ್ನಯಃ ಪ್ರೀತಾ ಯಥಾಕಾಲಂ ಹುತಂ ಮಯಾ ।
ಯತಸ್ತ್ವತ್ಪಾದಕಮಲಂ ದೃಷ್ಟಮದ್ಯ ಮಯಾ ಶಿವ ॥೭೦॥

---

ಪರಮೇಶ್ವರ ! ನಾನು ಪವಿತ್ರನಾದೆನು. ಪುಣ್ಯದೇಹಿಯೂ, ಧನ್ಯನೂ ಆಗಿರುವೆನು. ಏಕೆಂದರೆ, ನಿನ್ನ ಪಾದಕಮಲ ಸಂದರ್ಶನವನ್ನು ಈಗ ನಾನು ಮಾಡಿದುದೇ ಕಾರಣ. ನಿನ್ನ ಪಾದಕಮಲ ದರ್ಶನದಿಂದ ಹಿಂದೆ ಹಗಲೂ ರಾತ್ರಿಯೂ ಮಾಡಿದ ನನ್ನ ತಪಸ್ಸುಗಳೆಲ್ಲಾ ಫಲಸಿದುವು. ॥೬೨-೬೩-೬೪॥

ಎಲೈ ! ಶಿವನೇ, ನಿನ್ನ ಪಾದಕಮಲಸಂದರ್ಶನದಿಂದ ನಾನು ಹಿಂದೆ ಆದರದಿಂದ ಮಾಡಿದ ಶಿವಲಿಂಗಪೂಜೆಯು ಈಗ ಫಲಿಸಿತು. ಮತ್ತು ನನ್ನ ತಂದೆತಾಯಿಗಳೂ ಧನ್ಯರಾದರು. ಅಲ್ಲದೇ ನನ್ನ ವಂಶೀಯರೂ ಉತ್ತಮವಾದ ನನ್ನ ಕುಲವೂ ಕೃತಕೃತ್ಯವಾದುವು. ಈಶ್ವರನೇ ! ಶುದ್ಧವಾದ ಪಂಚಾಕ್ಷರ ಜಪವೂ ಫಲಿತವಾಯಿತು.

ತತ್ತತ್ಕಾಲಕೃತಾಃ ಸರ್ವೇ ಧರ್ಮಾಶ್ಚ ಫಲಿತಾಃ ಶುಭಾಃ ।
ಯತಸ್ತ್ವತ್ಪಾದಕಮಲಂ ದೃಷ್ಟಮದ್ಯ ಮಯಾ ಶಿವ ॥೨೧॥

ಋಷಯಃ ಪಿತರಃ ಸಾಧ್ಯಾಃ ಪ್ರೀತಾಃ ಪ್ರಾಯೋ ಮಖಾ ಅಪಿ ।
ಯತಸ್ತ್ವತ್ಪಾದಕಮಲಂ ದೃಷ್ಟಮದ್ಯ ಮಯಾ ಶಿವ ॥೨೨॥

ಭಾಗ್ಯಸ್ಯ ಪರಿಪಾಕೋಽಯಂ ಜಾತ ಏವಹಿತಾರ್ಥದಃ ।
ಯತಸ್ತ್ವತ್ಪಾದಕಮಲಂ ದೃಷ್ಟಮದ್ಯ ಮಯಾ ಶಿವ ॥೨೩॥

ನಾಂತೋಽಸ್ತಿ ಮಮ ಭಾಗ್ಯಸ್ಯ ಭಾಗ್ಯವಾನ್ಮಾದೃಕ್ ನ ಕಸ್ಯಚಿತ್ ।
ಯತಸ್ತ್ವತ್ಪಾದಕಮಲಂ ದೃಷ್ಟಮದ್ಯ ಮಯಾ ಶಿವ ॥೨೪॥

ಸ್ತುತ್ವೈವಂ ಬಹುಧಾ ಬಾಲಃ ಪ್ರಣಮ್ಯ ಚ ಮುಹುರ್ಮುಹುಃ ।
ಕೃತಾಂಜಲಿಪುಟೋ ಭೂತ್ವಾ ತಸ್ಥೌ ಸಂತುಷ್ಟಮಾನಸಃ ॥೨೫॥

ತಸ್ಯಾಸ್ಥಿಮಾತ್ರಾವಶಿಷ್ಟಮಂಗಂ ಸ್ಪೃಷ್ಟಂ ಮಯಾ ತತಃ ।
ಗಾಣಾಪತ್ಯಮಪಿ ಪ್ರೀತ್ಯಾ ದತ್ತಂ ತಸ್ಮೈ ಮುನೇೋರಮೇ ॥೨೬॥

---

ನಾನು ಹಿಂದೆ ಮಾಡಿದ ಪುಣ್ಯಕರ್ಮಗಳು ಒಳ್ಳೆ ಫಲದಾಯಕಗಳಾಗಿವೆ. ಈ ನಿನ್ನ ಪಾದದರ್ಶನದಿಂದ ಕಾಲಕಾಲಕ್ಕೆ ಹೋಮಮಾಡಿದ ಕರ್ಮವೂ ತನ್ಮೂಲಕ ಅಗ್ನಿ ದೇವತೆಯೂ, ತೃಪ್ತರಾದರು. ॥೧೫-೧೬-೧೭-೧೮-೧೯-೨೦॥

ಶಿವನೇ! ನಿನ್ನ ಚರಣಕಮಲದ ದರ್ಶನದಿಂದ ಆಯಾ ಕಾಲವನ್ನನುಸರಿಸಿ ಮಾಡಿದ ಎಲ್ಲಾ ನನ್ನ ಧಾರ್ಮಿಕ ಕರ್ಮಗಳೂ ಸಫಲಗಳಾದುವು. ಋಷಿಗಳು, ಪಿತೃದೇವತೆಗಳು, ಸಾಧ್ಯರು, ಮತ್ತು ಯಜ್ಞನಾರಾಯಣನು ಇವರೆಲ್ಲರೂ ಸುಪ್ರಸನ್ನರಾಗಿದ್ದಾರೆ. ಹೇ! ದೇವ, ನಿನ್ನ ಪದದರ್ಶನದಿಂದ ನನ್ನ ಭಾಗ್ಯದ ಪರಿಪಾಕವೇ ಹಿತವನ್ನುಂಟುಮಾಡುವಂತಾಗಿದೆ. ನನ್ನ ಭಾಗ್ಯಕ್ಕೆ ಎಣೆಯಿಲ್ಲ. ಕೊನೆಮೊದಲಿಲ್ಲ. ನನ್ನಂತಹ ಭಾಗ್ಯವಂತನು ಬೇರೆ ಯಾವನೂ ಇಲ್ಲ.'' ॥೨೧-೨೨-೨೩-೨೪॥

ಹೀಗೆ ಆ ಬಾಲಕನು ಅನೇಕವಾಗಿ ಸ್ತುತಿಸಿ ಬಾರಿಬಾರಿಗೂ ನಮಿಸಿದನು. ಸುಪ್ರೀತ ಮನಸ್ಕನಾಗಿ ಅಂಜಲಿಬದ್ಧನಾಗಿ ನಿಂತುಕೊಂಡನು. ಬಳಿಕ ನಾನು ಕೇವಲ ಅಸ್ಥಿಪಂಜರ ಮಾತ್ರಾವಶೇಷವಾದ ಆತನ ದೇಹವನ್ನು ಸ್ಪರ್ಶಿಸಿ ಮೊದಲಿನಂತೆ ಮಾಡಿದೆನು. ಅನಂತರ ಆತನಿಗೆ ಗಣಾಧಿಪತಿತ್ವರೂಪವಾದ ವರಕೊಟ್ಟೆನು. ಜ್ಞಾನವಾ

ಜ್ಞಾನವಾಪೀ ರಕ್ಷಣಾರ್ಥಂ ತತ್ತಟೇ ಸ್ಥಾಪಿತೋ ಮಯಾ ।
ವರೋಽನ್ಯೋಽಪಿ ಮಯಾ ದತ್ತಃ ಸಂತುಷ್ಟೇನ ತತಃ ಪರಃ ॥೭೭॥

ತ್ವತ್ಕೃತಂ ಸ್ತೋತ್ರಮಮಲಂ ಯಃ ಪಠೇತ್ಸತತಂ ಶುಚಿಃ ।
ಕಾಶೀವಾಸೋಽನಿಶಂ ತಸ್ಯ ಭವತ್ವಿತಿ ವರಾನನೇ ॥೭೮॥

ತದಾ ಪ್ರಭೃತಿ ತತ್ತೀರೇ ದಂಡಂ ಕಾಂಚನಮುದ್ವಹನ್ ।
ತಿಷ್ಠತ್ಯತ್ಯಂತಸಂತುಷ್ಟಃ ಪೂರ್ಣಭದ್ರಸುತಃ ಶುಚಿಃ ॥೭೯॥

ತೇನೈವ ತಾಡ್ಯತೇ ಲೋಕಃ ಶಿವದ್ವೇಷಕರಃ ಸದಾ ।
ಬ್ರಹ್ಮಾದಯೋಽಪಿ ತಂ ಪೂರ್ವಮರ್ಚಯಂತ್ಯಧುನಾ ಶಿವೇ ॥೮೦॥

ಕಾಶೀವಿಯೋಗಂ ತನುತೇ ಸ ಏವ ಕುಪಿತಃ ಸದಾ ।
ಮುನಿನಾಂ ಮಾನವಾನಾಂ ಚ ದೇವಾನಾಮಪಿ ಶಿಕ್ಷಕಃ ॥೮೧॥

ದಂಡಪಾಣಿಕೃಪಾ ಯಸ್ಮಿನ್ ನ ಭವಿಷ್ಯತಿ ಸರ್ವಥಾ ।
ಸ ವಿಹಾಯ ತದಾ ಕಾಶೀಂ ಯಾತಿ ದೇಶಾಂತರಂ ಪ್ರತಿ ॥೮೨॥

---

ಪಿಯ ರಕ್ಷಣೆಗಾಗಿ ಆತನನ್ನು ಜ್ಞಾನವಾಪೀ ತಟದಲ್ಲಿ ಸ್ಥಾಪಿಸಿದೆನು. ಮನೋಹರಳಾದ ಅಂಬಿಕೆಯೇ ಕೇಳು. ಪರಮಪ್ರೀತನಾದ ನಾನು ಇನ್ನೊಂದು ವರವನ್ನೂ ಅವನಿಗೆ ಕೊಟ್ಟೆನು. ||೭೫-೭೬-೭೭||

ಯಾವನು ನೀನು ರಚಿಸಿರುವ ಪವಿತ್ರವಾದ ಈ ಸ್ತೋತ್ರವನ್ನು ಪಠಿಸುತ್ತಾನೋ, ಅವನಿಗೆ ಯಾವಾಗಲೂ ಕಾಶೀವಾಸವು ಉಂಟಾಗಲಿ. ಎಂದು ಆಜ್ಞಾರೂಪವಾಗಿ ಹೇಳಿದೆನು. ವರಾನನೆಯೇ ಗೌರಿ! ಕೇಳು, ಅಲ್ಲಿಂದ ಮೊದಲುಗೊಂಡು ಸುವರ್ಣಮಯವಾದ ದಂಡವನ್ನು ಧರಿಸಿ, ಪೂರ್ಣಭದ್ರನ ಮಗನಾದ ಆ ಬಾಲಕನು ಸಂತುಷ್ಟನಾಗಿ ಅಲ್ಲಿಯೇ ವಾಸಿಸುವನು. ಶಿವನನ್ನು ವೈರಭಾವನೆಯಿಂದ ಕಾಣತಕ್ಕ ಜನರನ್ನು ಆತನೇ ಶಿಕ್ಷಿಸುವನು. ಈಗಲೂ ಬ್ರಹ್ಮನೇ ಮೊದಲಾದ ದೇವತೆಗಳೂ ಅವನನ್ನು ಪೂಜಿಸುತ್ತಿರುವರು. ||೭೮-೭೯-೮೦||

ಆ ದಂಡಪಾಣಿಯು ಕ್ರುದ್ಧನಾದರೆ ಕಾಶಿಯಿಂದ ಜನರನ್ನು ಹೊರಗೆ ಹಾಕುವನು. ಮತ್ತು ಮುನಿಗಳು, ದೇವತೆಗಳು, ಮನುಷ್ಯರು ಇವರನ್ನು ಸಹ ಆತನು ದಂಡಿಸಬಲ್ಲನು. ದಂಡಪಾಣಿಯ ದಯೆಯಿಲ್ಲದ ಮನುಷ್ಯನು ಕಾಶಿಯನ್ನು ತ್ಯಜಿಸಿ

ಪೂಜನೀಯಃ ಪ್ರಯತ್ನೇನ ದಂಡಪಾಣಿರ್ಮಮ ಪ್ರಿಯಃ ।
ಕಾಶೀವಾಸರತೈರ್ನಿತ್ಯಮಪ್ರಮತ್ತೈರ್ಯಥೋಚಿತಂ ॥೮೩॥

ದಂಡಪಾಣಿಪ್ರಸಾದೇನ ಸ್ನಾನಂ ಭವತಿ ಧೀಮತಾಂ ।
ಜ್ಞಾನವಾಪೀಜಲೇ ರಮ್ಯೇ ಸರ್ವಪಾಪಾಪನೋದನೇ ॥೮೪॥

ಶಿವಪ್ರಿಯೋ ದಂಡಪಾಣಿಃ ಪೂರ್ಣಭದ್ರಸುತೋಽನಘಃ ।
ಯಕ್ಷೇಶಃ ಕರುಣಾಸಿಂಧುರ್ಧೂತಪಾಪೋ ಗಣೇಶ್ವರಃ ॥೮೫॥

ಏತನ್ನಾಮಾಷ್ಟಕೇನೈವ ಪ್ರತ್ಯಹಂ ಶಿವತತ್ಪರೈಃ ।
ಪೂಜನೀಯಃ ಪ್ರಯತ್ನೇನ ಕಾಶೀವಾಸಿಭಿರಾದರಾತ್ ॥೮೬॥

ದಂಡಪಾಣಿಪ್ರಸಾದಾರ್ಥಂ ಕಾಶೀವಾಸರತೈರ್ನರೈಃ ।
ಭೋಜನೀಯಸ್ತ್ರಯೋದಶ್ಯಾಂ ಶೈವಾಃ ಕ್ಷೀರಾದಿಸಾಧನೈಃ ॥೮೭॥

ನಮಂತಿ ಋಷಯಃ ಸರ್ವೇ ಪೂಜಯಂತಿ ಚ ತಂ ದ್ವಿಜಾಃ ।
ತಸ್ಯೈವಾನುಗ್ರಹಾತ್ಸರ್ವೇ ಕಾಶ್ಯಾಂ ತಿಷ್ಠಂತ್ಯನಾಕುಲಾಃ ॥೮೮॥

ಅಯಂ ಯಕ್ಷಕುಲೋತ್ಪನ್ನೋ ಬಾಲೋಽಪಿ ಮದನುಗ್ರಹಾತ್ ।
ಸಾಮರ್ಥ್ಯಮೀದೃಶಂ ಪ್ರಾಪ್ಯ ತಿಷ್ಠತ್ಯತಿಬಲಾನ್ವಿತಃ ॥೮೯॥

---

ದೇಶಾಂತರಕ್ಕೆ ಹೋಗಿ ವಾಸಿಸಬೇಕಾಗುತ್ತದೆ. ಕಾಶಿಯಲ್ಲಿ ವಾಸಿಸುವವರು ಜಾಗರೂಕರಾಗಿದ್ದುಕೊಂಡು ನನಗೆ ಪ್ರಿಯನಾದ ದಂಡಪಾಣಿಯನ್ನು ತಪ್ಪದೆ ಪೂಜಿಸಬೇಕು. ||೮೧-೮೨-೮೩||

ದಂಡಪಾಣಿಯ ಅನುಗ್ರಹದಿಂದ ಪಂಡಿತರಿಗೆ ರಮಣೀಯವಾದ ಜ್ಞಾನವಾಪೀ ಜಲದಲ್ಲಿ ಸ್ನಾನಮಾಡಲು ಅವಕಾಶವು ದೊರೆಯುವುದು. ಮತ್ತು ಶಿವಪ್ರಿಯ, ದಂಡಪಾಣಿ, ಪೂರ್ಣಭದ್ರಸುತ, ಅನಘ, ಯಕ್ಷೇಶ, ಕರುಣಾಸಿಂಧು, ಧೂತಪಾಪ, ಗಣೇಶ್ವರ, ಎಂಬ ಈ ಎಂಟು ನಾಮಗಳಿಂದ ಶಿವಪರಾಯಣರಾದ ಕಾಶೀವಾಸಿಗಳು ಆತನನ್ನು ಪೂಜಿಸಬೇಕು. ||೮೪-೮೫-೮೬||

ಕಾಶೀವಾಸಾಸಕ್ತರಾದ ಮನುಜರು ದಂಡಪಾಣಿಯ ಅನುಗ್ರಹಸಂಪಾದನೆಗಾಗಿ ತ್ರಯೋದಶೀ ತಿಥಿಯಲ್ಲಿ ಈಶ್ವರಭಕ್ತರಿಗೆ ಹಾಲು ಮೊದಲಾದವುಗಳಿಂದ ಸಿದ್ಧವಾದ ಮೃಷ್ಟಾನ್ನಭೋಜನಮಾಡಿಸಬೇಕು. ಸಮಸ್ತ ಋಷಿಗಳು ದಂಡಪಾಣಿಗೆ

ಪೂರ್ವಂ ಪೂರ್ವಭವೇಷ್ವೇವಂ ಅನೇನೋಗ್ರತಪಃ ಕೃತಂ ।
ಮಾಮುದ್ದಿಶ್ಯಾನಿಶಂ ಸಮ್ಯಕ್ ತತ್ಫಲಂ ಜಾತಮೀದೃಶಂ ॥೯೦॥

ಯಃ ಕಶ್ಚಿದಸ್ತಿ ಸುಭಗೇ ಮದ್ಭಕ್ತೋ ಮತ್ಪರಾಯಣಃ ।
ಸ ಸರ್ವವಂದ್ಯಃ ಶ್ರೇಷ್ಠಶ್ಚ ಭವಿಷ್ಯತಿ ನ ಸಂಶಯಃ ॥೯೧॥

ಇದಂ ಮತ್ವೈವ ಮುನಯೋ ದೇವಾ ಯಕ್ಷಾ ನರೋತ್ತಮಾಃ ।
ಲಿಂಗರೂಪಿಣಮೇಕಂ ಮಾಮರ್ಚಯಂತಿ ದೃಢವ್ರತಾಃ ॥೯೨॥

ಧೃತತ್ರಿಪುಂಡ್ರಾ ಜಿತಮಾನಗರ್ವಾಃ
ಮನುಷ್ಯದೇವರ್ಷಿವರಾ ನಿರೀಹಾಃ ।
ಮಾಮೇಕಮೀಶಂ ಶರಣಂ ಪ್ರಪನ್ನಾಃ
ತಿಷ್ಠಂತಿ ಲಿಂಗಾರ್ಚನಸಕ್ತಚಿತ್ತಾಃ ॥೯೩॥

ಇತಿ ಶ್ರೀಶಿವರಹಸ್ಯೇ ಸಪ್ತಮಾಂಶೇ ದಂಡಪಾಣಿಮಹಿಮಾವರ್ಣನಂ ನಾಮ ಅಷ್ಟಮೋಽಧ್ಯಾಯಃ

---

ನಮಿಸುವರಲ್ಲದೇ ಎಲ್ಲಾ ಬ್ರಾಹ್ಮಣರೂ ಅವನನ್ನು ಪೂಜಿಸುವರು. ಮತ್ತು ಆತನ ಅನುಗ್ರಹದಿಂದಲೇ ಎಲ್ಲರೂ ಕಾಶಿಯಲ್ಲಿ ಯಾವ ತೊಂದರೆಯೂ ಇಲ್ಲದೇ ನಿವಾಸಿಸುವರು. ಈ ಯಕ್ಷಕುಮಾರನು ನನ್ನ ಅನುಗ್ರಹದಿಂದ ಅಸಾಧಾರಣವಾದ ಇಂತಹ ಬಲವನ್ನು ಹೊಂದಿ ಇಲ್ಲಿರುವನು. ಈತನು ಹಿಂದೆ ಅನೇಕ ಜನ್ಮಗಳಲ್ಲಿ ಘೋರ ತಪಸ್ಸನ್ನು ಮಾಡಿದ್ದನು. ಈಗ ಅದರ ಫಲವು ಈರೀತಿಯಾಗಿ ಪರಿಣಮಿಸಿದೆ. ||೮೭-೮೮-೮೯-೯೦||

ಎಲೌ ! ಮಂಗಳಕರಳೇ ! ಅಂಬಿಕೆಯೇ ! ಕೇಳು. ಯಾವನಾದರೂ ಸರಿಯೇ ಆತನು ನನ್ನ ಉಪಾಸಕನಾಗಿದ್ದರೆ ಆತನು ಎಲ್ಲರಿಗೂ ಮಾನನೀಯನೂ ಶ್ರೇಷ್ಠನೂ ಆಗುವನು. ಇದು ದಿಟ. ಈ ತತ್ವವನ್ನು ತಿಳಿದು ದೇವತೆಗಳು, ಯಕ್ಷರು, ನರರು, ಇವರು ದೃಢವ್ರತವುಳ್ಳವರಾಗಿ ಶಿವಲಿಂಗರೂಪಿಯಾದ ನನ್ನನ್ನು ತಪ್ಪದೇ ಅರ್ಚಿಸುವರು. ||೯೧-೯೨||

ಮನುಷ್ಯರು, ದೇವತೆಗಳು, ಋಷಿಗಳು, ಇವರು ಮೇಲೆ ಹೇಳಿದ ತತ್ವವನ್ನು ತಿಳಿದು ಭಸ್ಮ ತ್ರಿಪುಂಡ್ರವನ್ನು ಧರಿಸಿ ಅರಿಷಟ್ಕವನ್ನೂ ಇಂದ್ರಿಯಗಳನ್ನೂ ಜಯಿ

ಸುವರು. ಬಳಿಕ ನಿಸ್ಪೃಹರಾದ ಆವರು ಸಮುಸ್ತರಿಗೂ ರಕ್ಷಕನಾದ ಅದ್ವಿತೀಯನಾದ ಸರ್ವಶಕ್ತನಾದ ನನ್ನನ್ನು ಶರಣುಹೊಂದಿ ಲಿಂಗಾರ್ಚನಾದಿಗಳಲ್ಲಿ ನಿರತರಾಗುವರು. ಎಂದು ಪರಮೇಶ್ವರನು ಪಾರ್ವತಿಗೆ ದಂಡಪಾಣಿ ಗಣಪತಿಯ ವಿಷಯುವನ್ನು ಶ್ರುತಪಡಿಸಿದನು. ||೯೩||

ಇಲ್ಲಿಗೆ ಶ್ರೀಶಿವರಹಸ್ಯದ ಏಳನೆಯ ಅಂಶದಲ್ಲಿ ದಂಡಪಾಣಿಯ ಮಹಿಮಾ ವರ್ಣನೆಯೆಂಬ ಎಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಉಗ್ರಾಖ್ಯೇ

### ಸಪ್ತಮಾಂಶೇ ಪೂರ್ವಾರ್ಧೇ

## ನವಮೋಽಧ್ಯಾಯಃ

ಶ್ರೀ ಶಿವ ಉವಾಚ ॥

ಕಥಾಮನ್ಯಾಂ ಪ್ರವಕ್ಷ್ಯೇಽಹಂ ಶ್ರೋತ್ರಾನಂದಕರಾಂ ಪರಾಂ ।
ಶೃಣು ಯತ್ನೇನ ವಿಮಲಾಮಂಬಿಕೇ ಪಾಪಹಾರಿಣೀಂ ॥೧॥

ಪುರಾ ಕಶ್ಚಿದ್ದ್ವಿಜಾಧೀಶಃ ಪೂರ್ವಜನ್ಮ ತಪೋಬಲಾತ್ ।
ಕಾಶೀಂ ಸಂಪ್ರಾಪ್ಯ ಮಾಮರ್ಚ್ಯಮಭ್ಯರ್ಚ್ಯ ವಿಧಿಪೂರ್ವಕಂ ॥೨॥

ಉಷಿತ್ವೈಕದಿನಂ ದೀನಃ ಕ್ಷುಧಾರ್ತೋಽಸ್ತಂಗತೇ ರವೌ ।
ವೀರೇಶ್ವರಾಲಯೇ ರಮ್ಯೇ ನಿದ್ರಾಂ ಕರ್ತುಂ ಸಮಾಯಯೌ ॥೩॥

---

## ಒಂಬತ್ತನೆಯ ಅಧ್ಯಾಯ

ಪರಮೇಶ್ವರನು ಪಾರ್ವತಿಯನ್ನು ಕುರಿತು "ಅಂಬಿಕೆಯೇ, ಈಗ ಮತ್ತೊಂದು ಅಪೂರ್ವವಾದ, ಮತ್ತು ಕೇಳುವುದಕ್ಕೆ ಹಿತಕರವಾದ ಇತಿಹಾಸವೊಂದನ್ನು ಹೇಳುವೆನು ಕೇಳು." ಎಂದು ಒಬ್ಬ ಬ್ರಾಹ್ಮಣನ ಇತಿಹಾಸವನ್ನು ಹೇಳಲುಪಕ್ರಮಿಸಿದನು.

"ಹಿಂದೆ ಒಬ್ಬ ಬ್ರಾಹ್ಮಣಶ್ರೇಷ್ಠನು ತನ್ನ ಪೂರ್ವಜನ್ಮದ ತಪೋಬಲದಿಂದ ಕಾಶಿಯನ್ನು ಸೇರಿ ಅಲ್ಲಿ ಪೂಜ್ಯನೆನಿಸಿದ ನನ್ನನ್ನು ವಿಧಿವತ್ತಾಗಿ ಆರಾಧನೆ ಮಾಡತೊಡಗಿದನು. ॥೧-೨॥

ಅಲ್ಲಿ ಒಂದು ದಿನ ಆ ಬ್ರಾಹ್ಮಣನು, ಸಾಯಂಕಾಲವಾಗುತ್ತಲೇ ಬಹಳ ಹಸಿವಿನಿಂದ ಬಳಲಿದವನಾಗಿ, ವೀರೇಶ್ವರಾಲಯದಲ್ಲಿ ಮಲಗಿ ನಿದ್ರಿಸಲು ಹೋದನು. ಅದು

ತತ್ರ ಗತ್ವಾ ಮನೋರಮ್ಯೇ ರತ್ನಸ್ತಂಭವಿರಾಜಿತೇ ।
ನಾನಾಮಣಿಗಣಾಕೀರ್ಣಂ ದದರ್ಶ ಶಿವಮಂದಿರಂ ॥೪॥

ತತ್ರ ಶೈವವರೋ ದೃಷ್ಟಃ ಕಶ್ಚಿಲ್ಲಿಂಗಾರ್ಚನಪ್ರಿಯಃ ।
ಭಸ್ಮರುದ್ರಾಕ್ಷಬದ್ಧಾಂಗಸ್ತೇನೈವ ವರವರ್ಣಿನಿ ॥೫॥

ತಂ ಪ್ರಣಮ್ಯ ಮಹಾಶೈವಂ ಕೃತಾಂಜಲಿಪುಟೋ ದ್ವಿಜಃ ।
ಉವಾಚ ವಚನಂ ಚಾರು ಹೃದ್ಯಂ ಶೈವಜನಪ್ರಿಯಂ ॥೬॥

ವಿಪ್ರಶೈವವರ ಶ್ರೀಮನ್ ಕಾಶೀವಾಸರತಾನಘ ।
ಕಾಶೀಪ್ರಭಾವಃ ಕಃ ಕಾಶ್ಯಾಂ ದೇವಃ ಪೂಜ್ಯೋಽಸ್ತಿ ಕಃ ಪ್ರಭುಃ ॥೭॥

ಕಿಮೇತಲ್ಲಿಂಗಮಾಹಾತ್ಮ್ಯಂ ಕಿಂ ನಾಮಾಸ್ಯೇಶ್ವರಸ್ಯ ಚ ।
ಇದಮೇತನ್ಮಯಾ ಪೃಷ್ಟಂ ವಿಚಾರ್ಯ ವದ ಸಾದರಂ ॥೮॥

ಇದಂ ವೀರೇಶ್ವರಂ ನಾಮ ಲಿಂಗಂ ಮಂಗಳದಾಯಕಂ ।
ವಿಶ್ವೇಶ್ವರಾತ್ಮಭೂತಂ ಚ ಸರ್ವಪಾಪಭಯಾಪಹಂ ॥೯॥

---

ರತ್ನಸ್ತಂಭಗಳಿಂದಲೂ, ಮಣಿಗಣಗಳಿಂದಲೂ ಹೊಳೆಯುತ್ತಾ ನೋಡಲು ಬಹು ರಮಣೀಯವಾಗಿತ್ತು. ||೩-೪||

ಅಲ್ಲಿ ಶಿವಲಿಂಗಾರ್ಚಕನೂ, ಭಸ್ಮರುದ್ರಾಕ್ಷಭೂಷಿತನೂ ಆದ ಶೈವನೊಬ್ಬನು ಕುಳಿತಿದ್ದನು. ಅವನನ್ನು ನೋಡಿ ಈ ಬ್ರಾಹ್ಮಣನು ಭಕ್ತಿಯುತನಾಗಿ ಕೈಜೋಡಿಸಿ ವಂದಿಸಿ, ಅವನನ್ನು ಕುರಿತು, ಹಿತಕರವಾದ ಮತ್ತು ಶೈವಜನಪ್ರಿಯವಾದ ಕೆಲವು ಮಾತುಗಳನ್ನಾಡಿದರು. ||೫-೬||

"ಶ್ರೀಮಂತನಾದ ಶೈವಶ್ರೇಷ್ಠನೇ, ಪ್ರಾಜ್ಞನೇ, ಕಾಶೀವಾಸದಲ್ಲಿ ಅತ್ಯಾಸಕ್ತಿಯಿಂದಿರುವವನೇ? ಈ ಕಾಶೀಕ್ಷೇತ್ರದ ಮಹಿಮೆಯೇನು? ಇಲ್ಲಿ ಯಾವ ದೇವರಿಗೆ ಅತಿಶಯವಾದ ಪೂಜ್ಯತೆಯಿರುವುದು? ಈ ಶಿವಾಲಯದಲ್ಲಿ ತೋರಿಬರುವ ಶಿವಲಿಂಗದ ಮಹಿಮೆಯೇನು? ಇದರ ಹೆಸರೇನು? ಇದೆಲ್ಲವನ್ನೂ ದಯೆಯಿಂದ ನನಗೆ ವಿವರಿಸುವವನಾಗು" ಎಂದು ವಿನಯದಿಂದ ಪ್ರಾರ್ಥಿಸಿಕೊಳ್ಳಲು, ||೭-೮||

ಆಗ ಶೈವದ್ವಿಜನು ಹೀಗೆಂದನು. ಅಯ್ಯಾ ವಿಪ್ರನೇ, ಇದು ವೀರೇಶ್ವರ ಲಿಂಗವು. ಇದರ ಅರ್ಚನೆಯಿಂದ ಜನರಿಗೆ ಸಕಲ ಸನ್ಮಂಗಳಗಳೂ ಲಭಿಸುವುವು.

ಪುರಾತ್ರ ವಿಷ್ಣುನಾ ಘೋರಂ ತಪಸ್ತಪ್ತಮನೇಕಧಾ ।
ಆಬ್ರಹ್ಮಕಲ್ಪಮೇಕಾಂಘ್ರಿಸ್ಸ್ಥಿತಃ ಪಂಚಾಗ್ನಿಮಧ್ಯಗಃ ॥೧೦॥

ಕುಂಡಮಸ್ತ್ಯೇಕಮಮಲಮತ್ರ ರಮ್ಯಜಲಾವೃತಂ ।
ತಜ್ಜಲಸ್ನಾನಮಾತ್ರೇಣ ನರಾ ಯಾಂತಿ ಪರಾಂಗತಿಂ ॥೧೧॥

ಪುರಾ ದ್ವಿಜಾಧಮಃ ಕಶ್ಚಿದಸ್ಮಿನ್ ಕುಂಡೇ ಮನೋಹರೇ ।
ಸ್ನಾನಂ ಕೃತ್ವಾ ಮಹಾಲಿಂಗಮಿದಂ ದೃಷ್ಟ್ವಾ ಪ್ರಣಮ್ಯ ಚ ॥೧೨॥

ಕಾಶೀಂ ತ್ಯಕ್ತ್ವಾ ಸ್ವದೇಶಾಯ ಯಯೌ ಸ ತದನಂತರಂ ।
ಸ್ವದೇಶೇ ಬ್ರಹ್ಮಹತ್ಯಾದಿಪಾತಕಾನಿ ಚಕಾರ ಚ ॥೧೩॥

ತತಃ ಕದಾಚಿತ್ಸರ್ಪೇಣ ದಷ್ಟೋ ಭೂಮೌ ಪತದ್ದ್ವಿಜಃ ।
ಕಾಶೀವಿಶ್ವೇಶ್ವರೇತ್ಯೇವ ವದನ್ ಪ್ರಾಣಾನ್ಮುಮೋಚ ಸಃ ॥೧೪॥

---

ಕಾಶಿಯಲ್ಲಿರುವ ವಿಶ್ವೇಶ್ವರ ಲಿಂಗಕ್ಕೆ ಆತ್ಮಭೂತವಾಗಿರುವುದು. ಇದು ಸಕಲ ಪಾಪಗಳನ್ನೂ ನಿವಾರಿಸಬಲ್ಲುದು. ವಿಷ್ಣುವು ಇಲ್ಲಿ ಒಂದು ಕಾಲಿನಿಂದ ನಿಂತು ಬ್ರಹ್ಮಕಲ್ಪ ಪರ್ಯಂತ ಪಂಚಾಗ್ನಿ ಮಧ್ಯದಲ್ಲಿ ಘೋರವಾದ ತಪಸ್ಸನ್ನಾಚರಿಸಿದನು. ॥೯-೧೦॥

ಇಲ್ಲಿಯೇ ರಮ್ಯಜಲದಿಂದ ಕೂಡಿದ ಒಂದು ಕೊಳವಿರುವುದು. ಅಲ್ಲಿ ಸ್ನಾನ ಮಾಡುವುದರಿಂದಲೇ ಮನುಷ್ಯನು ಮುಕ್ತಿಯನ್ನು ಪಡೆಯುವನು. ಇದಕ್ಕೆ ನಿದರ್ಶನವಾಗಿ ಹಿಂದೆ ಒಬ್ಬ ನೀಚವೃತ್ತಿಯ ಬ್ರಾಹ್ಮಣನು ಈ ಕುಂಡದಲ್ಲಿ ಸ್ನಾನಮಾಡಿ ಮಹಾಲಿಂಗವೆನಿಸಿದ ಈ ಶಿವಲಿಂಗವನ್ನು ದರ್ಶನಮಾಡಿ ಭಕ್ತಿಯಿಂದ ನಮಸ್ಕರಿಸಿದನು. ॥೧೧-೧೨॥

ಅನಂತರ ಆತನು ಕಾಶೀಕ್ಷೇತ್ರವನ್ನು ಬಿಟ್ಟು ತನ್ನ ಊರಿಗೆ ಹೋದನು. ಅಲ್ಲಿಯೂ ಎಂದಿನಂತೆ ಬ್ರಹ್ಮಹತ್ಯೆಯೇ ಮೊದಲಾದ ಮಹಾಪಾಪಕಾರ್ಯಗಳನ್ನಾಚರಿಸಿದನು. ಹೀಗಿರಲು ಒಂದು ದಿನ ಅವನನ್ನು ಒಂದು ಸರ್ಪವು ಕಚ್ಚಿತು. ಒಡನೆಯೇ ಆ ಬ್ರಾಹ್ಮಣನು ಕೆಳಗೆ ಬಿದ್ದು ಕಾಶೀವಿಶ್ವೇಶ್ವರ ನಾಮಸ್ಮರಣೆ ಮಾಡುತ್ತಾ ಪ್ರಾಣತ್ಯಾಗಮಾಡಿದನು. ॥೧೩-೧೪॥

ತತೋ ಯಮಭಟಾಃ ಕ್ರೂರಾಃ ಬಧ್ವಾ ನಿನ್ಯುರ್ಯಮಾಂತಿಕಂ ।
ತಂ ದೃಷ್ಟ್ವಾ ಶಮನಃ ಕ್ರೂರಃ ಚಿತ್ರಗುಪ್ತಮುವಾಚ ಚ ॥೧೫॥

ಅನೇನ ಕಿಂ ಕೃತಂ ಪುಣ್ಯಂ ದುಷ್ಕೃತಂ ವಾ ವಿಚಾರಯ ।
ಕೃತಪಾಪಾನುರೋಧೇನ ದಂಡನೀಯಃ ಪ್ರಯತ್ನತಃ ॥೧೬॥

ಇತಿ ತದ್ವಚನಂ ಶ್ರುತ್ವಾ ಚಿತ್ರಗುಪ್ತೋ ವಿಚಕ್ಷಣಃ ।
ಪೂರ್ವಂ ತತ್ಕೃತಪಾಪಾನಿ ಜಗಾದ ಶಮನಂ ಪ್ರತಿ ॥೧೭॥

ತತೋ ವೀರೇಶಕುಂಡಸ್ಯ ಸ್ನಾನಂ ವೀರೇಶದರ್ಶನಂ ।
ವೀರೇಶಕಾಶೀಸ್ಮರಣಂ ಜಗಾದ ಮೃತಿಕಾಲಿಕಂ ॥೧೮॥

ವೀರೇಶದರ್ಶನಾದೀನಿ ಸ್ಮೃತ್ವಾ ಕಾಲಸ್ತತಃಪರಂ ।
ಪ್ರದಕ್ಷಿಣೀಕೃತ್ಯ ವಿಪ್ರಂ ತಂ ದಂಡವತ್ಪ್ರಣಿಪತ್ಯ ಚ ॥೧೯॥

ಅಮೂಲ್ಯರತ್ನಖಚಿತಸ್ವಾಸನೇ ವಿಮಲೇ ಶುಭೇ ।
ಉಪವೇಶ್ಯಾರ್ಘ್ಯಪಾದ್ಯಾದ್ಯೈರರ್ಚಯಾಮಾಸ ಸಾದರಂ ॥೨೦॥

---

ಒಡನೆಯೇ ಯಮಭಟರು ಬಂದು ಪಾಶದಿಂದ ಅವನನ್ನು ಕಟ್ಟಿ ಯಮನ ಸಮೀಪಕ್ಕೆ ಒಯ್ದರು. ಇವನನ್ನು ನೋಡಿದೊಡನೆಯೇ ಯಮನು ಚಿತ್ರಗುಪ್ತನನ್ನು ಕರೆದು, "ಅಯ್ಯಾ ಚಿತ್ರಗುಪ್ತನೇ, ಈತನು ಮಾಡಿರುವ ಪುಣ್ಯಾಪಾಪಗಳಾವುವು? ಅದಕ್ಕೆ ತಕ್ಕ ಶಿಕ್ಷೆಯನ್ನು ಈಗ ಈತನಿಗೆ ವಿಧಿಸಬೇಕಾಗಿದೆ." ಎಂದನು. ॥೧೫-೧೬॥

ಯಮನ ಅಪ್ಪಣೆಯಂತೆ ಚಿತ್ರಗುಪ್ತನು, ಹಿಂದೆ ಆತನು ಮಾಡಿದ ಪಾಪ ಕಾರ್ಯಗಳನ್ನೂ, ಕಾಶಿಗೆ ಹೋಗಿ ಅಲ್ಲಿ ವೀರೇಶ್ವರದರ್ಶನ, ವೀರೇಶಕುಂಡ ಸ್ನಾನ ಇವುಗಳನ್ನು ಭಕ್ತಿಯಿಂದ ಆಚರಿಸಿ, ಮರಣಕಾಲದಲ್ಲಿ ವಿಶ್ವೇಶ್ವರಲಿಂಗಸ್ಮರಣೆ ಮಾಡಿದ ವಿಚಾರವನ್ನೆಲ್ಲಾ ವಿವರಿಸಿ ಹೇಳಿದನು. ॥೧೭-೧೮॥

ಅದನ್ನು ಕೇಳಿದೊಡನೆಯೇ ಯಮನು ಎದ್ದುಬಂದು, ಆ ಬ್ರಾಹ್ಮಣನಿಗೆ ಪ್ರದಕ್ಷಿಣ ನಮಸ್ಕಾರಮಾಡಿ, ರತ್ನಮಯವಾದ ತನ್ನ ಪೀಠದಲ್ಲಿ ಕುಳ್ಳಿರಿಸಿ, ಆತನನ್ನು ಅರ್ಘ್ಯಪಾದ್ಯಾದಿಗಳಿಂದ ಪ್ರೀತಿಪೂರ್ವಕವಾಗಿ ಸತ್ಕರಿಸಿದನು. ॥೧೯-೨೦॥

ತತೋ ಯಮಸಭಾಸದ್ಭಿರರ್ಚಿತಃ ಸಕಲೈರಪಿ ।
ಪೂಜಿತೋ ಯಮಭೃತ್ಯೈಶ್ಚ ಚಿತ್ರಗುಪ್ತೇನ ಚಾರ್ಚಿತಃ ॥೨೧॥

ಇಂದ್ರಲೋಕಂ ಯಯೌ ತತ್ರ ದೇವೇಂದ್ರೇಣಾಪಿ ಪೂಜಿತಃ ।
ತತೋ ವಿಮಾನಮಾರುಹ್ಯ ಬ್ರಹ್ಮಲೋಕಂ ಜಗಾಮ ಸಃ ॥೨೨॥

ತಮಾಗತಂ ಸಮಾಲೋಕ್ಯ ಬ್ರಹ್ಮಾ ತತ್ತ್ವವಿದಾಂ ವರಃ ।
ಸ ಸಭಾಯಾಂ ಸಮುತ್ಥಾಯ ದಂಡವತ್ಪ್ರಣಿಪತ್ಯ ತಂ ॥೨೩॥

ಸ್ಫುರದ್ರತ್ನಾಸನೇ ರಮ್ಯೇ ಭಕ್ತಿಶ್ರದ್ಧಾಸಮನ್ವಿತಃ ।
ಉಪವೇಶ್ಯ ದ್ವಿಜಂ ಸಮ್ಯಕ್ ಅರ್ಚಯಾಮಾಸ ಸಾದರಂ ॥೨೪॥

ತತೋ ಬ್ರಹ್ಮಸಭಾಸದ್ಭಿರ್ವಿನೀತೈರ್ನತಕಂಧರೈಃ ।
ಪೃಷ್ಟಃ ಕೋಽಯಮಿತಿ ಪ್ರೀತ್ಯಾ ಬಭಾಷೇ ಸ ವಚಸ್ತದಾ ॥೨೫॥

ಅನೇನ ಕಾಶೀ ದೃಷ್ಟಾಸ್ತಿ ವಿಶ್ವೇಶಃ ಪೂಜಿತಃ ಪುರಾ ।
ಸ್ನಾನಂ ವೀರೇಶಕುಂಡೇಽಪಿ ವೀರೇಶೋ ವೀಕ್ಷಿತೋ ಮುದಾ ॥೨೬॥

---

ಅನಂತರ ಯಮನ ಸಭೆಯಲ್ಲಿದ್ದವರೂ, ಯಮದೂತರೂ, ಚಿತ್ರಗುಪ್ತ ಮೊದಲಾದವರೂ ಅವನನ್ನು ವಂದಿಸಿ ಸತ್ಕರಿಸಿದರು. ಹಾಗೆಯೇ ಆ ಬ್ರಾಹ್ಮಣನು ಇಂದ್ರಲೋಕಕ್ಕೆ ಹೋಗಿ, ಅಲ್ಲಿ ಇಂದ್ರನಿಂದ ಪೂಜಿತನಾಗಿ ವಿಮಾನಾರೂಢನಾಗಿ ಬ್ರಹ್ಮಲೋಕವನ್ನು ಸೇರಿದನು. ॥೨೧-೨೨॥

ಹಾಗೆ ತನ್ನ ಸಭೆಗೆ ಬಂದ ಆ ಬ್ರಾಹ್ಮಣನನ್ನು ನೋಡಿ ಬ್ರಹ್ಮನು ಪ್ರತ್ಯುತ್ಥಾನಪೂರ್ವಕವಾಗಿ ಆತನನ್ನು ಸತ್ಕರಿಸಿ, ನಮಸ್ಕರಿಸಿ, ರತ್ನಸಿಂಹಾಸನದಲ್ಲಿ ಕುಳ್ಳಿರಿಸಿ, ಭಕ್ತಿಶ್ರದ್ಧೆಗಳಿಂದ ಕೂಡಿ ಆತನನ್ನು ಬಹುವಾಗಿ ಉಪಚರಿಸಿದನು. ॥೨೩-೨೪॥

ಬ್ರಹ್ಮನ ಸಭೆಯಲ್ಲಿದ್ದವರೂ ಸಹ ತಮ್ಮ ತಲೆಗಳನ್ನು ಬಗ್ಗಿಸಿ ನಿಂತು, ಬ್ರಹ್ಮನೊಡನೆ "ಈತನು ಯಾರು" ಎಂದು ಕೇಳಿಕೊಂಡರು. ಆಗ ಬ್ರಹ್ಮನು ಹೀಗೆ ನುಡಿದನು. "ಈತನು ಮಹಾತ್ಮನು. ಏಕೆಂದರೆ ಇವನು ಕಾಶೀಕ್ಷೇತ್ರಕ್ಕೆ ಹೋಗಿ, ಅಲ್ಲಿ ವಿಶ್ವೇಶ್ವರನನ್ನು ಆರಾಧಿಸಿ, ವೀರೇಶಕುಂಡ ತೀರ್ಥದಲ್ಲಿ ಸ್ನಾನಮಾಡಿ ಭಕ್ತಿಯಿಂದ ವೀರೇಶ್ವರನನ್ನು ದರ್ಶನಮಾಡಿರುವನು. ॥೨೫-೨೬॥

ಅಂತಕಾಲೇ ಸ್ಮೃತಾ ಕಾಶೀ ವೀರೇಶೋಽಪಿ ಸ್ಮೃತಃ ಪುರಾ ।
ಯಮೇನ ಪೂಜಿತಸ್ಸಮ್ಯಗಿಂದ್ರೇಣಾಪಿ ಮಯಾಪ್ಯಯಂ ॥೨೭॥

ಅಶೀತಿಯುಗಪರ್ಯಂತಂ ದೇವಮಾನೇನ ಸರ್ವದಾ ।
ಪೂಜಿತೋಽತ್ರ ಮಯಾ ಸಮ್ಯಕ್ಪ್ರತ್ಯಹಂ ನಿವಸಿಷ್ಯತಿ ॥೨೮॥

ತತಃ ಪರಮಯಂ ವಿಪ್ರೋ ಭೂಮಾವವತರಿಷ್ಯತಿ ।
ವೇದಶಾಸ್ತ್ರಾಣ್ಯಧೀತ್ಯೈವ ಮಹದೈಶ್ವರ್ಯ ಸಂಯುತಃ ॥೨೯॥

ತತ್ವಜ್ಞಾನಂ ಪರಂಪ್ರಾಪ್ಯ ತತಃ ಕಾಶೀಂ ಗಮಿಷ್ಯತಿ ।
ಕಾಶ್ಯಾಂ ನ್ಯಾಯಾರ್ಜಿತೈರ್ವಿತ್ತೈಸ್ತರ್ಪಯಿತ್ವಾ ಸುರಾನ್ ದ್ವಿಜಾನ್ ॥೩೦॥

ತತಸ್ಸರ್ವಂ ಪರಿತ್ಯಜ್ಯ ನಿರಾಹಾರೋ ಜಿತೇಂದ್ರಿಯಃ ।
ಪಂಚಾಗ್ನಿಮಧ್ಯೇ ನಿಯತಂ ಲಿಂಗಪೂಜಾಪರಾಯಣಃ ॥೩೧॥

ಏಕೇನೈವಾಂಘ್ರಿಣಾ ಸ್ಥಿತ್ವಾ ಮೌನೇನ ನಿಯಮೀ ವ್ರತೀ ।
ಷಟ್ಕೋಟಿಯುಗಪರ್ಯಂತಂ ತಪಶ್ಚರ್ಯಾಂ ಕರಿಷ್ಯತಿ ॥೩೨॥

---

ಮರಣಕಾಲದಲ್ಲಿ ಈತನು ಕಾಶೀಯನ್ನೂ, ವೀರೇಶ್ವರನನ್ನು ಸ್ಮರಿಸಿ ಸತ್ತನು. ಆದ್ದರಿಂದಲೇ ಇವನನ್ನು ಯಮನೂ, ಇಂದ್ರನೂ, ನಾನೂ ಸಹ ಪೂಜಿಸಿದೆವು. ಇನ್ನು ಮುಂದೆ ದೇವಮಾನದ ಎಂಬತ್ತು ಯುಗಪರ್ಯಂತವಾಗಿ ನನ್ನಿಂದ ಪೂಜಿತನಾಗಿ ಇವನು ಇಲ್ಲಿಯೇ ವಾಸಮಾಡುವನು. ||೨೭-೨೮||

ಅಲ್ಲಿಂದ ಮುಂದೆ ಈತನು ಮತ್ತೆ ಭೂಲೋಕದಲ್ಲಿ ವೇದಶಾಸ್ತ್ರಾದಿಗಳನ್ನು ಕಲಿತ ಐಶ್ವರ್ಯಶಾಲಿಯಾದ ವಿಪ್ರಜನ್ಮದಲ್ಲಿ ಅವತರಿಸುವನು. ಹಾಗೆಯೇ ಕಾಶೀ ಕ್ಷೇತ್ರಕ್ಕೆ ಹೋಗಿ, ತತ್ತ್ವಜ್ಞಾನವನ್ನು ಪಡೆದು, ನ್ಯಾಯದಿಂದ ಸಂಪಾದಿಸಲ್ಪಟ್ಟ ದ್ರವ್ಯದಿಂದ, ದೇವದ್ವಿಜರನ್ನು ಬಹುವಾಗಿ ತೃಪ್ತಿಪಡಿಸುವನು. ||೨೯-೩೦||

ಅನಂತರ ವೈರಾಗ್ಯಶಾಲಿಯಾಗಿ ಎಲ್ಲವನ್ನೂ ದೂರಮಾಡಿ, ಆಹಾರಾದಿಗಳನ್ನು ತೊರೆದು, ಪಂಚಾಗ್ನಿ ಮಧ್ಯೆ ನಿಂತು ತಪಸ್ಸನ್ನಾಚರಿಸುತ್ತಾ, ಶಿವಲಿಂಗ ಪೂಜಾಪರಾಯಣನಾಗಿದ್ದು, ಒಂಟಿ ಕಾಲಿನಲ್ಲಿ ಮೌನದಿಂದ ನಿಂತು, ಆರು ಕೋಟಿ ಯುಗಪರ್ಯಂತವಾಗಿ ತಪಸ್ಸನ್ನಾಚರಿಸುವನು. ||೩೧-೩೨||

ತತಶ್ಶಿವಪ್ರಸಾದೇನ ಶಿವಾಂಕಮಧಿರುಹ್ಯ ಚ ।
ಶೈವಂ ಪಂಚಾಕ್ಷರಂ ಲಬ್ಧ್ವಾ ಶುದ್ಧೋ ಮುಕ್ತಿಂ ಗಮಿಷ್ಯತಿ ॥೩೩॥

ಇತಿ ತದ್ವಚನಂ ಶ್ರುತ್ವಾ ಸರ್ವೇ ಬ್ರಹ್ಮಸಭಾಸದಃ ।
ತಸ್ಮೈ ಪ್ರಣಮ್ಯ ವಿಧಿವತ್ ಪೂಜಾಂ ಚಕ್ರುರ್ಯಥೋಚಿತಂ ॥೩೪॥

॥ ಬ್ರಹ್ಮೋವಾಚ ॥

ತದನ್ಯಾಪಿ ಕಥಾ ತೇನ ತದೈವೋಕ್ತಾ ಮುದಾವಹಾ ।
ಅತ್ಯಾಶ್ಚರ್ಯಕರಾ ಶ್ರಾವ್ಯಾ ಪೃಷ್ಟಸ್ತೈರೇವ ತಾನ್ ಪ್ರತಿ ॥೩೫॥

ವೀರೇಶ್ವರೇ ಪುರಾ ಕಶ್ಚಿತ್ ಶೈವಃ ಶಿವಜನಪ್ರಿಯಃ ।
ಲಿಂಗಾರ್ಚನರತೋ ನಿತ್ಯಂ ಶಾಂತೋ ವಿಜಿತಮಾನಸಃ ॥೩೬॥

ಪಂಚಾಗ್ನಿಮಧ್ಯಸಂವಿಷ್ಟಃ ಪಂಚಾಕ್ಷರಪರಾಯಣಃ ।
ಪಂಚೀಕೃತಾತ್ಮಾ ಪಂಚಾತ್ಮಾ ಬಭೂವ ವಿಜಿತೇಂದ್ರಿಯಃ ॥೩೭॥

ತಸ್ಯೈವ ನಿಕಟೇ ಕಶ್ಚಿನ್ಮಯೂರಶ್ಚಿತ್ರಚಂದ್ರಕಃ ।
ವೀರೇಶಕುಂಡಪಾನೀಯಂ ಪೀತ್ವಾ ಪೀಯೂಷಸನ್ನಿಭಂ ॥೩೮॥

---

ಅದರಿಂದ ಶಿವಪ್ರಸಾದವನ್ನು ಸಂಪಾದಿಸಿ, ಶಿವನ ತೊಡೆಯ ಮೇಲೆ ಕುಳಿತು, ಶಿವಪಂಚಾಕ್ಷರೀಮಂತ್ರೋಪದೇಶವನ್ನು ಪಡೆದು, ಶಾಶ್ವತವಾದ ಮುಕ್ತಿಯನ್ನು ಸಂಪಾದಿಸುವನು" ಎಂದು ಹೇಳಿದ ಬ್ರಹ್ಮನ ಮಾತುಗಳನ್ನು ಕೇಳಿ, ಬ್ರಹ್ಮನ ಸಭಾಸದರೆಲ್ಲರೂ ಆವನಿಗೆ ಭಕ್ತಿಯಿಂದ ನಮಸ್ಕರಿಸಿ ಯಥೋಚಿತವಾಗಿ ಅರ್ಚಿಸಿದರು. ॥೩೩-೩೪॥

ಅದೇ ಸಂದರ್ಭವನ್ನು ಬ್ರಹ್ಮನು ವಿವರಿಸುತ್ತಾ ತನ್ನ ಸಭ್ಯರಿಗೆ ಮತ್ತೊಂದು ಇತಿಹಾಸವನ್ನು ಹೇಳಿದನು. ಅದು ಈಶ್ವರಭಕ್ತರಿಗೆ ಬಹು ಪ್ರಿಯವಾದುದು. ಮತ್ತು ವಿಶೇಷಾಶ್ಚರ್ಯಕರವಾದುದು. ಸಭಾಸದರ ಇಷ್ಟದಂತೆ ಈ ಕಥೆಯನ್ನು ಬ್ರಹ್ಮನೇ ವಿವರಿಸಿದನು. ಅದೇನೆಂದರೆ—ಹಿಂದೆ ಶಿವಪೂಜಾಪರಾಯಣನೂ, ಶೈವರಲ್ಲಿ ಬಹು ಭಕ್ತಿಯುಳ್ಳವನೂ ಆದ ಭಕ್ತನೊಬ್ಬನು ವೀರೇಶ್ವರಕ್ಷೇತ್ರದಲ್ಲಿ ನಿಂತು, ಜಿತೇಂದ್ರಿಯನಾಗಿ ಪಂಚಾಗ್ನಿಮಧ್ಯೆ ಶಿವಪಂಚಾಕ್ಷರಗಳನ್ನು ಜಪಿಸುತ್ತಾ, ಜಿತೇಂದ್ರಿಯನಾಗಿ ಸದಾ ಪರಬ್ರಹ್ಮವಸ್ತುವನ್ನೇ ಧ್ಯಾನಿಸುತ್ತಿದ್ದನು. ॥೩೫-೩೬-೩೭॥

ದೀರ್ಘಪಿಂಛಾಗ್ರಭಾಗೇನ ದೇವಾಲಯರಜಃಕಣಾನ್ ।
ದೂರೀಕುರ್ವನ್ ವೀಕ್ಷ್ಯಮಾಣೋ ಸ್ವವಸತ್ಪ್ರತಿವಾಸರಂ ॥೩೯॥

ತತಃ ಕದಾಚಿತ್ತತ್ರೈವ ಭಿಲ್ಲಃ ಕಶ್ಚಿತ್ಸಮಾಗತಃ ।
ತಂ ದೃಷ್ಟ್ವಾ ಸ ಮಯೂರೋಽಪಿ ಭೀತೋ ದೂರಂಗತೋ ರುವನ್ ॥೪೦॥

ಕಿಂ ಕರ್ತವ್ಯಮಯಂ ದುಷ್ಟಃ ಪ್ರಾಣಗ್ರಾಹೀ ಸಮಾಗತಃ ।
ಕಿಂ ಕರ್ತವ್ಯಂ ಕ್ವ ಗಂತವ್ಯಂ ಹಾ ಕಾಶೀ ತ್ಯಜ್ಯತೇ ಮಯಾ ॥೪೧॥

ಪ್ರಾಣಾತ್ಯಯೇಽಪಿ ಕಾಶೀಯಂ ನ ತ್ಯಾಜ್ಯಾ ಸರ್ವಥಾ ಜನೈಃ ।
ತಾದೃಶೀಯಂ ಮಯಾ ಕಾಶೀ ತ್ಯಜ್ಯತೇ ಕಿಂಕರೋಮ್ಯಹಂ ॥೪೨॥

ಅನೇಕಜನ್ಮತಪಸಾ ಲಬ್ಧ್ವಾ ಕಾಶೀ ಶಿವಾತ್ಮಿಕಾ ।
ಯಾ ಸೇಯಂ ದುರದೃಷ್ಟೇನ ತ್ಯಜ್ಯತೇ ಕಿಂ ಕರೋಮ್ಯಹಂ ॥೪೩॥

---

ಅವನ ಸಮೀಪದಲ್ಲಿಯೇ ಚಿತ್ರವರ್ಣದ ಗರಿಗಳಿಂದ ಕೂಡಿದ ನವಿಲೊಂದು ಅಮೃತಸದೃಶವಾದ ವೀರೇಶಕುಂಡದ ನೀರನ್ನು ಕುಡಿದು, ತನ್ನ ಗರಿಗಳಿಂದ ದೇವಾಲಯದ ಬಾಗಿಲಿನ ದೂಳನ್ನೆಲ್ಲಾ ಗುಡಿಸುತ್ತಿದ್ದಿತು. ನಿತ್ಯವೂ ಇದೇ ಕಾರ್ಯವನ್ನೆಸಗುತ್ತಾ, ವೀರೇಶ್ವರನನ್ನು ದೃಷ್ಟಿಸಿ ನೋಡುತ್ತಾ ಇದ್ದ, ಆ ನವಿಲನ್ನು ನೋಡುತ್ತಿದ್ದ ಒಬ್ಬ ಬೇಡನು ತನ್ನ ಬಿಲ್ಲಿನಿಂದ ಅದನ್ನು ಹೊಡೆಯಲು ಪ್ರಯತ್ನಿಸಿದನು. ಅದನ್ನು ತಿಳಿದ ಆ ನವಿಲು ಭಯದಿಂದ ಅರಚುತ್ತಾ ಓಡಿಹೋಯಿತು. ||೩೮-೩೯-೪೦||

ಮತ್ತೂ ಹೀಗೆ ಯೋಚಿಸಿತು "ನಾನು ಮುಂದೇನು ಮಾಡಲಿ! ನನ್ನ ಪ್ರಾಣವನ್ನು ಹೀರುವ ದುಷ್ಟನೊಬ್ಬನು ಇಲ್ಲಿರುವನಲ್ಲ! ಇನ್ನು ಎಲ್ಲಿಗೆ ಹೋಗಲಿ! ಪ್ರಾಣಹೋಗುವ ಕಾಲ ಬಂದರೂ ಕಾಶೀವಾಸವನ್ನು ಬಿಡಕೂಡದೆಂದು ಶಾಸ್ತ್ರದಲ್ಲಿ ಹೇಳಲ್ಪಟ್ಟಿದೆ. ಅಂತಹ ಕಾಶಿಯನ್ನು ಈಗ ಬಿಡಬೇಕಾಗಿ ಬಂದಿದೆಯಲ್ಲಾ! ಏನು ಮಾಡಲಿ. ||೪೧-೪೨||

ಅನೇಕ ಜನ್ಮಗಳಲ್ಲಿ ಆರ್ಜಿಸಿದ ತಪಃಫಲದಿಂದ ಇಂದು ಶಿವಾವಾಸಸ್ಥಾನವಾಗಿರುವ ಕಾಶೀಕ್ಷೇತ್ರವು ನನಗೆ ದೊರೆತಿದೆ. ಈಗ ನನ್ನ ಪಾಪಕರ್ಮವಶದಿಂದ ಇದನ್ನು ಬಿಡಬೇಕಾಗಿದೆ. ಕಾಶಿಯೆಂಬುದು ಸಕಲರಿಗೂ ಮುಕ್ತಿಪ್ರದವಾದುದು

ಕಾಶೀ ಮುಕ್ತಿಪ್ರದಾ ರಮ್ಯಾ ಸರ್ವಪಾಪಪ್ರಣಾಶಿನೀ ।
ತ್ಯಜ್ಯತೇ ಮರದೃಷ್ಟೇನ ಕಿಂ ಕರೋಮಿ ಕ್ವ ಯಾಮ್ಯಹಂ ॥೪೪॥

ಕಾಶೀ ಪುಣ್ಯೈಕನಿಲಯಾ ಸರ್ವಾರ್ತಿಭಯನಾಶಿನೀ ।
ಪಾಪೌಘಪರಿಪಾಕೇನ ತ್ಯಜ್ಯತೇ ಕಿಂ ಕರೋಮ್ಯಹಂ ॥೪೫॥

ಮಹಾಪದ್ಯಪಿ ಕಾಶೀಯಂ ನ ತ್ಯಾಜ್ಯಾ ಮುಕ್ತಿಕಾಂಕ್ಷಿಭಿಃ ।
ತ್ಯಜ್ಯತೇ ಸೇಯಮೇವಾದ್ಯ ಮಹಾಪಾತಕಿನಾ ಮಯಾ ॥೪೬॥

ಕಾನಿ ಪಾಪಾನಿ ದುಷ್ಟಾನಿ ಕೃತಾನಿ ಬಹುಧಾ ಮಯಾ ।
ವಿಶ್ವೇಶನಗರೀ ಕಾಶೀ ತ್ಯಜ್ಯತೇ ಕಿಂಕರೋಮ್ಯಹಂ ॥೪೭॥

ಅಪರಾಧಃ ಕೃತಃ ಕೋ ವಾ ಮಯಾ ಕಾಶೀ ವಿಯೋಜಕಃ ।
ಆನಂದವನದೇಶೇನ ವಿಯೋಗೋ ಜಾಯತೇ ಮಮ ॥೪೮॥

ಕದಾಚಿನ್ನ ಕೃತಂ ಪ್ರಾಯೋ ದಂಡಪಾಣ್ಯರ್ಚನಂ ಮಯಾ ।
ನೋಚೇತ್ಕಾಶೀವಿಯೋಗೋऽದ್ಯ ಕಥಂ ವಾ ಜಾಯತೇ ಮಮ ॥೪೯॥

---

ಮತ್ತು ಪಾಪನಾಶಕವಾದದ್ದು. ಇದನ್ನು ಬಿಡಬೇಕಾಗಿ ಬಂದಿರುವ ಈ ಸಮಯದಲ್ಲಿ ನಾನು ಏನನ್ನು ತಾನೆ ಮಾಡಲಿ? ಮತ್ತೆಲ್ಲಿಗೆ ಹೋಗಿ ವಾಸಿಸಲಿ? ||೪೩-೪೪||

ಕಾಶಿಯೆಂಬುದು ಪುಣ್ಯರಾಶಿಗೆ ನೆಲೆಮನೆ. ಮತ್ತೂ ಸಕಲ ಪೀಡೆಗಳನ್ನು ಅದು ಪರಿಹರಿಸತಕ್ಕುದು. ಇಂತಹ ಕ್ಷೇತ್ರವನ್ನು ಪಾಪಮೂರ್ತಿಯಾದ ನಾನು ಬಿಡಬೇಕಾಗಿ ಬಂದಿದೆಯಲ್ಲಾ! ಮಹತ್ತಾದ ವಿಪತ್ಕಾಲದಲ್ಲಿಯೂ ಮುಮುಕ್ಷುಗಳು ಇಂತಹ ಕ್ಷೇತ್ರವನ್ನು ಬಿಡುವುದಿಲ್ಲ. ಪಾಪಿಯಾದ ನಾನು ಇದನ್ನು ಈಗ ಬಿಡುವುದು ಹೇಗೆ? ||೪೫-೪೬||

ವಿಶ್ವೇಶ್ವರನ ಮುಖ್ಯನಗರವಾದ ಕಾಶಿಯನ್ನು ಬಿಡುವಷ್ಟು ಮಹಾಪಾಪವನ್ನು ನಾನು ಏನು ಮಾಡಿರುವೆನೋ? ಆನಂದವನದಂತೆ ಆನಂದಮಯವಾದ ಈ ಕ್ಷೇತ್ರವನ್ನು ಬಿಡುವಂತಹ ಯಾವುದೋ ಒಂದು ಮಹಾಪರಾಧವು ನನಗೆ ತಿಳಿಯದಂತೆ ನಡೆದುಹೋಗಿದೆ. ||೪೭-೪೮||

ನಾನು ಅಜ್ಞಾನದಿಂದ ದಂಡಪಾಣೀಶ್ವರಾರ್ಚನೆಯನ್ನು ಬಿಟ್ಟಿರುವೆನೋ ಏನೋ! ಅದರಿಂದಲೇ ಕಾಶೀವಿಯೋಗವು ನನಗೆ ಒದಗುವಂತಿದೆ. ಕಾಲಭೈರ

ಶ್ರೀಕಾಲಭೈರವಸ್ಯಾದ್ಯ ಕೋಪೋ ಜಾತೋ ಭವಿಷ್ಯತಿ ।
ನೋ ಚೇತ್ಕಥಂ ವಿಯೋಗಸ್ಸ್ಯಾದ್ವೀರೇಶೇನ ಮಮಾಧುನಾ ॥೫೦॥

ಹಾ ಕಾಶೀಶ ಮಹಾದೇವ ಕೃಪಾಂ ಕುರು ಕೃಪಾನಿಧೇ ।
ರುದ್ರಾವಾಸವಿಯೋಗೋಽದ್ಯ ಮಯಾ ಸೋಢುಂ ನಶಕ್ಯತೇ ॥೫೧॥

ಭಕ್ತವತ್ಸಲ ವಿಶ್ವೇಶ ವಿಶ್ವವಂದ್ಯ ಜಗತ್ಪ್ರಭೋ ।
ಕಾಶೀವಿಯೋಗಜಂ ದುಃಖಂ ನಿವಾರಯ ನಿವಾರಯ ॥೫೨॥

ಹಾ ವೀರೇಶ ಕೃಪಾಸಿಂಧೋ ಹಾ ಭಕ್ತಜನವತ್ಸಲ ।
ಮಮಾಪರಾಧಾಃ ಕ್ಷಂತವ್ಯಾಃ ದೇಹಿ ಕಾಶ್ಯಾಂ ಸದಾ ಸ್ಥಿತಿಂ ॥೫೩॥

ಅಪರಾಧಿಷು ಭಕ್ತೇಷು ಕ್ಷಮಾಯುಕ್ತಾ ಮಹಾತ್ಮನಾಂ ।
ಇದಂ ವಿಚಾರ್ಯ ವೀರೇಶ ಕಾಶೀವಾಸಂ ಪ್ರಯಚ್ಛ ಮೇ ॥೫೪॥

ಮನೋವಾಕ್ಕಾಯಜನ್ಯಾನಿ ಪಾತಕಾನಿ ಕ್ಷಮಸ್ವ ಮೇ ।
ಪ್ರಯಚ್ಛವಾಸಂ ಗೌರೀಶ ನಿತ್ಯಮಾನಂದಕಾನನೇ ॥೫೫॥

---

ನನ್ನ ಮೇಲೆ ಕೋಪಿಸಿಕೊಂಡಿರಬಹುದು. ಇಲ್ಲವಾದರೆ ಈ ವೀರೇಶ ಸನ್ನಿಧಿಯು ನನಗೆ ತಪ್ಪುತ್ತಿರಲಿಲ್ಲ. ||೪೯-೫೦||

ಎಲೈ ಕಾಶೀನಗರಾಧಿಪತಿಯಾದ ಮಹಾದೇವನೇ, ದಯಾಸಮುದ್ರನೇ, ನನಗೆ ಈ ಕಾಶೀವಿಯೋಗವನ್ನು ತಪ್ಪಿಸು. ಇದರಿಂದ ನನಗೆ ಉಂಟಾಗಲಿರುವ ಅತಿಶಯವಾದ ವಿಯೋಗವ್ಯಥೆಯನ್ನು ಹೋಗಲಾಡಿಸಿ ನನ್ನನ್ನು ಕಾಪಾಡು. ನೀನು ಭಕ್ತವತ್ಸಲನೂ, ವಿಶ್ವೇಶ್ವರನೂ ಜಗತ್ಪತಿಯೂ ಎನಿಸಿರುವೆಯಲ್ಲವೆ! ||೫೧-೫೨||

ವೀರೇಶ್ವರನೇ, ದಯಸಾಗರನೇ, ಭಕ್ತಜನವತ್ಸಲನೇ, ನನ್ನನ್ನು ಕಾಪಾಡು. ನನ್ನ ತಪ್ಪುಗಳನ್ನು ಕ್ಷಮಿಸು. ಅಪರಾಧಿಗಳಂದ ಭಕ್ತರನ್ನು ಕ್ಷಮಿಸಿ ಅವರ ಕೋರಿಕೆಗಳನ್ನು ಈಡೇರಿಸುವುದು ಮಹಾತ್ಮನಾದ ನಿನ್ನ ಕರ್ತವ್ಯವಲ್ಲವೆ? ವೀರೇಶ್ವರನೇ, ಇದನ್ನು ಯೋಚಿಸಿ ಕಾಶೀವಾಸವನ್ನು ನನಗೆ ದೊರಕಿಸಿಕೊಡು. ||೫೩-೫೪||

ಗೌರೀಪತಿಯೇ, ನಾನು ಮನಸ್ಸಿನಿಂದಲೂ, ಮಾತಿನಿಂದಲೂ, ದೈಹಿಕವಾಗಿಯೂ ಅನೇಕ ಪಾಪಕರ್ಮಗಳನ್ನು ಆಚರಿಸಿರಬಹುದು. ಅಂತಹ ಪಾಪ

ಶಿವೇತಿನಾಮದಾವಾಗ್ನಿಃ ಕರೋತ್ಯಘವನಕ್ಷಯಂ ।
ಕ್ವ ಪಾತಕಂ ಮಮಾಸ್ತೀಶ ಕಾಶೀವಾಸಂ ಪ್ರಯಚ್ಛ ಮೇ ॥೫೬॥

ಅನ್ನಪೂರ್ಣೇ ಕೃಪಾಪೂರ್ಣೇ ತೂರ್ಣಂ ಪೂರ್ಣೇಂದುಸುಪ್ರಭೇ ।
ಕಾಶೀ ನಿವಾಸ ಭಿಕ್ಷಾನ್ನಂ ದೇಹಿ ದೇಹಿ ಶಿವಪ್ರಿಯೇ ॥೫೭॥

ಇತಿ ಪ್ರಲಯಮಾನಂತಂ ಮಯೂರಂ ಶುಷ್ಕತಾಲುಕಂ ।
ವಿಲೋಕ್ಯ ಕರುಣಾಸಿಂಧುರ್ವೀರೇಶೋ ಭಕ್ತವತ್ಸಲಃ ॥೫೮॥

ಶೈವವರ್ಯೇಷು ಪಶ್ಯತ್ಸು ಶೂಲಪಾಣಿರುದಙ್ಮುಖಃ ।
ಶ್ರಾವ್ಯಮಾರ್ತಿಹರಂ ವಾಕ್ಯಮುವಾಚಾಹೂಯ ತಂ ದ್ವಿಜಂ ॥೫೯॥

ರೇ ರೇ ಮಯೂರ ಮಾರೋದೀರ್ಮಾರೋದೀರ್ಭೀತಿಮುತ್ಸೃಜ ।
ಅಭಯಂ ತವ ದಾಸ್ಯಾಮಿ ದುಃಖಂ ಮಾಕುರು ಸರ್ವಥಾ ॥೬೦॥

---

ರಾಶಿಯನ್ನೆಲ್ಲಾ ಈಗ ನಾನು ಉಚ್ಚರಿಸುತ್ತಿರುವ ಶಿವನಾಮವು ಪರಿಹರಿಸಲಾರದೆ? ಅಂದಮೇಲೆ ನಾನು ಪಾಪಿಯೆನಿಸುವುದು ಹೇಗೆ? ಇಂತಹ ನನಗೆ ಕಾಶೀವಾಸವನ್ನು ತಪ್ಪಿಸುವುದು ಉಚಿತವೇ! ॥೫೫-೫೬॥

ದಯಾಪೂರಿತಳಾದ ಅನ್ನಪೂರ್ಣಾದೇವಿಯೇ, ಚಂದ್ರಮಂಡಲದಂತೆ ವಿರಾಜಿಸುವವಳೇ, ನನಗೆ ಕಾಶೀವಾಸವೆಂಬ ಭಿಕ್ಷಾನ್ನವನ್ನು ಕರುಣಿಸು" ಹೀಗೆಂದು ಸಕಲ ದೇವತೆಗಳನ್ನೂ ಕಾಶೀವಾಸಕ್ಕಾಗಿ ಬೇಡಿಕೊಳ್ಳುತ್ತಿರುವ ಆ ಮಯೂರವನ್ನು ನೋಡಿ, ದಯಾಸಮುದ್ರನಾದ ವೀರೇಶ್ವರನು ಕರುಣೆಯಿಂದ ಹೀಗೆ ವರವಿತ್ತನು. ॥೫೭-೫೮॥

ಆಗ ಶಿವಾರಾಧಕರಾದ ಭಕ್ತರೆಲ್ಲರೂ ಎದುರಿಗೆ ನೋಡುತ್ತಾ ನಿಂತಿದ್ದರು. ವೀರೇಶ್ವರನು ಶೂಲಪಾಣಿಯಾಗಿ, ಉತ್ತರದಿಗಭಿಮುಖನಾಗಿ ನಿಂತು, ಕೇಳಲು ಇಂಪಾದ ಮತ್ತು ಪೀಡಾಪರಿಹಾರಕವಾದ ಕೆಲವು ಮಾತುಗಳನ್ನು ಆ ನವಿಲಿಗಾಗಿ ಹೇಳಿದನು. "ಎಲೈ ಮಯೂರವೇ, ನೀನು ಅಳಬೇಡ. ಭಯಪಡಬೇಡ. ನಿನಗೊದಗಿರುವ ದುಃಖವನ್ನು ನಿವಾರಿಸುವ ಧೈರ್ಯವನ್ನು ನಾನು ಈಗ ಕೊಡಲಿರುವೆನು. ಇನ್ನು ದುಃಖವನ್ನು ಬಿಡು. ॥೫೯-೬೦॥

ಸ್ವಜಾತಿಧರ್ಮಮಾಶ್ರಿತ್ಯ ಚಾಪಮಾರೋಪಿತಂ ಕರೇ ।
ಧೃತ್ವಾ ತಿಷ್ಠತಿ ಭಿಲ್ಲೋಽಯಂ ಹಿಂಸಾಂ ನೈವ ಕರಿಷ್ಯತಿ ॥೬೧॥

ಕಾಶ್ಯಾಂ ಧರ್ಮಾರ್ಥಮಾಯಾಂತಿ ಪುರುಷಾಃ ಪುಣ್ಯತತ್ಪರಾಃ ।
ನಾಧರ್ಮಾರ್ಥಂ ಚ ಹಿಂಸಾರ್ಥಂ ಶೋಕದಾನಾರ್ಥಮೇವ ಚ॥೬೨॥

ಅತೋ ದುಃಖಂ ನ ಕರ್ತವ್ಯಂ ಮಯೂರಾಧಿಪ ಮಾಶುಚ ।
ಸುಖೇನ ಸಂವಸಾತ್ರೈವ ಕಾಶ್ಯಾಂ ಧರ್ಮೇಣ ಸರ್ವದಾ ॥೬೩॥

ಕಾಶ್ಯಾಂ ದುಃಖಪ್ರದೋ ಮರ್ತ್ಯೋ ಯಸ್ಯ ಕಸ್ಯಾಪಿ ದೇಹಿನಃ ।
ಯಾತ್ಯೇವ ನರಕಂ ಘೋರಂ ಯಾವದಾಚಂದ್ರತಾರಕಂ ॥೬೪॥

ಚರಾಚರಾಣಿ ಲಿಂಗಾನಿ ಕಾಶ್ಯಾಂ ತಿಷ್ಠಂತ್ಯನೇಕಧಾ ।
ತೇಷು ಸರ್ವೇಷು ಪೂಜೈವ ಕರ್ತವ್ಯಾ ವಿಧಿವಜ್ಜನೈಃ ॥೬೫॥

ತತ್ರಚ್ಛೈವಶರೀರಾಣಿ ರಮ್ಯಾಣಿ ವಿಮಲಾನಿ ಚ ।
ಚರಲಿಂಗಾನಿ ದಿವ್ಯಾನಿ ವಿಜ್ಞೇಯಾನಿ ಮಹಾತ್ಮನಾ ॥೬೬॥

---

ಈ ಬೇಡರವನು ತನ್ನ ಜಾತಿಕಸಬಿನಂತೆ ಕೇವಲ ಬಿಲ್ಲನ್ನು ಮಾತ್ರ ಹಿಡಿದು ನಿಂತಿರುವನು. ಈತನಿಂದ ನಿನಗೆ ಹಿಂಸೆಯೊದಗುವುದಿಲ್ಲ. ಕಾಶಿಗೆ ಬರುವ ಪುಣ್ಯಶಾಲಿಗಳು, ಧರ್ಮಸಂಪಾದನೆಗಾಗಿ ಬರುವರೇ ವಿನಾ, ಅಧರ್ಮ, ಹಿಂಸೆ, ಶೋಕ, ದಾನ, ಪ್ರತಿಗ್ರಹ ಇತ್ಯಾದಿಗಳಿಗಾಗಿ ಸಿಲ್ಲುವುದಿಲ್ಲ. ||೬೧-೬೨||

ಎಲೈ ಮಯೂರಶ್ರೇಷ್ಠವೇ, ಅದಕ್ಕಾಗಿ ನೀನು ಇಲ್ಲಿ ಹೆದರಬೇಡ. ಸುಖದಿಂದಿರು. ಕಾಶಿಯಲ್ಲಿ ಅಧರ್ಮಕಾರ್ಯಗಳು ಎಂದೂ ನಡೆಯಲಾರವು. ಕಾಶಿಯಲ್ಲಿದ್ದು ಪಾಪಕಾರ್ಯಮಾಡುವ ಮನುಜನು ಸೂರ್ಯಚಂದ್ರರಿರುವ ಪರ್ಯಂತ ಘೋರ ನರಕ ಯಾತನೆಯನ್ನು ಅನುಭವಿಸುವನು. ||೬೩-೬೪||

ಚರಲಿಂಗನೆನಿಸಿದ ಜಂಗಮನೂ, ಅಚರಲಿಂಗಗಳಾದ ಶಿವಲಿಂಗಗಳೂ, ಕಾಶಿಯಲ್ಲಿ ಹೇರಳವಾಗಿವೆ. ಅವೆಲ್ಲವೂ ಪೂಜ್ಯವಸ್ತುಗಳೇ, ಅವುಗಳನ್ನು ವಿಧಿವತ್ತಾಗಿ ಸರ್ವದಾ ಪೂಜಿಸಬೇಕು. ಚರಲಿಂಗಗಳೆಂದರೆ ಶರೀರಗಳನ್ನು ಧರಿಸಿ ಮನೋಹರವಾಗಿ ಓಡಾಡುವ ಜಂಗಮರೂಪಿಯಾದ ಶಿವನೆಂದೇ ಮಹಾತ್ಮರು ಹೇಳುವರು. ||೬೫-೬೬||

ಕಿನ್ನರೋ ಮನುಜೋ ಯಕ್ಷೋ ಗಂಧರ್ವೋಽಪ್ಯಮರೋಽಪಿ ವಾ ।
ತತ್ತಚ್ಛೈವಶರೀರೇಷು ದುಃಖದೋ ಯಾತಿ ಯಾತನಾಂ ॥೬೭॥

ಶೈವದುಃಖಪ್ರದೋ ಮರ್ತ್ಯೋ ವಿಷ್ಠಾಯಾಂ ಜಾಯತೇ ಕ್ರಿಮಿಃ ।
ತೇನೋತ್ಕೃಷ್ಟಂ ಪುನರ್ಜನ್ಮ ನಾರಂ ನಾವಾಪ್ಯತೇ ಧ್ರುವಂ ॥೬೮॥

ಅರಣ್ಯೇ ನಿರ್ಜನೇ ದೇಶೇ ಜಲಧಾರಾವಿವರ್ಜಿತೇ ।
ಸೂಕರೋ ಜಾಯತೇ ನೂನಂ ಶೈವದುಃಖಕರಃ ಸುರಃ ॥೬೯॥

ಅಮೇಧ್ಯಭಕ್ಷಣಾಸಕ್ತೋ ನಾನಾವ್ರಣವಿದೂಷಿತಃ ।
ರಾಸಭೋ ಜಾಯತೇ ನೂನಂ ಕಿನ್ನರಃ ಶೈವದುಃಖದಃ ॥೭೦॥

ಶೈವದುಃಖಕರೋ ಯಕ್ಷಃ ಸೃಗಾಲೋ ಜಾಯತೇ ವನೇ ।
ಗಂಧರ್ವೋ ಜಾಯತೇ ಗೃಧ್ರಃ ಶೈವದುಃಖಕರೋ ಧ್ರುವಂ ॥೭೧॥

ಶೈವದುಃಖಕರೋ ದುಷ್ಟಃ ಕಾಶ್ಯಾಂ ದೈವಾನ್ಮೃತೋ ನರಃ ।
ಅಘೋರಯಾತನಾಂ ಪ್ರಾಪ್ಯ ತಿಷ್ಠಂತ್ಯಾಚಂದ್ರತಾರಕಂ ॥೭೨॥

---

ಅಂತಹ ಶಾಂಭವರಿಗೆ, ಕಿನ್ನರರಾಗಲಿ, ಮನುಜರಾಗಲಿ, ದೇವತೆಗಳಲ್ಲಿ ಯಾರೇ ಆಗಲಿ ಹಿಂಸೆಯನ್ನು ಕೊಡಲಾರರು. ಹಾಗೆ ಕೊಟ್ಟರೆ ಅವರಿಗೆ ನರಕ ಯಾತನೆ ತಪ್ಪುವುದಿಲ್ಲ. ಶೈವಶ್ರೇಷ್ಠರಿಗೆ ದುಃಖವನ್ನುಂಟುಮಾಡುವ ಮನುಜನು ಯಾವಾಗಲೂ ಮಲದಲ್ಲಿ ಕ್ರಿಮಿಯಾಗಿ ಬಿದ್ದಿರುವನು. ಅವನಿಂದ ಎಂದೂ ಮನುಷ್ಯ ಜನ್ಮವನ್ನು ಪಡೆಯಲಾಗುವುದಿಲ್ಲ. ॥೬೭-೬೮॥

ಶಾಂಭವರಿಗೆ ದುಃಖವನ್ನೆಸಗುವವನು ನಿರ್ಜನವಾದ ಕಾಡಿನಲ್ಲಿ, ನೀರು ಕಾಣದೆ, ಹಂದಿಯ ಜನ್ಮದಿಂದ ಅಲೆಯುವನು. ಅವನು ಕಿನ್ನರನೇ ಆದರೂ, ಅಮೇಧ್ಯಭಕ್ಷಣೆಯಲ್ಲಿ ನಿರತನಾಗಿ ನಾನಾವ್ರಣಾದಿಗಳ ಯಾತನೆಯನ್ನು ಅನುಭವಿಸುತ್ತಾ, ಗರ್ದಭಜನ್ಮವನ್ನು ಪಡೆಯುವನು. ॥೬೯-೭೦॥

ಯಕ್ಷನೇನಾದರೂ ಶೈವನಿಗೆ ಹಿಂಸೆಯನ್ನಿತ್ತರೆ ನರಿಯಾಗಿಯೂ, ಗಂಧರ್ವನು ಹಾಗೆ ಕಷ್ಟಕೊಟ್ಟರೆ ಹದ್ದಾಗಿಯೂ ಜನಿಸುವರು. ಮನುಷ್ಯನು ಆ ರೀತಿ ಶೈವರಿಗೆ ಹಿಂಸೆಯನ್ನಿತ್ತು ಮೃತನಾದರೆ, ಅವನು ಚಂದ್ರನಕ್ಷತ್ರಗಳಿರುವವರೆಗೂ ಘೋರ ಯಾತನೆಯನ್ನನುಭವಿಸುತ್ತಾ ನರಕದಲ್ಲಿ ಬಿದ್ದಿರುವನು. ॥೭೧-೭೨॥

ತ್ರೈವಂ ಶರೀರಮಮಲಂ ಶಿವಾಲಯಮುದಾಹೃತಂ ।
ತಸ್ಯ ದುಃಖಪ್ರದಾನೇನ ದುಃಖಿತೋಽಹಂ ನ ಸಂಶಯಃ ॥೭೩॥

ಸರ್ವದೇವೋತ್ತಮೇ ನಿತ್ಯೇ ಮಯಿ ದುಃಖಪ್ರದೋ ಜನಃ ।
ಅಘೋರನರಕೇ ನಿತ್ಯಂ ದುಃಖಿತೋ ನಿವಸಿಷ್ಯತಿ ॥೭೪॥

ಸ ಏವ ಧನ್ಯಃ ಪುಣ್ಯಾತ್ಮಾ ಸ ಏವ ಜಗತಾಂ ಗುರುಃ ।
ಸ ಏವ ದೇವಃ ಪೂಜ್ಯಶ್ಚ ಯಸ್ಮಿನ್ ತುಷ್ಟೋ ಭವಾಮ್ಯಹಂ ॥೭೫॥

ಸ ಏವ ಯಾತನಾ ಭೋಕ್ತಾ ಸ ಏವ ನರಕಾಲಯಃ ।
ಸ ಏವ ದುರ್ಭಗೋ ಭಾಗ್ಯೋ ಯಸ್ಮಿನ್ ರುಷ್ಟೋ ಭವಾಮ್ಯಹಂ ॥೭೬॥

ಮಾಮನ್ಯದೇವ ಸದೃಶಂ ಮನುತೇ ಯದಿ ಮಾನವಃ ।
ಸೋಽಪಿ ಘೋರತರೇ ತೀಕ್ಷ್ಣೇ ನರಕೇ ನಿವಸಿಷ್ಯತಿ ॥೭೭॥

ದೇವೋತ್ತಮೋಽಹಮಜರೋ ನಿಷ್ಕಲಂಕೋ ನಿರಂಜನಃ ।
ನ ಮತ್ತೋಽಭ್ಯಧಿಕೋ ದೇವೋ ನ ಮಯಾ ಸದೃಶೋಽಪಿ ವಾ ॥೭೮॥

---

ಕಾಶಿಯಲ್ಲಿ ಶಾಂಭವನ ದೇಹವೆಂಬುದು ಶಿವಾಲಯವೇ. ಅದಕ್ಕೆ ಹಿಂಸೆ ಕೊಡುವುದರಿಂದ ನಾನು ಬಹಳವಾಗಿ ವ್ಯಥೆಪಡುವೆನು. ಸರ್ವದೇವಶ್ರೇಷ್ಠನೆನಿಸಿ, ನಿತ್ಯಸ್ವರೂಪನಾಗಿರುವ ನನಗೆ ದುಃಖವನ್ನುಂಟುಮಾಡುವ ಜನರು ಘೋರವಾದ ನರಕದಲ್ಲಿ ಸ್ಥಿರವಾಗಿ ದುಃಖಾನುಭವಿಗಳಾಗಿ ನಿಲ್ಲುವರು. ॥೭೩-೭೪॥

ನಾನು ಯಾರ ವಿಷಯದಲ್ಲಿ ಪ್ರೀತಿಯನ್ನು ತೋರ್ಪಡಿಸುವೆನೋ, ಆತನೇ ಧನ್ಯ. ಆತನೇ ಪುಣ್ಯಶಾಲಿ ಮತ್ತು ಜಗದ್ಗುರುವೆನಿಸಿ ಸರ್ವಪೂಜ್ಯನಾಗುವನು. ಯಾರಲ್ಲಿ ನಾನು ಆಗ್ರಹವನ್ನು ತೋರ್ಪಡಿಸುವೆನೋ, ಆತನು ನರಕಭಾಗಿಯಾಗುವನು. ಅಲ್ಲದೆ ದುರದೃಷ್ಟಶಾಲಿಯೂ, ದರಿದ್ರನೂ ಎನಿಸುವನು. ಯಾರೇ ಆಗಲಿ ನನ್ನನ್ನು ಇತರ ದೇವತೆಗಳಿಗೆ ಸರಿಸಮನೆಂದು ಭಾವಿಸುವರೊ, ಅವರು ಸಂಪೂರ್ಣವಾಗಿ ಭಯಂಕರವೆನಿಸಿದ ನರಕದಲ್ಲಿ ಬಿದ್ದು ದುಃಖಿಸುವರು. ॥೭೫-೭೬-೭೭॥

ಸಕಲ ದೇವತೆಗಳಿಗೂ ನಾನು ಪೂಜ್ಯನು. ನಾನು ದೋಷವಿವರ್ಜಿತನು. ಪಾಪವಿದೂರನು. ನನಗಿಂತ ಮಹಿಮೆಯಲ್ಲಿ ದೊಡ್ಡವನಾದವನು ಲೋಕದಲ್ಲಿ

ಮದ್ಭಕ್ತಸದೃಶೋ ಲೋಕೇ ನಾಸ್ತಿ ನಾಸ್ತ್ಯೇವ ಸರ್ವಥಾ ।
ಮದ್ಭಕ್ತ ಏವ ಪುಣ್ಯಾತ್ಮಾ ಧನ್ಯೋ ಮದ್ಭಕ್ತ ಏವ ಹಿ ॥೭೯॥

ಮದ್ಭಕ್ತೇ ಪೂಜಿತೇ ಸಮ್ಯಗಹಮೇವಾಸ್ಮಿ ಪೂಜಿತಃ ।
ಮದ್ಭಕ್ತಪೂಜನೇನೈವ ಸಂತುಷ್ಟೋಽಸ್ಮ್ಯಹಮಾದರಾತ್ ॥೮೦॥

ತ್ವಯಾಪೂರ್ವಭವೇ ಸಮ್ಯಙ್ಮತ್ಪ್ರೀತ್ಯರ್ಥಂ ತಪಃ ಕೃತಂ ।
ತನ್ವೈತಜ್ಜನ್ಮವಿಗಮೇ ಮುಕ್ತಿರತ್ರ ಭವಿಷ್ಯತಿ ॥೮೧॥

ತವಾಪ್ಯವ್ಯಾಹತಾ ಭಕ್ತಿರ್ಮಯಿ ತಿಷ್ಠತಿ ಸರ್ವದಾ ।
ಸುಖೇನ ಸಂವಸಾತ್ರೈವ ಭಿಲ್ಲಾದ್ಭೀತಿರ್ನ ತೇ ಧ್ರುವಂ ॥೮೨॥

ಇತಿ ದತ್ವಾಽಭಯಂ ಶಂಭುಃ ಪ್ರೀಣಯಿತ್ವಾ ಶಿವಾರ್ಚಕಾನ್ ।
ತತ್ರೈವಾಂತರ್ದಧೇ ಲಿಂಗೇ ಶ್ರೀಮದ್ವೀರೇಶ್ವರಾಭಿಧೇ ॥೮೩॥

ಈದೃಶಃ ಕರುಣಾಸಿಂಧುರ್ವೀರೇಶೋ ಭಕ್ತವತ್ಸಲಃ ।
ತದ್ದರ್ಶನಂ ಕೃತಂ ಪೂರ್ವಮನೇನ ದ್ವಿಜಜನ್ಮನಾ ॥೮೪॥

---

ಯಾರೂ ಇಲ್ಲ. ನನ್ನ ಭಕ್ತನಿಗೆ ಸದೃಶನಾದ ಪುಣ್ಯಾತ್ಮನೂ ಯಾರೂ ದೊರೆಯುಲಾರದು. ನನ್ನ ಭಕ್ತನನ್ನು ಪೂಜಿಸಿದರೆ ನಾನು ಪೂಜಿತನಾದಷ್ಟು ಸಂತೋಷಪಡುವೆನು. ನನ್ನ ಭಕ್ತಾರಾಧನೆಯೇ ನನ್ನ ಆರಾಧನೆ. ||೭೮-೭೯-೮೦||

ನೀನು ಹಿಂದಿನ ಜನ್ಮದಲ್ಲಿ ನನ್ನ ಪ್ರೀತಿಗಾಗಿ ತಪಸ್ಸನ್ನಾಚರಿಸಿರುವೆ. ಈ ಜನ್ಮವು ಕಳೆದೊಡನೆಯೇ ನಿನಗೆ ಶಾಶ್ವತವಾದ ಮುಕ್ತಿಯು ದೊರಕುವುದು. ನಿನಗೂ ಸಹ ನನ್ನಲ್ಲಿ ಅತಿಶಯವಾದ ಭಕ್ತಿಯುದ್ಭವಿಸಿರುವುದು. ಆದ್ದರಿಂದ ನೀನು ಭೀತಿಯನ್ನು ದೂರಮಾಡಿ, ಇಲ್ಲಿಯೇ ಸುಖದಿಂದ ವಾಸಮಾಡು.||೮೧-೮೨||

ಹೀಗೆ ಹೇಳಿ ಶಂಕರನು ಅಲ್ಲಿದ್ದ ತನ್ನ ಭಕ್ತರಿಗೆಲ್ಲಾ ದರ್ಶನ ಕೊಟ್ಟು, ಆ ವೀರೇಶ್ವರಲಿಂಗದಲ್ಲಿಯೇ ಅಡಗಿದನು. ಅಂತಹ ಕರುಣಾಸಿಂಧುವೂ, ಭಕ್ತವತ್ಸಲನೂ ಆದ ವೀರೇಶ್ವರಸ್ವಾಮಿಯನ್ನು ಈ ಬ್ರಾಹ್ಮಣನು ಹಿಂದೆ ದರ್ಶನಮಾಡಿರುವನು. ||೮೩-೮೪||

ಇದಂ ಶರೀರಮೇತಸ್ಯ ಚರಲಿಂಗಂ ನ ಸಂಶಯಃ ।
ಶಿವಲಿಂಗಾರ್ಚಕೋ ನಿತ್ಯಂ ಪೂರ್ವಂ ಪೂರ್ವಭವೇಷ್ವಯಂ ॥೮೫॥

ಭವದ್ಭಿರಸ್ಯ ಶೈವಸ್ಯ ಪೂಜಾ ಕಾರ್ಯಾ ವಿಶೇಷತಃ ।
ಶಿವಃ ಶೈವಾರ್ಚನಾದೇವ ತುಷ್ಟೋ ಭವತಿ ಸರ್ವಥಾ ॥೮೬॥

ಇತ್ಯುಕ್ತ್ವಾ ಸ ಪುನಃ ಸ್ರಷ್ಟಾ ಸ ಸಭಾ ಸದ್ಯಥಾವಿಧಿ ।
ಶಿವಲಿಂಗಧಿಯಾ ತಸ್ಮೈ ಪೂಜಾಂ ಚಕ್ರೇ ಮನೋರಮಾಂ ॥೮೭॥

ಇದಂ ವೀರೇಶ್ವರಕ್ಷೇತ್ರಮೀದೃಶಂ ಸರ್ವಕಾಮದಂ ।
ಶೈವೇಂದ್ರೈಸ್ಸರ್ವದಾ ಸೇವ್ಯಂ ಮುಕ್ತಿರೂಪಫಲಾರ್ಥಿಭಿಃ ॥೮೮॥

ತ್ವಯಾಪ್ಯತ್ರೈವ ಸತತಂ ಸ್ಥಾತವ್ಯಂ ಶಿವಮಂದಿರೇ ।
ಕಾಶೀತ್ಯಾಗೋ ನ ಕರ್ತವ್ಯೋ ಮೋಕ್ಷೇಚ್ಛಾ ಯದಿ ಸರ್ವಥಾ ॥೮೯॥

ಕಲ್ಯಾಣನಿಲಯಾ ನಿತ್ಯಮನ್ನಪೂರ್ಣಾ ವರಾನನಾ ।
ಮೃಷ್ಟಮನ್ನಂ ಯಥೇಚ್ಛಂ ಸಾ ದಾಸ್ಯತ್ಯೇವ ನ ಸಂಶಯಃ ॥೯೦॥

---

ಇವನ ಶರೀರವೇ ಚರಲಿಂಗ. ಈತನು ಅನೇಕ ಜನ್ಮಗಳಿಂದಲೂ ಶಿವಾರ್ಚಕನಾಗಿಯೇ ಇರುವನು. ಆದ್ದರಿಂದ ಇಂತಹ ಶೈವನ ಆರಾಧನೆಯನ್ನು ನೀವು ಈಗಲೇ ನಡೆಸಬೇಕು. ಶೈವರ ಅರ್ಚನೆಯಿಂದಲೇ ಉಮಾಪತಿಯು ತೃಪ್ತನಾಗುವನು. ||೮೬||

ಎಂದು ಹೇಳಿ ಬ್ರಹ್ಮನು ತನ್ನ ಸಭಾಸದರೊಡಗೂಡಿ ಅವನನ್ನೇ ಶಿವಲಿಂಗವೆಂದು ತಿಳಿದು ಅವನಿಗೆ ವಿಧಿವತ್ತಾಗಿ ಅರ್ಚನೆಮಾಡಿದನು. ಈ ವೀರೇಶ್ವರಕ್ಷೇತ್ರವು ಸರ್ವಕಾಮಪ್ರದವಾದುದು. ಮತ್ತು ಮಹಿಮಾಪೂರ್ಣವಾದುದು. ಆದ್ದರಿಂದ ಮೋಕ್ಷಾಪೇಕ್ಷಿಗಳು ತಪ್ಪದೆ ಈ ಶಿವಲಿಂಗವನ್ನು ಸರ್ವದಾ ಸೇವಿಸುತ್ತಿರಬೇಕು. ||೮೭-೮೮||

ಆದ್ದರಿಂದ ನೀನು ಎಂದೂ ಈ ಪವಿತ್ರವಾದ ಕಾಶೀಕ್ಷೇತ್ರವನ್ನು ಬಿಡಬೇಡ. ನಿಜವಾಗಿಯೂ ಮೋಕ್ಷಾಪೇಕ್ಷೆ ನಿನಗಿದ್ದರೆ, ಈ ಕ್ಷೇತ್ರವನ್ನು ಬಿಡಬೇಡ. ಇಲ್ಲಿರುವ ಅನ್ನಪೂರ್ಣಾದೇವಿಯು ಕಲ್ಯಾಣನಿಲಯಳು. ಪ್ರಸನ್ನ

ಇತಿ ತದ್ವಚನಂ ಶ್ರುತ್ವಾ ತತಸ್ಸಂತುಷ್ಟಮಾನಸಃ ।
ಉವಾಸ ಕಾಶ್ಯಾಮನಿಶಂ ಸ ತಪಶ್ಚರಣೇ ರತಃ ॥೯೧॥

ಕಾಲೇನ ಸ ಮೃತೋತ್ರೈವ ಜ್ಞಾನಮಾಪೇ ತಟೇ ಶುಭೇ ।
ತಸ್ಮೈ ಮುಕ್ತಿರ್ಮಯಾ ದತ್ತಾ ಶೈವಮಂತ್ರೋಪದೇಶತಃ ॥೯೨॥

ವೀರೇಶ್ವರಸ್ಥಾನಮಿದಂ ಮನೋಜ್ಞಂ
ಜ್ಞಾನಪ್ರದಂ ಶೈವಜನಾಭಿಸೇವ್ಯಂ ।
ಯತೋ ಮಯೂರೋಪಿ ವಿಹಾಯ ದುಃಖ
ಮುವಾಸ ವಿರೇಶಕೃಪಾಕಟಾಕ್ಷಾತ್ ॥೯೩॥

ಇತಿ ಶ್ರೀಶಿವರಹಸ್ಯೇ ಸಪ್ತಮಾಂಶೇ ವೀರೇಶಮಹಿಮಾವರ್ಣನಂ ನಾಮ
ನವಮೋಽಧ್ಯಾಯಃ

---

ಮುಖಿಯು. ಇಂತಹ ಜಗನ್ಮಾತೆಯು ಸರ್ವದಾ ಇಲ್ಲಿರುವವರಿಗೆ ಮೃಷ್ಟಾನ್ನವನ್ನು ಅನುಗ್ರಹಿಸುವಳು. ॥೮೯-೯೦॥

ಹೀಗೆಂದ ಮಹರ್ಷಿಯ ಮಾತುಗಳನ್ನು ಕೇಳಿ ಆ ರಾಜನು ಕಾಶಿಯಲ್ಲಿಯೇ ಸರ್ವದಾ ವಾಸಮಾಡುತ್ತಾ ತಪಃಕಾರ್ಯದಲ್ಲಿ ನಿರತನಾದನು. ಹಾಗೆಯೇ ಅಲ್ಲಿ ಕೆಲವು ಕಾಲವಿದ್ದು ಆತನು ಮೃತನಾದನು. ಅವನಿಗೆ ನಾನು ಶಿವಪಂಚಾಕ್ಷರಿಯನ್ನು ಪದೇಶಿಸಿ ಸ್ಥಿರಮುಕ್ತಿಯನ್ನು ಅನುಗ್ರಹಿಸಿದೆನು. ಆದ್ದರಿಂದ ಕಾಶಿಯಲ್ಲಿ ವೀರೇಶ್ವರ ಕ್ಷೇತ್ರವೆಂಬುದು ಪರಮಪವಿತ್ರವಾದುದು. ಮತ್ತು ಜ್ಞಾನಪ್ರದವಾಗಿ ಮನೋಹರ ವೆನಿಸಿದೆ. ಕೇವಲ ಮಯೂರಪಕ್ಷಿಯೂ ಕೂಡ ವೀರೇಶ್ವರಾನುಗ್ರಹದಿಂದ ಶಾಶ್ವತ ಮುಕ್ತಿಯನ್ನು ಪಡೆಯಿತು. ಆದ್ದರಿಂದ ಇಂತಹ ಪವಿತ್ರಸ್ಥಾನವು ಜಗತ್ತಿನಲ್ಲಿ ಮತ್ತೆಲ್ಲಿಯೂ ದೊರೆಯಲಾರದು. ಎಂದು ಪರಮೇಶ್ವರನು ಪಾರ್ವತಿಗೆ ಬೋಧಿಸಿದನು. ॥೯೧-೯೨-೯೩॥

ಇಲ್ಲಿಗೆ ಶ್ರೀಶಿವರಹಸ್ಯದ ಸಪ್ತಮಾಂಶದಲ್ಲಿ ವೀರೇಶಮಹಿಮಾವರ್ಣನೆಯೆಂಬ
ಒಂಬತ್ತನೆಯ ಅಧ್ಯಾಯವು ಮುಗಿದುದು.



|| ಶ್ರೀ ||

|| ಶ್ರೀಶಿವಾಯ ನಮಃ ||

# ಅಥ ಶ್ರೀಶಿವರಹಸ್ಯೇ

## ಉಗ್ರಾಖ್ಯೇ

### ಸಪ್ತಮಾಂಶೇ ಪೂರ್ವಾರ್ಧೇ

## ದಶಮೋಽಧ್ಯಾಯಃ

|| ಶಿವ ಉವಾಚ ||

ಅನ್ಯಾಮಪೂರ್ವಾಮನಘಾಂ ಕಥಾಂ ವಕ್ಷ್ಯೇ ಶುಭಪ್ರದಾಂ ।
ಯತ್ಕಥಾಶ್ರವಣಾತ್ಸದ್ಯೋ ಮುಚ್ಯತೇ ಕರ್ಮಬಂಧನಾತ್ ||೧||

ಕಾಶ್ಯಾಂ ಪಶುಪತೀಶಸ್ಯ ಸ್ಥಾನಮತ್ಯುತ್ತಮಂ ಶುಭೇ ।
ನಿತ್ಯಂ ಸನ್ನಿಹಿತಸ್ತತ್ರ ನಿವಸಾಮ್ಯಹಮಾದರಾತ್ ||೨||

---

## ಹತ್ತನೆಯ ಅಧ್ಯಾಯ

ಬಳಿಕ ಶಿವನು ತನ್ನ ಪ್ರೇಯಸಿಯಾದ ಪಾರ್ವತಿಯನ್ನು ಕುರಿತು ಹೀಗೆಂದನು. ಎಲೌ ಪ್ರಿಯತಮೆಯೇ, ಇದುವರೆಗೆ ವೀರೇಶಮಹಿಮೆಯನ್ನು ನಿನಗಾಗಿ ವರ್ಣಿಸಿದೆನು. ಇನ್ನು ಮುಂದೆ ಅಪೂರ್ವವೂ, ಪುಣ್ಯಕರವೂ, ಕಲ್ಯಾಣಪ್ರದವೂ ಆದ ಮತ್ತೊಂದು ಕಥೆಯನ್ನು ನಿನಗೆ ಹೇಳುವೆನು ಕೇಳು. ಆ ಕಥೆಯನ್ನು ಕೇಳುವುದರಿಂದ ಶೀಘ್ರದಲ್ಲಿಯೇ ಮಾನವನು ಪಾಪಕರ್ಮಗಳೆಂಬ ಪಾಶದಿಂದ ಬಿಡುಗಡೆಯನ್ನು ಹೊಂದುವನು. ||೧||

ಎಲೌ ಸರ್ವಮಂಗಳೆಯೇ, ಕಾಶೀಕ್ಷೇತ್ರದಲ್ಲಿ ಪಶುಪತಿಪ್ರಿಯವಾದ ಅತ್ಯಂತ ಶ್ರೇಷ್ಠವಾದ ಒಂದಾನೊಂದು ಪ್ರದೇಶವಿರುವುದು. ಆ ಪ್ರದೇಶದಲ್ಲಿ ನಾನು ನಿರಂತರವೂ ಪ್ರೀತಿಯಿಂದ ಅಲ್ಲಿಯೇ ವಾಸವಾಗಿರುವೆನು. ||೨||

ಮಹಾಪಾಶುಪತೈಸ್ತತ್ರ ವಸತಿಃ ಕ್ರಿಯತೇ ಸದಾ ।
ಶೈವಶಾಸ್ತ್ರಪ್ರಣೇತಾರಃ ಸಂತಿ ತತ್ರೈವ ಕೋಟಿಶಃ ॥೩॥

ಭಸ್ಮದಿಗ್ಧಕರಾದ್ಯಂಗಾಃ ತ್ರಿಪುಂಡ್ರಾಂಕಿತಮಸ್ತಕಾಃ ।
ರುದ್ರಾಕ್ಷಮಾಲಾಭರಣಾ ದೀರ್ಘಪಿಂಗಜಟಾಧರಾಃ ॥೪॥

ಅಘೋರಮೂರ್ತಿಮನಿಶಂ ಧ್ಯಾಯಂತೋ ಮಾಮಜಂ ಶಿವಂ ।
ಅಘೋರಮಂತ್ರವಿನ್ಯಾಸಜಪನಿಷ್ಠಾ ನಿರಾಕುಲಾಃ ॥೫॥

ನಿಷ್ಕಲಂ ನಿರ್ಗುಣಂ ಶಾಂತಂ ಶಿವಮಕ್ಷರಮವ್ಯಯಂ ।
ತುರೀಯಮನಘಂ ಮತ್ವಾ ಭಜಂತಿ ಶಿವಮೇವ ಮಾಂ ॥೬॥

ತ್ಯಕ್ತ್ವಾ ಪಶುಪತೀಶಸ್ಯ ಸ್ಥಾನಮನ್ಯತ್ರ ಸರ್ವದಾ ।
ನ ಗಚ್ಛಂತ್ಯೇವ ನಿಯತಾಃ ಶೈವದೀಕ್ಷಾಪರಾಯಣಾಃ ॥೭॥

---

ಆ ಸ್ಥಳದಲ್ಲಿ ಅನೇಕ ಮಂದಿ ಪಶುಪತಿಯ ಭಕ್ತಾಗ್ರೇಸರರು ವಾಸವಾಗಿರುವರು. ಅಲ್ಲದೇ ಶೈವಶಾಸ್ತ್ರಪ್ರವರ್ತಕರಾದ ಅನೇಕ ಮಂದಿ ವಿದ್ವಾಂಸರು ಅಲ್ಲಿಯೇ ವಾಸವಾಗಿರುವರು. ||೩||

ಅವರೆಲ್ಲರೂ ಹಸ್ತಗಳೇ ಮೊದಲಾದ ಸರ್ವಾಂಗಗಳಲ್ಲಿಯೂ ವಿಭೂತಿಯನ್ನು ಲೇಪಿಸಿ, ಶಿರಸ್ಸಿನಲ್ಲಿ ಭಸ್ಮತ್ರಿಪುಂಡ್ರಗಳನ್ನು ಧರಿಸಿ, ರುದ್ರಾಕ್ಷಮಾಲೆಗಳಿಂದ ವಿಭೂಷಿತರಾಗಿ, ದೀರ್ಘವಾಗಿಯೂ, ಹೊಂಬಣ್ಣದಿಂದ ಯುಕ್ತವಾಗಿಯೂ ಇರುವ ಜಟೆಗಳನ್ನು ಧರಿಸಿ, ಅಘೋರರೂಪಿಯಾದ ನನ್ನನ್ನೇ ನಿರಂತರವೂ ಧ್ಯಾನಿಸುತ್ತಿರುವರು. ಮತ್ತು ಅವರು ನಿರ್ಭಯರಾಗಿ, ಅಘೋರಮಂತ್ರದ, ಅಂಗವಿನ್ಯಾಸ ಮತ್ತು ಜಪ ಇವುಗಳಲ್ಲಿಯೇ ಆಸಕ್ತರಾಗಿ, ವಸ್ತುತಃ ಷೋಡಶಕಲಾವಿಹೀನನೂ, ಗುಣರಹಿತನೂ, ಶಾಂತಮೂರ್ತಿಯೂ, ಕಲ್ಯಾಣಕರನೂ, ಕೂಟಸ್ಥನೂ, ನಾಶರಹಿತನೂ, ಆಧ್ಯಾತ್ಮಿಕ ಮತ್ತು ಆಧಿದೈವಿಕ ಆಧಿಭೌತಿಕಗಳೆಂಬ ಕಲ್ಪಿತವಾದ ಚೈತನ್ಯತ್ರಯಗಳಿಗೆ ಆಧಾರಭೂತನಾಗಿ ಅವುಗಳಿಗೆ ನಾಲ್ಕನೆಯವನೂ, ಪಾಪರಹಿತನೂ ಆದ ನನ್ನನ್ನೇ ಸೇವಿಸುತ್ತಿರುವರು. ||೪-೫-೬||

ಪಶುಪತಿಯ ಸೇವೆಯಲ್ಲಿ ನಿರತರಾದ ಅವರು ಶೈವದೀಕ್ಷೆಯನ್ನು ಅವಲಂಬಿಸಿ ನಿಯಮಬದ್ಧರಾಗಿ ಪಶುಪತಿಯು ನೆಲಸಿರುವ ಆ ಪ್ರದೇಶವನ್ನು ಬಿಟ್ಟು ಮತ್ತೆಲ್ಲಿಗೂ ಹೋಗುವುದೇ ಇಲ್ಲ. ||೭||

ನಿತ್ಯಂ ಶಿವಕಥಾಸ್ವೇವ ಸಕ್ತಾಂತಃಕರಣಾ ಮುದಾ ।
ಶಿವನಾಮ ವಿಹಾಯಾನ್ಯಂ ನ ವದಂತ್ಯೇವ ಸರ್ವದಾ ॥೮॥

ತತ್ರ ಪಾಶುಪತಂ ನಾಮ ಕುಂಡಮಸ್ತಿ ವರಾನನೇ ।
ತತ್ಕಾಶ್ಮೀರಮಣಿಶ್ರೇಷ್ಠರಚಿತಂ ನಿರ್ಮಲೋದಕಂ ॥೯॥

ತತ್ರ ಕುರ್ವಂತಿ ಯೇ ಸ್ನಾನಂ ಭೂಯಸ್ತೇ ಸರ್ವಥಾ ಶುಭೇ ।
ನಾರಕೀಂ ಯಾತನಾಂ ಪ್ರಾಪ್ಯ ನ ಶೋಚಂತಿ ಕದಾಚನ ॥೧೦॥

ತತ್ರ ಸ್ನಾತ್ವಾ ಚ ಪೀತ್ವಾ ಚ ತಜ್ಜಲಂ ಪಾಪನಾಶಕಂ ।
ಸುಧಾನಿಭಂ ಮಣಿಚ್ಛಾಯಸಮಾಕ್ರಾಂತಮಹರ್ನಿಶಂ ॥೧೧॥

ಸ್ಪೃಷ್ಟ್ವಾಪಿ ಯಾಂತಿ ಮಲ್ಲೋಕಂ ನಿರ್ಧೂತಾಘಾ ನ ಸಂಶಯಃ ।
ಪುನರಾವೃತ್ತಿರಹಿತಂ ಸರ್ವಾಶಾಸ್ಯಮನಾಮಯಂ ॥೧೨॥

---

ಅವರು ಪ್ರತಿಕ್ಷಣದಲ್ಲಿಯೂ ಭಕ್ತಿಯಿಂದ ಶಿವಕಥಾಶ್ರವಣದಲ್ಲಿಯೇ ಆಸಕ್ತರಾಗಿ ಶಿವನಾಮವನ್ನೊಂದನ್ನು ಬಿಟ್ಟು ಮತ್ತಾವ ಶಬ್ದವನ್ನೂ ಉಚ್ಚರಿಸುವುದಿಲ್ಲ. ॥೮॥

ಎಲೌ ಸುಮುಖಿಯೇ, ಅಲ್ಲಿ ಪಾಶುಪತತೀರ್ಥವೆಂಬ ಹೆಸರುಳ್ಳ ಒಂದಾನೊಂದು ಕುಂಡವು ಇರುವುದು. ಅದು ಶ್ರೇಷ್ಠವಾದ ಕಾಶ್ಮೀರಮಣಿಗಳಿಂದ ನಿರ್ಮಿಸಲ್ಪಟ್ಟಿರುವುದು. ಅದರ ಉದಕವು ಬಹಳ ನಿರ್ಮಲವಾಗಿರುವುದು. ॥೯॥

ಆ ಕುಂಡದಲ್ಲಿ ಸ್ನಾನವನ್ನಾಚರಿಸುವವರು ಅಂತ್ಯದಲ್ಲಿ ನರಕಲೋಕದ ಯಾತನೆಗಳಿಗೆ ಗುರಿಯಾಗಿ ಎಂದಿಗೂ ದುಃಖಿತರಾಗುವುದಿಲ್ಲ. ॥೧೦॥

ಅಲ್ಲಿ ಸ್ನಾನವನ್ನಾಚರಿಸಿ, ಪಾಪನಾಶಕರವೂ, ಅಮೃತತುಲ್ಯವೂ, ರತ್ನಕಾಂತಿಯಿಂದ ಕೂಡಿರುವುದೂ ಆದ ಆ ಉದಕವನ್ನು ಪಾನಮಾಡಿ, ಪುನರಾವೃತ್ತಿರಹಿತವೂ, ಸಕಲ ಪ್ರಾಣಿಗಳಿಗೆ ಅಪೇಕ್ಷಿತವೂ, ಶೋಕರಹಿತವೂ, ಶಾಶ್ವತವೂ ಆದ ನನ್ನ ಲೋಕವನ್ನು ಹೊಂದುವರು. ಇದರಲ್ಲಿ ಸಂಶಯವಿಲ್ಲ. ಹೆಚ್ಚೇಕೆ! ಆ ಕುಂಡದ ಉದಕವನ್ನು ಸ್ಪರ್ಶಿಸಿದ ಮಾತ್ರದಿಂದಲೇ ಪಾಪವಿಮುಕ್ತರಾಗಿ ನನ್ನ ಲೋಕವನ್ನು ಹೊಂದುವರು. ॥೧೧-೧೨॥

ತಸ್ಮಿನ್ನೇವಾಭವತ್ಕುಂಡೇ ಮಂಡೂಕಃ ಕಶ್ಚಿದುತ್ತಮಃ ।
ಸ ಶಿವಾನ್ನಾನ್ಯದಸ್ತೀತಿ ವದನ್ ತಿಷ್ಠತಿ ಸರ್ವದಾ ॥೧೩॥

ಸ ಮಂಡೂಕಸ್ತು ಕಾಕೇನ ಕದಾಚಿದ್ದೈವಯೋಗತಃ ।
ಪಂಚಕ್ರೋಶಾದ್ಬಹಿರ್ನೀತಃ ಪತಿತಶ್ಚ ಕ್ವಚಿದ್ಧ್ರದೇ ॥೧೪॥

ತತಶ್ಚುಕ್ರೋಶ ಬಹುಧಾ ಮಂಡೂಕಃ ಶೋಕಕರ್ಶಿತಃ ।
ಹಾ ಹಾ ಪಶುಪತೀಶೇತಿ ವದನ್ನೇವ ಮುಹುರ್ಮುಹುಃ ॥೧೫॥

ಧಿಕ್ಶರೀರಮಿದಂ ಕಾಶೀವಿಯುಕ್ತಂ ಜನ್ಮ ಧಿಙ್ಮಮ ।
ಧಿಗ್ಜೀವನಮಿದಂ ಧಿಗ್ಧಿಗ್ಧಿವೇತ್ಯೇವ ವದನ್ಮೃತಃ ॥೧೬॥

ತಂ ತಥಾ ಮೃತಮಾಲೋಕ್ಯ ಸುರಾಃ ಸಂತುಷ್ಟಮಾನಸಾಃ ।
ಮಂದಾರಕುಸುಮೈಃ ಶುಭ್ರೈಶ್ಚಕ್ರುರ್ವೃಷ್ಟಿಂ ಮನೋಹರಾಂ ॥೧೭॥

---

ಅದೇ ಕೊಳದಲ್ಲಿ ಜ್ಞಾನಿಯಾದ ಒಂದಾನೊಂದು ಕಪ್ಪೆಯಿದ್ದಿತು. ಅದು ನಿರಂತರವೂ ಶಿವನನ್ನು ಬಿಟ್ಟು, ಮತ್ತಾವ ಉತ್ತಮವಾದ ವಸ್ತುವೂ ಇರುವುದಿಲ್ಲವೆಂದು ಕೂಗುತ್ತಾ ಅಲ್ಲಿಯೇ ವಾಸವಾಗಿದ್ದಿತು. ॥೧೩॥

ಹೀಗಿರುತ್ತಿರಲು ಒಂದಾನೊಂದು ದಿನ ದೈವಯೋಗದಿಂದ ಒಂದು ಕಾಗೆಯು ಆ ಕಪ್ಪೆಯನ್ನು ಕಚ್ಚಿಕೊಂಡು, ಆ ಕೊಳದಿಂದ ಐದು ಕ್ರೋಶಗಳ ಅಂತರವಿರುವ ಒಂದಾನೊಂದು ಪ್ರದೇಶಕ್ಕೆ ಕೊಂಡೊಯ್ದಿತು. ಆಗ ಅಕಸ್ಮಾತ್ತಾಗಿ ಆ ಕಪ್ಪೆಯು ಕಾಗೆಯ ಕೊಕ್ಕಿನಿಂದ ಕೆಳಕ್ಕೆ ಒಂದಾನೊಂದು ಮಡುವಿನಲ್ಲಿ ಬಿದ್ದಿತು. ॥೧೪॥

ಬಳಿಕ ಆ ಕಪ್ಪೆಯು ಅತ್ಯಂತ ದುಃಖಗೊಂಡು, ಹಾ! ಹಾ! ಪಶುಪತಿಯೇ, ಎಂದು ಆರ್ತಧ್ವನಿಯಿಂದ ಕೂಗಿತು. ॥೧೫॥

ಕಾಶೀಕ್ಷೇತ್ರದಿಂದ ವಿಯೋಗವನ್ನು ಹೊಂದಿದ ಈ ಶರೀರಕ್ಕೆ ಧಿಕ್ಕಾರವಿರಲಿ. ಇನ್ನು ಈ ಜನ್ಮವು ನಿರರ್ಥಕವು. ನಿನ್ನ ಜೀವಿತಕ್ಕೆ ಧಿಕ್ಕಾರವಿರಲಿ ಎಂದು ಬಾರಿ ಬಾರಿಗೂ ಶೋಕಿಸುತ್ತಾ, ಶಿವನಾಮವನ್ನುಚ್ಚರಿಸುತ್ತಾ ಬಳಿಕ ಮರಣವನ್ನೈದಿತು. ॥೧೬॥

ಈರೀತಿಯಲ್ಲಿ ಶಿವನನ್ನೇ ಧ್ಯಾನಿಸುತ್ತಾ ಮರಣವನ್ನೈದಿದ ಆ ಕಪ್ಪೆಯನ್ನು ನೋಡಿ ದೇವತೆಗಳು ಸಂತೋಷಗೊಂಡು ನೂತನವಾದ ಮಂದಾರಪುಷ್ಪಗಳನ್ನು ಮಳೆಗರೆದರು. ॥೧೭॥

ಸಸಭಾಸತ್ಸದೇವೇಂದ್ರೇ ದುಂದುಭಿಧ್ವನಿಪೂರ್ವಕಂ ।
ಬ್ರಹ್ಮಾ ಸಮಾಯಯೌ ತತ್ರ ಯಮೇನಾಪಿ ಸಮನ್ವಿತಃ ॥೧೮॥

ತದಾ ಮದಾಜ್ಞಾಂ ಸಂಪ್ರಾಪ್ಯ ಶಿವದೂತಾಶ್ಚ ಕೋಟಿಶಃ ।
ಯಯುರತ್ಯಂತಸಂತುಷ್ಟಾಃ ಮಂಡೂಕಾ ನಯನೋತ್ಸುಕಾಃ ॥೧೯॥

ತತಃ ಶಿವ ಶಿವೇಶೇತಿ ಮಹಾದೇವೇತಿ ವಾದಿನಃ ।
ತದ್ದೇಶಂ ಪ್ರಾಪುರಮಲಾಃ ಕಂಪಯಂತೋ ಮಹೀತಲಂ ॥೨೦॥

ಬ್ರಹ್ಮಾ ದದರ್ಶ ತಾಂಛುದ್ಧಾಂಸ್ತ್ರಿಪುಂಡ್ರಾಂಕಿತಮಸ್ತಕಾನ್ ।
ರುದ್ರಾಕ್ಷಮಾಲಾಭರಣಾಂಛಿವನಾಮಜಪೋತ್ಸುಕಾನ್ ॥೨೧॥

ತ್ರಿಶೂಲತೋಮರಾದ್ಯಸ್ತ್ರಸಂಯುತಾನಗ್ನಿಲೋಚನಾನ್ ।
ವ್ಯಾಘ್ರಚರ್ಮಪರೀಧಾನಾನ್ನೀಲಕಂಠಾನಕಲ್ಮಷಾನ್ ॥೨೨॥

---

ಆಗ ದೇವದುಂದುಭಿಗಳು ಮೊಳೆಯುತ್ತಿರಲು ಬ್ರಹ್ಮನು ದೇವತೆಗಳ ಸಭೆಯಲ್ಲಿದ್ದ ಸಭಿಕರಿಂದೊಡಗೂಡಿದ ದೇವೇಂದ್ರ, ಯಮ ಮೊದಲಾದವರಿಂದೊಡಗೂಡಿ ಆ ಕಪ್ಪೆಯು ಮೃತವಾದ ಪ್ರದೇಶಕ್ಕೆ ಬಂದನು. ॥೧೮॥

ಆಗ ಅಸಂಖ್ಯಾತರಾದ ಶಿವದೂತರು ನನ್ನ ಅಪ್ಪಣೆಯನ್ನು ಪಡೆದು ಸಂತೋಷಭರಿತರಾಗಿ ಮೃತವಾದ ಆ ಕಪ್ಪೆಯನ್ನು ನನ್ನ ಸನ್ನಿಧಿಗೆ ತರುವುದಕ್ಕೆಂದು ಉತ್ಸಾಹಭರಿತರಾಗಿ ಅಲ್ಲಿಗೆ ತೆರಳಿದರು. ॥೧೯॥

ಬಳಿಕ ಪರಿಶುದ್ಧರಾದ ಆ ದೂತರು ಶಿವ, ಶಿವ, ಈಶ, ಮಹಾದೇವ ಎಂದು ಶಿವನಾಮಗಳನ್ನುಚ್ಚರಿಸುತ್ತಾ, ಭೂತಲವನ್ನು ನಡುಗಿಸುತ್ತಾ ಆ ದೇಶವನ್ನು ಪಡೆದರು. ॥೨೦॥

ಪರಿಶುದ್ಧರೂ, ಶಿರಸ್ಸಿನಲ್ಲಿ ತ್ರಿಪುಂಡ್ರಗಳನ್ನು ಧರಿಸಿ, ರುದ್ರಾಕ್ಷಮಾಲೆಗಳಿಂದಲಂಕೃತರಾಗಿ ಶಿವನಾಮವನ್ನು ಜಪಿಸುವುದರಲ್ಲಿ ಉತ್ಸುಕರಾಗಿರುವ ಆ ದೂತರನ್ನು ನೋಡಿದನು. ॥೨೧॥

ಅವರು ತ್ರಿಶೂಲ, ತೋಮರ ಮೊದಲಾದ ಅಸ್ತ್ರಗಳನ್ನು ಧರಿಸಿದ್ದರು. ಕಣ್ಣುಗಳು ಕಾದ ಕೆಂಡದಂತೆ ಕೆಂಪಾಗಿದ್ದವು. ಅಲ್ಲದೇ ಕಪ್ಪಾದ ಕಂಠಪ್ರದೇಶವುಳ್ಳವರೂ, ವ್ಯಾಘ್ರಚರ್ಮವನ್ನು ಧರಿಸಿದವರೂ ಆಗಿದ್ದರು. ॥೨೨॥

ದೃಷ್ಟ್ವಾ ಭೀತಃ ಕಂಪಮಾನಃ ಪ್ರಣಿಪತ್ಯ ಪುನಃ ಪುನಃ ।
ಪ್ರತ್ಯೇಕಂ ಶಿವಭಕ್ತಾನಾಂ ಚಕ್ರೇ ಪೂಜಾಂ ಚತುರ್ಮುಖಃ ॥೨೩॥

ತತಃ ಕೃತಾಂಜಲಿಪುಟೋ ಮಧುರಂ ಮಧುರಾಕ್ಷರಂ ।
ಜಗಾದ ವಚನಂ ಪ್ರೀತ್ಯಾ ವಿನೀತೋ ನತಕಂಧರಃ ॥೨೪॥

ಕೋಮಲಾನಿ ಶರೀರಾಣಿ ಭವತಾಂ ಶಿವಪೂಜಕಾಃ ।
ಶ್ರಾಂತಾನಿ ಕ್ವಾದ್ಯ ವೇಗೇನ ಗಮ್ಯತೇ ಗಮನೋತ್ಸುಕಾಃ ॥೨೫॥

ಕಿಮೀದೃಶಂ ಮಹತ್ಕಾರ್ಯಮನ್ಯಾಸಾಧ್ಯಮುಪಸ್ಥಿತಂ ।
ಮತ್ಸಾಧ್ಯಂ ಚೇದಹಂ ತತ್ರ ಪ್ರೇಷಣೀಯೋಽಸ್ಮಿ ಸಾದರಂ ॥೨೬॥

ವಿನಾ ಭಾಗ್ಯೇನ ಭವತಾಮಾಜ್ಞಾಕಾರಿತ್ವಮಸ್ಯ ತು ।
ಕಥಂ ಭಾವಿ ಮಹದ್ಭಾಗ್ಯಂ ಫಲಮೇತನ್ನ ಸಂಶಯಃ ॥೨೭॥

---

ಅವರನ್ನು ನೋಡಿ ಬ್ರಹ್ಮನು ಭಯದಿಂದ ನಡುಗುತ್ತಾ ಬಾರಿಬಾರಿಗೂ ಅವರಿಗೆ ನಮಸ್ಕರಿಸಿ ಈಶ್ವರಭಕ್ತರಾದ ಅವರನ್ನು ಪ್ರತ್ಯೇಕವಾಗಿ ಪೂಜಿಸಿದನು. ||೨೩||

ಬಳಿಕ ಅವನು ಅಂಜಲಿಬದ್ಧನಾಗಿ ನಮ್ರತೆಯನ್ನು ವ್ಯಕ್ತಪಡಿಸುತ್ತಾ ಶಿರಸ್ಸನ್ನು ತಗ್ಗಿಸಿ ಮಧುರವಾದ ವಾಣಿಯಿಂದ ಹೀಗೆಂದನು. ||೨೪||

" ಓ ಈಶ್ವರಾರಾಧಕರೇ, ನಿಮ್ಮ ಮೃದುವಾದ ಈ ಶರೀರಗಳು ಆಯಾಸಗೊಂಡಿರುವುವು. ವೇಗದಿಂದ ಹೋಗಬಯಸುವ ನೀವು ಇದೀಗ ಎಲ್ಲಿಗೆ ಹೋಗುತ್ತಿರುವಿರಿ ? ||೨೫||

ನಿಮಗೀಗ ಇತರರಿಗೆ ಸಾಧಿಸಲು ಅಶಕ್ಯವಾದ ಅದಾವ ಕಾರ್ಯವಿರುವುದು ? ನನ್ನಿಂದ ಅದು ಕೈಗೂಡುವುದಾದರೆ ನನ್ನನ್ನು ಆ ಕಾರ್ಯಸಾಧನೆಗೆ ಕಳುಹಿಸಿರಿ. ||೨೬||

ನಿಮ್ಮ ಸೇವಕನಾದ ನನಗೆ ಮಹತ್ತರವಾದ ಭಾಗ್ಯವೊಂದಿಲ್ಲದಿದ್ದರೆ ನಿಮ್ಮ ಆಜ್ಞೆಯನ್ನು ನೆರವೇರಿಸುವ ಸುಯೋಗವು ಹೇಗೆ ತಾನೇ ಲಭಿಸೀತು ? ಅಂತಹ ಭಾಗ್ಯಲಾಭವೂ ಸಹ ಮಹತ್ತರವಾದ ಒಂದು ಫಲವೇ ಆಗಿರುವುದು. ಇದರಲ್ಲಿ ಸಂಶಯವಿಲ್ಲ. ||೨೭||

ಭವತಾಂ ಶ್ರಾಂತಿನಾಶಾರ್ಥಂ ಯತ್ನಃ ಕಾರ್ಯೋ ಮಯಾಧುನಾ ।
ಭವತಾಂ ಚೇತ್ಸುಖಂ ಜಾತಂ ತದಾ ಧನ್ಯೋಽಸ್ಮ್ಯಸಂಶಯಂ ॥೨೮॥

ಶಿವಭಕ್ತಶರೀರಂ ತು ಚರಲಿಂಗಮತೋ ಮಯಾ ।
ಶಿವತುಷ್ಟ್ಯರ್ಥಮತ್ರೈವ ಪೂಜಾ ಕಾರ್ಯಾ ವಿಶೇಷತಃ ॥೨೯॥

ಶಿವಭಕ್ತಶರೀರಾಖ್ಯೇ ಚರಲಿಂಗೇ ಸದಾಶಿವಃ ।
ನಿತ್ಯಂ ಸನ್ನಿಹಿತಃ ಸಾಂಬೋ ಮೋದತೇ ಭಕ್ತವತ್ಸಲಃ ॥೩೦॥

ತತಃ ಶೈವಶರೀರಾಖ್ಯಲಿಂಗೇ ದತ್ತಂ ಧನಂ ಪ್ರಿಯಂ ।
ಗೃಹ್ಣಾತಿ ಸಾದರಂ ಶಂಭುಃ ಭಕ್ತದೇಹಾಶ್ರಯಃ ಸದಾ ॥೩೧॥

ಧನ್ಯಾಃ ಶೈವಜನಾಃ ಸರ್ವೇ ಶಿವನಾಮೈಕಜೀವನಾಃ ।
ಯತ್ಪೂಜಯಾ ಮಹಾದೇವಸ್ತುಷ್ಟೋ ಭವತಿ ಸಾನುಗಃ ॥೩೨॥

---

ನಿಮ್ಮ ಆಯಾಸವನ್ನು ಹೋಗಲಾಡಿಸುವುದಕ್ಕೋಸ್ಕರ ಪ್ರಯತ್ನಿಸುವುದು ನನ್ನ ಈಗಿನ ಕರ್ತವ್ಯವಾಗಿರುವುದು. ನಿಮಗೆ ಸುಖವು ಲಭಿಸಿದರೆ ಆಗ ನಾನು ಕೃತಕೃತ್ಯನಾಗುವೆನು. ಇದರಲ್ಲಿ ಸಂಶಯಪಡಬೇಕಾದುದಿಲ್ಲ. ॥೨೮॥

ಈಶ್ವರಭಕ್ತರ ಶರೀರವು ಅಲ್ಲಲ್ಲಿ ಸಂಚರಿಸುವ ಚರಲಿಂಗವೇ ಆಗಿರುವುದು. ಆದುದರಿಂದ ಶಿವನನ್ನು ಸಂತೋಷಗೊಳಿಸುವುದಕ್ಕೋಸ್ಕರ ನಿಮ್ಮ ಈ ಶರೀರದಲ್ಲಿಯೇ ವಿಶೇಷವಾಗಿ ಶಿವನನ್ನು ಪೂಜಿಸಬೇಕು. ॥೨೯॥

ಈಶ್ವರಭಕ್ತರ ಶರೀರವೆಂಬ ಈ ಚರಲಿಂಗದಲ್ಲಿ ನಿತ್ಯಮಂಗಳರೂಪಿಯಾದ ಪರಮೇಶ್ವರನು ಉಮಾಸಹಿತನಾಗಿ ಭಕ್ತರನ್ನನುಗ್ರಹಿಸುತ್ತಾ ಅನವರತವೂ ವಾಸವಾಗಿರುವನು. ॥೩೦॥

ಆದುದರಿಂದ ಭಕ್ತರ ದೇಹದಲ್ಲಿ ನೆಲಸಿರುವ ಪರಶಿವನು ಶಿವಭಕ್ತರಶರೀರ ರೂಪ ಚರಲಿಂಗದಲ್ಲಿ ಅರ್ಪಿಸಿದ ಧನವನ್ನು ಪ್ರೀತಿಯಿಂದ ಸ್ವೀಕರಿಸುವನು. ॥೩೧॥

ಶಿವನಾಮವೊಂದೇ ಜೀವಿತವಾಗಿರುವ ಈಶ್ವರಭಕ್ತಾಗ್ರೇಸರರೆಲ್ಲರೂ ಪುಣ್ಯಶಾಲಿಗಳು. ಅವರನ್ನು ಪೂಜಿಸುವುದರಿಂದ ಕೈಲಾಸವಾಸಿಯಾದ ಶಿವನು ಸುಪ್ರೀತನಾಗುವನು. ॥೩೨॥

ಶೈವಮುತ್ಸೃಜ್ಯ ಯೋಽನ್ಯಸ್ಮಿನ್ಪೂಜನಂ ಚೇತ್ಕರಿಷ್ಯತಿ ।
ಸಾ ಪೂಜಾ ತತ್ಕೃತಾನ್ಯತ್ರ ಭಸ್ಮಸಾದ್ಭವತಿ ಧ್ರುವಂ ॥೩೩॥

ಪ್ರಜ್ವಲದ್ವಹ್ನಿಮುತ್ಸೃಜ್ಯ ಯಥಾನ್ಯತ್ರ ಹುತಂ ಹವಿಃ ।
ವೃಥಾ ಭವತಿ ಸಾ ಪೂಜಾ ತಥಾನ್ಯತ್ರ ಕೃತಾವೃಥಾ ॥೩೪॥

ಪುರಾ ಕಶ್ಚಿದ್ದ್ವಿಜಾಧೀಶೋ ಹಿಮದೇಶೇ ವಸನ್ಸ್ಥಿತಃ ।
ಸಂಪಾದ್ಯ ಬಹುಧಾ ದ್ರವ್ಯಂ ನಾನಾವಿಧಮನುತ್ತಮಂ ॥೩೫॥

ಪಪ್ರಚ್ಛ ಬ್ರಾಹ್ಮಣಾಂಛಿಷ್ಟಾನ್ನಿರ್ಲೋಭಾನ್ರಾಗವರ್ಜಿತಾನ್ ।
ದಾನಪಾತ್ರಸ್ಥಲಂ ತ್ವೇದೃಗ್ವದಂತ್ವಿತಿ ಧನಾರ್ಜಕಃ ॥೩೬॥

॥ ಬ್ರಾಹ್ಮಣಾ ಊಚುಃ ॥

ಶೈವದ್ವಿಜವರೇ ದತ್ತಂ ಧನಮಲ್ಪಮಪಿ ಪ್ರಭೋ ।
ಪ್ರವರ್ಧತೇ ನ ಸಂದೇಹೋ ಮೇರುವತ್ತದ್ದಿನೇ ದಿನೇ ॥೩೭॥

---

ಯಾವ ಮನುಷ್ಯನು ಈಶ್ವರಭಕ್ತನನ್ನು ಪೂಜಿಸದೇ ಇತರ ದೇವತೆಗಳನ್ನು ಪೂಜಿಸುವನೋ, ಅವನ ಆ ಪೂಜೆಯು ವಿಫಲವಾಗುವುದು. ॥೩೩॥

ಪ್ರಜ್ವಲಿಸುವ ಅಗ್ನಿಯಲ್ಲಿ ಹೋಮವನ್ನು ಮಾಡದೇ ಇತರ ಸ್ಥಳಗಳಲ್ಲಿ ಹೋಮವನ್ನು ಮಾಡಿದ ಹವಿಸ್ಸು ಹೇಗೆ ವ್ಯರ್ಥವಾಗುವುದೋ, ಆದರಂತೆ ಈಶ್ವರ ಭಕ್ತನನ್ನು ಬಿಟ್ಟು ಇತರ ದೇವತೆಗಳ ಸನ್ನಿಧಿಯಲ್ಲಿ ಆಚರಿಸಿದ ಪೂಜೆಯು ಯಾವ ಫಲವನ್ನೂ ಕೊಡದೇ ನಿರರ್ಥಕವಾಗುವುದು. ॥೩೪॥

ಹಿಂದೆ ಒಂದಾನೊಂದು ಕಾಲದಲ್ಲಿ ಹಿಮದೇಶದಲ್ಲಿ (ಚಳಿದೇಶದಲ್ಲಿ) ಒಬ್ಬಾನೊಬ್ಬ ರಾಜನು ವಾಸವಾಗಿದ್ದನು. ಅವನು ಅಮೂಲ್ಯವಾದ ನಾನಾ ಬಗೆಯ ದ್ರವ್ಯವನ್ನು ಸಂಗ್ರಹಿಸಿ, ॥೩೫॥

ಸದಾಚಾರಸಂಪನ್ನರೂ, ಲೋಭರಹಿತರೂ, ನಿಸ್ಪೃಹರೂ ಆದ ಬ್ರಾಹ್ಮಣ ರನ್ನು ಕುರಿತು, ದಾನವನ್ನು ಪ್ರತಿಗ್ರಹಿಸುವುದಕ್ಕೆ ಪಾತ್ರರಾದವರು ಯಾರು? ಯಾರಿಗೆ ದಾನಮಾಡಿದರೆ ಪುಣ್ಯವು ಲಭಿಸುವುದು? ಎಂದು ಪ್ರಶ್ನಿಸಿದನು. ॥೩೬॥

ಆಗ ಅವರು “ಓ ಪ್ರಭುವೇ, ಶಿವಭಕ್ತಾಗ್ರೇಸರನಾದ ಬ್ರಾಹ್ಮಣನಿಗೆ

ಶೈವಂ ಪಾತ್ರವರಂ ತ್ಯಕ್ತ್ವಾ ದತ್ತಮನ್ಯತ್ರ ತದ್ಧನಂ ।
ಪ್ರತ್ಯಹಂ ರೋದನಂ ಕೃತ್ವಾ ತತ್ರ ದುಃಖೇನ ತಿಷ್ಠತಿ ॥೩೮॥

ಶೈವಂ ಕಥಂ ವಿಹಾಯಾತ್ರ ದತ್ತಂ ಪಾತಕಿನಾ ಧನಂ ।
ಇತಿ ದುಃಖಂ ವಿಹಾಯ್ಯೈವ ತತೋ ನಶ್ಯತಿ ತದ್ಧನಂ ॥೩೯॥

ಇತ್ಯುದೀರಿತಮಾಕರ್ಣ್ಯ ಸಂಪೂಜ್ಯ ದ್ವಿಜಪುಂಗವಾನ್ ।
ಬಹುಕಾಲಂ ತತಸ್ತಸ್ಥೌ ಶೈವಾಗಮನಕಾಂಕ್ಷಯಾ ॥೪೦॥

ತತಃ ಶೈವವರಾಣಾಂ ತು ಭವತಾಂ ಪೂಜನಂ ಮಯಾ ।
ಕ್ರಿಯತೇ ಪೂಜನಂ ತತ್ತು ಸ್ವೀಕಾರ್ಯಂ ಕೃಪಯಾ ಮಯಿ ॥೪೧॥

ಇತ್ಯುಕ್ತ್ವಾ ಸ ಪುನಃ ಸ್ರಷ್ಟಾ ತುಷ್ಟಾಂತಃಕರಣಸ್ತದಾ ।
ಮಂದಾರಪುಷ್ಪಮಾಲಾದ್ಯೈಶ್ಚಕ್ರೇ ಪೂಜಾಂ ಯಥಾವಿಧಿ ॥೪೨॥

---

ಅರ್ಪಿಸಿದ ಧನವು ಅತ್ಯಲ್ಪವಾಗಿದ್ದರೂ ಅದು ಪ್ರತಿದಿನವೂ ಮೇರುಪರ್ವತದಂತೆ ಅಭಿವೃದ್ಧಿಯನ್ನು ಹೊಂದುವುದು. ಇದರಲ್ಲಿ ಸಂಶಯವಿಲ್ಲ. ॥೩೭॥

ಸತ್ಪಾತ್ರನಾದ ಈಶ್ವರಭಕ್ತನನ್ನು ಬಿಟ್ಟು ಇತರರಿಗೆ ಅರ್ಪಿಸಿದ ಧನವು ಪ್ರತಿದಿನವೂ ರೋದಿಸುತ್ತಾ ಅತ್ಯಂತ ದುಃಖದಿಂದ ಅವನಲ್ಲಿ ನಿಲ್ಲುವುದು. ॥೩೮॥

ಶಿವಭಕ್ತರನ್ನು ಬಿಟ್ಟು ಈ ಪಾಪಿಯು ಈ ಅಸತ್ಪಾತ್ರನಿಗೆ ನನ್ನನ್ನೇಕೆ ಅರ್ಪಿಸಿದನು ? ಎಂದು ದುಃಖಿಸುತ್ತಾ ಆ ಧನವು ಅವನನ್ನು ಬಿಟ್ಟು ಎಲ್ಲಿಯೋ ನಷ್ಟವಾಗುವುದು.” ಎಂದರು. ॥೩೯॥

ಬ್ರಾಹ್ಮಣರು ಹೀಗೆನ್ನಲು ಅವರ ಮಾತನ್ನು ಕೇಳಿ ರಾಜನು ಆ ಬ್ರಾಹ್ಮಣ ಶ್ರೇಷ್ಠರನ್ನು ಪೂಜಿಸಿ ಬಳಿಕ ಬಹುಕಾಲದ ವರೆಗೆ ಶಿವಭಕ್ತರಾದ ಬ್ರಾಹ್ಮಣರ ಸಮಾಗಮವನ್ನೇ ನಿರೀಕ್ಷಿಸುತ್ತಿದ್ದನು.” ॥೪೦॥

ಆದುದರಿಂದ ಈಶ್ವರಭಕ್ತಾಗ್ರಣಿಗಳಾದ ನಿಮ್ಮನ್ನು ನಾನು ಪೂಜಿಸುವೆನು. ನನ್ನಲ್ಲಿ ದಯೆದೋರಿ ನನ್ನ ಪೂಜೆಯನ್ನು ಸ್ವೀಕರಿಸಬೇಕು. ॥೪೧॥

ಹೀಗೆಂದು ಹೇಳಿ ಬ್ರಹ್ಮನು ಸಂತೋಷಭರಿತನಾಗಿ ಮಂದಾರಪುಷ್ಪಗಳ ಮಾಲಿಕೆಗಳಿಂದ ಶಾಸ್ತ್ರೋಕ್ತವಾದ ರೀತಿಯನ್ನನುಸರಿಸಿ ಶಿವದೂತರನ್ನು ಪೂಜಿಸಿದನು. ॥೪೨॥

ವಿಧಾಯ ಪೂಜಾಮಮಲಾಂ ನತಾಂಗಂ ವಿನಯಾನ್ವಿತಂ ।
ವಿಧಾತಾರಂ ವಿಲೋಕ್ಯೈತೇ ಪ್ರಾಹುರ್ವಚನಮಾದರಾತ್ ॥೪೩॥

॥ ಶೈವಾ ಊಚುಃ ॥

ಮಹಾದೇವೇ ಸದಾ ಭಕ್ತಿಸ್ತವಾಸ್ತು ಚತುರಾನನ ।
ಶ್ರದ್ಧಯಾ ಯಾ ಕೃತಾಪೂಜಾ ತ್ವಯಾ ಸಾ ಸ್ವೀಕೃತಾ ಮುದಾ॥೪೪॥

ಕಾರ್ಯಾಂತರಂ ನ ಚಾಸ್ಮಾಕಮತ್ರೈವಾಗತಮಾದರಾತ್ ।
ಮಂಡಕೋಽಯಂ ಮಹಾನೇಷಃ ಶೈವಃ ಶಂಕರಸಂಮತಃ ॥೪೫॥

ಕಾಶ್ಯಾಂ ಪಶುಪತೀಶಸ್ಯ ಕುಂಡೇ ತತ್ರ ಸ್ಥಿತಃ ಸದಾ ।
ಕದಾಚಿದ್ದೈವಯೋಗೇನ ಕಾಕೇನಾತ್ರ ನಿಪಾತಿತಃ ॥೪೬॥

ಏತದಾನಯನಾರ್ಥಂ ತು ಶಿವೇನ ಪ್ರೇಷಿತಾ ವಯಂ ।
ಅಸ್ಮಿನ್ನಿಮಾನೇ ಸಂಸ್ಥಾಪ್ಯ ನೇಯೋಽಯಂ ಶಿವಸಂಮತಃ ॥೪೭॥

---

ಈ ಪ್ರಕಾರವಾಗಿ ತಮ್ಮನ್ನು ಪೂಜಿಸಿ ನಮ್ರಭಾವನೆಯಿಂದೊಡಗೂಡಿ, ಕತ್ತನ್ನು ತಗ್ಗಿಸಿದ ಬ್ರಹ್ಮನನ್ನು ನೋಡಿ ಶಿವದೂತರು ಪ್ರೀತಿಯಿಂದ ಹೀಗೆಂದರು. ॥೪೩॥

ಎಲೈ ಚತುರ್ಮುಖನೇ, ನಿನಗೆ ಈಶ್ವರನ ವಿಷಯದಲ್ಲಿ ನಿರಂತರವೂ ಭಕ್ತಿಯು ನೆಲಸಿರಲಿ. ನೀನು ಶ್ರದ್ಧೆಯಿಂದ ನೆರವೇರಿಸಿದ ಈ ಪೂಜೆಯನ್ನು ನಾವು ಪ್ರೀತಿಯಿಂದ ಸ್ವೀಕರಿಸಿರುವೆವು. ॥೪೪॥

ನಮಗೆ ಇತರ ಯಾವ ಕಾರ್ಯವೂ ಇರುವುದಿಲ್ಲ. ನಾವು ಈ ಪ್ರದೇಶವನ್ನೇ ಕುರಿತು ಬಂದಿರುವೆವು. ಪೂಜ್ಯವಾದ ಈ ಕಪ್ಪೆಯು ಈಶ್ವರನಲ್ಲಿ ಭಕ್ತಿಯನ್ನಿರಿಸಿ ಆವನ ಅನುಗ್ರಹಕ್ಕೆ ಪಾತ್ರವಾಗಿರುವುದು. ॥೪೫॥

ಈ ಮಂಡೂಕವು ಕಾಶೀಕ್ಷೇತ್ರದಲ್ಲಿರುವ ಪಾಶುಪತವೆಂಬ ಕೊಳದಲ್ಲಿ ಸದಾ ವಾಸವಾಗಿದ್ದಿತು. ಹೀಗಿರುತ್ತಿರಲು ಒಂದು ದಿನ ದೈವಯೋಗದಿಂದ ಒಂದಾನೊಂದು ಕಾಗೆಯು ಈ ಮಂಡೂಕವನ್ನು ಆ ಕೊಳದಿಂದ ಕಚ್ಚಿಕೊಂಡು ಈ ಮಡುವಿನಲ್ಲಿ ಬೀಳಿಸಿತು. ॥೪೬॥

ಇದನ್ನು ಕರೆದೊಯ್ಯುವುದಕ್ಕೋಸ್ಕರ ಶಿವನು ನಮ್ಮನ್ನು ಇಲ್ಲಿಗೆ ಕಳುಹಿ

ಇತಿ ತದ್ವಚನಂ ಶ್ರುತ್ವಾ ತುತೋಷ ಚತುರಾನನಃ ।
ಶಿವ ಏವ ಸದಾ ಪೂಜ್ಯಃ ಕೃಪಾನಿಧಿರಿತಿ ಪ್ರಭುಃ ॥೪೮॥

ತತೋ ವಿಮಾನೇ ವಿಮಲೇ ಸ್ಥಾಪನೀಯ ಇತಿ ಪ್ರಿಯೇ ।
ಚಕ್ರುರ್ಮಂಡೂಕದೇಹಸ್ಯ ಸ್ಪರ್ಶಂ ದೂತಾ ಮದರ್ಚಕಾಃ ॥೪೯॥

ತದನ್ವೇವ ಸ ಮಂಡೂಕಸ್ತ್ಯಕ್ತ್ವಾ ನಿಜತನುಂ ಮುದಾ ।
ದಿವ್ಯಂ ಶರೀರಂ ಸಂಪ್ರಾಪ ಶೈವಸ್ಪರ್ಶೇನ ಸಾದರಂ ॥೫೦॥

ತಮಾದಿತ್ಯಪ್ರಭಂ ದೃಷ್ಟ್ವಾ ಸರ್ವೇ ಬ್ರಹ್ಮಾದಯಃ ಸುರಾಃ ।
ಸಂತೋಷಂ ಪರಮಂ ಜಗ್ಮುಃ ಪುಷ್ಪವೃಷ್ಟಿರಭೂತ್ತದಾ ॥೫೧॥

ದುಂದುಭಿಧ್ವನಿಭಿಃ ಪೂರ್ಣಂ ಸರ್ವಂ ಚ ಪೃಥಿವೀತಲಂ ।
ರಂಭಾದ್ಯಾ ನನೃತುಸ್ತತ್ರ ಗಂಧರ್ವಾಶ್ಚ ಜಗುರ್ಮುದಾ ॥೫೨॥

---

ಸಿರುವನು. ಇದೀಗ ನಾವು ಶಿವನ ಅನುಗ್ರಹಕ್ಕೆ ಪಾತ್ರವಾದ ಇದನ್ನು ಈ ವಿಮಾನದಲ್ಲಿ ಕುಳ್ಳಿರಿಸಿ ಶಿವಲೋಕಕ್ಕೆ ಕರೆದೊಯ್ಯುವೆವು. ॥೪೭॥

ಶಿವದೂತರು ಹೀಗೆನ್ನಲು ಅದನ್ನು ಕೇಳಿ ಚತುರ್ಮುಖನು, ಶಿವನೇ ಪೂಜ್ಯನೂ ದಯಾಶಾಲಿಯೂ ಆಗಿರುವನೆಂದು ಮನಸ್ಸಿನಲ್ಲಿ ಭಾವಿಸಿ ಸಂತೋಷಗೊಂಡನು. ॥೪೮॥

ಪ್ರಿಯೇ, ಬಳಿಕ ಈಶ್ವರಾರಾಧಕರಾದ ನನ್ನ ದೂತರು ಆ ಮಂಡೂಕವನ್ನು ವಿಮಾನದಲ್ಲಿರಿಸಬೇಕೆಂದು ಅದರ ಕಳೇಬರವನ್ನು ಸ್ಪರ್ಶಿಸಿದರು. ॥೪೯॥

ಆ ಕೂಡಲೇ ಆ ಮಂಡೂಕವು ತನ್ನ ಕಳೇಬರವನ್ನು ಬಿಟ್ಟು, ಈಶ್ವರ ದೂತರ ಸ್ಪರ್ಶದಿಂದ ದಿವ್ಯವಾದ ಶರೀರವನ್ನು ಧರಿಸಿತು. ॥೫೦॥

ಸೂರ್ಯನ ಕಾಂತಿಯಂತೆ ಪ್ರಜ್ವಲಿಸುತ್ತಿದ್ದ ದೇಹಕಾಂತಿಯುಳ್ಳ ಅದನ್ನು ನೋಡಿ ಬ್ರಹ್ಮಾದಿ ದೇವತೆಗಳು ಅಪಾರವಾದ ಸಂತೋಷವನ್ನು ಹೊಂದಿದರು. ಕೂಡಲೇ ಪುಷ್ಪವೃಷ್ಟಿಯುಂಟಾಯಿತು. ॥೫೧॥

ಭೂಲೋಕದಲ್ಲಿ ಎಲ್ಲೆಡೆಯಲ್ಲಿಯೂ ದೇವದುಂದುಭಿಗಳ ಧ್ವನಿಯು ಹರಡಿತು. ರಂಭೆಯೇ ಮೊದಲಾದ ಅಪ್ಸರಸ್ತ್ರೀಯರು ನೃತ್ಯವನ್ನಭಿನಯಿಸಿದರು. ಗಂಧರ್ವರು ಹರ್ಷದಿಂದ ಗಾನಮಾಡಿದರು. ॥೫೨॥

ಸುಗಂಧಾಃ ಶೀತಲಾಃ ಶಾಂತಾಃ ವಾಯುವಶ್ಚ ವವುಸ್ತದಾ ।
ದಿಶಃ ಪ್ರಸನ್ನಾಃ ಸಂಭೂತಾಃ ಭೂತಾಃ ಸ್ವಸ್ಥಾಃ ಸುಖಂ ತದಾ ॥೫೩॥

ತತಸ್ತೇ ಕಾಮಗೇ ಭವ್ಯೇ ವಿಮಾನೇ ಪುಷ್ಪಸಂಕುಲೇ ।
ಸಮಾರೋಪ್ಯ ಮುದಾ ಸರ್ವೇ ತಮೇವ ಚಲಿತಾಃ ಶುಭೇ ॥೫೪॥

ಯಮಃ ಪ್ರಚಲಿತಂ ದೃಷ್ಟ್ವಾ ಸ್ವರ್ಲೋಕೋಪರಿ ಸಂಭ್ರಮಾತ್ ।
ಚಕ್ರೇ ನಾನಾವಿಧಾಂ ಪೂಜಾಂ ತಸ್ಮೈ ಸಮ್ಯಗ್ಯಥಾವಿಧಿ ॥೫೫॥

ಶಿವದೂತಾನಪಿ ಪ್ರೀತ್ಯಾ ಯಥಾಯೋಗ್ಯಂ ಯಥಾಕ್ರಮಮ್ ।
ಪೂಜಯಾಮಾಸ ಶಮನೋ ವಿಧಿಂ ಸೇಂದ್ರಂ ಚ ಸಾದರಂ ॥೫೬॥

ಪುಷ್ಪವೃಷ್ಟಿರಭೂತ್ತತ್ರ ಪುನರ್ದಿವ್ಯಾ ಮನೋಹರಾ ।
ತತಃ ಸರ್ವೇ ಸ್ವರ್ಗಲೋಕಂ ಜಗ್ಮುರಿಂದ್ರೇಣ ಸಾದರಂ ॥೫೭॥

---

ಸುಗಂಧಯುಕ್ತವಾದ ತಂಗಾಳಿಯು ಮೆಲ್ಲಮೆಲ್ಲನೆ ಬೀಸಿತು. ದಿಕ್ಕುಗಳು ಪ್ರಸನ್ನವಾದುವು. ಸಮಸ್ತಪ್ರಾಣಿಗಳು ಸುಖಿಗಳಾದುವು. ॥೫೩॥

ಬಳಿಕ ಆ ದೂತರು ಪುಷ್ಪಗಳಿಂದಲಂಕೃತವಾದ ಕಾಮಚಾರಿಯಾದ ದಿವ್ಯವಿಮಾನದಲ್ಲಿ ಅದನ್ನು ಕುಳ್ಳಿರಿಸಿ ಅದನ್ನೇ ಅನುಸರಿಸುತ್ತಾ ಮುಂದೆ ನಡೆದರು. ॥೫೪॥

ಈ ಪ್ರಕಾರವಾಗಿ ದೇವವಿಮಾನದಲ್ಲಿ ಕುಳಿತುಕೊಂಡು ಮೇಲಕ್ಕೆ ಹೋಗುತ್ತಿದ್ದ ದಿವ್ಯಶರೀರಧಾರಿಯಾದ ಆ ಮಂಡೂಕವನ್ನು ನೋಡಿ ಯಮನು ಅದನ್ನು ವಿಧಿವತ್ತಾಗಿ ನಾನಾಬಗೆಯಿಂದ ಪೂಜಿಸಿದನು. ॥೫೫॥

ಅಲ್ಲದೆ ಶಿವದೂತರನ್ನು ಸಹ ಯಮನು ಕ್ರಮವರಿತು ಪೂಜಿಸಿ ಇಂದ್ರ, ಬ್ರಹ್ಮ ಇವರನ್ನು ಆದರದಿಂದ ಸತ್ಕರಿಸಿದನು. ॥೫೬॥

ಆಗ ಅಲ್ಲಿ ಮತ್ತೆ ದಿವ್ಯವಾದ ಪುಷ್ಪವೃಷ್ಟಿಯುಂಟಾಯಿತು. ಬಳಿಕ ಅವರೆಲ್ಲರೂ ಇಂದ್ರನೊಂದಿಗೆ ಸ್ವರ್ಗಲೋಕವನ್ನು ಕುರಿತು ತೆರಳಿದರು. ॥೫೭॥

ಪೂಜಯಿತ್ವಾ ವಿಮಾನಸ್ಥಮಾಸನಾದ್ಯೈರ್ಯಥಾವಿಧಿ ।
ಶಿವಭಕ್ತಾನ್ಯಥಾಯೋಗ್ಯಂ ಪೂಜಯಾಮಾಸ ಸಾದರಂ ॥೫೮॥

ಚತುರ್ಮುಖಂ ಚ ವಿಮಲಂ ಪೂಜಯಾಮಾಸ ಸಾದರಂ ।
ಪುನಸ್ತತ್ರಾಪ್ಯಭೂದ್ರಮ್ಯಾ ಪುಷ್ಪವೃಷ್ಟಿರ್ವರಾನನೇ ॥೫೯॥

ತತೋ ಜಗ್ಮುರ್ಬ್ರಹ್ಮಲೋಕಂ ಬ್ರಹ್ಮಾ ತತ್ರ ಪುನರ್ಮುದಾ ।
ಚಕಾರ ಪೂಜಾಮತುಲಾಂ ಶೈವೇಭ್ಯಃ ಸರ್ವಥಾ ವಿಧಿಃ ॥೬೦॥

ತತ್ರ ವಿಶ್ರಾಮ್ಯ ಸಂಪ್ರೀತಾ ಬ್ರಹ್ಮಣಾ ಸಹ ತೇ ತತಃ ।
ವಿಷ್ಣುಲೋಕಂ ಯಯುಃ ಸರ್ವೇ ದಿವ್ಯಂ ನೇತ್ರಮನೋಹರಂ॥೬೧॥

ವಿಷ್ಣುರಾಲೋಕ್ಯ ತಾನ್ಸರ್ವಾನ್ ದೂತಾನುತ್ಥಾಯ ಸಾದರಂ ।
ಕೃತಾಂಜಲಿಪುಟೋ ಭೂತ್ವಾ ಪ್ರಣಮ್ಯ ಚ ಮುಹುರ್ಮುಹುಃ॥೬೨॥

ರತ್ನಾಸನೇಷು ಶೈವೇಂದ್ರಾನುಪವೇಶ್ಯ ಯಥಾವಿಧಿ ।
ಚಕಾರ ವಿವಿಧಾಂ ಪೂಜಾಂ ಧನ್ಯೋಽಸ್ಮೀತಿ ವದನ್ಮುಹುಃ ॥೬೩॥

---

ಬಳಿಕ ಇಂದ್ರನು ವಿಮಾನದಲ್ಲಿ ಕುಳಿತ ಮಂಡೂಕವನ್ನು ಶಾಸ್ತ್ರೋಕ್ತ ರೀತಿಯಿಂದ ಪೂಜಿಸಿ ಶಿವಭಕ್ತರನ್ನೂ ಸಹ ಯಥಾಯೋಗ್ಯವಾಗಿ ಆದರದಿಂದ ಪೂಜಿಸಿದನು. ॥೫೮॥

ಎಲೌ ಸುಮುಖಿಯೇ, ತರುವಾಯ ಇಂದ್ರನು ಬ್ರಹ್ಮನನ್ನು ಭಕ್ತಿಯಿಂದ ಪೂಜಿಸಿದನು. ಅಲ್ಲಿಯೂ ಮತ್ತೊಮ್ಮೆ ಪುಷ್ಪವೃಷ್ಟಿಯುಂಟಾಯಿತು. ॥೫೯॥

ಅದಾದ ಬಳಿಕ ಅವರೆಲ್ಲರೂ ಬ್ರಹ್ಮಲೋಕಕ್ಕೆ ತೆರಳಿದರು. ಅಲ್ಲಿ ಬ್ರಹ್ಮನು ಶಿವದೂತರನ್ನು ಭಕ್ತಿಯಿಂದ ಪೂಜಿಸಿದನು ॥೬೦॥

ಅನಂತರದಲ್ಲಿ ಅವರೆಲ್ಲರೂ ಕೊಂಚಕಾಲ ಬ್ರಹ್ಮಲೋಕದಲ್ಲಿ ವಿಶ್ರಮಿಸಿ ಬಳಿಕ ಬ್ರಹ್ಮನೊಂದಿಗೆ ಸುಂದರವಾದ ವಿಷ್ಣುಲೋಕವನ್ನು ಸೇರಿದರು. ॥೬೧॥

ಅವರನ್ನು ನೋಡಿ ವಿಷ್ಣುವು ತನ್ನ ಆಸನದಿಂದ ಮೇಲಕ್ಕೆದ್ದು ಆದರದಿಂದ ಬರಮಾಡಿಕೊಂಡು ಅಂಜಲಿಬದ್ಧನಾಗಿ ಬಾರಿಬಾರಿಗೂ ನಮಸ್ಕರಿಸಿ ರತ್ನಖಚಿತವಾದ ಪೀಠಗಳಲ್ಲಿ ಕುಳ್ಳಿರಿಸಿ ಈದಿನ ನಾನು ಧನ್ಯನಾದೆನು ಎಂದು ನುಡಿಯುತ್ತಾ ಅವರನ್ನು ಪೂಜಿಸಿದನು. ॥೬೩॥

ವಿಷ್ಣುನಾಪಿ ಕೃತಾಂ ಪೂಜಾಂ ಸ್ವೀಕೃತ್ಯ ತದನಂತರಂ ।
ಸರ್ವಲೋಕೋತ್ತರಂ ರಮ್ಯಂ ಕೈಲಾಸಮಗಮನ್ಮುದಾ ॥೬೪॥

ತ್ರಿಷಷ್ಟಿಕೋಟಿಪ್ರಾಕಾರರತ್ನಚ್ಛಾಯಯಾ ವಿಭೂಷಿತಂ ।
ಶತಕೋಟಿ ಮನೋರಮ್ಯರತ್ನದ್ವಾರಸಮನ್ವಿತಂ ॥೬೫॥

ನಾನಾನರ್ಘ್ಯಮಣಿಶ್ರೇಷ್ಠಗಣರಂಜಿತಮುತ್ತಮಂ ।
ಷಷ್ಟ್ಯರ್ಬುದಗಣಾಧೀಶರಕ್ಷಿತಂ ಚಿತ್ರಮುನ್ನತಂ ॥೬೬॥

ರತ್ನಪ್ರಾಸಾದನಿಕರೈರ್ಗೋಪುರಾಗ್ರ್ಯೈರ್ವಿರಾಜಿತಂ ।
ವಿಲಾಸಸದನಂ ರಮ್ಯಂ ಮಾಮಾಪುಸ್ತದನಂತರಂ ॥೬೭॥

ವಿಮಾನಾದವತೀರ್ಯಾಥ ಸ ಶೈವಃ ಸಾದರಂ ಮುದಾ ।
ಪ್ರಣಮ್ಯ ಬಹುಧಾ ಸಮ್ಯಙ್ಮಾಮನಂತಮಜಂ ವಿಭುಂ ॥೬೮॥

ಕೃತಾಂಜಲಿಪುಟಸ್ತಸ್ಥೌ ಕಂಪಮಾನೋ ನತಾನನಃ ।
ತತೋ ದತ್ತಂ ಮಯಾ ತಸ್ಮೈ ಗಾಣಪತ್ಯಮನಾಮಯಂ ॥೬೯॥

---

ಬಳಿಕ ಅವರೆಲ್ಲರೂ ವಿಷ್ಣುವಿನ ಸತ್ಕಾರವನ್ನು ಸ್ವೀಕರಿಸಿ ಕೈಲಾಸಕ್ಕೆ ನಡೆದರು. ॥೬೪॥

ಕೈಲಾಸಲೋಕಕ್ಕೆ ಅರವತ್ತುಮೂರು ಕೋಟಿ ಕೋಟೆಗಳಿರುವುವು. ಅವು ರತ್ನಗಳ ಕಾಂತಿಗಳಿಂದ ಕಂಗೊಳಿಸುತ್ತಿರುವುವು. ರತ್ನಖಚಿತವಾದ ನೂರುಕೋಟಿ ಬಾಗಿಲುಗಳಿರುವುವು. ನಗರದ ಒಳಗಡೆಯಲ್ಲಿ ಅಮೂಲ್ಯವಾದ ರತ್ನಗಳು ರಾಶಿರಾಶಿಯಾಗಿ ಬಿದ್ದಿರುವುವು. ಅರವತ್ತು ಅರ್ಬುದ ಸಂಖ್ಯಾಕರಾದ ಪ್ರಮಥ ಗಣಗಳು ಅದನ್ನು ರಕ್ಷಿಸುತ್ತಿರುವುವು. ನಗರದಲ್ಲಿ ಅಸಂಖ್ಯಾತವಾದ ರತ್ನಖಚಿತವಾದ ಪ್ರಾಸಾದಗಳು ಮತ್ತು ರತ್ನಖಚಿತವಾದ ಅನೇಕ ಗೋಪುರಗಳೂ ಇರುವುವು. ಲೆಕ್ಕವಿಲ್ಲದಷ್ಟು ವಿಲಾಸಗೃಹಗಳಿರುವುವು. ಆ ದೂತರು ಇವುಗಳನ್ನೆಲ್ಲಾ ಅತಿಕ್ರಮಿಸಿ ನನ್ನ ಬಳಿಗೆ ಬಂದರು. ॥೬೫-೬೬-೬೭॥

ಬಳಿಕ ದಿವ್ಯಶರೀರಧಾರಿಯಾದ ಈಶ್ವರಭಕ್ತನು ವಿಮಾನದಿಂದ ಕೆಳಕ್ಕಿಳಿದು ಜಗದೊಡೆಯನೂ ನಿತ್ಯನೂ ಆದ ನನ್ನನ್ನು ಭಕ್ತಿಯಿಂದ ನಮಸ್ಕರಿಸಿ ಅಂಜಲಿ ಬದ್ಧನಾಗಿ ಮುಖವನ್ನು ತಗ್ಗಿಸಿ ಭಯದಿಂದ ನಡುಗುತ್ತಾ ನನ್ನೆದುರಿನಲ್ಲಿ ನಿಂತನು.

ದುಃಖಮಾತ್ರಂ ವಿಹಾಯಾತ್ರ ಸಂತಿಷ್ಠತಿ ಯಥಾಸುಖಂ ।
ಇದಂ ಕಾಶೀನಿವಾಸಸ್ಯ ಫಲಮೀದೃಶಮುತ್ತಮಂ ॥೨೦॥

ಇತೋಽಪ್ಯನ್ಯೇ ಶಿವರತಾಃ ಕೀಟಾಸ್ತತ್ಕುಂಡವಾಸಿನಃ ।
ಕಾಲೇನ ಕಾಶ್ಯಾಮನಿಶಂ ವಸಂತಃ ಶಿವಸಂಮತಾಃ ॥೨೧॥

ಶೈವಂ ಪದಮವಾಪ್ಸ್ಯಾಂತೇ ಸ್ಥಾಸ್ಯಂತಿ ಸುಖಿನಃ ಸದಾ ।
ಧರ್ಮಸಂಪಾದಿತೇನೈವ ಕಾಶೀವಾಸೇನ ಸರ್ವದಾ ॥೨೨॥

ಕಾಶೀ ಪಾಶುಪತಂ ಕ್ಷೇತ್ರಂ ಮಹಾಪಾಶುಪತಾಶ್ರಯಂ ।
ಸಾ ಪಾಶುಪತವರ್ಯಾಣಾಂ ಮೋಕ್ಷದಾ ನಾತ್ರ ಸಂಶಯಃ ॥೨೩॥

---

ಬಳಿಕ ನಾನು ಅವನಿಗೆ ಶಾಶ್ವತವಾದ ಗಾಣಪತ್ಯಪದವಿಯನ್ನು ದಯಪಾಲಿಸಿದೆನು. ॥೬೮-೬೯॥

ಇದೀಗ ಅವನು ದುಃಖರಹಿತನಾಗಿ ಸುಖದಿಂದ ನನ್ನ ಸನ್ನಿಧಿಯಲ್ಲಿ ವಾಸವಾಗಿರುವನು ಕಾಶೀಕ್ಷೇತ್ರದಲ್ಲಿ ವಾಸವಾಗಿರುವುದರಿಂದ ಲಭಿಸುವ ಫಲವು ಈರೀತಿಯಲ್ಲಿರುವುದು. ॥೨೦॥

ದೇವಿ, ಇದಲ್ಲದೇ ಇನ್ನೂ ಅನೇಕ ಜಂತುಗಳು ಕಾಶೀಕ್ಷೇತ್ರದಲ್ಲಿರುವ ಪಾಶುಪತವೆಂಬ ಕುಂಡದಲ್ಲಿ ಶಿವಧ್ಯಾನಾಸಕ್ತಗಳಾಗಿ ಈಶ್ವರಾನುಗ್ರಹಕ್ಕೆ ಪಾತ್ರಗಳಾಗಿ ಚಿರಕಾಲದಿಂದ ವಾಸವಾಗಿರುವುವು. ॥೨೧॥

ಈರೀತಿಯಲ್ಲಿ ಕಾಶೀಕ್ಷೇತ್ರದಲ್ಲಿ ವಾಸವಾಗಿರುವವರು ಅಂತ್ಯದಲ್ಲಿ ಶಾಶ್ವತವಾದ ಶಿವಸಾನ್ನಿಧ್ಯವನ್ನು ಪಡೆದು ಅಲ್ಲಿ ಸುಖಿಗಳಾಗಿ ಬಾಳುವರು. ಆದರೆ ಕಾಶೀಕ್ಷೇತ್ರವಾಸವು ಜನ್ಮಾಂತರದಲ್ಲಿ ಸಂಗ್ರಹಿಸಿದ ಪುಣ್ಯವಿಶೇಷದಿಂದಲೇ ಲಭಿಸುವುದಲ್ಲದೆ ಅನ್ಯಥಾ ಲಭಿಸಲಾರದು. ॥೨೨॥

ಕಾಶಿಯು ಪಶುಪತಿಯ ಕ್ಷೇತ್ರವಾಗಿದ್ದು, ಪಶುಪತಿಯ ಭಕ್ತರಿಗೆ ಆಶ್ರಯವಾಗಿದೆ. ಅದು ಪಶುಪತಿಯ ಭಕ್ತರಿಗೆ ಮುಕ್ತಿಯನ್ನು ದಯಪಾಲಿಸುವುದು. ಇದರಲ್ಲಿ ಸಂಶಯವಿರುವುದಿಲ್ಲ. ॥೨೩॥

ಶೈವಾತ್ಪಾಶುಪತಾಃ ಶುದ್ಧಾ ಯತ್ರ ತಿಷ್ಠಂತಿ ಸರ್ವದಾ ।
ಲಿಂಗಾರ್ಚನವ್ರತಾಧೀಶಾಸ್ತತ್ರೈವ ನಿವಸಾಮ್ಯಹಂ ॥೨೪॥

ಮನ್ನಾಮಜಪಸಂಸಕ್ತಾ ಮಲ್ಲಿಂಗಾರ್ಚನತತ್ಪರಾಃ ।
ಯತ್ರ ಕ್ವಚನ ತಿಷ್ಠಂತಿ ತತಃ ಸನ್ನಿಹಿತೋಽಸ್ಮ್ಯಹಂ ॥೨೫॥

ಶಂಭೋ ಶಂಕರ ವಿಶ್ವೇಶೇತ್ಯನಿಶಂ ಯತ್ರ ನೃತ್ಯತಿ ।
ಶೈವೈಃ ಶಿವರತಸ್ತತ್ರ ನಿವಸಾಮಿ ವರಾನನೇ ॥೨೬॥

ಯತ್ರ ಪಾಶುಪತಾ ಧರ್ಮಾಃ ಶಿವಧರ್ಮಾಶ್ಚ ಸಂತತಂ ।
ವಸಂತಿ ತತ್ರ ಸತತಂ ನಿವಸಾಮ್ಯಹಮಾದರಾತ್ ॥೨೭॥

ಮಹಾಪಾಶುಪತಂ ಶೈವಂ ಮಹಾಶೈವಂ ಶಿವಪ್ರಿಯಂ ।
ದೃಷ್ಟ್ವಾ ಪೂಜಾ ಯಥಾಶಕ್ತಿ ಕರ್ತವ್ಯಾ ಸರ್ವಥಾ ಜನೈಃ ॥೨೮॥

---

ಶೈವರಿಗಿಂತಲೂ ಪಾಶುಪತರು ಪರಿಶುದ್ಧರು. ಲಿಂಗಾರ್ಚನೆಯಲ್ಲಿಯೇ ಆಸಕ್ತರಾದ ಪಾಶುಪತರು ನೆಲಸಿರುವ ಪ್ರದೇಶಗಳಲ್ಲೆಲ್ಲಾ ನಾನು ನಿಯತವಾಗಿ ನೆಲಸುವೆನು. ||೨೪||

ನನ್ನ ನಾಮಗಳನ್ನೇ ಜಪಿಸುವುದರಲ್ಲಿ ಆಸಕ್ತರಾಗಿ ನನ್ನ ಲಿಂಗವನ್ನು ಅರ್ಚಿಸುವ ಭಕ್ತರು ಇರುವ ಪ್ರದೇಶಗಳಲ್ಲೆಲ್ಲಾ ನಾನು ಸನ್ನಿಹಿತನಾಗಿರುವೆನು. ||೨೫||

ಎಲೌ ಸುಮುಖಿಯೇ, ಯಾವ ಸ್ಥಳದಲ್ಲಿ ನನ್ನ ಭಕ್ತನು "ಶಂಭೋ ಶಂಕರ, ವಿಶ್ವೇಶ ಎಂದು ಅನವರತವೂ ನನ್ನ ನಾಮಗಳನ್ನೇ ಉಚ್ಚರಿಸುತ್ತಾ ಶಿವಭಕ್ತರೊಂದಿಗೆ ನೃತ್ಯವನ್ನು ಅಭಿನಯಿಸುವನೋ ಆ ಸ್ಥಳದಲ್ಲಿ ನಿತ್ಯವೂ ನಾನು ವಾಸವಾಗಿರುವೆನೆಂದು ತಿಳಿ. ||೨೬||

ಯಾವ ಸ್ಥಳದಲ್ಲಿ ಪಶುಪತಿಗೆ ಪ್ರಿಯವಾದ ಆಚಾರಗಳೂ ಮತ್ತು ಶಿವನಿಗೆ ಪ್ರಿಯವಾದ ಆಚಾರಗಳೂ ನೆಲಸಿರುವುವೋ ಆ ಸ್ಥಳದಲ್ಲಿ ನಾನು ಪ್ರೀತಿಯಿಂದ ನಿತ್ಯವೂ ವಾಸವಾಗಿರುವೆನು. ||೨೭||

ಮಹಾತ್ಮನಾದ ಪಾಶುಪತನನ್ನಾಗಲಿ ಅಥವಾ ಈಶ್ವರಪ್ರಿಯನಾದ ಶೈವನನ್ನಾಗಲಿ ನೋಡಿದರೆ ಅವನನ್ನು ಯಥಾಯೋಗ್ಯವಾಗಿ ಸತ್ಕರಿಸಬೇಕು. ||೨೮||

ಶೈವಾನಪೂಜಯಿತ್ವೈವ ಯೋ ಗಚ್ಛತ್ಯಭಿಮಾನತಃ ।
ಸ ಯಾತಿ ನರಕಂ ಘೋರಂ ಸತ್ಯಮೇವೋಚ್ಯತೇ ಮಯಾ ॥೭೯॥

ಶಿವದೀಕ್ಷಾಪರೈಃ ಶೈವೈರಶೈವೇಭ್ಯಃ ಕದಾಚನ ।
ನಮಸ್ಕಾರೋ ನ ಕರ್ತವ್ಯೋ ಯತಃ ಶೈವಾ ಜನೋತ್ತಮಾಃ ॥೮೦॥

ಶೈವೈರನ್ಯೋನ್ಯಪೂಜಾ ತು ಕರ್ತವ್ಯಾ ವಿಧಿವತ್ಸದಾ ।
ಅನ್ಯೋನ್ಯಂ ಪೂಜಕಾಃ ಪೂಜ್ಯಾಸ್ತೇ ಭವಂತ್ಯನಘಾಃ ಶುಭೇ ॥೮೧॥

ನ ಕಾಶೀಸದೃಶಂ ಕ್ಷೇತ್ರಂ ನ ಶಂಕರಸಮಃ ಸುರಃ ।
ನ ಶೈವಸದೃಶೋ ವಿಪ್ರೋ ನ ಮತ್ತೋಽಪಿ ವಿಮೋಕ್ಷದಃ ॥೮೨॥

ಶ್ರೀಮತ್ಪಶುಪತೀಶಸ್ಯ ಸನ್ನಿಧೌ ಪಕ್ಷಿಣೋಽಪಿ ಮಾಂ ।
ಧ್ಯಾತ್ವಾ ಶಿವ ಶಿವೇತ್ಯೇವಂ ವದಂತ್ಯನಿಶಮಾದರಾತ್ ॥೮೩॥

---

ಯಾವನು ಶಿವಭಕ್ತರನ್ನು ನೋಡಿ, ಅವರನ್ನು ಪೂಜಿಸದೇ ಅಹಂಕಾರದಿಂದ ಮುಂದಕ್ಕೆ ತೆರಳುವನೋ ಅವನು ಅಂತ್ಯದಲ್ಲಿ ಭಯಂಕರವಾದ ನರಕವನ್ನು ಸೇರುವನು, ಇದು ನಿಜ. ॥೭೯॥

ಶಿವಭಕ್ತರಾದ ಜನರು ಇತರ ಜನರಿಗಿಂತ ಶ್ರೇಷ್ಠರು. ಆದುದರಿಂದ ಶಿವದೀಕ್ಷೆಯನ್ನು ಕೈಗೊಂಡ ಶಿವಭಕ್ತರು ಶಿವಭಕ್ತರಲ್ಲದ ಜನರನ್ನು ಎಂದಿಗೂ ನಮಸ್ಕರಿಸಬಾರದು. ॥೮೦॥

ಶಿವಭಕ್ತರಾದರೋ ಪರಸ್ಪರವಾಗಿ ಶಾಸ್ತ್ರೋಕ್ತರೀತಿಯಿಂದ ಅವರು ಅನ್ಯೋನ್ಯವಾಗಿ ಪೂಜ್ಯರೂ ಪೂಜಕರೂ ಆಗಿರುವರು. ಅವರೇ ಪಾಪವಿನಿರ್ಮುಕ್ತರಾಗುವರು. ॥೮೧॥

ದೇವಿ, ಕಾಶೀಕ್ಷೇತ್ರಕ್ಕೆ ಸದೃಶವಾದ ಮತ್ತೊಂದು ಕ್ಷೇತ್ರವಿರುವುದಿಲ್ಲ. ಶಂಕರನಿಗೆ ಸದೃಶನಾದ ಇನ್ನೊಬ್ಬ ದೇವತೆಯಿರುವುದಿಲ್ಲ. ಶಿವಭಕ್ತನಿಗೆ ಸದೃಶನಾದ ಮತ್ತೊಬ್ಬ ಬ್ರಾಹ್ಮಣನಿರುವುದಿಲ್ಲ. ನನ್ನನ್ನು ಬಿಟ್ಟು ಮೋಕ್ಷವನ್ನು ದಯಪಾಲಿಸುವ ಇನ್ನೊಬ್ಬ ದೇವತೆಯು ಇರುವುದಿಲ್ಲ. ॥೮೨॥

ಪಶುಪತಿಯ ಸನ್ನಿಧಿಯಲ್ಲಿ ಪಕ್ಷಿಗಳು ಸಹ ನನ್ನನ್ನು ಧ್ಯಾನಿಸಿ ನಿರಂತರವೂ ಭಕ್ತಿಯಿಂದ ಶಿವ ಶಿವ ಎಂದು ನನ್ನ ನಾಮಗಳನ್ನು ಉಚ್ಚರಿಸುವುವು. ॥೮೩॥

ಧನ್ಯಂ ಪಾಶುಪತಂ ಸ್ಥಾನಂ ಧನ್ಯಾಃ ಪಾಶುಪತಾ ಜನಾಃ ।
ಧನ್ಯಾಃ ಪಶುಪತೀಶಸ್ಯ ಪೂಜಕಾಃ ಸರ್ವದಾ ಮುದಾ ॥೮೪॥

ಯಸ್ಮಿನ್ಪಾಶುಪತಸ್ಥಾನೇ ವಸತಾಂ ಪತ್ರಿಣಾಮಪಿ ।
ಶಿವತತ್ತ್ವಮತಿಃ ಶುದ್ಧಾ ವರ್ತತೇ ಬುದ್ಧಿದುರ್ಲಭಾ ॥೮೫॥

ಕಾಶ್ಯಾಂ ಪಶುಪತೀಶಸ್ಯ ಸನ್ನಿಧಾನೇ ಸ್ಥಿತಿಃ ಸದಾ ।
ಪೂರ್ವೋಕ್ತಧರ್ಮನಿರತೈಃ ಕರ್ತವ್ಯಾ ಯತ್ನತಃ ಶುಭೇ ॥೮೬॥

ನಿರಾಹಾರವ್ರತೈಃ ಶುದ್ಧೈರ್ಮಹಾಶೈವೈಃ ಶಿವಾರ್ಚಕೈಃ ।
ಸ್ಥೇಯಂ ಪಶುಪತೀಶಸ್ಯ ಕ್ಷೇತ್ರೇ ಯತ್ನೇನ ಸರ್ವದಾ ॥೮೭॥

ತತ್ರ ಜಪ್ತೋ ಮಹಾಮಂತ್ರಃ ಶೈವಃ ಶೀಘ್ರಫಲಪ್ರದಃ ।
ಭವತ್ಯೇವ ನ ಸಂದೇಹೋ ಜಪನೀಯಃ ಪ್ರಯತ್ನತಃ ॥೮೮॥

---

ಪಶುಪತಿಯು ನೆಲಸಿರುವ ಸ್ಥಳವು ಶ್ರೇಷ್ಠವಾದುದು. ಪಶುಪತಿಯನ್ನೇ ಪೂಜಿಸುವ ಭಕ್ತರು ಪುಣ್ಯಶಾಲಿಗಳು. ||೮೪||

ಪಶುಪತಿಯ ಕ್ಷೇತ್ರದಲ್ಲಿ ನೆಲಸಿರುವ ಪಕ್ಷಿಗಳಿಗೂ ಸಹ ಈಶ್ವರನಲ್ಲಿ ನಿಷ್ಕಲಂಕವಾದ ಭಕ್ತಿಯು ಇರುವುದು. ಅದು ಇತರರಿಗೆ ದುರ್ಲಭವು. ||೮೫||

ಎಲೌ ದೇವಿಯೇ, ಈ ಹಿಂದೆ ಹೇಳಿದ ಈಶ್ವರಪ್ರಿಯವಾದ ಆಚಾರಗಳಲ್ಲಿ ನಿರತರಾಗಿ ಕಾಶೀಕ್ಷೇತ್ರದಲ್ಲಿ ಪಶುಪತಿಯ ಸನ್ನಿಧಿಯಲ್ಲಿ ಪ್ರಯತ್ನಪೂರ್ವಕವಾಗಿ ವಾಸವಾಗಿರಬೇಕು. ||೮೬||

ನಿರಾಹಾರವ್ರತವನ್ನು ಕೈಗೊಂಡು ಶೈವದೀಕ್ಷೆಯನ್ನವಲಂಬಿಸಿ ಶಿವನನ್ನು ಪೂಜಿಸುತ್ತಾ ನಿತ್ಯವೂ ಪಶುಪತಿಯ ಕ್ಷೇತ್ರದಲ್ಲಿ ವಾಸವಾಗಿರಬೇಕು. ||೮೭||

ಕಾಶೀಕ್ಷೇತ್ರದಲ್ಲಿ ಜಪಿಸಿದ ಶಿವಪಂಚಾಕ್ಷರೀಮಂತ್ರವು ಶೀಘ್ರವಾಗಿ ಫಲವನ್ನು ಕೊಡುವುದು. ಇದರಲ್ಲಿ ಸಂಶಯವಿಲ್ಲ. ಆದುದರಿಂದ ಆತ್ಮಸಾಧ್ಯವಾದ ಪ್ರಯತ್ನದಿಂದ ಕಾಶೀಕ್ಷೇತ್ರದಲ್ಲಿಯೇ ನೆಲಸಿ ಶಿವಪಂಚಾಕ್ಷರಿಯನ್ನು ಜಪಿಸಬೇಕು. ||೮೮||

ಶೈವದೀಕ್ಷಾ ಶುಭಾ ತತ್ರ ಶೈವೇಭ್ಯೋ ದೀಯತೇ ಮಯಾ।
ತತಃ ಪಂಚಾಕ್ಷರೋ ಮಂತ್ರಸ್ತತ್ರ ಜಪ್ಯೋ ನಿರಂತರಂ ॥೮೯॥

ಪುರಾ ಕಶ್ಚಿನ್ನೃಪಶ್ರೇಷ್ಠಃ ಸರ್ವಭೂಚಕ್ರಪಾಲಕಃ।
ಸಾಮಂತನೃಪವಂದ್ಯಾಂಘ್ರಿರ್ಬಲವಾನ್ ಹಿಮವಾನಿವ ॥೯೦॥

ಅಮಿತಾನೇಕವಸುಮಾನ್ ಕುಬೇರ ಇವ ಸರ್ವದಾ।
ಧೀರೋ ಮೇರುರಿವ ಶ್ರೀಮಾನ್ ಶ್ರೀಬಲೇಶ ಇವಾನಿಶಂ ॥೯೧॥

ಪಿತೇವ ಶಾಸ್ತಾ ಲೋಕಾನಾಂ ಮಾತೇವಾತ್ಯಂತರಕ್ಷಕಃ।
ಕಾಂತೇವ ಹಿತಕೃನ್ನಿತ್ಯಂ ನವೇಂದುರಿವ ತೋಷಕಃ ॥೯೨॥

ಸ ಕದಾಚಿದ್ರಥಾರೂಢಃ ಸೂರ್ಯಮಂಡಲಸನ್ನಿಭಃ।
ಕ್ರೀಡಾರತೋ ಯಯೌ ಭೂಪೋ ಯಮಲೋಕಾಯ ವೀರ್ಯವಾನ್ ॥೯೩॥

---

ಅಲ್ಲಿ ನಾನು ಶಿವಭಕ್ತರಾದ ಜನರಿಗೆ ಶೈವದೀಕ್ಷೆಯನ್ನು ದಯಪಾಲಿಸುವೆನು. ಆದುದರಿಂದ ಪಂಚಾಕ್ಷರಮಂತ್ರವನ್ನು ಪಾಶುಪತಕ್ಷೇತ್ರದಲ್ಲಿಯೇ ಜಪಿಸಬೇಕು. ॥೮೯॥

ಪೂರ್ವಕಾಲದಲ್ಲಿ ಏಕಚಕ್ರಾಧಿಪತಿಯಾಗಿ ಭೂಮಂಡಲವನ್ನು ಆಳುತ್ತಿದ್ದ ಒಬ್ಬಾನೊಬ್ಬ ರಾಜನಿದ್ದನು. ಅನೇಕ ಮಂದಿ ಸಾಮಂತರಾಜರು ಅವನಿಗೆ ಅಧೀನರಾಗಿದ್ದರು. ಆ ರಾಜನು ಹಿಮವಂತನಂತೆ ಅತ್ಯಂತ ಪರಾಕ್ರಮಿಯಾಗಿದ್ದನು. ॥೯೦॥

ಅವನು ಕುಬೇರನಂತೆ ಧನಿಕನೂ, ಮೇರುಪರ್ವತದಂತೆ ಧೀರನೂ, ತಂದೆಯಂತೆ ಜನರನ್ನು ಶಿಕ್ಷಿಸುವವನೂ, ತಾಯಿಯಂತೆ ರಕ್ಷಿಸುವವನೂ, ಪ್ರಿಯತಮೆಯಂತೆ ಹಿತಕಾರಿಯೂ, ನೂತನ ಚಂದ್ರನಂತೆ ಆಹ್ಲಾದಕಾರಿಯೂ ಆಗಿದ್ದನು. ॥೯೨॥

ಒಂದಾನೊಂದು ದಿನ ಆ ರಾಜನು ಕ್ರೀಡಾಸಕ್ತನಾಗಿ ರಥವನ್ನೇರಿ ಯಮಲೋಕಕ್ಕೆ ಹೋದನು. ॥೯೩॥

ಸಮಾಯಾಂತಂ ನೃಪಂ ದೃಷ್ಟ್ವಾ ತೇಜಿಷ್ಠಮನಲಪ್ರಭಂ ।
ಭೀತೋಽಭ್ಯುತ್ಥಾಯ ಶಮನೋ ನೃಪಂ ಪ್ರತ್ಯುಜ್ಜಗಾಮ ಚ ॥೯೪॥

ತತಃ ಸಿಂಹಾಸನೇ ರಮ್ಯೇ ಸಂವೇಶ್ಯ ನೃಪಸತ್ತಮಂ ।
ಚಕಾರ ಪೂಜಾಂ ವಿಧಿವದರ್ಘ್ಯಪಾದ್ಯಾದಿಭಿಃ ಕ್ರಮಾತ್ ॥೯೫॥

ತತೋ ಯಮಕೃತಾಂ ಪೂಜಾಂ ಗೃಹೀತ್ವಾ ನೃಪತಿರ್ಮುದಾ ।
ರಥಮಾರುಹ್ಯ ವೇಗೇನ ಸ್ವರ್ಗಲೋಕಂ ಜಗಾಮ ಸಃ ॥೯೬॥

ತಮಾಗತಂ ನೃಪಂ ದೃಷ್ಟ್ವಾ ದೇವೇಂದ್ರಃ ಸಹಸಾ ಮುದಾ ।
ಪ್ರಣಮ್ಯ ವಿಧಿವತ್ಪೂಜಾಂ ಚಕಾರ ವಿನಯಾನ್ವಿತಃ ॥೯೭॥

ತತಃ ಸ ರಾಜಾ ಪ್ರಬಲೋ ದೇವೇಂದ್ರಾದಿಭಿರನ್ವಿತಃ ।
ವಿಮಾನವರಮಾರುಹ್ಯ ಬ್ರಹ್ಮಲೋಕಂ ಜಗಾಮ ಚ ॥೯೮॥

ತತಃ ಶತಧೃತಿರ್ದೃಷ್ಟ್ವಾ ತಮೇತಂ ನೃಪತಿಂ ಮುದಾ ।
ಪ್ರಣಮ್ಯ ಪೂಜಯಾಮಾಸ ಪೂಜಾವಿಧಿವಿಶಾರದಃ ॥೯೯॥

---

ಈ ರೀತಿಯಲ್ಲಿ ತನ್ನ ಲೋಕಕ್ಕೆ ಬಂದ ತೇಜಸ್ವಿಯಾದ ಆ ರಾಜನನ್ನು ನೋಡಿ ಯಮನು ಹೆದರಿದವನಾಗಿ ಆಸನದಿಂದ ಮೇಲಕ್ಕೆದ್ದು ರಾಜನನ್ನು ಸ್ವಾಗತಿಸಿದನು. ॥೯೪॥

ಬಳಿಕ ಅವನು ರಾಜನನ್ನು ಮನೋಹರವಾದ ಸಿಂಹಾಸನದಲ್ಲಿ ಕುಳ್ಳಿರಿಸಿ ಯಥಾಶಾಸ್ತ್ರವಾಗಿ ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸಿದನು. ॥೯೫॥

ಅನಂತರದಲ್ಲಿ ರಾಜನು ಯಮನ ಪೂಜೆಯನ್ನು ಪ್ರೀತಿಯಿಂದ ಸ್ವೀಕರಿಸಿ ರಥವನ್ನೇರಿ ರಭಸದಿಂದ ಸ್ವರ್ಗಲೋಕಕ್ಕೆ ನಡೆದನು. ॥೯೬॥

ಸ್ವರ್ಗಲೋಕಕ್ಕೆ ಬಂದ ರಾಜನನ್ನು ನೋಡಿ ದೇವೇಂದ್ರನು ಶೀಘ್ರವಾಗಿ ಮೇಲಕ್ಕೆದ್ದು ನಮಸ್ಕರಿಸಿ ವಿಧಿವತ್ತಾಗಿ ವಿನಯದಿಂದ ಪೂಜಿಸಿದನು. ॥೯೭॥

ಬಳಿಕ ರಾಜನು ದೇವೇಂದ್ರನೇ ಮೊದಲಾದ ದೇವತೆಗಳೊಂದಿಗೆ ವಿಮಾನವನ್ನೇರಿ ಬ್ರಹ್ಮಲೋಕಕ್ಕೆ ನಡೆದನು. ॥೯೮॥

ತರುವಾಯ ಬ್ರಹ್ಮನು ಆ ರಾಜನನ್ನು ನೋಡಿ ಆದರದಿಂದ ನಮಸ್ಕರಿಸಿ ಪೂಜಿಸಿದನು. ॥೯೯॥

ತತಃ ಸಭಾಸದಃ ಸರ್ವೇ ಕೃತಾಂಜಲಿಪುಟಾ ವಿಧಿಂ ।
ಕೋಽಯಮಿತ್ಯೂಚಿರೇ ಮಂದಂ ಕಂಪಮಾನಾ ನತಾನನಾಃ ॥೧೦೦॥

॥ ಬ್ರಹ್ಮೋವಾಚ ॥

ಶೃಣ್ವಂತು ಸಾವಧಾನೇನ ಪ್ರಭಾವೋಽಸ್ಯ ಮಯೋಚ್ಯತೇ ।
ಯತ್ಪ್ರಭಾವಸ್ಯ ಕಥನಾದ್ರೋಮಾಂಚೋ ಜಾಯತೇ ಮಮ॥೧೦೧॥

ಕಾಶ್ಯಾಮಂತರ್ಗೃಹೇ ರಮ್ಯೇ ಶಿವಃ ಪಶುಪತೀಶ್ವರಃ ।
ಶೈವಃ ಪಾಶುಪತಾರಾಧ್ಯಸ್ತಿಷ್ಠತ್ಯಘವಿನಾಶಕಃ ॥೧೦೨॥

ತತ್ರ ಕುಂಡಮಭೂದ್ದಿವ್ಯಂ ತತ್ತೀರೇ ಸುರಸೇವಿತೇ ।
ಬಿಲ್ವವೃಕ್ಷೋ ಮಹಾನಾಸೀನ್ನವಪಲ್ಲವಸಂಯುತಃ ॥೧೦೩॥

ತನ್ಮೂಲೇ ಸರ್ವದಾ ಶೈವಾಃ ಶಿವಮಂತ್ರಜಪೋತ್ಸುಕಾಃ ।
ಶಿವಪೂಜಾಪರಾಃ ಶುದ್ಧಾಸ್ತಿಷ್ಠಂತಿ ವಿಗತಸ್ಪೃಹಾಃ ॥೧೦೪॥

---

ಬಳಿಕ ಬ್ರಹ್ಮನ ಆಸ್ಥಾನದಲ್ಲಿದ್ದ ಸಭಿಕರು ರಾಜನನ್ನು ನೋಡಿ ನಡುಗುತ್ತಾ ಮುಖವನ್ನು ತಗ್ಗಿಸಿ ಬ್ರಹ್ಮನ ಬಳಿಗೆ ಬಂದು ಅಂಜಲಿಬದ್ಧರಾಗಿ ಅವನನ್ನು ಕುರಿತು ಮೆಲ್ಲನೆ ಇವನಾರು ? ಎಂದು ಪ್ರಶ್ನಿಸಿದರು. ॥೧೦೦॥

ಎಲೈ ದೇವತೆಗಳೇ, ಈತನ ಮಹಿಮೆಯನ್ನು ನಿಮಗೆ ಹೇಳುವೆನು ಸಾವಧಾನದಿಂದ ಕೇಳಿರಿ. ಇವನ ಮಹಿಮೆಯನ್ನು ಹೇಳುವುದರಿಂದ ಶರೀರವು ರೋಮಾಂಚಿತವಾಗುವುದು. ॥೧೦೧॥

ಕಾಶೀಕ್ಷೇತ್ರದಿಂದ ಒಂದಾನೊಂದು ಆಲಯದಲ್ಲಿ ಪಾಶುಪತರಿಂದ ಆರಾಧಿಸಲ್ಪಡುವ ಪಾಪನಾಶಕನಾದ ಪಶುಪತಿಯು ನೆಲಸಿರುವನು. ॥೧೦೨॥

ಅಲ್ಲಿ ರಮ್ಯವಾದ ಒಂದು ಕೊಳವು ಇರುವುದು. ಆ ಕೊಳದ ತೀರದಲ್ಲಿ ಒಂದಾನೊಂದು ದೊಡ್ಡದಾದ ಬಿಲ್ವವೃಕ್ಷವು ಇದ್ದಿತು. ॥೧೦೩॥

ಆ ಮರದ ಬುಡದಲ್ಲಿ ನಿಷ್ಕಲ್ಮಷರೂ ನಿಸ್ಪೃಹರೂ ಶಿವಪೂಜಾಸಕ್ತರೂ ಶಿವಮಂತ್ರವನ್ನು ಜಪಿಸುವವರೂ ಆದ ಅನೇಕ ಶಿವಭಕ್ತರು ವಾಸವಾಗಿರುವರು. ॥೧೦೪॥

ಶಿವಪ್ರಿಯಕರೇ ರಮ್ಯೇ ತಸ್ಮಿನ್ನಾದಿತ್ಯಸೋದರೇ ।
ಅಯಂ ತು ಶಕುನಿರ್ಭೂತ್ವಾ ನ್ಯವಸನ್ನೀಡಸಂಶ್ರಯಃ ॥೧೦೫॥

ತತ್ರಾಯಂ ನ್ಯವಸನ್ನಿತ್ಯಂ ಸ್ವಚಂಚುಪುಟಸಂಚಿತೈಃ ।
ಕೋಮಲಾಮಲಶಾಖಾಗ್ರಬಿಲ್ವಪತ್ರೈಃ ಶಿವಪ್ರಿಯೈಃ ॥೧೦೬॥

ತತ್ಕುಂಡೋದಕಸಂಪ್ಲುಷ್ಟೈರಮ್ಲಾನೈರಘನಾಶನೈಃ ।
ಪೂಜಯತ್ಯತಿಯತ್ನೇನ ಸಮ್ಯಕ್ಪಶುಪತೀಶ್ವರಂ ॥೧೦೭॥

ದೇವಾಲಯರಜಃಪುಂಜಾನ್ದೂರೀಕುರ್ವನ್ನಿರಂತರಂ ।
ಆಸಾಯಮತಿಯತ್ನೇನ ತಿಷ್ಠತಿ ಪ್ರೀತಿಮಾನಸಃ ॥೧೦೮॥

ಸ್ವಪಕ್ಷಧೂನನೋದ್ಭೂತವಾಯುಭಿಶ್ಚಾನಿಶಂ ಮುದಾ ।
ತತ್ಪ್ರಾಂತಶೈವಸ್ವೇದಾನಿ ನಿವಾರಯತಿ ಸಾದರಂ ॥೧೦೯॥

---

ಈಶ್ವರನಿಗೆ ಪ್ರಿಯವಾದ ಮನೋಹರವಾದ ಆ ವೃಕ್ಷದಲ್ಲಿ ಈ ರಾಜನು ಪಕ್ಷಿಯಾಗಿ ಒಂದಾನೊಂದು ಗೂಡಿನಲ್ಲಿ ವಾಸವಾಗಿದ್ದನು. ||೧೦೫||

ಇವನು ಜನ್ಮಾಂತರದಲ್ಲಿ ಹಕ್ಕಿಯ ಜನ್ಮದಿಂದ ಆ ಗೂಡಿನಲ್ಲಿ ವಾಸವಾಗಿರುತ್ತಾ ಪ್ರತಿದಿನವೂ ತನ್ನ ಕೊಕ್ಕಿನಿಂದ ಆ ಬಿಲ್ವವೃಕ್ಷದ ಮೃದುವಾದ ಪತ್ರಗಳನ್ನು ತೆಗೆದುಕೊಂಡು ವೃಕ್ಷದ ಕೆಳಗಡೆಯಲ್ಲಿದ್ದ ಕುಂಡದ ನೀರಿನಲ್ಲಿ ಅದ್ದಿ ಅವುಗಳಿಂದ ಪಶುಪತಿಯನ್ನು ಬಿಡದೇ ಪೂಜಿಸುತ್ತಿದ್ದನು. ||೧೦೬-೧೦೭||

ಆ ಪಕ್ಷಿಯು ಅನವರತವೂ ದೇವಾಲಯದಲ್ಲಿದ್ದ ಧೂಳಿನ ರಾಶಿಯನ್ನು ಸಂಧ್ಯಾಕಾಲದವರೆಗೂ ಅತ್ಯಂತ ಶ್ರಮದಿಂದ ಹೋಗಲಾಡಿಸುತ್ತಾ ಸಂತೋಷದಿಂದ ವಾಸವಾಗಿದ್ದಿತು. ||೧೦೮||

ಅಲ್ಲದೆ ತನ್ನ ರೆಕ್ಕೆಗಳನ್ನಲ್ಲಾಡಿಸುತ್ತಾ ಅವುಗಳಿಂದುಂಟಾದ ಗಾಳಿಯಿಂದ ಆ ವೃಕ್ಷದ ಬಳಿಯಲ್ಲಿದ್ದ ಶಿವಭಕ್ತರ ಸ್ವೇದಬಿಂದುಗಳನ್ನು ಹೋಗಲಾಡಿಸಿ ಅವರ ಆಯಾಸವನ್ನು ಪರಿಹರಿಸುತ್ತಿದ್ದಿತು. ||೧೦೯||

ಏವಮೇವ ಸ್ಥಿತಸ್ತತ್ರ ಕದಾಚಿದಯಮುದ್ಧತಃ ।
ಚಕಾರ ಯುದ್ಧಮನ್ಯೇನ ವಿಹಗೇನ ಬಲಾನ್ವಿತಃ ॥೧೧೦॥

ಯುದ್ಧಮಾನೇನ ತೇನೈವ ಪಂಚಕ್ರೋಶಾದ್ಬಹಿರ್ಗತಃ ।
ತತಸ್ತತ್ರ ಕಿರಾತೇನ ಕೇನ ಚಿನ್ನಿಹತೋ ಮೃತಃ ॥೧೧೧॥

ತತೋ ಯಮಭಟೈರ್ನೀತಃ ಸ ಏವ ಶಕುನಿಸ್ತದಾ ।
ಯಮಃ ಕೋಽಯಮಿತಿ ಪ್ರೀತ್ಯಾ ಪಪ್ರಚ್ಛ ಚ ಸ್ವಕಿಂಕರಾನ್ ॥೧೧೨॥

॥ ಯಮದೂತಾ ಊಚುಃ ॥

ಯಮಾಯಂ ಶಕುನಿರ್ಧನ್ಯಃ ಸದಾ ಬಿಲ್ವವನಾಶ್ರಯಃ ।
ಕಾಶ್ಯಾಂ ಪಶುಪತೀಶಸ್ಯ ಪೂಜಕಶ್ಚ ವಿಶೇಷತಃ ॥೧೧೩॥

ದೈವಾದನೇನ ಕಾಶೀ ಸಾ ತ್ಯಕ್ತಾ ಮೋಕ್ಷಪ್ರದಾಯಿನೀ ।
ಕಿರಾತೇನ ಹತೋಽನ್ಯತ್ರ ದುಷ್ಟೇನ ಶರಪಾಣಿನಾ ॥೧೧೪॥

---

ಹೀಗಿರುತ್ತಿರಲು ಒಂದಾನೊಂದು ದಿನ ಬಲಶಾಲಿಯಾದ ಪಕ್ಷಿಯು ಅಹಂಕಾರದಿಂದ ಕೂಡಿ ಇನ್ನೊಂದು ಪಕ್ಷಿಯೊಂದಿಗೆ ಹೊಡೆದಾಡಿತು. ॥೧೧೦॥

ಆ ಎರಡು ಪಕ್ಷಿಗಳ ನಡುವೆ ಘೋರವಾದ ಕಾಳಗವು ನಡೆಯಲು ಈ ಪಕ್ಷಿಯು ಶತ್ರುವಿನ ರೆಕ್ಕೆಗಳ ಹೊಡೆತದಿಂದ ಆ ಪ್ರದೇಶಕ್ಕೆ ಐದುಕ್ರೋಶಗಳ ಅಂತರವಿರುವ ಒಂದಾನೊಂದು ದೂರ ಪ್ರದೇಶಕ್ಕೆ ಹೋಗಿ ಬಿದ್ದಿತು. ಆಗ ಅಲ್ಲಿ ಒಬ್ಬ ಬೇಡನು ಇದನ್ನು ಸಂಹರಿಸಲು ಇದು ಮೃತವಾಯಿತು. ॥೧೧೧॥

ತರುವಾಯ ಮೃತವಾದ ಆ ಪಕ್ಷಿಯನ್ನು ಯಮದೂತರು ಯಮಲೋಕಕ್ಕೆ ಕೊಂಡೊಯ್ಯಲು ಆಗ ಯಮನು "ಇವನಾರು?" ಎಂದು ತನ್ನ ದೂತರನ್ನು ಕೇಳಲು, ॥೧೧೨॥

ಓ ಕೃತಾಂತನೇ, ಅದ್ಭುತವಾದ ಮಹಿಮೆಯುಳ್ಳ ಈ ಪಕ್ಷಿಯು ಕಾಶೀ ಕ್ಷೇತ್ರದಲ್ಲಿರುವ ಒಂದಾನೊಂದು ಬಿಲ್ವವೃಕ್ಷದಲ್ಲಿ ವಾಸವಾಗಿ ಪಶುಪತಿಯನ್ನು ಭಕ್ತಿಯಿಂದ ಪೂಜಿಸುತ್ತಿದ್ದಿತು. ॥೧೧೩॥

ದೈವಯೋಗದಿಂದ ಈ ಪಕ್ಷಿಯು ಮುಕ್ತಿದಾಯಕವಾದ ಆ ಕಾಶೀಕ್ಷೇತ್ರವನ್ನು

ಅಯಮಸ್ಮಾಭಿರಾನೀತಃ ಕಾಶೀವಾಸರತಃ ಸದಾ ।
ಪೂಜನೀಯೋಽತಿಯತ್ನೇನ ಶೈವೋಽಯಂ ಶಿವಸಂಮತಃ ॥೧೧೫॥

ಇತಿ ತದ್ವಚನಂ ಶ್ರುತ್ವಾ ಸಾದರಂ ಪ್ರಣಿಪತ್ಯ ಚ ।
ಪೂಜಯಾಮಾಸ ಶಮನಃ ಸಿಂಹಾಸನವರೇ ಸ್ಥಿತಂ ॥೧೧೬॥

ತತಃ ಸ್ವರ್ಗಂ ಸಮಾಸಾದ್ಯ ದೇವೇಂದ್ರೇಣಾಪಿ ಪೂಜಿತಃ ।
ಮಲ್ಲೋಕಮಗಮತ್ಪೂರ್ವಂ ಮಯಾಽಯಂ ಪೂಜಿತಃ ಶುಚಿಃ॥೧೧೭॥

ತತೋ ನ್ಯವಸದತ್ರೈವ ಯುಗಾನಾಮಯುತಂ ಮುದಾ ।
ಸ್ವತ ಏವ ತತೋ ಗತ್ವಾ ವಿಚಚಾರಾವನೀತಲೇ ॥೧೧೮॥

ತತಃ ಕಶ್ಚಿತ್ಪ್ರಜಾಧೀಶಃ ಪರಂತಪ ಇತಿ ಶ್ರುತಃ ।
ದದರ್ಶೈನಮತಿಪ್ರೇಮ್ಣಾ ಚಂದ್ರಮಬ್ಧಿರಿವಪ್ರಿಯಂ ॥೧೧೯॥

---

ಬಿಟ್ಟು ಬಹುದೂರದಲ್ಲಿರುವ ಒಂದಾನೊಂದು ಸ್ಥಳಕ್ಕೆ ಬಂದಿತು. ಆಗ ಅಲ್ಲಿ ದುಷ್ಟನಾದ ಒಬ್ಬ ಬೇಡನು ತನ್ನ ಬಾಣದಿಂದ ಇದನ್ನು ಸಂಹರಿಸಿದನು. ||೧೧೪||

ಕಾಶೀಕ್ಷೇತ್ರವಾಸಿಯಾದ ಇದನ್ನು ನಾವು ಇಲ್ಲಿಗೆ ತಂದಿರುವೆವು. ಈ ಪಕ್ಷಿಯನ್ನು ಯತ್ನಪೂರ್ವಕವಾಗಿ ಪೂಜಿಸಬೇಕು. ಇದು ಈಶ್ವರಭಕ್ತನಾಗಿ ಈಶ್ವರನ ಅನುಗ್ರಹಕ್ಕೆ ಪಾತ್ರವಾಗಿರುವುದು. ||೧೧೫||

ಸೇವಕರ ಆ ಮಾತನ್ನು ಕೇಳಿ ಯಮನು ಆ ಪಕ್ಷಿಯನ್ನು ನಮಸ್ಕರಿಸಿ ತನ್ನ ಸಿಂಹಾಸನದ ಮೇಲೆ ಕುಳ್ಳಿರಿಸಿ ಪೂಜಿಸಿದನು. ||೧೧೬||

ಆದಾದ ಬಳಿಕ ಆ ಪಕ್ಷಿಯನ್ನು ಸ್ವರ್ಗಲೋಕಕ್ಕೆ ಕರೆದೊಯ್ಯಲು ಅಲ್ಲಿ ದೇವೇಂದ್ರನು ಪಕ್ಷಿಯನ್ನು ಪೂಜಿಸದನು. ತರುವಾಯ ಆ ಪಕ್ಷಿಯು ನನ್ನ ಲೋಕಕ್ಕೆ ಬರಲು ನಾನು ಅದನ್ನು ಪೂಜಿಸಿದೆನು. ||೧೧೭||

ಬಳಿಕ ಅದು ಹತ್ತುಸಹಸ್ರ ಯುಗಗಳ ವರೆಗೆ ಈ ಲೋಕದಲ್ಲಿಯೇ ಪ್ರೀತಿಯಿಂದ ವಾಸವಾಗಿದ್ದು ಸ್ವೇಚ್ಛೆಯಿಂದ ಭೂಲೋಕಕ್ಕೆ ಹೋಗಿ ಅಲ್ಲಿ ಸಂಚರಿಸತೊಡಗಿತು. ||೧೧೮||

ಹೀಗಿರುತ್ತಿರುವ ಭೂಲೋಕದಲ್ಲಿ "ಪರಂತಪ" ಎಂಬ ಹೆಸರಿನಿಂದ ಪ್ರಸಿದ್ಧನಾದ ಒಬ್ಬಾನೊಬ್ಬ ರಾಜನು ಸಮುದ್ರವು ಚಂದ್ರನನ್ನು ನೋಡುವಂತೆ ಪ್ರೀತಿಯಿಂದ ಈ ಪಕ್ಷಿಯನ್ನು ನೋಡಿದನು. ||೧೧೯||

ದೃಷ್ಟ್ವೈವ ನೃಪತಿಃ ಸಮ್ಯಕ್ಪೂಜಾಂ ಕೃತ್ವಾ ಯಥಾವಿಧಿ।
ಉವಾಚೈನಮತಿಪ್ರೀತ್ಯಾ ಕೃತಾಂಜಲಿಪುಟಸ್ತದಾ ॥೧೨೦॥

ಇಷ್ಟದೇವೋ ಭವಾನೇವ ಶಂಕರಸ್ತ್ವಂ ನ ಸಂಶಯಃ।
ಪ್ರಸೀದ ಕರುಣಾಸಿಂಧೋ ಭಕ್ತಾರ್ತಿಭಯನಾಶಕ ॥೧೨೧॥

ಶರೀರಂ ಜೀರ್ಣಮಭವತ್ಕೇಶಾಶ್ಚ ಪಲಿತಾ ಮಮ।
ಪುತ್ರೋ ನ ಜಾತೋ ರಾಜ್ಯಸ್ಯ ರಕ್ಷಕೋ ನಾಸ್ತಿ ಸರ್ವಥಾ ॥೧೨೨॥

ಪಿತೄಣಾಂ ಋಣಮಸ್ತ್ಯೇಕಮನಿವಾರ್ಯಮನಾಮಯಂ।
ತದೃಣಾಪಹಕರ್ಮಾಣಿ ನ ದೃಶ್ಯಂತೇ ಸುತಂ ವಿನಾ ॥೧೨೩॥

ವಿವೇಕೀ ಧರ್ಮನಿಪುಣೋ ವೇದಶಾಸ್ತ್ರಾರ್ಥಪಾರಗಃ।
ಯಸ್ಯ ನಾಸ್ತಿ ಸುತಸ್ತಸ್ಯ ವ್ಯರ್ಥಂ ಜನ್ಮ ನ ಸಂಶಯಃ ॥೧೨೪॥

---

ಇದನ್ನು ನೋಡಿದೊಡನೆಯೇ ಆ ರಾಜನು ವಿಧಿವತ್ತಾಗಿ ಪೂಜಿಸಿ ಅಂಜಲಿ ಬದ್ಧನಾಗಿ ಪಕ್ಷಿಯನ್ನು ಕುರಿತು ಹೀಗೆಂದನು. ॥೧೨೦॥

ನೀನೇ ನನ್ನ ಇಷ್ಟದೇವತೆಯಾದ ಈಶ್ವರನಾಗಿರುವೆ. ಇದರಲ್ಲಿ ಸಂಶಯ ವಿರುವುದಿಲ್ಲ. ಓ ಕರುಣಾಸಾಗರನೇ, ಭಕ್ತರ ವಿಘ್ನಗಳನ್ನು ನಾಶಮಾಡುವವನೇ, ನನಗೆ ಪ್ರಸನ್ನನಾಗು. ॥೧೨೧॥

ನನ್ನ ಈ ಶರೀರವು ವಾರ್ಧಕ್ಯದಿಂದ ಜೀರ್ಣವಾಗಿರುವುದು. ಕೇಶಗಳು ಹಣ್ಣಾದವು. ಆದರೂ ನನ್ನ ರಾಜ್ಯವನ್ನು ಕಾಪಾಡುವ ಒಬ್ಬ ಪುತ್ರನೂ ನನಗೆ ಇರುವುದಿಲ್ಲ. ॥೧೨೨॥

ನನಗೀಗ ಪಿತೃಋಣವೊಂದೇ ಇರುವುದು. ಅದು ಅಪರಿಹಾರ್ಯವಾಗಿರು ವುದು. ಅದನ್ನು ಪುತ್ರನಿಂದಲೇ ಹೋಗಲಾಡಿಸಬೇಕಲ್ಲದೇ ಇನ್ನಾವ ಕರ್ಮಗಳೂ ನನ್ನನ್ನು ಪಿತೃಋಣದಿಂದ ಮುಕ್ತನನ್ನಾಗಿ ಮಾಡಲಾರವು. ॥೧೨೩॥

ಯಾವ ಮನುಜನಿಗೆ ವಿವೇಕಿಯೂ, ಧಾರ್ಮಿಕನೂ, ವೇದವೇದಾಂಗಗಳಲ್ಲಿ ಪಾರಂಗತನೂ ಆದ ಪುತ್ರನು ಇರುವುದಿಲ್ಲವೋ ಅವನ ಜನ್ಮವು ನಿರರ್ಥಕವು ಇದರಲ್ಲಿ ಸಂಶಯವಿರುವುದಿಲ್ಲ. ॥೧೨೪॥

ಪುನ್ನಾಮ ನರಕಂ ಘೋರಮಸ್ತ್ಯೇಕಮತಿದುಃಖದಂ ।
ಪತಿತಂ ತತ್ರ ಮಾಮನ್ಯಸ್ತಂ ವಿನಾ ನೋದ್ಧರಿಷ್ಯತಿ ॥೧೨೫॥

ವಂಶವೃದ್ಧಿಕರಃ ಪುತ್ರೋ ಯಸ್ಮಿನ್ವಂಶೇ ನ ಜಾಯತೇ ।
ತದ್ವಂಶನಾಶಸ್ತೀವ್ರೇಣ ಭವಿಷ್ಯತ್ಯೇವ ಸರ್ವಥಾ ॥೧೨೬॥

ಪುತ್ರಹೀನಮಿದಂ ಜನ್ಮ ಧಿಙ್ಮಮಾಪಿ ಜರಾವೃತಂ ।
ಧಿಕ್ಪುತ್ರಾನನುಭೂತಂ ಚ ರಾಜ್ಯಮೇತದಕಂಟಕಂ ॥೧೨೭॥

ಸರ್ವದುಃಖಾಪಹಾ ಕಾಶೀ ತಿಷ್ಠತ್ಯೇಕಾ ಶಿವಾತ್ಮಿಕಾ ।
ತತ್ಪ್ರಾಪ್ತಿಸಾಧನಂ ಪೂರ್ವಂ ತಪ್ತಂ ಚ ನ ಮಯಾ ತಪಃ ॥೧೨೮॥

ದುಃಖಪೀಡಿತಚಿತ್ತಸ್ಯ ಮಮ ದುಃಖನಿವಾರಕಃ ।
ನಾಸ್ತ್ಯೇವ ಸರ್ವಥಾ ಲೋಕೇ ಪುತ್ರಾನ್ಯಸ್ತೋಷಕಾರಣಃ ॥೧೨೯॥

---

"ಪುಂ" ಎಂಬ ಹೆಸರಿನ ಒಂದಾನೊಂದು ಘೋರವಾದ ನರಕವಿರುವುದು. ಅದು ಅತ್ಯಂತ ದುಃಖವನ್ನುಂಟುಮಾಡುವುದು. ಅಪುತ್ರನಾದವನು ಪುಂನಾಮವುಳ್ಳ ಆ ನರಕವನ್ನು ಪಡೆದು ಅಲ್ಲಿ ದಾರುಣವಾದ ದುಃಖವನ್ನನುಭವಿಸುವನು. ಹೀಗಿರುತ್ತಿರಲು ಅಪುತ್ರನಾದ ನನ್ನನ್ನು ಆ ನರಕದಿಂದ ಪುತ್ರನೇ ಉದ್ಧರಿಸಬೇಕಲ್ಲದೇ ಇನ್ನಾರೂ ಉದ್ಧರಿಸಲಾರರು. ॥೧೨೫॥

ಯಾವ ವಂಶದಲ್ಲಿ ವಂಶವನ್ನು ವೃದ್ಧಿಗೊಳಿಸುವ ಪುತ್ರನು ಜನಿಸುವುದಿಲ್ಲವೋ ಆ ವಂಶವು ಶೀಘ್ರವಾಗಿಯೇ ನಷ್ಟವಾಗುವುದು. ॥೧೨೬॥

ಪುತ್ರನಿಲ್ಲದೇ ಮುದಿತನದಿಂದ ಕೂಡಿರುವ ಈ ಜೀವನಕ್ಕೆ ಧಿಕ್ಕಾರವಿರಲಿ. ಪುತ್ರನಿಂದ ಅನುಭವಿಸಲ್ಪಡದಿರುವ ಈ ರಾಜ್ಯದಿಂದೇನು ಪ್ರಯೋಜನ ? ॥೧೨೭॥

ಸಕಲ ದುಃಖಗಳನ್ನೂ ಹೋಗಲಾಡಿಸುವ ಶಿವಸ್ವರೂಪವಾದ ಕಾಶೀ ಎಂಬ ಒಂದಾನೊಂದು ಪುಣ್ಯಕ್ಷೇತ್ರವಿರುವುದು. ಆದರೆ ಆ ಕ್ಷೇತ್ರವನ್ನು ಸೇರಲು ಸಾಧನವಾದ ತಪಸ್ಸನ್ನು ಈ ಹಿಂದೆ ನಾನು ಆಚರಿಸಿರುವುದಿಲ್ಲ. ॥೧೨೮॥

ನನ್ನ ಮನಸ್ಸು ದುಃಖಪೀಡಿತವಾಗಿರುವುದು. ನನ್ನ ಆ ದುಃಖವನ್ನು ಹೋಗಲಾಡಿಸಿ ಸಂತೋಷವನ್ನುಂಟುಮಾಡುವವನು ಪುತ್ರನೇ ಆಗಿರುವನಲ್ಲದೇ ಇನ್ನಾರೂ ಆ ದುಃಖವನ್ನು ಹೋಗಲಾಡಿಸಲಾರರು. ॥೧೨೯॥

**ಪುತ್ರದಾನಂ ಕುರುಷ್ವಾದ್ಯ ತ್ವದನ್ಯಃ ಪುತ್ರದಃ ಸುರಃ ।**
**ನಾಸ್ತ್ಯೇವ ಸರ್ವಥಾ ಯಸ್ಮಾದ್ಭವಾನೇವ ಮಹೇಶ್ವರಃ ॥೧೩೦॥**

**ಶಿವ ಏವ ಹಿ ಧರ್ಮಾರ್ಥಕಾಮಮೋಕ್ಷಪ್ರದಃ ಶ್ರುತಃ ।**
**ತದನ್ಯಸ್ತತ್ಪ್ರದೋ ನೇತಿ ಶ್ರುತಿರ್ವದತಿ ಶಂಕರಃ ॥೧೩೧॥**

**ಇತಿ ತದ್ವಚನಂ ಶ್ರುತ್ವಾ ತಮುವಾಚಾಯಮಾದರಾತ್ ।**
**ಖೇದಂ ಮಾ ಕುರು ರಾಜೇಂದ್ರ ಪುತ್ರಸ್ತೇ ಭವಿತೇತಿ ಸಃ ॥೧೩೨॥**

**ತವೋತ್ತಮಾಂಗಾದುತ್ತುಂಗಾದಹಮೇವ ನೃಪೋತ್ತಮ ।**
**ಇತಃ ಷಷ್ಟಿತಮೇ ಮಾಸಿ ಸಂಭವಾಮಿ ನ ಸಂಶಯಃ ॥೧೩೩॥**

**ಇತ್ಯೇತದ್ವಚನಂ ಶ್ರುತ್ವಾ ಪ್ರಣಿಪತ್ಯೇನಮಾದರಾತ್ ।**
**ದುಃಖಂ ವಿಹಾಯ ಸಂತುಷ್ಟೋ ಜಗಾಮ ಸದನಂ ಸ್ವಕಂ ॥೧೩೪॥**

**ತತಃ ಷಷ್ಟಿತಮೇ ಮಾಸಿ ಸಂಪ್ರಾಪ್ತೇ ಸ್ವಪ್ರಭಾವತಃ ।**
**ತಸ್ಯೋತ್ತಮಾಂಗಾದಮಲಾದಾವಿರ್ಭೂತೋಽಯಮಾದರಾತ್ ॥೧೩೫॥**

---

ಓ ಮಹಾತ್ಮನೇ, ಆದುದರಿಂದ ನೀನೀಗ ನನಗೆ ಪುತ್ರನನ್ನು ದಯಪಾಲಿಸು. ಪುತ್ರನನ್ನು ದಯಪಾಲಿಸುವುದರಲ್ಲಿ ನಿನಗಿಂತಲೂ ಸಮರ್ಥನಾದ ಇನ್ನೊಬ್ಬ ದೇವತೆಯಿರುವುದಿಲ್ಲ. ನೀನು ಸಾಕ್ಷಾತ್ಪರಮೇಶ್ವರನೇ ಆಗಿರುವೆ. ॥೧೩೦॥

ಓ ಶಂಕರನೇ, ಶಿವನೊಬ್ಬನೇ ಧರ್ಮಾರ್ಥಕಾಮಮೋಕ್ಷಗಳೆಂಬ ನಾಲ್ಕು ಬಗೆಯ ಪುರುಷಾರ್ಥಗಳನ್ನು ಕೊಡುವನು. ಶಿವನನ್ನು ಬಿಟ್ಟು ಇನ್ನಾರೂ ಅವುಗಳನ್ನು ಕೊಡುವುದಿಲ್ಲವೆಂದು ವೇದವು ಹೇಳುವುದು. ॥೧೩೧॥

ರಾಜನ ಆ ಮಾತನ್ನು ಕೇಳಿ ಆ ಪಕ್ಷಿಯು ಅವನನ್ನು ಕುರಿತು ಹೀಗೆಂದಿತು— ಎಲೈ ರಾಜೇಂದ್ರನೇ, ದುಃಖಿಸಬೇಡ. ಮುಂದೆ ಕೆಲವು ದಿವಸಗಳಲ್ಲಿಯೇ ನಿನಗೆ ಪುತ್ರನು ಜನಿಸುವನು. ಎಲೈ ಭೂಪಾಲಕನೇ, ಇನ್ನು ಅರವತ್ತನೆಯ ತಿಂಗಳಿನಲ್ಲಿ ನಾನೇ ನಿನಗೆ ಪುತ್ರನಾಗಿ ನಿನ್ನ ಶಿರಸ್ಸಿನಿಂದ ಜನಿಸುವೆನು. ಇದರಲ್ಲಿ ಸಂಶಯ ಪಡಬೇಡ. ॥೧೩೨-೧೩೩॥

ಪಕ್ಷಿಯ ಈ ಮಾತನ್ನು ಕೇಳಿ ರಾಜನು ಅದಕ್ಕೆ ಆದರದಿಂದ ನಮಸ್ಕರಿಸಿ ದುಃಖಿಸುವುದನ್ನು ಬಿಟ್ಟು ಸಂತೋಷಗೊಂಡು ತನ್ನ ಮನೆಗೆ ನಡೆದನು. ॥೧೩೪॥

ತದಾ ದುಂದುಭಯೋ ನೇದುಃ ಪುಷ್ಪವೃಷ್ಟಿರಭೂಚ್ಛುಭೇ ।
ರಾಜಾ ಬಭೂವ ಸಂತುಷ್ಟಶ್ಚಂದ್ರೋದಯ ಇವಾಂಬುಧಿಃ ॥೧೩೬॥

ಬ್ರಾಹ್ಮಣೇಭ್ಯಸ್ತದಾ ರಾಜಾ ಪುತ್ರೋತ್ಸವಸಮನ್ವಿತಃ ।
ಹಿರಣ್ಯಗೋಗಜಾಶ್ವಾನಾಂ ದದಾವರ್ಬುದಮಾದರಾತ್ ॥೧೩೭॥

ಉತ್ತಮಾಂಗಸಮುದ್ಭೂತಮೇನಂ ವೀಕ್ಷ್ಯ ಸುತಂ ನೃಪಃ ।
ಉತ್ತಮಾಂಗಜಮಿತ್ಯೇತನ್ನಾಮ ದಿವ್ಯಂ ಚಕಾರ ಸಃ ॥೧೩೮॥

ಜಾತಿಸ್ಮರೋಽಯಂ ಬಾಲ್ಯೇಽಪಿ ನವಬಿಲ್ವದಲೈಃ ಸದಾ ।
ಲಿಂಗಪೂಜಾಂ ಪ್ರಯತ್ನೇನ ಕರೋತಿ ನಿಯಮಾನ್ವಿತಃ ॥೧೩೯॥

ರುದ್ರಾಕ್ಷಮಾಲಾಭರಣೋ ಭಸ್ಮೋದ್ಧೂಲನತತ್ಪರಃ ।
ಶ್ರೀಮತ್ಪಶುಪತೀಶೇತಿ ನಾಮ ದಿವ್ಯಂ ಜಪತ್ಯಯಂ ॥೧೪೦॥

---

ಬಳಿಕ ಆರವತ್ತನೆಯ ಮಾಸವು ಬರಲು ತನ್ನ ಮಹಿಮೆಯಿಂದ ಇವನು ರಾಜನ ಶುದ್ಧವಾದ ಶಿರಸ್ಸಿನಿಂದ ಆವಿರ್ಭವಿಸಿದನು. ॥೧೩೫॥

ದೇವಿಯೇ, ಆಗ ದೇವದುಂದುಭಿಗಳು ಮೊಳಗಿದುವು. ಪುಷ್ಪವೃಷ್ಟಿಯುಂಟಾಯಿತು. ರಾಜನು ಚಂದ್ರೋದಯಕಾಲದಲ್ಲಿ ಸಮುದ್ರದೋಪಾದಿಯಲ್ಲಿ ಸಂತೋಷಭರಿತನಾದನು. ॥೧೩೬॥

ಆಗ ಪುತ್ರೋತ್ಸವದಿಂದ ಸಂತೋಷಗೊಂಡ ರಾಜನು ಬ್ರಾಹ್ಮಣರಿಗೆ ಅಸಂಖ್ಯಾಕವಾದ ಸುವರ್ಣ, ಗೋವು, ಗಜ, ಅಶ್ವ ಇವುಗಳನ್ನು ದಾನಮಾಡಿದನು. ॥೧೩೭॥

ತನ್ನ ಉತ್ತಮಾಂಗವಾದ ಶಿರಸ್ಸಿನಿಂದ ಜನಿಸಿದ ಈ ಪುತ್ರನಿಗೆ ರಾಜನು "ಉತ್ತಮಾಂಗಜ" ಎಂಬ ಹೆಸರನ್ನಿಟ್ಟನು. ॥೧೩೮॥

ಪೂರ್ವಜನ್ಮದ ಸ್ಮರಣೆಯುಳ್ಳ ಇವನು ಬಾಲ್ಯದಿಂದಲೂ ನಿಯಮಬದ್ಧನಾಗಿ ಕೋಮಲವಾದ ಬಿಲ್ವದಲಗಳಿಂದ ಅನವರತವೂ ತಪ್ಪದೇ ಶಿವಲಿಂಗವನ್ನು ಪೂಜಿಸುವನು. ॥೧೩೯॥

ರುದ್ರಾಕ್ಷಮಾಲೆಗಳನ್ನು ಧರಿಸಿ, ಭಸ್ಮವನ್ನು ಲೇಪಿಸಿ ಪಶುಪತಿಯ ದಿವ್ಯವಾದ ನಾಮವನ್ನು ಜಪಿಸುವನು. ॥೧೪೦॥

ಅತ್ಯಾಶ್ಚರ್ಯಕರಂ ಕರ್ಮ ಕ್ರಿಯತೇ ಬಾಲಕ ತ್ವಯಾ ।
ಕಿಮೇತದಿತಿ ತೇನೈವ ಪೃಷ್ಟೋ ರಾಜ್ಞಾಯಮರ್ಭಕಃ ॥೧೪೧॥

ತತೋ ಜಗಾದ ವೃತ್ತಾಂತಂ ಸ್ವಪೂರ್ವಭವಸಂಚಿತಂ ।
ತಚ್ಛ್ರುತ್ವಾ ವಿಸ್ಮಿತೋ ರಾಜಾ ತಮುವಾಚ ಸುತಂ ಪ್ರತಿ ॥೧೪೨॥

ಶಿವಪೂಜಾಪ್ರಭಾವೇನ ಸರ್ವಂ ಜ್ಞಾತಂ ತ್ವಯಾ ಶಿಶೋ ।
ಕೋಽಹಂ ಪೂರ್ವಭವೇ ಸಮ್ಯಗ್ವಿಚಾರ್ಯ ವದ ಸಾದರಂ ॥೧೪೩॥

ಇತಿ ಪೃಷ್ಟಃ ಕ್ಷಣಂ ಧ್ಯಾತ್ವಾ ಬಾಲಕಃ ಸ್ಮಿತಪೂರ್ವಕಂ ।
ಜಗಾದ ಸರ್ವವೃತ್ತಾಂತಂ ತಸ್ಯೈವ ನೃಪತೇಸ್ತದಾ ॥೧೪೪॥

ತವ ಜನ್ಮಾನ್ಯತೀತಾನಿ ಸಂಖ್ಯಾ ತೇಷಾಂ ನ ಶಕ್ಯತೇ ।
ತನ್ನೈವ ಪಾಪಸಂಘೇನ ಬಹುಕುತ್ಸಿತಯೋನಿಷು ॥೧೪೫॥

---

ಬಾಲ್ಯದಲ್ಲಿಯೇ ಶಿವಪ್ರಿಯವಾದ ಆಚಾರಗಳಲ್ಲಿ ನಿರತನಾದ ಬಾಲಕನನ್ನು ನೋಡಿ ರಾಜನು ಅವನನ್ನು ಕುರಿತು “ಅಯ್ಯಾ! ಪುತ್ರನೇ, ಇದೇನು! ಈ ಚಿಕ್ಕ ವಯಸ್ಸಿನಲ್ಲಿಯೇ ನೀನು ಅತ್ಯಾಶ್ಚರ್ಯಕರವಾದ ಕರ್ಮಗಳಲ್ಲಿ ನಿರತನಾಗಿರುವೆಯಲ್ಲ” ಎಂದು ಕೇಳಿದನು. ಅದಕ್ಕೆ ಆ ಹುಡುಗನು ತನ್ನ ಪೂರ್ವಜನ್ಮದ ವೃತ್ತಾಂತವನ್ನು ವಿಸ್ತರಿಸಿ ತಂದೆಗೆ ಹೇಳಲು ಅದನ್ನು ಕೇಳಿ ರಾಜನು ಆಶ್ಚರ್ಯಭರಿತನಾಗಿ ಮಗನನ್ನು ಕುರಿತು ಹೀಗೆಂದನು. ॥೧೪೧-೧೪೨॥

“ಎಲೈ ಶಿಶುವೆ, ನೀನು ಈಶ್ವರಾರಾಧನೆಯ ಮಹಿಮೆಯಿಂದ ಸರ್ವವನ್ನೂ ತಿಳಿದಿರುವೆ. ಆದುದರಿಂದ ನಾನು ಹಿಂದಿನ ಜನ್ಮದಲ್ಲಿ ಯಾರಾಗಿದ್ದೆನು? ಎಂಬುದನ್ನು ಯೋಚಿಸಿ ಹೇಳು.” ॥೧೪೩॥

ತಂದೆಯು ಹೀಗೆಂದು ಕೇಳಲು, ಆ ಬಾಲಕನು, ಕ್ಷಣಕಾಲ ಧ್ಯಾನಮಗ್ನನಾಗಿ ಮಂದಹಾಸವನ್ನು ಬೀರುತ್ತಾ ರಾಜನನ್ನು ಕುರಿತು ಹೀಗೆಂದನು. ॥೧೪೪॥

“ಓ ರಾಜನೇ, ನಿನಗೆ ಈ ಹಿಂದೆ ಅನೇಕ ಜನ್ಮಗಳು ಕಳೆದುವು. ಅವುಗಳನ್ನು ಲೆಕ್ಕಿಸುವುದೇ ಅಸಾಧ್ಯವಾಗಿರುವುದು. ನೀನು ಸಂಗ್ರಹಿಸಿದ ಪಾಪರಾಶಿಗಳಿಂದಲೇ ನೀನು ಅತ್ಯಂತ ಹೀನವಾದ ಯೋನಿಗಳಲ್ಲಿ ಜನ್ಮವನ್ನೆತ್ತಿದೆ. ॥೧೪೫॥

ಉತ್ಪತ್ತಿರಭವತ್ಪೂರ್ವಮತಿದುಃಖಭಯಾವಹಃ ।
ತವ ಮೂತ್ರಪುರೀಷಾಢ್ಯಗರ್ಭೇಷು ಬಹುಧಾ ಸ್ಥಿತಿಃ ॥೧೪೬॥

ಸಾರಮೇಯೋದರೇ ಪೂರ್ವಂ ತವ ಜನ್ಮ ಸಹಸ್ರಧಾ ।
ಬಭೂವ ಜನ್ಮನಾ ತೇನ ದುಃಖಂ ಭುಕ್ತಂ ತ್ವಯಾ ಸದಾ ॥೧೪೭॥

ತದನಂತರಮೇವಾಭೂತ್ತವ ರಾಸಭಜನ್ಮನಾಂ ।
ಅತಿದುಃಖಪ್ರದಂ ನಿತ್ಯಂ ಸಾರ್ಧಕೋಟಿಚತುಷ್ಟಯಂ ॥೬೪೮॥

ತತಃ ಕೋಟ್ಯಷ್ಟಕಂ ಜಾತಂ ತವ ಕುಕ್ಕುಟಜನ್ಮನಾಂ ।
ತತಃ ಕೋಟಿಶತಂ ಜಾತಮರಣ್ಯೇ ವೃಕಜನ್ಮನಾಂ ॥೧೪೯॥

ಸಾರ್ಧಕೋಟ್ಯಷ್ಟಕಂ ಜಾತಂ ತತೋ ಮಹಿಷಜನ್ಮನಾಂ ।
ತತಃ ಕೋಟ್ಯಷ್ಟಕಂ ಜಾತಂ ಸಪಾದಂ ಸರ್ಪಜನ್ಮನಾಂ ॥೧೫೦॥

---

ಈ ರೀತಿಯಲ್ಲಿ ಅಸಂಖ್ಯಾಕವಾದ ಜನ್ಮಗಳಾದುವು. ಅತ್ಯಂತ ದುಃಖಕರವೂ ಅಸಹ್ಯವೂ ಆದ ಮೂತ್ರಪುರೀಷಗಳಿಂದ ತುಂಬಿದ ಗರ್ಭಗಳಲ್ಲಿ ನೀನು ಬಹುಕಾಲ ವಾಸವಾಗಿದ್ದೆ. ||೧೪೬||

ಈ ಹಿಂದೆ ನೀನು ಅನೇಕ ಬಾರಿ ನಾಯಿಯ ಜನ್ಮವನ್ನೆತ್ತಿದ್ದೆ. ಆಗ ನೀನು ಅಪಾರವಾದ ದುಃಖವನ್ನನುಭವಿಸಿದೆ. ||೧೪೭||

ಅದಾದ ಬಳಿಕ ಒಂದೂವರೆಕೋಟಿ ಜನ್ಮಗಳಲ್ಲಿ ನೀನು ಕತ್ತೆಯ ಜನ್ಮವನ್ನೆತ್ತಿ ಅತ್ಯಂತ ದುಃಖವನ್ನನುಭವಿಸಿದೆ. ||೧೪೮||

ತರುವಾಯ ಎಂಟುಕೋಟಿ ಜನ್ಮಗಳಲ್ಲಿ ಕೋಳಿಯ ಜನ್ಮವನ್ನೆತ್ತಿ ಹಾಗೆಯೇ ನೂರುಕೋಟಿ ಜನ್ಮಗಳಲ್ಲಿ ತೋಳದ ಜನ್ಮತಾಳಿ ಅರಣ್ಯದಲ್ಲಿ ವಾಸವಾಗಿದ್ದೆ. ||೧೪೯||

ಅನಂತರ ಒಂದೂವರೆಕೋಟಿ ಬಾರಿ ಮಹಿಷಜನ್ಮವನ್ನೆತ್ತಿ ಬಳಿಕ, ಎಂಟೂಕಾಲುಕೋಟಿ ಜನ್ಮಗಳಲ್ಲಿ ಸರ್ಪವಾಗಿ ಜನಿಸಿದ್ದೆ. ||೧೫೦||

ತತಃ ಶತಾಷ್ಟಕಂ ಜಾತಂ ಸಪಾದಂ ಕಾಕಜನ್ಮನಾಂ ।
ತತೋ ದಶಾಯುತಂ ಜಾತಂ ಸಪಾದಂ ಗೃಧ್ರಜನ್ಮನಾಂ ॥೧೫೧॥

ತತಃ ಶತಾಯುತಂ ಜಾತಮುಲೂಕಾಧಮಜನ್ಮನಾಂ ।
ತತಃ ಕೋಟ್ಯಷ್ಟಕಂ ಜಾತಂ ಸಾರ್ಧಂತೇ ಶುಕಜನ್ಮನಾಂ ॥೧೫೨॥

ತತಃ ಸಾರ್ಧಾರ್ಬುದಂ ಜಾತಮಾಖುಪಾನಾಂ ಚ ಜನ್ಮನಾಂ ।
ತತೋ ಲಕ್ಷಾಯುತಂ ಜಾತಂ ಸಾರ್ಧಂ ಸರಟಜನ್ಮನಾಂ ॥೧೫೩॥

ತತೋ ಲಕ್ಷಾಯುತಂ ಜಾತಂ ಮತ್ಸ್ಯಮಂಡೂಕಜನ್ಮನಾಂ ।
ಪಂಚಾಶಲ್ಲಕ್ಷಮಭವನ್ಮಾಘಮಾಜನ್ಮನಾಂ ತವ ॥೧೫೪॥

ತತೋ ಲಕ್ಷಾಷ್ಟಕಮಭೂದ್ಘೂಕಬಂಭರಜನ್ಮನಾಂ ।
ಸಾರ್ಧಕೋಟಿದ್ವಯಂ ಜಾತಂ ತತಸ್ತೇ ದಂಶಜನ್ಮನಾಂ ॥೧೫೫॥

ಸಾರ್ಧಲಕ್ಷತ್ರಯಂ ಜಾತಂ ತತಸ್ತೇ ಮೇಷಜನ್ಮನಾಂ ।
ತತಃ ಕೋಟಿಶತಂ ಜಾತಂ ತವ ರಾಜಿಲಜನ್ಮನಾಂ ॥೧೫೬॥

---

ತರುವಾಯ ಎಂಟುನೂರು ಐವತ್ತು ಬಾರಿ ಕಾಗೆಯಾಗಿ ಹುಟ್ಟಿ ಬಳಿಕ, ಹನ್ನೆರಡುವರೆ ಅಯುತಜನ್ಮಗಳಲ್ಲಿ ಹದ್ದಿನ ಜನ್ಮವನ್ನೆತ್ತಿದೆ. ॥೧೫೧॥

ಆದಾದ ಬಳಿಕ ನೂರು ಅಯುತ ಜನ್ಮಗಳಲ್ಲಿ ಹೀನವಾದ ಗೂಬೆಯ ಜನ್ಮವನ್ನೆತ್ತಿ ತರುವಾಯ ಎಂಟೂವರೆಕೋಟಿ ಜನ್ಮಗಳಲ್ಲಿ ಗಿಳಿಯಾಗಿ ಹುಟ್ಟಿದೆ. ॥೧೫೨॥

ಹಾಗೆಯೇ ಒಂದೂವರೆ ಅರ್ಬುದ ಜನ್ಮಗಳಲ್ಲಿ ಇಲಿಯಾಗಿ ಜನಿಸಿ ಮತ್ತೆ ಗಿಡಗವಾಗಿ ಹುಟ್ಟಿ, ತರುವಾಯ ಒಂದೂವರೆಲಕ್ಷ ಅಯುತ ಜನ್ಮಗಳಲ್ಲಿ ಸರಟಜನ್ಮ (ಪೋತಿಕೇತ ಎಂದೆನ್ನುವರು) ವನ್ನೆತ್ತಿ, ಲಕ್ಷ ಅಯುತ ಜನ್ಮಗಳಲ್ಲಿ ಮೀನು, ಕಪ್ಪೆಗಳಾಗಿ ಜನಿಸಿ, ಐವತ್ತುಲಕ್ಷ ಬಾರಿ ಮಾಘದಹಕ್ಕಿಗಳ ಜನ್ಮವನ್ನೆತ್ತಿ, ಬಳಿಕ ಎಂಟುಲಕ್ಷ ಬಾರಿ ಗೂಬೆಯ ಜನ್ಮಪಡೆದು ಒಂದೂವರೆಕೋಟಿ ಸಲ ನೊಣಗಳಾಗಿ ಹುಟ್ಟಿದೆ. ॥೧೫೩-೧೫೪-೧೫೫॥

ಬಳಿಕ, ನಿನಗೆ, ಮೂರುವರೆಲಕ್ಷ ಬಾರಿ ಆಡಿನ ಜನ್ಮವುಂಟಾಯಿತು. ಆದಾದ ಮೇಲೆ ನೂರುಕೋಟಿ ಜನ್ಮಗಳಲ್ಲಿ ಹಾವಾಗಿ ಜನ್ಮವನ್ನೆತ್ತಿದೆ. ॥೧೫೬॥

ಸಾರ್ಧಕೋಟಿದ್ವಯಂ ಜಾತಂ ತತಸ್ತೇ ದಂತಿಜನ್ಮನಾಂ।
ಸಾರ್ಧಕೋಟಿತ್ರಯಂ ಜಾತಂ ತತಸ್ತೇ ಬರ್ಹಿಜನ್ಮನಾಂ ॥೧೫೭॥

ಜನ್ಮಸ್ವೇತೇಷ್ವಪಿ ಸದಾ ಭುಕ್ತಂ ದುಃಖಮನೇಕಧಾ।
ಏತಜ್ಜನ್ಮಾವ್ಯವಹಿತಂ ಜನ್ಮ ಪೂರ್ವಂ ಯದಸ್ತಿ ತೇ ॥೧೫೮॥

ತನ್ಮಾಯೂರಮಭೂಜ್ಜನ್ಮ ಬಹುಬರ್ಹಿವಿರಾಜಿತಂ।
ತ್ವಯಾ ಮಯೂರದೇಹೇನ ಶ್ರೀಶೈಲೇ ಸಂಸ್ಥಿತಂ ಪುರಾ ॥೧೫೯॥

ದಿವ್ಯಲಿಂಗಸಮಾಕ್ರಾಂತೇ ಶಿವಭಕ್ತವಿರಾಜಿತೇ।
ಪೂರ್ವಂ ಮಯೂರದೇಹೇನ ತ್ವಯಾ ಲಿಂಗಸ್ಯ ಸನ್ನಿಧೌ ॥೧೬೦॥

ನೃತ್ಯಂ ಕೃತಂ ತ್ವಯಾ ಸಮ್ಯಕ್ಶಿವಸಂತೋಷಕಾರಣಂ।
ತೇನ ಪುಣ್ಯಪ್ರಭಾವೇನ ಶ್ರೀಶೈಲೇ ವಸತಿಸ್ತವ ॥೧೬೧॥

ಬಭೂವ ಭಾಗ್ಯದಾ ಭೂಯೋ ಜನ್ಮಾಂತೇ ಭೋಗಕಾರಣಂ।
ಮಯೂರಜನ್ಮನಾನ್ಯೇನ ಮಮ ಸೇವಾಂ ಕರೋತ್ಯಯಂ ॥೧೬೨॥

---

ಮುಂದೆ, ಎರಡೂವರೆಕೋಟಿ ಜನ್ಮಗಳಲ್ಲಿ ಆನೆಯಾಗಿ ಹುಟ್ಟಿದ ಬಳಿಕ, ಮೂರುವರೆಕೋಟಿ ಜನ್ಮಗಳಲ್ಲಿ ನವಿಲಾಗಿ ಜನಿಸಿದೆ. ॥೧೫೭॥

ಈ ಸಕಲ ಜನ್ಮಗಳಲ್ಲಿಯೂ, ನೀನು ನಾನಾ ಬಗೆಯಿಂದ ದುಃಖವನ್ನನುಭವಿಸಿದೆ. ಈ ಜನ್ಮಕ್ಕಿಂತ, ಹಿಂದಿನ ಜನ್ಮವು, ನವಿಲಿನ ಜನ್ಮವಾಗಿದ್ದಿತು. ಆಗ ನವಿಲಿನ ದೇಹವನ್ನು ಧರಿಸಿದ ನೀನು, ಶ್ರೀಶೈಲವೆಂಬ ಕ್ಷೇತ್ರದಲ್ಲಿ ವಾಸವಾಗಿದ್ದೆ. ॥೧೫೮-೧೫೯॥

ಇದಕ್ಕಿಂತಲೂ, ಹಿಂದಿನ ಜನ್ಮದಲ್ಲಿ, ನೀನು ಮಯೂರ ಜನ್ಮವನ್ನೆತ್ತಿದಾಗ, ಸುತ್ತಮುತ್ತಲೂ ಅನೇಕ ಚಿಕ್ಕಚಿಕ್ಕ ಸುಂದರವಾದ ಲಿಂಗಗಳಿಂದ ಕೂಡಿರುವ ಶಿವಲಿಂಗದ ಸನ್ನಿಧಿಯಲ್ಲಿ ನೃತ್ಯವನ್ನಭಿನಯಿಸುತ್ತಿದ್ದೆ. ಈಶ್ವರನನ್ನು ಸಂತೋಷಗೊಳಿಸಿದೆ. ಅದರಿಂದುಂಟಾದ ಪುಣ್ಯದ ಮಹಿಮೆಯಿಂದ, ಅದರ ಮುಂದಿನ ಜನ್ಮದಲ್ಲಿ ನಿನಗೆ ಪುಣ್ಯಕರವಾದ ಶ್ರೀಶೈಲಕ್ಷೇತ್ರದಲ್ಲಿ ವಾಸವೊದಗಿತು. ॥೧೬೦-೧೬೧॥

ಆ ಹಿಂದಿನ ಜನ್ಮದಲ್ಲಿ ನೀನು ಮಾಡಿದ ನೃತ್ಯಸೇವೆಯಿಂದ ಸಂತುಷ್ಟನಾದ

ತತೋ ರಾಜ್ಯಾಧಿಪತ್ಯಂ ಚ ಭವತ್ವಸ್ಯ ಸುಖಪ್ರದಂ।
ಭುಕ್ತ್ವಾ ಮನುಷ್ಯದೇಹೇನ ಭೋಗಮಂತೇ ತತಃ ಪರಂ ॥೧೬೩॥

ಮಾಂ ಪ್ರಯಾತ್ವಿತಿ ದೇವೇಶೋ ದದೌ ಪೂರ್ವಂ ವರಂ ಶಿವಃ।
ತತೋ ಜನ್ಮಾಭವತ್ಪೂರ್ವಂ ಕಸ್ಮಿಂಶ್ಚಿದ್ವಿಪಿನಾಂತರೇ ॥೧೬೪॥

ಮಯೂರಸ್ಯ ತತೋ ದೈವಾಚ್ಛ್ರೀಶೈಲೇಽಪಿ ಸ್ಥಿತಂ ತ್ವಯಾ।
ತಸ್ಮಿಂಚ್ಛೈಲವರೇ ರಮ್ಯೇ ತ್ರಿಪುರಾಂತಕಸಂಜ್ಞಿಕಂ ॥೧೬೫॥

ಲಿಂಕಮೇಕಮಭೂದ್ದಿವ್ಯಂ ಭಾನುತಪ್ತಮನಾವೃತಂ।
ತತ್ರ ನಿತ್ಯಂ ಸ್ವಪಿಚ್ಛೇನ ಕೃತಮುಷ್ಣನಿವಾರಣಂ ॥೧೬೬॥

ಸಾಯಂ ತತ್ರೈವ ನಿಯತಂ ನರ್ತನಂ ಕ್ರಿಯತೇ ತ್ವಯಾ।
ಏವಂ ಮಾಸಶತಂ ಸಾರ್ಧಂ ಸಂಶ್ರಿತ್ಯನಿಯತಂ ತ್ವಯಾ ॥೧೬೭॥

---

ಶಿವನು ನಿನಗೆ "ಈ ಪಕ್ಷಿಯು, ಇನ್ನೊಂದು ಜನ್ಮದಲ್ಲಿಯೂ ಮಯೂರವಾಗಿಯೇ ಜನಿಸಿ, ನನ್ನ ಸೇವೆಯನ್ನು ಕೈಗೊಳ್ಳಲಿ. ||೧೬೨||

ತರುವಾಯ ಮುಂದಿನ ಜನ್ಮದಲ್ಲಿ, ಮನುಷ್ಯದೇಹವನ್ನು ಪಡೆದು ಸುಖಪ್ರದವಾದ ರಾಜ್ಯದ ಆಧಿಪತ್ಯವು ಇದಕ್ಕೆ ಲಭಿಸಲಿ. ಆ ಜನ್ಮವು ಕಳೆದ ಬಳಿಕ, ಈ ಪಕ್ಷಿಯು ನನ್ನ ಸನ್ನಿಧಿಯನ್ನು ಸೇರಲಿ." ಹೀಗೆಂದು ವರವನ್ನಿತ್ತನು. ||೧೬೩||

ಅದರಂತೆ, ನೀನು ಒಂದಾನೊಂದು ಘೋರವಾದ ಅರಣ್ಯದಲ್ಲಿ ನವಿಲಾಗಿ ಹುಟ್ಟಿದೆ. ದೈವಸಹಾಯದಿಂದ ಆಗ ನಿನಗೆ ಶ್ರೀಶೈಲಕ್ಷೇತ್ರವಾಸವು ಲಭಿಸಿತು. ||೧೬೪||

ರಮ್ಯವಾದ ಆ ಶ್ರೀಶೈಲಕ್ಷೇತ್ರದಲ್ಲಿ, ತ್ರಿಪುರಾಂತಕನೆಂಬ ಹೆಸರುಳ್ಳ ದಿವ್ಯವಾದ ಒಂದಾನೊಂದು ಶಿವಲಿಂಗವಿದ್ದಿತು. ಅದು ಸೂರ್ಯನ ಪ್ರಖರವಾದ ಕಿರಣಗಳಿಂದ ಕಾಯುತ್ತಿದ್ದಿತು. ನವಿಲಿನ ದೇಹವನ್ನು ಧರಿಸಿದ ನೀನು ನಿತ್ಯವೂ, ನಿನ್ನ ಗರಿಗಳಿಂದ ಶಿವಲಿಂಗವನ್ನು ಮುಚ್ಚಿ ಅದನ್ನು ತಂಪಾಗಿರಿಸುತ್ತಿದ್ದೆ. ||೧೬೫-೧೬೬||

ಪ್ರತಿದಿನವೂ ಸಂಧ್ಯಾಕಾಲದಲ್ಲಿ ನೀನು, ಶಿವಲಿಂಗಸನ್ನಿಧಿಯಲ್ಲಿ ನೃತ್ಯವನ್ನಭಿಯಿಸುವೆ. ಈ ರೀತಿಯಲ್ಲಿ ನೀನು ಪೂರ್ವಜನ್ಮದಲ್ಲಿ ಲಿಂಗಸನ್ನಿಧಿಯಲ್ಲಿ ನೂರೈವತ್ತು ತಿಂಗಳುಗಳ ಕಾಲ ಸ್ವೇಚ್ಛೆಯಿಂದ ವಿಹರಿಸಿದೆ. ||೧೬೭||

ಸ್ವೇಚ್ಛಯೈವ ನರಾಧೀಶ ಸಂಸ್ಥಿತಂ ಪೂರ್ವಜನ್ಮನಿ ।
ತತಃ ಕಾಲಾಂತರೇ ರಾಜನ್ಶ್ರೀಶೈಲಾನ್ಯಭುವಿ ತ್ವಯಾ ॥೧೬೮॥

ಶರೀರಂ ತ್ಯಕ್ತಮಮಲಂ ಪವಿತ್ರಂ ಶಿವಸೇವಯಾ ।
ತದಾ ದೇವವರೋತ್ಸಷ್ಟಾ ಪುಷ್ಪವೃಷ್ಟಿರಭೂನ್ನೃಪ ॥೧೬೯॥

ವಿಮಾನವರಮಾರುಹ್ಯ ದೇವೇಂದ್ರೋಽಪಿ ಸಮಾಗತಃ ।
ದೇವೇಂದ್ರೇಣ ತದಾ ದತ್ತಂ ವಿಮಾನಂ ತುಭ್ಯಮುತ್ತಮಂ ॥೧೭೦॥

ತದಾರುಹ್ಯ ಸ್ವರ್ಗಲೋಕೇ ಗತಂ ತೇನ ಸಹ ತ್ವಯಾ ।
ತತ್ರ ಮಂದಾರಸಂವೀತಂ ಕ್ರೀಡಾಸ್ಥಾನಮಭೂತ್ತದಾ ॥೧೭೧॥

ತತ್ರೈವ ತವ ತೋಷಾರ್ಥಂ ರಂಭಾನೃತ್ಯಂ ಚಕಾರ ಚ ।
ದೇವೇಂದ್ರಃ ಪ್ರತ್ಯಹಂ ತುಭ್ಯಂ ಚಕಾರಾಭ್ಯರ್ಚನಂ ಮುದಾ॥೧೭೨॥

ತದನ್ಯೇಽಪಿ ಸುರಾ ನಿತ್ಯಂ ಪೂಜಾಂ ಕುರ್ವಂತಿ ಸಾದರಂ ।
ಕಲ್ಪವೃಕ್ಷೈಶ್ಚ ಪುಷ್ಪಾಣಿ ಸುಗಂಧೀನ್ಯಮಲಾನಿ ಚ ॥೧೭೩॥

---

ಬಳಿಕ ಸ್ವಲ್ಪಕಾಲವು ಕಳೆಯಲು ನೀನು ಶ್ರೀಶೈಲಕ್ಷೇತ್ರವನ್ನು ಬಿಟ್ಟು ಬೇರೊಂದು ಸ್ಥಳದಲ್ಲಿ ಈಶ್ವರಸೇವೆಯಿಂದ ಪವಿತ್ರವಾದ ನಿನ್ನ ಶರೀರವನ್ನು ತ್ಯಜಿಸಿದೆ. ॥೧೬೮॥

ಓ, ರಾಜನೇ! ಆಗ, ದೇವತೆಗಳು ಹೂವುಗಳನ್ನು ಮಳೆಗರೆದರು. ದೇವೇಂದ್ರನು, ವಿಮಾನವನ್ನೇರಿ ಬಂದು ನಿನ್ನ ಬಳಿಯಲ್ಲಿ ಶ್ರೇಷ್ಠವಾದ ಒಂದು ವಿಮಾನವನ್ನು ತಂದಿರಿಸಿದನು. ಅದನ್ನು ಏರಿ ನೀನು, ದೇವೇಂದ್ರನೊಂದಿಗೆ ಸ್ವರ್ಗಲೋಕವನ್ನು ಸೇರಿದೆ. ಅಲ್ಲಿ ಮಂದಾರವೃಕ್ಷಗಳಿಂದ ಶೋಭಿಸುತ್ತಿದ್ದ ಒಂದಾನೊಂದು ಉದ್ಯಾನವನವಿದ್ದಿತು. ॥೧೬೯-೧೭೦-೧೭೧॥

ಅಲ್ಲಿ, ರಂಭೆಯು ನಿನ್ನನ್ನು ಸಂತೋಷಗೊಳಿಸುವುದಕ್ಕೋಸ್ಕರ ನೃತ್ಯವನ್ನಭಿನಯಿಸಿದಳು. ದೇವೇಂದ್ರನು ಪ್ರತಿದಿನವೂ ನಿನ್ನನ್ನು ಪೂಜಿಸುತ್ತಿದ್ದನು. ॥೧೭೨॥

ಅಲ್ಲದೇ ಇನ್ನಿತರ ದೇವತೆಗಳೂ ಸಹ ನಿತ್ಯವೂ ನಿನ್ನನ್ನು ಆದರದಿಂದ ಪೂಜಿಸಿದರು. ಕಲ್ಪವೃಕ್ಷಗಳು ಸುಗಂಧಭರಿತವಾದ ಹೂವುಗಳನ್ನು ತಾವಾಗಿಯೇ ತಂದು ಆದರದಿಂದ ನಿನಗೆ ಅರ್ಪಿಸಿದುವು. ॥೧೭೩॥

ಸ್ವತ ಏವ ಸಮಾನೀಯ ದತ್ತಾನಿ ಪ್ರತ್ಯಹಂ ಮುದಾ ।
ಏವಮೇವಾನಿಶಂ ತತ್ರ ಮೋದಮಾನೇನ ಹಿ ತ್ವಯಾ ॥೧೭೪॥

ವತ್ಸರಾಯುತಪರ್ಯಂತಂ ಸಂತೋಷೇಣ ಸ್ಥಿತಂ ಪುರಾ ।
ತತೋ ಭೂಚಕ್ರನಾಥಸ್ಯ ಪ್ರೋದ್ಭೂತಮುದರೇ ತ್ವಯಾ ॥೧೭೫॥

ಮಹದೈಶ್ವರ್ಯಮನಿಶಂ ಭುಕ್ತಮೀಶಪ್ರಸಾದತಃ ।
ಶಿವಸ್ಯೈವ ಪ್ರಸಾದೇನ ತವ ಶೋಕೋಪಹಾರಕಃ ॥೧೭೬॥

ಉತ್ತಮಾಂಗಾದಹಂ ಜಾತೋ ವಂಶವೃದ್ಧಿಕರೋ ನೃಪ ।
ಇದಂ ಶಿವಪ್ರಸಾದೇನ ಮಯಾಜ್ಞಾತಂ ನೃಪಾಧಿಪ ॥೧೭೭॥

ಯಥಾಜ್ಞಾತಂ ತಥೈವೋಕ್ತಂ ವಿಪರೀತಂ ನ ಕಿಂಚನ ।
ತವಾಸ್ತ್ಯಗಣಿತಂ ದ್ರವ್ಯಂ ಸಂತಿ ರತ್ನಾನಿ ಭೂಪತೇ ॥೧೭೮॥

ಶಿವಾಲಯಸ್ಯ ನಿರ್ಮಾಣಂ ಕುರು ರತ್ನವಿಜೃಂಭಿತಂ ।
ಕುರು ಬಿಲ್ವವನಂ ರಮ್ಯಂ ಶೈವಾನ್ಪೋಷಯ ಸರ್ವದಾ ॥೧೭೯॥

---

ಇದೇ ರೀತಿಯಲ್ಲಿ ನೀನು ಅಲ್ಲಿ ಹತ್ತುಸಹಸ್ರ ವರ್ಷಗಳ ಪರ್ಯಂತ ಸಂತೋಷದಿಂದ ವಾಸವಾಗಿದ್ದೆ. ||೧೭೪||

ಬಳಿಕ ಭೂಲೋಕದಲ್ಲಿ ಒಬ್ಬಾನೊಬ್ಬ ಚಕ್ರವರ್ತಿಯ ಉದರದಲ್ಲಿ ನೀನು ಜನಿಸಿದೆ. ಈಶ್ವರಾನುಗ್ರಹದಿಂದ ರಾಜಗೃಹದಲ್ಲಿ ನಿರಂತರವೂ ಹೇರಳವಾದ ಸಂಪತ್ತನ್ನು ನೀನು ಉಪಭೋಗಿಸಿದೆ. ||೧೭೫||

ಈಶ್ವರಾನುಗ್ರಹದಿಂದಲೇ ನಿನಗುಂಟಾದ ಪುತ್ರಶೋಕವನ್ನು ಹೋಗಲಾಡಿಸುವ ಮತ್ತು ನಿನ್ನ ವಂಶವನ್ನು ವೃದ್ಧಿಗೊಳಿಸುವ ನಿನ್ನ ದಿವ್ಯದೇಹದಿಂದ ನಾನು ಜನಿಸಿದೆನು. ||೧೭೬||

ಓ ರಾಜೇಂದ್ರನೇ, ಈ ಜನ್ಮಾಂತರವೃತ್ತಾಂತವನ್ನು ನಾನು ಈಶ್ವರಾನುಗ್ರಹದಿಂದ ತಿಳಿದುಕೊಂಡಿರುವೆನು. ||೧೭೭||

ನಾನು ಅದನ್ನು ಹೇಗೆ ತಿಳಿದಿರುವೆನೋ ಹಾಗೆಯೇ ನಿನಗೆ ಹೇಳಿರುವೆನು. ಅದಕ್ಕೆ ವಿಪರೀತವಾಗಿ ಏನನ್ನೂ ಹೇಳಿರುವುದಿಲ್ಲ. ಎಲೈ ರಾಜನೇ, ನಿನಗೆ ಅಪರಿಮಿತವಾದ ದ್ರವ್ಯವಿರುವುದು. ಅಗಣಿತವಾದ ರತ್ನಗಳಿರುವುವು. ಅವುಗಳ

ಶೃಣು ಶೈವಪುರಾಣಾನಿ ಸರ್ವದಾ ನೃಪಸತ್ತಮ ।
ಕುರು ಯತ್ನೇನ ಸಂಪ್ರೀತೋ ಲಿಂಗಪೂಜಾಮಹರ್ನಿಶಂ ॥೧೮೦॥

ಪಂಚಾಕ್ಷರಜಪಂ ನಿತ್ಯಂ ಕುರು ಪಾಪೌಘನಾಶನಂ ।
ಬಿಲ್ವಪತ್ರೈರ್ಮಹಾದೇವಮರ್ಚಯಸ್ವಾನಿಶಂ ಮುದಾ ॥೧೮೧॥

ಕುರು ಯತ್ನೇನ ಸತತಂ ಲಿಂಗಸ್ಯೈವ ನಿರೀಕ್ಷಣಂ ।
ಭಸ್ಮಧಾರಣಸಂಯುಕ್ತಃ ಕುರು ರುದ್ರಾಕ್ಷಧಾರಣಂ ॥೧೮೨॥

ಗೃಹಾಣ ಮೋಕ್ಷದಾಂ ನಿತ್ಯಾಂ ಶೈವದೀಕ್ಷಾಮಘಾಪಹಾಂ ।
ಶಿವಪ್ರೀತ್ಯರ್ಥಮನಿಶಂ ವನೇ ಪಂಚಾಗ್ನಿಮಧ್ಯಗಃ ॥೧೮೩॥

ಶಿವಪ್ರಸಾದಪರ್ಯಂತಂ ತಪಃ ಕುರು ನೃಪೋತ್ತಮ ।
ಪ್ರಸನ್ನೇ ಸತಿ ಗೌರೀಶೇ ಕಾಶೀಪ್ರಾಪ್ತಿರ್ಭವಿಷ್ಯತಿ ॥೧೮೪॥

---

ಸಹಾಯದಿಂದ ರತ್ನಖಚಿತವಾದ ಶಿವಾಲಯವನ್ನು ನಿರ್ಮಿಸು. ಸುಂದರವಾದ ಬಿಲ್ವವನವನ್ನು ಕಲ್ಪಿಸು. ನಿರಂತರವೂ ಈಶ್ವರಭಕ್ತರನ್ನು ಪೋಷಿಸು. ॥೧೭೮-೧೭೯॥

ಅನವರತವೂ ಶಿವಮಹಿಮೆಯನ್ನು ತಿಳಿಯಪಡಿಸುವ ಪುರಾಣಗಳನ್ನು ಕೇಳು. ಹಗಲಿರುಳೂ ಶಿವಲಿಂಗವನ್ನು ತಪ್ಪದೆ ಪೂಜಿಸು. ॥೧೮೦॥

ಪಾಪರಾಶಿಗಳನ್ನು ನಾಶಗೊಳಿಸುವ ಶಿವಪಂಚಾಕ್ಷರಿಯನ್ನು ಪ್ರತಿದಿನವೂ ಜಪಿಸು. ಬಿಲ್ವಪತ್ರೆಗಳಿಂದ ಶಿವನನ್ನು ಅರ್ಚಿಸು. ॥೧೮೧॥

ನಿರಂತರವೂ ಪ್ರಯತ್ನಪೂರ್ವಕವಾಗಿ ಶಿವಲಿಂಗವನ್ನೇ ಸಂದರ್ಶಿಸು. ಭಸ್ಮವನ್ನೂ ಮತ್ತು ರುದ್ರಾಕ್ಷಮಾಲೆಗಳನ್ನೂ ಧರಿಸು. ॥೧೮೨॥

ಎಲೈ ನೃಪಶ್ರೇಷ್ಠನೇ, ಮೋಕ್ಷಪ್ರದವೂ, ಪಾಪನಾಶಕರವೂ ಆದ ಶೈವದೀಕ್ಷೆಯನ್ನೂ ಸ್ವೀಕರಿಸಿ ಅರಣ್ಯಕ್ಕೆ ತೆರಳಿ ಅಲ್ಲಿ ಶಿವನ ಅನುಗ್ರಹವು ಲಭಿಸುವ ವರೆಗೂ ಪಂಚಾಗ್ನಿಗಳ ನಡುವೆನಿಂತು ತಪಸ್ಸನ್ನಾಚರಿಸು. ತಪಸ್ಸಿನಿಂದ ಶಿವನು ಪ್ರಸನ್ನನಾದರೆ ಆಗ ಕಾಶೀಕ್ಷೇತ್ರದಲ್ಲಿ ವಾಸಮಾಡುವ ಸುಯೋಗವು ನಿನಗೆ ಲಭಿಸುವುದು. ॥೧೮೩-೧೮೪॥

ಕಾಶೀಪ್ರಾಪ್ತ್ಯಾ ನರಾಧೀಶ ಮೋಕ್ಷಪ್ರಾಪ್ತಿರ್ಭವಿಷ್ಯತಿ ।
ಕರ್ತವ್ಯಮತಿಯತ್ನೇನ ಮಯಾ ರಾಜ್ಯಸ್ಯ ಪಾಲನಂ ॥೧೮೫॥

ನ ರಾಜ್ಯವಿಷಯೇ ದುಃಖಂ ತ್ವಯಾ ಕಾರ್ಯಂ ನರಾಧಿಪ ।
ತವ ವೃದ್ಧಶರೀರಸ್ಯ ನಾರ್ಹಾ ತೂಷ್ಣೀಮವಸ್ಥಿತಿಃ ॥೧೮೬॥

ಸರ್ವಭಾವೇನ ಸತತಂ ಕುರು ಶಂಕರಪೂಜನಂ ।
ಶಂಕರಂ ಶಂಕರಂ ನಿತ್ಯಂ ನಿಃಶಂಕಂ ಸಮುಪಾಶ್ರಯ ॥೧೮೭॥

ಶಂಕರಸ್ತಾರಕೋ ನೂನಂ ಭವಿಷ್ಯತಿ ನ ಸಂಶಯಃ ॥೧೮೮॥

॥ ಬ್ರಹ್ಮೋವಾಚ ॥

ಇತ್ಯೇತದ್ವಚನಂ ಶ್ರುತ್ವಾ ಸ ಭೂಪಸ್ತದನಂತರಂ ।
ಶಿವಲಿಂಗಾಲಯಂ ಚಕ್ರೇ ರತ್ನಸ್ತಂಭವಿರಾಜಿತಂ ॥೧೮೯॥

ಹೇಮಪ್ರಕಾರಮತುಲಂ ಶಿವಲಿಂಗಾರ್ಚಕೋ ನೃಪಃ ।
ಶಿವಲಿಂಗಾಲಯಸ್ಯಾಂತೇ ಚಕಾರೋನ್ನತಮಾದರಾತ್ ॥೧೯೦॥

---

ಕಾಶೀಕ್ಷೇತ್ರದಲ್ಲಿ ವಾಸಿಸುವುದರಿಂದ ಮೋಕ್ಷವುಂಟಾಗುವುದು. ನಾನು ಆಸಕ್ತಿಯಿಂದ ರಾಜ್ಯವನ್ನು ಗಳಿಸುವೆನು. ॥೧೮೫॥

ಈ ರಾಜ್ಯದ ವಿಷಯದಲ್ಲಿ ಸ್ವಲ್ಪವೂ ದುಃಖಗೊಳ್ಳಬೇಡ. ಮುದಿತನದಿಂದ ಜರ್ಜರಿತವಾದ ದೇಹವುಳ್ಳ ನಿನಗೆ ಈರೀತಿಯಲ್ಲಿ ಸುಮ್ಮನೆ ಕುಳಿತುಕೊಳ್ಳುವುದುಚಿತವಲ್ಲ. ॥೧೮೬॥

ಎಲ್ಲಾ ವಿಧಿಗಳಿಂದಲೂ ಅನವರತವೂ ಶಿವಪೂಜೆಯನ್ನು ಮಾಡು. ಸುಖಕರನಾದ ಶಿವನನ್ನು ಮೊರೆಹೋಗು. ॥೧೮೭॥

ಶಂಕರನೇ ಸಂಸಾರತಾರಕನಾಗುವನು ಇದರಲ್ಲಿ ಸಂಶಯವಿರುವುದಿಲ್ಲ." ॥೧೮೮॥

ಶಿಶುವಿನ ಆ ಮಾತನ್ನು ಕೇಳಿ ರಾಜನು ರತ್ನಖಚಿತವಾದ ಕಂಬಗಳಿಂದ ಶೋಭಿಸುತ್ತಿದ್ದ ಒಂದು ಶಿವದೇವಾಲಯವನ್ನು ಕೂಡಲೇ ಕಟ್ಟಿಸಿದನು. ॥೧೮೯॥

ರಾಜನು ಆ ಶಿವದೇವಾಲಯದ ಸುತ್ತಲೂ ಸುವರ್ಣಖಚಿತವಾದ ಉನ್ನತವಾದ ಕೋಟೆಯನ್ನು ನಿರ್ಮಿಸಿದನು. ॥೧೯೦॥

ತತೋ ರತ್ನಮಯಂ ಲಿಂಗಂ ತಸ್ಮಿನ್ನೇವ ಶಿವಾಲಯೇ ।
ತೇನ ಸಂಸ್ಥಾಪಿತಂ ಲಿಂಗಂ ಭೂಪೇನ ಸಕಲಾರ್ಥದಂ ॥೧೯೧॥

ತಸ್ಮಿನ್ಮಣಿಮಯೇ ಲಿಂಗೇ ವಿಶ್ವವ್ಯಾಪೀ ಸದಾಶಿವಃ ।
ನಿತ್ಯಂ ಸಂನಿಹಿತಃ ಸಾಂಬಃ ಪೂಜಾಂ ಗೃಹ್ಣಾತಿ ಸಾದರಂ ॥೧೯೨॥

ಪ್ರತ್ಯಹಂ ಸ್ವರ್ಣಪುಷ್ಪಾಣಾಂ ಸಾರ್ಧಂ ಕೋಟಿತ್ರಯಂ ನೃಪಃ ।
ದದಾತಿ ಶಂಭವೇ ಪ್ರೀತ್ಯಾ ಲಿಂಗರೂಪಾಯ ಸಾದರಂ ॥೧೯೩॥

ತ್ರಿಕಾಲಮಪ್ರಮಾದೇನ ನೃಪಸ್ತಲ್ಲಿಂಗಪೂಜನಂ ।
ಕರೋತ್ಯದ್ಯಾಪಿ ಶೈವಾಶ್ಚ ಬಹವಸ್ತೇನ ತೋಷಿತಾಃ ॥೧೯೪॥

ಬಿಲ್ವವೃಕ್ಷಾಶ್ಚ ಬಹವಃ ಸ್ಥಾಪಿತಾಸ್ತೇನ ಭೂಭುಜಾ ।
ತದ್ಬಿಲ್ವತರುಮೂಲೇಷು ಲಿಂಗಾನಿ ಸ್ಥಾಪಿತಾನಿ ಚ ॥೧೯೫॥

---

ಬಳಿಕ ಆ ಶಿವಾಲಯದಲ್ಲಿ ಸಕಲ ಇಷ್ಟಾರ್ಥಗಳನ್ನು ಕೊಡುವ ಶಿವಲಿಂಗವನ್ನು ಸ್ಥಾಪಿಸಿದನು. ||೧೯೧||

ರತ್ನಖಚಿತವಾದ ಆ ಲಿಂಗದಲ್ಲಿ ಸರ್ವವ್ಯಾಪಕನೂ, ಉಮಾಸಹಿತನೂ ಆದ ಶಿವನು ನಿರಂತರವೂ ನೆಲಸಿದವನಾಗಿ ಭಕ್ತರ ಪೂಜೆಯನ್ನು ಸ್ವೀಕರಿಸುವನು. ||೧೯೨||

ರಾಜನು ಪ್ರತಿದಿನವೂ ಲಿಂಗರೂಪದಿಂದ ನೆಲಸಿದ ಶಿವನಿಗೆ ಮೂರುವರೆ ಕೋಟಿ ಸ್ವರ್ಣಪುಷ್ಪಗಳನ್ನರ್ಪಿಸುತ್ತಿದ್ದನು. ||೧೯೩||

ಅವನು ಕಾಲತ್ರಯದಲ್ಲಿಯೂ ತಪ್ಪದೇ ಈಗಲೂ ಶಿವಲಿಂಗವನ್ನು ಪೂಜಿಸುತ್ತಿರುವನು. ಅಲ್ಲದೆ ಆವನು ಬಹುಮಂದಿ ಈಶ್ವರಭಕ್ತರನ್ನು ಸಂತೋಷಗೊಳಿಸಿದನು. ||೧೯೪||

ಮತ್ತು ಆ ರಾಜನು ಅನೇಕ ಬಿಲ್ವವೃಕ್ಷಗಳನ್ನು ಬೆಳೆಸಿ, ಅವುಗಳ ಬುಡದಲ್ಲಿ ಶಿವಲಿಂಗಗಳನ್ನು ಸ್ಥಾಪಿಸಿರುವನು. ||೧೯೫||

ಬಿಲ್ವಕಂಟಕತೀಕ್ಷ್ಣಾಗ್ರೈರ್ವಿದ್ಧಹಸ್ತೋಽಪಿ ಭೂಪತೇ ।
ಸ್ವಯಮೇವಾನಯತ್ಯಚ್ಛೋ ಬಿಲ್ವಪತ್ರಾಣಿ ಶಂಭವೇ ॥೯೬॥

ಚಂದನಾಗರುಕಸ್ತೂರೀವಿಲೇಪನರತೋಽಪಿ ಸಃ ।
ತ್ಯಕ್ತ್ವಾ ತದ್ಭಸ್ಮನಾ ನಿತ್ಯಮಂಗಲೇಪಂ ಕರೋತಿ ಚ ॥೯೭॥

ಪ್ರಿಯೋರುರತ್ನಮಾಲೋಽಪಿ ಭೂಪಾಲಸ್ತಾನಿ ಸರ್ವಥಾ ।
ತ್ಯಕ್ತ್ವಾ ರುದ್ರಾಕ್ಷಮಾಲಾಭಿಶ್ಚಕಾರಾಂಗವಿಭೂಷಣಂ ॥೯೮॥

ನಾರೀಜಘನಮಿಷ್ಟೇಷ್ಟಶಯ್ಯೋಽಪಿ ನೃಪತಿಃ ಸದಾ ।
ತತ್ತ್ಯಕ್ತ್ವಾ ಭಸ್ಮಶಯ್ಯಾಯಾಂ ತಿಷ್ಠತ್ಯನಿಶಮಾದರಾತ್ ॥೯೯॥

ಗಾನಪ್ರಿಯೋಽಪಿ ನೃಪತಿಸ್ತ್ಯಕ್ತ್ವಾ ಗಾನರತಿಂ ಸದಾ ।
ಶೈವೀಮೇವ ಕಥಾಂ ಭೂಯಃ ಶೃಣೋತಿ ಪ್ರೀತಮಾನಸಃ ॥೨೦೦॥

---

ಬಿಲ್ವವೃಕ್ಷಗಳ ತೀಕ್ಷ್ಣವಾದ ಮುಳ್ಳುಗಳಿಂದ ಕೈಗಳು ಗಾಯಗೊಂಡರೂ ಸಹ ಅವನು ಪರಿಶುದ್ಧನಾಗಿ ತಾನೇ ಸ್ವತಃ ಬಿಲ್ವಪತ್ರೆಗಳನ್ನು ತರುತ್ತಿದ್ದನು. ॥೯೬॥

ರಾಜ್ಯವನ್ನಾಳುತ್ತಿರುವ ಸಮಯದಲ್ಲಿ ಚಂದನ, ಅಗುರು, ಕಸ್ತೂರಿ ಮುಂತಾದ ಪರಿಮಳದ್ರವ್ಯಗಳಿಂದ ಶರೀರಕ್ಕೆ ಲೇಪಿಸುತ್ತಿದ್ದನಾದರೂ ಈಗ ಅವುಗಳನ್ನು ಬಿಟ್ಟು ವಿಭೂತಿಯನ್ನೇ ಲೇಪಿಸುತ್ತಿರುವನು. ॥೯೭॥

ರತ್ನಮಾಲೆಗಳನ್ನು ಧರಿಸುತ್ತಿದ್ದರೂ ಸಹ ಅವುಗಳನ್ನು ಧರಿಸದೆ ರುದ್ರಾಕ್ಷ ಮಾಲೆಗಳನ್ನು ಧರಿಸುತ್ತಿದ್ದನು. ॥೯೮॥

ಸ್ತ್ರೀಯರೊಂದಿಗೆ ನಿದ್ರಿಸಲು ಇಚ್ಛಿಸಿದರೂ ಸಹ ಅದನ್ನು ದೂರೀಕರಿಸಿ ಭಸ್ಮದಿಂದ ನಿರ್ಮಿಸಿದ ಹಾಸಿಗೆಯಲ್ಲಿಯೇ ಮಲಗುವನು. ॥೯೯॥

ಗಾನವನ್ನು ಪ್ರೀತಿಸುತ್ತಿದ್ದರೂ ಸಹ ಅದರಲ್ಲಿ ಆಸಕ್ತಿಯನ್ನು ತೊರೆದು, ಶಿವಕಥೆಯನ್ನೇ ಸಂತೋಷದಿಂದ ಲಾಲಿಸುವನು. ॥೨೦೦॥

ಶೈವದೀಕ್ಷಾಪಿ ಯತ್ನೇನ ಗೃಹೀತಾ ಶೈವಸತ್ತಮಾತ್ ।
ಶೈವವ್ರತಾನಿ ಸತತಂ ಕ್ರಿಯಂತೇ ತೇನ ಸಾದರಂ ॥೨೦೧॥

ಪೂಜಯತ್ಯತಿಯತ್ನೇನ ಶೈವಾನೇವಾನಿಶಂ ಮುದಾ ।
ಶೈವಮೇವೋತ್ತಮಂ ಮಂತ್ರಂ ಜಪತ್ಯನುದಿನಂ ನೃಪಃ ॥೨೦೨॥

ಅಯಂ ಶಿವಪ್ರಸಾದೇನ ಜ್ಞಾತ್ವಾ ಸರ್ವೋತ್ತಮಂ ಶಿವಂ ।
ಆಬಾಲ್ಯಮತಿಯತ್ನೇನ ಶಿವಪೂಜಾಪರೋಽಭವತ್ ॥೨೦೩॥

ನಿತ್ಯಂ ಮೃಣ್ಮಯಲಿಂಗಾನಾಂ ಸಹಸ್ರಂ ಪೂಜಯತ್ಯಯಂ ।
ಶೈವದ್ವಿಜಾರ್ಬುದಸ್ಯಾನ್ನಂ ದದಾತ್ಯನ್ನಂ ಸದಾ ನೃಪಃ ॥೨೦೪॥

ಕಾಶ್ಯಾಂ ಪ್ರತ್ಯಹಮಾಗತ್ಯ ವಿಶ್ವೇಶ್ವರಮಯಂ ನೃಪಃ ।
ಪೂಜಯತ್ಯತಿಯತ್ನೇನ ರತ್ನಾದ್ಯೈಃ ಶುದ್ಧಸಾಧನೈಃ ॥೨೦೫॥

ತತಃ ಸಾದರಮಾಗತ್ಯ ಶ್ರೀಮತ್ಪಶುಪತೀಶ್ವರಂ ।
ಬಿಲ್ವಾದಿಭಿಃ ಸಮಭ್ಯರ್ಚ್ಯ ನತ್ವಾ ವೀರೇಶ್ವರಂ ತತಃ ॥೨೦೬॥

---

ಈಶ್ವರಭಕ್ತಾಗ್ರಣಿಯಾದ ಅವನು ಅತ್ಯಂತ ಶ್ರದ್ಧೆಯಿಂದ ಶೈವದೀಕ್ಷೆಯನ್ನು ಸ್ವೀಕರಿಸಿ ಸತತವೂ ಶಿವನಿಗೆ ಪ್ರಿಯವಾದ ವ್ರತಗಳನ್ನಾಚರಿಸುವನು. ॥೨೦೧॥

ಹಗಲಿರುಳೂ ಈಶ್ವರಭಕ್ತರನ್ನೇ ಪ್ರೀತಿಯಿಂದ ಪೂಜಿಸುವನು. ಪ್ರತಿದಿನವೂ ಮಂತ್ರಗಳಲ್ಲಿ ಶ್ರೇಷ್ಠವಾದ ಶಿವಪಂಚಾಕ್ಷರಮಂತ್ರವನ್ನು ಜಪಿಸುವನು. ॥೨೦೨॥

ಈ ರಾಜನು ಈಶ್ವರಾನುಗ್ರಹದಿಂದ ಶಿವನು ಸರ್ವಶ್ರೇಷ್ಠನೆಂದು ತಿಳಿದು, ಬಾಲ್ಯದಿಂದ ಮೊದಲುಗೊಂಡು ತಪ್ಪದೇ ಶಿವಪೂಜೆಯಲ್ಲಿಯೇ ಆಸಕ್ತನಾದನು. ॥೨೦೩॥

ಇವನು ಪ್ರತಿದಿನವೂ ಮಣ್ಣಿನಿಂದ ಮಾಡಿದ ಸಹಸ್ರ ಈಶ್ವರಲಿಂಗಗಳನ್ನು ಪೂಜಿಸುವನು. ಈಶ್ವರಭಕ್ತರಾದ ಬ್ರಾಹ್ಮಣರಿಗೆ ಯಾವಾಗಲೂ ಅನ್ನವನ್ನು ದಾನಮಾಡುವನು. ॥೨೦೪॥

ಪ್ರತಿದಿನವೂ ಕಾಶೀಕ್ಷೇತ್ರಕ್ಕೆ ಬಂದು ರತ್ನಗಳೇ ಮೊದಲಾದ, ಅಮೂಲ್ಯವಾದ ವಸ್ತುಗಳಿಂದ ವಿಶ್ವೇಶ್ವರನನ್ನು ಪೂಜಿಸುವನು. ॥೨೦೫॥

ಬಳಿಕ ಪಶುಪತೀಶ್ವರನ ಆಲಯಕ್ಕೆ ತೆರಳಿ ಅಲ್ಲಿ ಬಿಲ್ವಪತ್ರೆಯೇ ಮೊದಲಾದ

ನಿತ್ಯಯಾತ್ರಾದಿಕಂ ಕೃತ್ವಾ ಶೈವಾನಭ್ಯರ್ಚ್ಯ ಸಾದರಂ ।
ತತಃ ಸ್ವನಗರಂ ಯಾತಿ ಪ್ರಜಾಪಾಲನತತ್ಪರಃ ॥೨೦೭॥

ರತ್ನಲಿಂಗಾನ್ಯನೇನೈವ ಕಾಶ್ಯಾಮಗಣಿತಾನಿ ಹಿ ।
ಸ್ಥಾಪಿತಾನ್ಯತಿಯತ್ನೇನ ಕಾಲಭೈರವಸನ್ನಿಧೌ ॥೨೦೮॥

ಶಿವಪೂಜಾಪ್ರಭಾವೇನ ಸರ್ವಲೋಕೇಷು ಸರ್ವದಾ ।
ಅವಿಘ್ನಿತಗತಿರ್ಯಾತಿ ಸೋಽಯಂ ಕಾಮಗಯಾನಗಃ ॥೨೦೯॥

ನ ಶಿವಾರಾಧನಾದನ್ಯಲ್ಲೋಕೇ ಸರ್ವಾರ್ಥಸಾಧಕಂ ।
ನ ಶಿವಾತ್ಪರಮೋ ದೇವಃ ಸರ್ವಾಭೀಷ್ಟಪ್ರದಾಯಕಃ ॥೨೧೦॥

॥ ಸಭಾಸದಾ ಊಚುಃ ॥

ಕೋಽಯಂ ಪೂರ್ವಭವೇ ಬ್ರಹ್ಮನ್ಕಿಮನೇನ ಕೃತಂ ಪುರಾ ।
ಪ್ರಾಪ್ತಾನೇನ ಕಥಂ ಕಾಶೀ ದೇವಾನಾಮಪಿ ದುರ್ಲಭಾ ॥೨೧೧॥

---

ಪೂಜಾಸಾಮಗ್ರಿಗಳಿಂದ ಪಶುಪತಿಯನ್ನು ಭಕ್ತಿಯಿಂದ ಪೂಜಿಸಿ, ವೀರೇಶನಿಗೆ ನಮಸ್ಕರಿಸಿ, ತರುವಾಯ ತನ್ನ ದಿನಚರಿಯನ್ನು ಮುಗಿಸಿ, ಈಶ್ವರಭಕ್ತರನ್ನು ಭಕ್ತಿಯಿಂದ ಪೂಜಿಸಿ ಪ್ರಜಾಪಾಲನತತ್ಪರನಾದ ಆವನು ತನ್ನ ನಗರಕ್ಕೆ ತೆರಳುವನು. ॥೨೦೬-೨೦೭॥

ಇವನು ಕಾಶೀಕ್ಷೇತ್ರದಲ್ಲಿ ಕಾಲಭೈರವನ ಸನ್ನಿಧಿಯಲ್ಲಿ ಅಪರಿಮಿತವಾದ ರತ್ನಗಳನ್ನು ಅರ್ಪಿಸಿದನು. ॥೨೦೮॥

ಈಶ್ವರಾರಾಧನೆಯ ಮಹಿಮೆಯಿಂದ ಕಾಮಚಾರಿಯಾದ ತನ್ನ ರಥವನ್ನೇರಿ ಯಾರ ತಡೆಯೂ ಇಲ್ಲದಂತೆ ಸಕಲ ಲೋಕಗಳಲ್ಲಿಯೂ ಇವನು ಸಂಚರಿಸುವನು. ॥೨೦೯॥

ಲೋಕದಲ್ಲಿ ಸಕಲ ಇಷ್ಟಾರ್ಥಗಳನ್ನು ಸಾಧಿಸುವುದರಲ್ಲಿ ಈಶ್ವರಾರಾಧನೆಗಿಂತಲೂ, ಇನ್ನೊಂದು ಸಾಧನವಿರುವುದಿಲ್ಲ. ಶಿವನಿಗಿಂತ ಶ್ರೇಷ್ಠನಾದ ಇನ್ನೊಬ್ಬ ದೇವನಿಲ್ಲ. ಶಿವನೇ ಸಕಲ ಇಷ್ಟಾರ್ಥಗಳನ್ನೂ ಈಡೇರಿಸುವವನು. ॥೨೧೦॥

ಓ ಬ್ರಹ್ಮನೇ, ಈತನು ಪೂರ್ವಜನ್ಮದಲ್ಲಿ ಯಾರಾಗಿದ್ದನು? ಆಗ ಇವನು ಆಚರಿಸಿದ ಪುಣ್ಯಕರ್ಮವಾವುದು? ದೇವತೆಗಳಿಗೂ ದುರ್ಲಭವಾದ ಕಾಶೀಕ್ಷೇತ್ರವಾಸವು ಇವನಿಗೆ ಹೇಗೆ ಲಭಿಸಿತು? ॥೨೧೧॥

ಸಂಪ್ರಾಪ್ತಾಪಿ ಕಥಂ ಕಾಶೀ ತ್ಯಕ್ತಾ ಮೋಕ್ಷಪ್ರದಾಯಿನೀ ।
ಇದಂ ವಿಚಾರ್ಯ ಸಕಲಂ ವದ ಸಂತೋಷಕಾರಣಂ ॥೨೧೨॥

॥ ಬ್ರಹ್ಮೋವಾಚ ॥

ಅಯಮಾಸೀತ್ಪುರಾ ವಿಪ್ರಃ ಶಿವವ್ರತಪರಾಯಣಃ ।
ಶಿವೈಕದೇವಃ ಸತತಂ ಹಿಮವಚ್ಛಿಖರಾಶ್ರಯಃ ॥೨೧೩॥

ತತ್ರ ಶ್ವಾಸಾನಿಲಾನ್ಸರ್ವಾನ್ನಿರುಧ್ಯ ದೃಢಮಾನಸಃ ।
ಪಂಚಾಗ್ನಿಮಧ್ಯಗೋ ನಿತ್ಯಂ ಚಕಾರೋಗ್ರಮಯಂ ತಪಃ ॥೨೧೪॥

ಸಹಸ್ರಯುಗಪರ್ಯಂತಂ ತಥಾ ಕೃತ್ವಾ ತತಸ್ತಪಃ ।
ಚಕಾರ ಯುಗಪರ್ಯಂತಂ ಧೂಮಪಾನಮಧೋಮುಖಃ ॥೨೧೫॥

ತತಃ ಸಮುದ್ರಪರ್ಯಂತಂ ಪೃಥಿವ್ಯಾಶ್ಚ ಪ್ರದಕ್ಷಿಣಂ ।
ಸಹಸ್ರವಾರಂ ಯತ್ನೇನ ಕೃತಮಾಸೀದನೇನ ಹಿ ॥೨೧೬॥

---

ಅಷ್ಟು ಪುಣ್ಯದಿಂದ ಲಭಿಸಿದ ಕಾಶೀವಾಸವು ಇವನಿಗೆ ಮತ್ತೆ ತಪ್ಪಿದುದು ಹೇಗೆ? ಈ ವಿಷಯವನ್ನು ಪ್ರೀತಿಯಿಂದ ನಮಗೆ ತಿಳಿಸು ಎಂದು ಆ ಸಭಾಸದರು ಮತ್ತೆ ಬ್ರಹ್ಮನನ್ನು ಪ್ರಶ್ನಿಸಿದರು. ಆಗ ಬ್ರಹ್ಮನು ಹೀಗೆ ನುಡಿದನು. ॥೨೧೨॥

ಎಲೈ ಸಭಾಸದರೇ, ಈತನು ಪೂರ್ವಜನ್ಮದಲ್ಲಿ ಒಬ್ಬ ಬ್ರಾಹ್ಮಣನಾಗಿದ್ದು ನಿರಂತರವೂ ಶಿವನನ್ನೇ ಪೂಜಿಸುತ್ತಾ ಶಿವನೇ ಸರ್ವಶ್ರೇಷ್ಠನಾದವನೆಂದು ಭಾವಿಸಿ ಹಿಮವತ್ಪರ್ವತದ ಶಿಖರಭಾಗದಲ್ಲಿ ವಾಸವಾಗಿದ್ದನು. ॥೨೧೩॥

ಇವನು ಅಲ್ಲಿ ಪ್ರತಿದಿನವೂ ಶ್ವಾಸವನ್ನು ಬಂಧಿಸಿ ಮನಸ್ಸನ್ನು ಬಿಗಿಹಿಡಿದು ಪಂಚಾಗ್ನಿಮಧ್ಯದಲ್ಲಿ ನಿಂತು ಭಯಂಕರವಾದ ತಪಸ್ಸನ್ನಾಚರಿಸುತ್ತಿದ್ದನು. ॥೨೧೪॥

ಈರೀತಿಯಲ್ಲಿ ಸಹಸ್ರಯುಗಗಳ ವರೆಗೆ ತಪಸ್ಸನ್ನಾಚರಿಸಿ ಒಂದು ಯುಗವು ಮುಗಿಯುವ ವರೆಗೆ ಅಧೋಮುಖನಾಗಿ ನಿಂತು ಧೂಮಪಾನವನ್ನು ಮಾಡುತ್ತಿದ್ದನು. ॥೨೧೫॥

ಬಳಿಕ ಒಂದು ಸಾವಿರ ಬಾರಿ ಸಮುದ್ರಪರ್ಯಂತವಾಗಿ ಭೂಪ್ರದಕ್ಷಿಣೆಯನ್ನು ಮಾಡಿದನು. ೨೧೬॥

ತತಃ ಕೃತಮನೇನೈವ ಶ್ರೀಶೈಲಸ್ಯ ಪೃಥಙ್ಮುದಾ ।
ಪ್ರದಕ್ಷಿಣಂ ಶಿವಪ್ರೀತ್ಯೈ ಶತವಾರಂ ಪ್ರಯತ್ನತಃ ॥೨೧೭॥

ತತಃ ಶ್ರೀಶೈಲಶಿಖರೇ ನಿರಾಹಾರೇಣ ಸಂತತಂ ।
ತಪಶ್ಚಕಾರ ಯತ್ನೇನ ಸಾರ್ಧಕೋಟಿಯುಗಾವಧಿ ॥೨೧೮॥

ತತಃ ಸ ತಪಸೋ ಭೀಮಾನ್ನಿವೃತ್ತಃ ಶೋಕಕರ್ಶಿತಃ ।
ಚಕಾರ ದುಃಖಂ ಬಹುಧಾ ಪ್ರಲಪನ್ಪತಿತೋ ಭುವಿ ॥೨೧೯॥

ನ ಶ್ರೀಶೈಲಾತ್ಪರಂ ಕ್ಷೇತ್ರಂ ತಪಃಸಿದ್ಧಿಕರಂ ಪರಂ ।
ಅತ್ರಾಪಿ ತಪಸಾ ಸಿದ್ಧಿರ್ನಜಾತಾ ಕಿಂ ಕರೋಮ್ಯಹಂ ॥೨೨೦॥

ಕಾಶೀಪ್ರಾಪ್ತ್ಯರ್ಥಮೇವಾತ್ರ ತಪೋ ಘೋರತರಂ ಕೃತಂ ।
ತಥಾಪಿ ಕಾಶೀ ನ ಪ್ರಾಪ್ತಾ ನೇಶಃ ಪ್ರತ್ಯಕ್ಷತಾಂ ಗತಃ ॥೨೨೧॥

---

ತರುವಾಯ ಶಿವನನ್ನು ತೃಪ್ತಿಗೊಳಿಸುವುದಕ್ಕೋಸ್ಕರ ನೂರುಬಾರಿ ಅತ್ಯಂತ ಪ್ರಯಾಸದಿಂದ ಶ್ರೀಶೈಲದ ಪ್ರದಕ್ಷಿಣೆಯನ್ನು ನೆರವೇರಿಸಿದನು. ॥೨೧೭॥

ಅನಂತರದಲ್ಲಿ ನಿರಾಹಾರವ್ರತವನ್ನು ಕೈಗೊಂಡು ಶ್ರೀಶೈಲದ ಶಿಖರದಲ್ಲಿ ಒಂದೂವರೆಕೋಟಿ ಯುಗಗಳು ಕಳೆಯುವ ವರೆಗೆ ತಪಸ್ಸನ್ನಾಚರಿಸಿದನು. ॥೨೧೮॥

ಆದಾದ ಬಳಿಕ ಅವನು ಉಗ್ರವಾದ ತಪಸ್ಸಿನಿಂದ ಬಳಲಿ, ಅನುಷ್ಠಾನದಿಂದ ವಿಮುಖನಾಗಿ ದುಃಖದಿಂದ ಆರ್ತನಾದವನ್ನು ಮಾಡುತ್ತಾ ಭೂಮಿಯಮೇಲೆ ಬಿದ್ದನು. ॥೨೧೯॥

ಶೀಘ್ರವಾಗಿ ತಪಃಸಿದ್ಧಿಯನ್ನುಂಟುಮಾಡುವುದರಲ್ಲಿ ಶ್ರೀಶೈಲಕ್ಕಿಂತಲೂ ಶ್ರೇಷ್ಠವಾದ ಇನ್ನೊಂದು ಕ್ಷೇತ್ರವಿರುವುದಿಲ್ಲ. ಆದರೆ ನನ್ನ ತಪಸ್ಸು ಈ ಕ್ಷೇತ್ರದಲ್ಲಿಯೂ ಸಿದ್ಧಿಸಲಿಲ್ಲ. ಮುಂದೇನುಗತಿ ಎಂದು ಮರುಗಿದನು. ॥೨೨೦॥

ಕಾಶೀಕ್ಷೇತ್ರವನ್ನು ಪಡೆಯುವುದಕ್ಕೋಸ್ಕರ ಉಗ್ರವಾದ ತಪಸ್ಸನ್ನಾಚರಿಸಿದೆ. ಆದರೂ ನಾನು ಕಾಶಿಯನ್ನು ಸೇರಲಾಗಲಿಲ್ಲ. ಶಿವನು ಪ್ರತ್ಯಕ್ಷನಾಗಲಿಲ್ಲ. ॥೨೨೧॥

ಯದ್ಯತ್ರ ಮ್ರಿಯತೇ ನೂನಂ ಮೋಕ್ಷೋ ಮಮ ಭವಿಷ್ಯತಿ ।
ತಥಾಪಿ ಕಾಶೀ ದ್ರಷ್ಟವ್ಯಾ ಸುರಾಣಾಮಪಿ ದುರ್ಲಭಾ ॥೨೨೨॥

ಕಾಶೀ ಪ್ರಯಾಣಕಾಲೇಷು ಬಹುಧರ್ಮಾನರೈಃ ಸದಾ ।
ಕರ್ತವ್ಯಾಸ್ತೇನ ಕೇನಾಪಿ ಶಕ್ಯತೇ ಕರ್ತುಮಸ್ಸಹಂ ॥೨೨೩॥

ಕೃತೇನಾನೇನ ತಪಸಾ ವಿಹಂಗಸ್ಯಾಪಿ ವಾ ತನುಂ ।
ಯದಿ ದಾಸ್ಯತಿ ವಿಶ್ವೇಶಸ್ತದಾ ಕಾಶೀಂ ಪ್ರಯಾಮ್ಯಹಂ ॥೨೨೪॥

ಯೇನ ಕೇನಾಪಿ ರೂಪೇಣ ಕಾಶೀಪ್ರಾಪ್ತಿರಪೇಕ್ಷಿತಾ ।
ತಾದೃಶಂ ಭಾಗ್ಯಮೇತಸ್ಯ ಕ್ವ ಜೀವಸ್ಯ ಭವಿಷ್ಯತಿ ॥೨೨೫॥

ಶಿವಮುದ್ದಿಶ್ಯ ಬಹುಧಾ ಪೂರ್ವಪೂರ್ವಭವೇಷ್ವಪಿ ।
ತಪಸ್ತಪ್ತಂ ಶಿವೋ ಮಹ್ಯಂ ನ ಪ್ರಸೀದತಿ ಸತ್ವರಂ ॥೨೨೬॥

---

ಒಂದುವೇಳೆ ನಾನು ಇಲ್ಲಿಯೇ ಪ್ರಾಣಗಳನ್ನು ಕಳೆದುಕೊಂಡರೆ ನನಗೆ ನಿಜವಾಗಿಯೂ ಮೋಕ್ಷವು ಲಭಿಸುವುದು. ಆದರೂ ದೇವತೆಗಳಿಗತಿದುರ್ಲಭವಾದ ಕಾಶೀಕ್ಷೇತ್ರವನ್ನು ನೋಡಲೇಬೇಕು. ॥೨೨೨॥

ಕಾಶೀಯಾತ್ರೆಗೆ ಹೊರಡುವ ಕಾಲದಲ್ಲಿ ಜನರು ಅನೇಕ ಧರ್ಮಗಳನ್ನು ಆಚರಿಸುವರು. ಆದರೆ ಅವುಗಳೀಗ ನನಗೆ ಅಸಾಧ್ಯವಾಗಿರುವುವು. ॥೨೨೩॥

ಈ ನಾನು ಆಚರಿಸಿರುವ ತಪಸ್ಸಿನ ಫಲವಾಗಿ ಶಿವನು ನನಗೆ ಪಕ್ಷಿಯ ಶರೀರವನ್ನು ದಯಪಾಲಿಸಿದವನಾದರೆ, ಆಗ ನಾನು ಕಾಶೀಕ್ಷೇತ್ರಕ್ಕೆ ಹಾರುತ್ತಾ ತೆರಳುವೆನು. ॥೨೨೪॥

ಯಾವ ಬಗೆಯಿಂದಲಾದರೂ ಕಾಶಿಯನ್ನು ಸೇರಬೇಕೆಂಬುದೇ ನನ್ನ ಮನೋರಥವಾಗಿರುವುದು. ಆದರೆ ಅಂತಹ ಭಾಗ್ಯವು ಈ ಬಡಜೀವಿಗೆ ಲಭಿಸುವ ಬಗೆ ಹೇಗೆ? ॥೨೨೫॥

ಈ ಹಿಂದಿನ ಅನೇಕ ಜನ್ಮಗಳಲ್ಲಿ ನಾನಾಬಗೆಯಿಂದ ಶಿವನನ್ನು ಕುರಿತು ತಪಸ್ಸನ್ನಾಚರಿಸಿದೆನು. ಆದರೂ ಶಿವನು ನನ್ನಲ್ಲಿ ಪ್ರಸನ್ನನಾಗಲಿಲ್ಲ. ॥೨೨೬॥

ಕಥಂ ವಾ ದುರದೃಷ್ಟಾನಿ ಮಯ್ಯನೇಯಾನಿ ಸಂತಿ ಮೇ ।
ಕಾಶೀಪ್ರಾಪ್ತಿರ್ಯತೋ ನಿತ್ಯಂ ವಿಘ್ನಿತೈವಾಧಿತಿಷ್ಠತಿ ॥೨೨೭॥

ಕಿಂ ಕರ್ಮ ಕಾರ್ಯಂ ಯತ್ನೇನ ದುರದೃಷ್ಟನಿವಾರಕಂ
ಕಿಂ ಕರೋಮೀತಿ ನ್ಯಪತದ್ಭುವಿ ನಿರ್ವಿಣ್ಣಮಾನಸಃ ॥೨೨೮॥

ಏತಸ್ಮಿನ್ನಂತರೇ ಜಾತಾ ತದಾ ತತ್ರಾಶರೀರವಾಕ್ ।
ಆನಂದಾಮೃತದಾ ರಮ್ಯಾ ಸರ್ವದುಃಖವಿನಾಶಿನೀ ॥೨೨೯॥

ಇತಃ ಸಹಸ್ರಜನ್ಮಾಂತೇ ಕಾಶೀ ಸಂಪ್ರಾಪ್ಯತೇ ತ್ವಯಾ ।
ವಿಹಂಗಸ್ಯೈವ ರೂಪೇಣ ಖೇದಂ ಮಾಕುರು ಸರ್ವಥಾ ॥೨೩೦॥

ಪ್ರತಿಜನ್ಮನಿ ಸರ್ವೇಶಂ ಶಂಕರಂ ತಪಸಾ ಸದಾ ।
ಸಮಾರಾಧಯ ತೀವ್ರೇಣ ಕಾಶೀಪ್ರಾಪ್ತ್ಯರ್ಥಮಾದರಾತ್ ॥೨೩೧॥

---

ನನ್ನಲ್ಲಿ ಅನೇಕ ಪಾಪಗಳು ಸಂಚಿತವಾಗಿರುವುವು. ಆದುದರಿಂದಲೇ ಕಾಶಿಯನ್ನು ಸೇರುವುದಕ್ಕೆ ಅನೇಕ ವಿಘ್ನಗಳು ನನಗೆ ಸಂಭವಿಸುತ್ತಿರುವುವು. ॥೨೨೭॥

ಪಾಪಗಳನ್ನು ಹೋಗಲಾಡಿಸುವ ಯಾವ ಸತ್ಕಾರ್ಯವನ್ನು ಈಗ ಆಚರಿಸಲಿ? ಮುಂದೇನು ಮಾಡಲಿ! ಹೀಗೆಂದು ಪ್ರಲಾಪಿಸುತ್ತಾ ಅವನು ಶೋಕದಿಂದ ಕೆಳಕ್ಕೆಬಿದ್ದನು. ॥೨೨೮॥

ಅಷ್ಟರೊಳಗೆ ಆನಂದದಾಯಕವೂ ಕರ್ಣಮನೋಹರವೂ ದುಃಖನಾಶಕವೂ ಆದ ಒಂದಾನೊಂದು ಅಶರೀರವಾಣಿಯಾಯಿತು. ॥೨೨೯॥

ಅದು ಹೀಗೆಂದು ನುಡಿಯಿತು—"ಎಲೈ ಬ್ರಾಹ್ಮಣನೇ, ನೀನು ಇನ್ನು ಸಹಸ್ರ ಜನ್ಮಗಳು ಕಳೆದ ಬಳಿಕ ಹಕ್ಕಿಯ ಜನ್ಮವನ್ನು ಪಡೆದು ಕಾಶೀಕ್ಷೇತ್ರವನ್ನು ಸೇರುವೆ. ವೃಥಾ ಶೋಕಿಸ ಬೇಡ. ॥೨೩೦॥

ಪ್ರತಿಯೊಂದು ಜನ್ಮದಲ್ಲಿಯೂ ಕಾಶೀಪ್ರಾಪ್ತಿಗೋಸ್ಕರ ಉಗ್ರವಾದ ತಪಸ್ಸನ್ನಾಚರಿಸಿ ಆದರಿಂದ ಶಿವನನ್ನು ತೃಪ್ತಿಗೊಳಿಸು. ॥೨೩೧॥

ಇತಿ ಸಂತೋಷದಂ ರಮ್ಯಮಶರೀರವಚಸ್ತದಾ ।
ಶ್ರುತ್ವಾ ಸಂತೋಷಮಗಮಜ್ಜಹೌ ದುಃಖಂ ತತಃ ಪರಂ ॥೨೩೨॥

ಸಹಸ್ರಜನ್ಮನಾಮಂತೇ ಕಾಶೀಪ್ರಾಪ್ತಿರ್ಭವಾಸ್ತ್ವಿತಿ ।
ತಪೋ ಘೋರತರಂ ಭೂಯಶ್ಚಚಾರ ದ್ವಿಜಸತ್ತಮಃ ॥೨೩೩॥

ತತ್ರ ಕೃತ್ವಾ ತಪೋ ಘೋರಂ ಕಿಂಚಿತ್ಕಾಲಂ ತತಃ ಪರಂ ।
ಶ್ರೀಶೈಲಾನ್ಯಭುವಂ ಪ್ರಾಪ್ಯ ತನುಂ ತಾಂ ವಿಜಹೌ ದ್ವಿಜಃ ॥೨೩೪॥

ತತೋ ಋಷಿಕುಲೇ ರಮ್ಯೇ ಜನ್ಮ ಸಂಪ್ರಾಪ್ಯ ಪಾವನಂ ।
ಭೂಯೋ ಘೋರತರಂ ಚಕ್ರೇ ತಪಃ ಶಿವಪರಾಯಣಃ ॥೨೩೫॥

ಸಹಸ್ರಜನ್ಮಪರ್ಯಂತಮೇವಮೇವ ಪುನಃ ಪುನಃ ।
ಋಷಿಜನ್ಮೈವ ಸಂಪ್ರಾಪ್ಯ ತಪಃ ಕೃತಮನೇನ ಹಿ ॥೨೩೬॥

ತತಃ ಕಾಶ್ಯಾಂ ಬಿಲ್ವವೃಕ್ಷೇ ವಿಹಂಗಸ್ಯೈವ ಕಸ್ಯಚಿತ್ ।
ಗರ್ಭಾತ್ಸಂಪ್ರಾಪ ಜನ್ಮಾಯಂ ಪೂರ್ವಾಭಿಲಷಿತಂ ಮುದಾ ॥೨೩೭॥

---

ಈ ರೀತಿಯಲ್ಲಿ ಕರ್ಣಮಧುರವಾದ ಆ ಅಶರೀರವಾಣಿಯನ್ನು ಕೇಳಿ, ಬ್ರಾಹ್ಮಣನು ತನ್ನ ದುಃಖವನ್ನು ತೊರೆದು ಸಂತೋಷಭರಿತನಾದನು. ॥೨೩೨॥

ಬಳಿಕ ಆ ಬ್ರಾಹ್ಮಣೋತ್ತಮನು ನನಗೆ ಸಹಸ್ರ ಜನ್ಮಗಳು ಕಳೆದ ಬಳಿಕ, ಕಾಶೀಕ್ಷೇತ್ರವಾಸವು ಉಂಟಾಗಲಿ ಭಯವಿಲ್ಲ. ಎಂದು ಸಂಕಲ್ಪಿಸಿ ಉಗ್ರವಾದ ತಪಸ್ಸನ್ನಾಚರಿಸಿದನು. ॥೨೩೩॥

ಹಾಗೆ ಉಗ್ರವಾದ ತಪಸ್ಸನ್ನಾಚರಿಸಿ ತರುವಾಯ ಶ್ರೀಶೈಲವನ್ನು ಬಿಟ್ಟು ಸ್ವಲ್ಪದೂರದಲ್ಲಿರುವ ಒಂದಾನೊಂದು ಪ್ರದೇಶದಲ್ಲಿ ಮೃತನಾದನು. ॥೨೩೪॥

ಅನಂತರ ಪವಿತ್ರವಾದ ಒಂದಾನೊಂದು ಋಷಿವಂಶದಲ್ಲಿ ಹುಟ್ಟಿ, ಪುನಃ ಶಿವಧ್ಯಾನಾಸಕ್ತನಾಗಿ ಅಲ್ಲಿಯೂ ಘೋರವಾದ ತಪಸ್ಸನ್ನಾಚರಿಸಿದನು. ॥೨೩೫॥

ಇದೇ ರೀತಿಯಲ್ಲಿ ಸಹಸ್ರಜನ್ಮಗಳು ಕಳೆಯುವವರೆಗೂ ಋಷಿಜನ್ಮವನ್ನೇ ಪಡೆದು ಮತ್ತೆ ಮತ್ತೆ ತಪಸ್ಸನ್ನಾಚರಿಸುತ್ತಿದ್ದನು. ॥೨೩೬॥

ಬಳಿಕ ತನ್ನ ಇಷ್ಟಾರ್ಥದಂತೆ ಕಾಶೀಕ್ಷೇತ್ರದಲ್ಲಿ ಒಂದಾನೊಂದು ಬಿಲ್ವವೃಕ್ಷದಲ್ಲಿ ವಾಸವಾಗಿದ್ದ ಪಕ್ಷಿಯ ಉದರದಲ್ಲಿ ಜನ್ಮವನ್ನೆತ್ತಿದನು. ॥೨೩೭॥

ನಿರ್ಗತಸ್ತೀವ್ರಮನಘೋ ಯದಾಯಂ ವಿಹಗೋದರಾತ್ ।
ತದಾ ಪಪಾತ ರುಧಿರಂ ಕಿಂಚಿಚ್ಛೈವಸ್ಯ ಮೂರ್ಧನಿ ॥೨೩೮॥

ತದಾ ಶಶಾಪ ತದ್ದೃಷ್ಟ್ವಾ ರುಧಿರಂ ಶೈವಪುಂಗವಃ ।
ಯಸ್ಯೈತದ್ರುಧಿರಂ ತಸ್ಯ ಕಾಶ್ಯಾಂ ಮಾಸ್ತ್ವಿತಿ ಸಂತತಿಃ ॥೨೩೯॥

ಉತ್ಪನ್ನೋ ವಿಹಗಸ್ಯೈವ ರೂಪೇಣಾಪಿ ಸದಾಶಿವಂ ।
ಜಾತಿಸ್ಮರೋ ಬಿಲ್ವಪತ್ರೈರಭ್ಯರ್ಚಯತಿ ಶಂಕರಂ ॥೨೪೦॥

ತತಃ ಕಾಶ್ಯನ್ಯಭೂಪೃಷ್ಠೇ ಮೃತೋ ದೈವಾತ್ತತಃ ಪರಂ ।
ಸ್ಥಿತ್ವಾತ್ರೈವ ಬ್ರಹ್ಮಲೋಕೇ ಭೂಪತಿಶ್ಚಾಭವತ್ತತಃ ॥೨೪೧॥

ಅಯಂ ಕದಾಚಿದಾಯಾತಿ ಮಾಮಿಂದ್ರಾದಿಸುರಾನಪಿ ।
ಸಂಭಾವಯಿತುಮೇವಾತ್ರ ಶಿವಲಿಂಗಾರ್ಚನಪ್ರಿಯಃ ॥೨೪೨॥

---

ಆ ಪಕ್ಷಿಯು ತಾಯಿಯ ಉದರದಿಂದ ಜನಿಸುವಾಗ ತಾಯಿಯ ಗರ್ಭಾಶಯದಿಂದ ಸ್ವಲ್ಪ ರಕ್ತವು ಆ ಮರದ ಕೆಳಗಡೆಯಲ್ಲಿ ಕುಳಿತಿದ್ದ ಈಶ್ವರಭಕ್ತನೊಬ್ಬನ ತಲೆಯಮೇಲೆ ಬಿದ್ದಿತು. ॥೨೩೮॥

ಆಗ ತನ್ನ ಶಿರಸ್ಸಿನ ಮೇಲೆ ರಕ್ತವು ಬಿದ್ದುದನ್ನು ನೋಡಿ ಆ ಭಕ್ತನು, "ಇದು ಯಾರ ರಕ್ತವೋ ಅವರಿಗೆ ಈ ಕಾಶೀಕ್ಷೇತ್ರದಲ್ಲಿ ಮಕ್ಕಳಾಗದೆ ಹೋಗಲಿ" ಎಂದು ಶಪಿಸಿದನು. ॥೨೩೯॥

ಬ್ರಾಹ್ಮಣನು ಅದನ್ನರಿಯದೆ ಪಕ್ಷಿಯ ರೂಪದಿಂದ ಜನಿಸಿದರೂ ಸಹ ಪೂರ್ವಜನ್ಮಗಳ ಸ್ಮೃತಿಯುಳ್ಳವನಾಗಿ ಬಿಲ್ವಪತ್ರೆಗಳಿಂದ ಶಿವನನ್ನು ಪೂಜಿಸುತ್ತಿದ್ದನು. ॥೨೪೦॥

ತರುವಾಯ ಕಾಶೀಕ್ಷೇತ್ರವನ್ನು ಬಿಟ್ಟು ಮತ್ತೊಂದು ಪ್ರದೇಶದಲ್ಲಿ ಮೃತನಾಗಿ ಬ್ರಹ್ಮಲೋಕಕ್ಕೆ ಬಂದು ಇಲ್ಲಿ ಕೆಲವು ಕಾಲ ವಾಸವಾಗಿದ್ದು ಅನಂತರ ರಾಜನಾಗಿ ಜನಿಸಿದನು. ॥೨೪೧॥

ಶಿವಲಿಂಗಾರ್ಚನೆಯಲ್ಲಿ ಪ್ರೀತಿಯುಳ್ಳ ಈತನು ನನ್ನನ್ನೂ ಮತ್ತು ಇಂದ್ರಾದಿ ದೇವತೆಗಳನ್ನೂ ಸಂದರ್ಶಿಸುವುದಕ್ಕೆಂದು ಆಗಾಗ ಇಲ್ಲಿಗೆ ಬರುತ್ತಿರುವನು. ॥೧೪೨॥

ಏತಾದೃಶಾನಾಂ ಶೈವಾನಾಂ ವಿಶ್ವೇಶಃ ಕರುಣಾನಿಧಿಃ ।
ಕಾಶ್ಯಾಂ ಮರಣಮಾತ್ರೇಣ ನಿರ್ವಾಣಂ ಹಿ ಪ್ರಯಚ್ಛತಿ ॥೨೪೩॥

ಅತಃ ಪರಮಯಂ ಪುತ್ರೇ ರಾಜ್ಯಂ ವಿನ್ಯಸ್ಯ ಸಾದರಂ ।
ಕಾಶ್ಯಾಂ ಶಿವಪ್ರಸಾದಾರ್ಥಂ ಕರಿಷ್ಯತಿ ತಪೋ ಮುದಾ ॥೨೪೪॥

ಏತಸ್ಯ ತನುರಂತ್ಯೇಽಯಂ ತನುರ್ನಾನ್ಯಾ ಭವಿಷ್ಯತಿ ।
ಏತಚ್ಛರೀರವಿಗಮೋ ಮುಕ್ತಿರಸ್ಯ ಭವಿಷ್ಯತಿ ॥೨೪೫॥

ಧನ್ಯೋಽಯಂ ಸರ್ವಥಾ ಧನ್ಯಾ ವಯಮಪ್ಯಸ್ಯ ದರ್ಶನಾತ್ ।
ಈದೃಶಸ್ಯ ಹಿ ಸರ್ವಸ್ಯ ದರ್ಶನಂ ದುರ್ಲಭಂ ಧ್ರುವಂ ॥೨೪೬॥

॥ ಸದಾಶಿವ ಉವಾಚ ॥

ಇತಿ ಬ್ರಹ್ಮವಚಃ ಶ್ರುತ್ವಾ ತೇ ತಮೇವ ನೃಪೋತ್ತಮಂ ।
ಪ್ರಣಮ್ಯ ಪೂಜಯಾಮಾಸುಃ ಪರಮಂ ವಿಸ್ಮಯಂ ಗತಾಃ ॥೨೪೭॥

---

ಇಂತಹ ಪುಣ್ಯಶಾಲಿಗಳಾದ ಭಕ್ತರಿಗೆ ದಯಾಸಾಗರನಾದ ಶಿವನು ಕಾಶೀ ಕ್ಷೇತ್ರದಲ್ಲಿ ಮರಣಮಾತ್ರದಿಂದಲೇ ಮೋಕ್ಷವನ್ನು ದಯಪಾಲಿಸುವನು. ॥೨೪೩॥

ಇನ್ನು ಮುಂದೆ ಈತನು ತನ್ನ ಮಗನಿಗೆ ರಾಜ್ಯವನ್ನು ಸಮರ್ಪಿಸಿ, ಕಾಶೀ ಕ್ಷೇತ್ರಕ್ಕೆ ಹೋಗಿ ಅಲ್ಲಿ ಈಶ್ವರನ ಅನುಗ್ರಹವನ್ನು ಸಂಪಾದಿಸುವುದಕ್ಕೋಸ್ಕರ ಭಕ್ತಿಯಿಂದ ತಪಸ್ಸನ್ನಾಚರಿಸುವನು. ॥೨೪೪॥

ಇದೇ ಇವನ ಕೊನೆಯ ಜನ್ಮ. ಇನ್ನು ಮುಂದೆ ಇವನಿಗೆ ಜನ್ಮವೇ ಇರುವುದಿಲ್ಲ. ಈ ಶರೀರವು ನಶಿಸಿದರೆ ಆ ಕೂಡಲೇ ಇವನಿಗೆ ಮೋಕ್ಷವು ಸಿದ್ಧಿಸುವುದು. ॥೨೪೫॥

ಇವನೇ ಧನ್ಯನು. ಇವನ ದರ್ಶನದಿಂದ ನಾವು ಕೃತಕೃತ್ಯರಾದೆವು. ಇಂತಹ ಭಾಗ್ಯಶಾಲಿಯ ದರ್ಶನವು ಸಾಧಾರಣ ಜನರಿಗೆ ದುರ್ಲಭವಾಗಿರುವುದು. ಇದು ನಿಜವು. ಎಂದು ಬ್ರಹ್ಮನುಸುರಿದನು. ॥೨೪೬॥

ಬಳಿಕ ಶಿವನು ತನ್ನ ಪ್ರಿಯತಮೆಯನ್ನು ಕುರಿತು ಹೇಗೆಂದನು ಬ್ರಹ್ಮನ ಈ ಮಾತನ್ನು ಕೇಳಿ ಸಭೆಯಲ್ಲಿದ್ದ ದೇವತೆಗಳು ಅತ್ಯಂತ ಅಚ್ಚರಿಗೊಂಡು ಆ ರಾಜೇಂದ್ರನನ್ನು ನಮಸ್ಕರಿಸಿ ಪೂಜಿಸಿದರು. ॥೨೪೭॥

ತತಸ್ಸುಪೂಜಿತೋ ನರಾಧೀಶೋ ಬ್ರಹ್ಮಣಾ ಪೂಜಿತಃ ಪುನಃ ।
ಯಯೌ ಸ್ವನಗರಂ ರಮ್ಯಂ ಇಲಾವತ್ಯಭಿಧಂ ಮುದಾ ॥೨೪೮॥

ಪುರಾ ಪಶುಪತೀಶಸ್ಯ ಸನ್ನಿಧಾನೇ ಶಿವಾತ್ಮಕೇ ।
ಕಶ್ಚಿದಾಸೀದ್ದ್ವಿಜಶ್ರೇಷ್ಠಃ ಸರ್ವದಾ ಶಿವಪೂಜಕಃ ॥೨೪೯॥

ತಸ್ಯೈವ ನಿಕಟೇ ಕಶ್ಚಿಚ್ಛಕುಂತಃ ಕಣಭಕ್ಷಕಃ ।
ನ್ಯವಸದ್ಭೂರಿ ತಪಸಾ ಕಾಶೀಂ ಪ್ರಾಪ್ಯ ಶಿವಾತ್ಮಿಕಾಂ ॥೨೫೦॥

ಸ ಕದಾಚಿದ್ದ್ವಿಜಸ್ಯಾಂಕೇ ನಿವಿಷ್ಟೋ ದೌಹೃದಾಂಕಿತಂ ।
ತಂ ವಿಲೋಕ್ಯ ಕುಶಾಗ್ರೇಣ ಜಘಾನ ದ್ವಿಜಸತ್ತಮಃ ॥೨೫೧॥

ತದಾನೀಮೇವ ಸ ಮೃತಃ ಶಕುಂತಃ ಪ್ರಲಪನ್ತತಃ ।
ತದ್ಗರ್ಭಾನ್ನಿರ್ಯಯೌ ಸೂಕ್ಷ್ಮಃ ಶಕುಂತೋ ದುಃಖಕರ್ಷಿತಃ ॥೨೫೨॥

---

ಅವರು ರಾಜನನ್ನು ಪೂಜಿಸಿದ ತರುವಾಯ ಬ್ರಹ್ಮನು ಅವನನ್ನು ಪುನಃ ಪೂಜಿಸಿದನು. ಆದಾದ ಮೇಲೆ ರಾಜನು ತನ್ನ ಪಟ್ಟಣವಾದ ಇಲಾವತೀನಗರಕ್ಕೆ ತೆರಳಿದನು. ಈ ವಿಷಯದಲ್ಲಿ ಮತ್ತೊಂದು ಇತಿಹಾಸವನ್ನು ಕೇಳು. ॥೨೪೮॥

ಪೂರ್ವಕಾಲದಲ್ಲಿ ಪಶುಪತೀಶನ ಸನ್ನಿಧಾನದಲ್ಲಿ ಓರ್ವ ಬ್ರಾಹ್ಮಣೋತ್ತಮನಿದ್ದನು. ಅವನು ನಿರಂತರವೂ ಶಿವನನ್ನು ತಪ್ಪದೆ ಆರಾಧಿಸುತ್ತಿದ್ದನು. ॥೨೪೯॥

ಆ ಶಿವಾಲಯದ ಸಮೀಪದಲ್ಲಿಯೇ ಒಂದು ಪಕ್ಷಿಯು ವಾಸವಾಗಿದ್ದಿತು. ಅದು ಪೂರ್ವಜನ್ಮದಲ್ಲಿ ಕಾಶೀಕ್ಷೇತ್ರವು ಲಭಿಸುವುದಕ್ಕೋಸ್ಕರ ಶಿವನನ್ನು ಕುರಿತು ಘೋರವಾದ ತಪಸ್ಸನ್ನಾಚರಿಸಿ ಶಿವಾನುಗ್ರಹದಿಂದ ಕಾಶೀಕ್ಷೇತ್ರದಲ್ಲಿ ಪಕ್ಷಿಯಾಗಿ ಹುಟ್ಟಿ ಅಲ್ಲಲ್ಲಿ ಬಿದ್ದ ಕಾಳುಗಳನ್ನು ತಿಂದು ಜೀವಿಸುತ್ತಿದ್ದಿತು. ॥೨೫೦॥

ಕೆಲವು ದಿನಗಳು ಕಳೆಯಲು ಆ ಪಕ್ಷಿಯು ಗರ್ಭವನ್ನು ಧರಿಸಿತು. ಅದು ಒಂದಾನೊಂದು ಕಾಲದಲ್ಲಿ ಗರ್ಭಭಾರದಿಂದ ಬಳಲಿ, ಆ ಬ್ರಾಹ್ಮಣಶ್ರೇಷ್ಠನ ತೊಡೆಯ ಮೇಲೆ ಕುಳಿತುಕೊಂಡಿತು. ಆಗ ಆ ಬ್ರಾಹ್ಮಣನು ದರ್ಭೆಯ ಅಗ್ರದಿಂದ ಆ ಪಕ್ಷಿಯನ್ನು ಹೊಡೆದನು. ॥೨೫೧॥

ಆಗಲೇ ಆ ಹಕ್ಕಿಯು ಆರ್ತಧ್ವನಿಯಿಂದ ಕೂಗುತ್ತಾ ಮರಣವನ್ನೈದಿತು. ಬಳಿಕ ಅದರ ಗರ್ಭಕೋಶದಿಂದ ಚಿಕ್ಕದಾದ ಒಂದು ಪಕ್ಷಿಯು ದುಃಖದಿಂದ ಮರಗುತ್ತಾ ಹೊರಕ್ಕೆ ಬಂದಿತು. ॥೨೫೨॥

ಸ ಶಕುಂತೋ ಜಾತಮಾತ್ರಃ ಪ್ರಲಪನ್ನತಿದಾರುಣಂ ।
ಗಲದಶ್ರುಕಣಃ ಶೀಘ್ರಂ ತಮುವಾಚ ದ್ವಿಜಂ ತದಾ ॥೨೫೩॥

ದ್ವಿಜಾಧಮ ಕಥಂ ಮಾತಾ ನಿಹತಾ ಮಮ ಸಾ ತ್ವಯಾ ।
ಬಾಲಪುತ್ರಾತಿವೃದ್ಧಾ ಚ ಪತಿದೇವಾ ಪತಿವ್ರತಾ ॥೨೫೪॥

ಬಾಲಾನಾಂ ಪೋಷಣಂ ಮಾತ್ರಾ ಕರ್ತವ್ಯಮತಿಯತ್ನತಃ ।
ತೇನೈವ ಜೀವನಂ ಸಮ್ಯಗ್ಬಾಲಾನಾಂ ಭವತಿ ಧ್ರುವಂ ॥೨೫೫॥

ಅದ್ಯೈವ ಭರ್ತುರೇತಸ್ಯ ಮತಿರ್ನೂನಂ ಭವಿಷ್ಯತಿ ।
ಪೋಷಣೇನ ವಿನಾ ನಾಸ್ತಿ ವೃದ್ಧಾನಾಮಪಿ ಜೀವನಂ ॥೨೫೬॥

ಮದನ್ಯೇಽಪಿ ಮರಿಷ್ಯಂತಿ ಚಾಸ್ಯ ಏವ ಹಿ ಬಾಲಕಾಃ ।
ತೇಷಾಂ ಮಾತೃವಿಹೀನಾನಾಂ ಕಥಂ ಸ್ಯಾತ್ಪ್ರಾಣಧಾರಣಂ ॥೨೫೭॥

---

ಆ ಪಕ್ಷಿಯು ಹುಟ್ಟಿದಾಗಲೇ ಹೃದಯವು ಸೀಳುವಂತೆ ದುಃಖದಿಂದ ಕೂಗುತ್ತಾ ಕಣ್ಣೀರನ್ನು ಸುರಿಸುತ್ತಾ ಆ ಬ್ರಾಹ್ಮಣನನ್ನು ಕುರಿತು ಹೀಗೆಂದಿತು. ॥೨೫೩॥

" ಎಲೈ ಬ್ರಾಹ್ಮಣಾಧಮನೇ, ವೃದ್ಧೆಯೂ ಪತಿವ್ರತೆಯೂ ಚಿಕ್ಕ ಮಗುವನ್ನು ಹೆತ್ತವಳೂ ಆದ ನನ್ನ ತಾಯಿಯನ್ನು ನೀನು ನಿಷ್ಕಾರಣವಾಗಿ ಕೊಂದೆಯಲ್ಲವೇ ! ॥೨೫೪॥

ತಾಯಿಯು ಮಕ್ಕಳನ್ನು ಅತ್ಯಂತ ಜಾಗರೂಕತೆಯಿಂದ ರಕ್ಷಿಸುವಳು. ಅವಳಿಂದಲೇ ಬಾಲಕರು ಸುಖದಿಂದ ಜೀವಿಸುವರು. ॥೨೫೫॥

ಇನ್ನು ಇದರ ಪತಿಯೂ ಸಹ ಈಗಲೇ ಮೃತನಾಗುವನು. ಏಕೆಂದರೆ ವೃದ್ಧರು ರಕ್ಷಣೆಯಿಲ್ಲದೇ ಬದುಕಲಾರರು. ॥೨೫೬॥

ಈ ಪಕ್ಷಿಯ ಉಳಿದ ಮಕ್ಕಳೂ ಸಹ ಈಗಲೇ ಮರಣವನ್ನು ಹೊಂದುವುವು. ತಾಯಿಯಿಲ್ಲದಿರುವ ಅವು ಬದುಕುವ ಬಗೆ ಹೇಗೆ ? ॥೨೫೭॥

ವಯಂ ಧನ್ಯಾ ಭವಿಷ್ಯಾಮಃ ಕಾಶ್ಯಾಂ ಮರಣಮಾತ್ರತಃ ।
ತನ್ವೈವ ಯಾತನಾ ಘೋರಾ ಭವಿಷ್ಯತಿ ನ ಸಂಶಯಃ ॥೨೫೮॥

ಅಸ್ಮಾಭಿಃ ಪೂರ್ವಪೂರ್ವೇಷು ಜನ್ಮಸು ಪ್ರಬಲಂ ತಪಃ ।
ಕಾಶ್ಯಾಂ ತನುವಿಯೋಗಾರ್ಥಂ ಕೃತಮುದ್ದಿಶ್ಯ ಶಂಕರಂ ॥೨೫೯॥

ಕಾಶ್ಯಾಮಂತರ್ಗೃಹೇ ಶೈವೇ ಜೀವಹತ್ಯಾ ಕೃತಾ ತ್ವಯಾ ।
ತೇನ ಪಾಪೇನ ದುಷ್ಟಾತ್ಮನ್ಯಾತನಾ ತೇ ಭವಿಷ್ಯತಿ ॥೨೬೦॥

ಅನೇಕಯುಗಪರ್ಯಂತಂ ಘೋರದುಃಖೌಘಸಂಶ್ರಯಾಂ ।
ಪೈಶಾಚೀಂ ತನುಮಾಶ್ರಿತ್ಯ ವಸ ದುರ್ಭಗ ದುರ್ಮುಖ ॥೨೬೧॥

ಕ್ಷುತ್ತೃಟ್ಪರೀತಃ ಸತತಂ ನಿರ್ಜನಂ ವನಮಾಶ್ರಿತಃ ।
ನಿವಸಸ್ವ ದುರಾಚಾರಃ ಪಿಶಾಚತನುಸಂಶ್ರಯಃ ॥೨೬೨॥

---

ನಾವಾದರೋ ಈ ಕಾಶೀಕ್ಷೇತ್ರದಲ್ಲಿ ಮೃತರಾಗುವ ಮಾತ್ರದಿಂದಲೇ ಪುಣ್ಯಶಾಲಿಗಳಾಗುವೆವು. ಆದರೆ ನೀನು ಮಾತ್ರ ಮುಂದೆ ದಾರುಣವಾದ ಯಾತನೆಯನ್ನನುಭವಿಸುವೆ. ಇದರಲ್ಲಿ ಸಂಶಯವಿಲ್ಲ. ॥೨೫೮॥

ನಾವು ಪೂರ್ವಜನ್ಮದಿಂದ ಮೊದಲುಗೊಂಡು ಅನೇಕ ಜನ್ಮಗಳಲ್ಲಿ ಕಾಶೀಕ್ಷೇತ್ರದಲ್ಲಿ ಮರಣವನ್ನು ಹೊಂದುವುದಕ್ಕೋಸ್ಕರ ಶಿವನನ್ನು ಕುರಿತು ಉಗ್ರವಾದ ತಪಸ್ಸನ್ನಾಚರಿಸಿರುವೆವು. ॥೨೫೯॥

ಎಲೈ ದುಷ್ಟನೇ, ನೀನು ಕಾಶೀಕ್ಷೇತ್ರದಲ್ಲಿರುವ ಈ ಶಿವಾಲಯದಲ್ಲಿ ಜೀವಹತ್ಯೆಯನ್ನು ಮಾಡಿರುವೆ. ಆದರಿಂದುಂಟಾದ ಪಾಪದಿಂದ ನೀನು ಭಯಂಕರವಾದ ಯಾತನೆಯನ್ನನುಭವಿಸುವೆ. ॥೨೬೦॥

ಎಲೈ ಮೂರ್ಖನೇ, ಭಯಂಕರವಾದ ದುಃಖಪರಂಪರೆಗಳಿಗೆ ನೆಲೆಯಾದ ಪಿಶಾಚಿಯ ಶರೀರವನ್ನು ಧರಿಸಿ, ಅನೇಕ ಯುಗಗಳು ಕಳೆಯುವ ವರೆಗೂ ವಾಸವಾಗಿರು. ॥೨೬೧॥

ನೀನು ನಿರಂತರವೂ ನಿರ್ಜನವಾದ ಅರಣ್ಯದಲ್ಲಿ ವಾಸವಾಗಿದ್ದು ಹಸಿವು ಬಾಯಾರಿಕೆಯಿಂದ ಪೀಡಿತನಾಗಿ ದುರಾಚಾರಿಯಾಗಿ ಪಿಶಾಚಿಯ ದೇಹವನ್ನು ತಾಳಿ ಜೀವಿಸು. ॥೨೬೨॥

ಏವಂ ಪ್ರಲಪಮಾನಂ ತಂ ದೃಷ್ಟ್ವಾ ಬ್ರಹ್ಮಾ ವಿಹಂಗಮಂ ।
ವಿಲೋಕ್ಯ ತಂ ದ್ವಿಜಂ ಚಾಥ ಬಭಾಷೇ ವಚನಂ ತದಾ ॥೨೬೩॥

ಏತಸ್ಯ ಮಾತಾ ನಿಹತಾ ಕಿಮರ್ಥಂ ಸಾ ದ್ವಿಜ ತ್ವಯಾ ।
ಕೃತ್ವಾ ಕಾಶ್ಯಾಂ ವೃಥಾ ಪಾಪಂ ಕಿಮರ್ಥಂ ಸ್ಥೀಯತೇ ತ್ವಯಾ ॥೨೬೪॥

ಏತನ್ಮರಣಮಾತ್ರೇಣ ಪತಿರಸ್ಯಾಸ್ತು ತಾದೃಶಃ ।
ಮರಿಷ್ಯತ್ಯದ್ಯ ವಾ ಶ್ವೋ ವಾ ಸಂದೇಹೋ ನಾತ್ರ ವರ್ತತೇ ॥೨೬೫॥

ಪಿಶಾಚತನವಃ ಪ್ರಾಪ್ಯ ಮೃತಸ್ತಜ್ಜೀವಸಂಖ್ಯಯಾ ।
ತ್ವಯಾ ವನೇ ನ ಸಂದೇಹೋ ನಿರ್ಜಲೇ ನಿರ್ಜನೇ ಸದಾ ॥೨೬೬॥

ಕಿಂ ಚ ಕಾಶ್ಯಾಂ ತ್ವಯಾ ಪೂರ್ವಂ ಪರಾರ್ಥಮಪಿ ಯತ್ನತಃ ।
ದ್ರವ್ಯಲೋಭೇನ ದುಷ್ಟಾತ್ಮನ್ರುದ್ರಾಧ್ಯಾಯಜಪಃ ಕೃತಃ ॥೨೬೭॥

---

ಈರೀತಿಯಲ್ಲಿ ಶೋಕದಿಂದ ಕೂಗುತ್ತಿದ್ದ ಆ ಪಕ್ಷಿಯನ್ನು ನೋಡಿ ಬ್ರಹ್ಮನು ಆ ಬ್ರಾಹ್ಮಣನನ್ನು ಕುರಿತು ಹೀಗೆಂದನು. ॥೨೬೩॥

ಎಲೈ ಬ್ರಾಹ್ಮಣನೇ, ನೀನು ಈ ಪಕ್ಷಿಯ ತಾಯಿಯನ್ನು ಏತಕ್ಕಾಗಿ ಕೊಂದಿರುವೆ? ಪಾಪಕರ್ಮವನ್ನಾಚರಿಸಿ ನೀನು ಈ ಕಾಶೀಕ್ಷೇತ್ರದಲ್ಲೇಕೆ ವಾಸವಾಗಿರುವೆ? ॥೨೬೪॥

ಈ ಪಕ್ಷಿಯು ಮರಣದಿಂದ ಇದರ ಪತಿಯು ಈ ದಿನವಾಗಲಿ, ನಾಳೆಯಾಗಲಿ ಮೃತನಾಗುವನು. ಇದರಲ್ಲಿ ಸಂಶಯವಿರುವುದಿಲ್ಲ. ॥೨೬೫॥

ಈ ಪಕ್ಷಿಗಳ ಸಂಖ್ಯೆಯು ಎಷ್ಟಿರುವುದೋ ಅಷ್ಟೊಂದು ಪಿಶಾಚ ಶರೀರಗಳನ್ನು ಧರಿಸಿ ನೀನು ನಿರ್ಜನವೂ ನಿರ್ಜಲವೂ ಆದ ವನದಲ್ಲಿ ವಾಸಮಾಡುವೆ. ಇದರಲ್ಲಿ ಸಂಶಯವಿಲ್ಲ. ॥೨೬೬॥

ಅಲ್ಲದೆ ಈ ಹಿಂದೆ ನೀನು ಹಣದ ಆಸೆಗಾಗಿ ಇತರರಿಗೋಸ್ಕರ ರುದ್ರಾಧ್ಯಾಯವನ್ನು ಜಪಿಸಿರುವೆ. ॥೨೬೭॥

ತೇನ ರುದ್ರಪಿಶಾಚತ್ವಂ ತ್ವಯಾ ದುಃಖದಮುತ್ಕಟಂ ।
ಪ್ರಾಪ್ತವ್ಯಂ ನಾತ್ರ ಸಂದೇಹೋ ಭೈರವಸ್ಯಾಪಿ ತರ್ಜನಂ ॥೨೬೮॥

ರುದ್ರಾಧ್ಯಾಯಜಪಂ ಕಾಶ್ಯಾಂ ಯಃ ಪರಾರ್ಥಂ ಕರಿಷ್ಯತಿ ।
ಸ ವೇದರಾಶಿಪೂರ್ಣೋಽಪಿ ಪಿಶಾಚೋ ಭವತಿ ಧ್ರುವಂ ॥೨೬೯॥

ಅಲ್ಪಸ್ಯಾಪ್ಯತ್ರ ಧರ್ಮಸ್ಯ ವಿಕ್ರೇತಾ ಸರ್ವಥಾ ದ್ವಿಜ ।
ಭವಿಷ್ಯತಿ ನ ಸಂದೇಹಃ ಪಿಶಾಚಃ ಪರ್ವತಾಕೃತಿಃ ॥೨೭೦॥

ಅನಂತಫಲದಂ ಧರ್ಮಂ ರುದ್ರಾಧ್ಯಾಯಜಪಾರ್ಜಿತಂ ।
ಕಃ ಪ್ರಯಚ್ಛತಿ ಮೂಢಾತ್ಮಾ ಪರಸ್ಮೈ ಧನಲೋಭತಃ ॥೨೭೧॥

ಶರೀರಮಪಿ ದೇಯಂ ಸ್ಯಾತ್ಕದಾಚಿದ್ಧನಲೋಭತಃ ।
ಫಲಂ ನ ದೇಯಮನ್ಯಸ್ಮೈ ರುದ್ರಾಧ್ಯಾಯಜಪಾರ್ಜಿತಂ ॥೨೭೨॥

---

ಆದುದರಿಂದ ನೀನು ಭೈರವನಿಗೂ ಭಯವನ್ನುಂಟುಮಾಡುವ ರುದ್ರಪಿಶಾಚಿಯ ರೂಪವನ್ನು ತಾಳಿ ಹಗಲಿರುಳೂ ಅತ್ಯಂತ ದುಃಖವನ್ನನುಭವಿಸಬೇಕಾಗುವುದು. ॥೨೬೮॥

ಯಾವ ಮನುಷ್ಯನು ಕಾಶೀಕ್ಷೇತ್ರದಲ್ಲಿ ವಾಸವಾಗಿದ್ದು, ಪರರಿಗೋಸ್ಕರ ರುದ್ರಾಧ್ಯಾಯವನ್ನು ಜಪಿಸುವನೋ, ಅವನು ವೇದರಾಶಿಗಳನ್ನು ಅಧ್ಯಯನ ಮಾಡಿದ್ದರೂ ಸಹ ಪಿಶಾಚಿಯಾಗಿ ಹುಟ್ಟುವನು. ಇದು ನಿಜವು. ॥೨೬೯॥

ಎಲೈ ಬ್ರಾಹ್ಮಣನೇ, ಈ ಕಾಶೀಕ್ಷೇತ್ರದಲ್ಲಿ ದ್ರವ್ಯಲೋಭದಿಂದ ಅಲ್ಪವಾದ ಧರ್ಮವನ್ನು ವಿಕ್ರಯಿಸಿದರೂ ಅವನು ಪರ್ವತದಂತೆ ಉನ್ನತವಾದ ಆಕಾರವುಳ್ಳ ಪಿಶಾಚಿಯ ಜನ್ಮವನ್ನು ತಾಳುವನು. ॥೨೭೦॥

ಯಾವನು ತಾನೇ ಹಣದ ಆಸೆಯಿಂದ ರುದ್ರಾಧ್ಯಾಯದ ಜಪದಿಂದ ಸಂಗ್ರಹಿಸಿದ ಪುಣ್ಯವಿಶೇಷವನ್ನು ಇತರರಿಗೆ ಅರ್ಪಿಸುವನು ? ಹಾಗೆ ಅರ್ಪಿಸಿದರೆ ಅವನು ಅವಿವೇಕಿಯೇ ಅಲ್ಲವೆ ! ॥೨೭೧॥

ಒಂದು ವೇಳೆ ಹಣದಾಸೆಯಿಂದ ತನ್ನ ಶರೀರವನ್ನಾದರೂ ಪರನಿಗೆ ಅರ್ಪಿಸಬಹುದು. ಆದರೆ ರುದ್ರಾಧ್ಯಾಯದ ಜಪದಿಂದುಂಟಾಗುವ ಫಲವನ್ನು ಮಾತ್ರ ಇತರರಿಗೆ ಅರ್ಪಿಸಬಾರದು. ॥೨೭೨॥

ಶ್ರೀರುದ್ರಜಪಮನ್ಯಾರ್ಥಂ ಕರೋತಿ ಚ ಧನೇಚ್ಛಯಾ ।
ಸ ಪತತ್ಯೇವ ನರಕೇ ಯಾವದಾಚಂದ್ರತಾರಕಂ ॥೨೭೩॥

ಪುರಾ ಧನನಿಧಿರ್ನಾಮ ಕಶ್ಚಿದ್ಭೂಚಕ್ರಪಾಲಕಃ ।
ವೇದಶಾಸ್ತ್ರಪುರಾಣಜ್ಞಃ ಬ್ರಾಹ್ಮಣೋಽಭವದುತ್ತಮಃ ॥೨೭೪॥

ತೇನ ಘೋರತರಂ ತಪ್ತಂ ತಪಃ ಪೂರ್ವಭವೇ ಸದಾ ।
ಹಿಮವದ್ಗಿರಿಶೃಂಗಾಗ್ರೇ ಕಾಶೀಪ್ರಾಪ್ತ್ಯರ್ಥಮಾದರಾತ್ ॥೨೭೫॥

ಕೋಟಿಜನ್ಮಾವಧಿ ಪ್ರೀತ್ಯಾ ಹಿಮವಂತಮುಪಾಶ್ರಿತಃ ।
ಸ ಚಕಾರ ತಪೋ ಘೋರಂ ಕಾಶೀಪ್ರಾಪ್ತ್ಯರ್ಥಮೇವ ಹಿ ॥೨೭೬॥

ತತಃ ಶಿವಪ್ರಸಾದೇನ ಧನಮಾರ್ಜಿತ್ಯ ಧರ್ಮತಃ ।
ಕಾಶೀಂ ಪ್ರಾಪ ಸ ಮಾತಂಗತುರಂಗಧನಸಂವೃತಃ ॥೨೭೭॥

---

ಯಾವನು ಧನಲೋಭದಿಂದ ಪರರಿಗೋಸ್ಕರ ರುದ್ರಾಧ್ಯಾಯವನ್ನು ಜಪಿಸುವನೋ, ಅವನು ಚಂದ್ರನಕ್ಷತ್ರಗಳಿರುವ ವರೆಗೆ ನರಕದಲ್ಲಿ ಬೀಳುವನು. ॥೨೭೩॥

ಹಿಂದೆ ಒಂದಾನೊಂದು ಕಾಲದಲ್ಲಿ ವೇದವೇದಾಂಗಗಳನ್ನೂ, ಪುರಾಣಗಳನ್ನೂ ತಿಳಿದ ಶ್ರೇಷ್ಠನಾದ ಧನನಿಧಿಯೆಂಬ ಹೆಸರಿನ ಒಬ್ಬ ಬ್ರಾಹ್ಮಣ ದೊರೆಯಿದ್ದನು. ॥೨೭೪॥

ಅವನು ಪೂರ್ವಜನ್ಮದಲ್ಲಿ, ಕಾಶೀಕ್ಷೇತ್ರವನ್ನು ಪಡೆಯಬೇಕೆಂಬ ಉದ್ದೇಶದಿಂದ ಹಿಮವತ್ಪರ್ವತದ ಶಿಖರದಲ್ಲಿ ಭಯಂಕರವಾದ ತಪಸ್ಸನ್ನಾಚರಿಸಿದನು. ॥೨೭೫॥

ಅದೇ ರೀತಿಯಲ್ಲಿ ಅವನು ಕೋಟಿಜನ್ಮಗಳು ಕಳೆಯುವವರೆಗೂ ಕಾಶೀಕ್ಷೇತ್ರದ ಪ್ರಾಪ್ತಿಗೋಸ್ಕರವೇ ಭಕ್ತಿಯಿಂದ ಉಗ್ರವಾದ ತಪಸ್ಸನ್ನು ಆಚರಿಸುತ್ತಿದ್ದನು. ॥೨೭೬॥

ಬಳಿಕ ಈಶ್ವರಾನುಗ್ರಹಕ್ಕೆ ಪಾತ್ರನಾಗಿ, ಸನ್ಮಾರ್ಗದಿಂದ, ಹೇರಳವಾದ ಧನವನ್ನು ಸಂಪಾದಿಸಿ, ಗಜ, ತುರಗಾದಿಗಳೊಂದಿಗೆ ಕಾಶೀಕ್ಷೇತ್ರವನ್ನು ಸೇರಿದನು. ॥೨೭೭॥

ಸಂಪ್ರಾಪ್ಯ ಕಾಶೀಂ ವಿಶ್ವೇಶಂ ಸಂಪೂಜ್ಯ ವಿಧಿವದ್ದ್ವಿಜಃ ।
ಮೇನೇ ಕೃತಾರ್ಥಮಾತ್ಮಾನಂ ಶಿವೈಕಶರಣಃ ಸದಾ ॥೨೭೮॥

ತತಃ ಸ್ವಕಂ ಧನಂ ಸರ್ವಂ ದ್ವಿಜೇಭ್ಯೋ ದಾತುಮುದ್ಯತಃ ।
ಪ್ರಣಮ್ಯ ವಿಪ್ರಾನಮಲಾನುವಾಚ ಶಿವತತ್ಪರಾನ್ ॥೨೭೯॥

॥ ಧನನಿಧಿರುವಾಚ ॥

ಧನಮಾರ್ಜಿತಮೇತಸ್ಯ ವ್ಯಯಃ ಕಾಶ್ಯಾಂ ಮತೋ ಮಮ ।
ರುದ್ರಾಧ್ಯಾಯಜಪಂ ಕೃತ್ವಾ ಗೃಹ್ಣಂತು ಧನಮುತ್ತಮಂ ॥೨೮೦॥

॥ ಬ್ರಾಹ್ಮಣಾ ಊಚುಃ ॥

ಕಾಶ್ಯಾಂ ಪರಾರ್ಥಮನಘೋ ರುದ್ರಾಧ್ಯಾಯಜಪೋ ದ್ವಿಜ ।
ಕಥಂ ಕಾರ್ಯಂ ಪ್ರಯತ್ನೇನ ವದಾಸ್ಮಾಭಿರ್ಧನೇಚ್ಛಯಾ ॥೨೮೧॥

ಪರಾರ್ಥಂ ಧನಲೋಭೇನ ರುದ್ರಾಧ್ಯಾಯಜಪಃ ಕೃತಃ ।
ದ್ವಿತ್ರೈಸ್ತೈಸ್ತು ತನುಃ ಪ್ರಾಪ್ತಾ ಪೈಶಾಚೀ ದುಃಖದಾ ಸದಾ ॥೨೮೨॥

---

ಈ ಪ್ರಕಾರವಾಗಿ ಕಾಶಿಯನ್ನು ಸೇರಿ ಆ ಬ್ರಾಹ್ಮಣನು ಶಾಸ್ತ್ರೋಕ್ತರೀತಿಯಿಂದ ವಿಶ್ವೇಶ್ವರನನ್ನು ಪೂಜಿಸಿ, ಶಿವನನ್ನೇ ಮೊರೆಹೊಕ್ಕು ತಾನು ಕೃತಕೃತ್ಯನಾದೆನೆಂದು ಭಾವಿಸಿದನು. ॥೨೭೮॥

ಬಳಿಕ ಆವನು ತನ್ನ ಸಕಲ ಧನವನ್ನೂ ಬ್ರಾಹ್ಮಣರಿಗೆ ದಾನಮಾಡಬೇಕೆಂದು ಸಂಕಲ್ಪಿಸಿ, ಈಶ್ವರಭಕ್ತರೂ ಪವಿತ್ರರೂ ಆದ ಬ್ರಾಹ್ಮಣರನ್ನು ಕುರಿತು ಹೀಗೆಂದನು. ॥೨೭೯॥

“ಎಲೈ ಬ್ರಾಹ್ಮಣೋತ್ತಮರೇ, ನಾನು ಹೇರಳವಾದ ಧನವನ್ನು ಗಳಿಸಿರುವೆನು. ಇದನ್ನು ಈ ಕಾಶೀಕ್ಷೇತ್ರದಲ್ಲಿ ವ್ಯಯಮಾಡಬೇಕೆಂದಿರುವೆನು. ಆದುದರಿಂದ ನೀವು ನನಗಾಗಿ ರುದ್ರಾಧ್ಯಾಯವನ್ನು ಜಪಿಸಿ ಈ ಧನವನ್ನು ಸ್ವೀಕರಿಸಿರಿ.” ॥೨೮೦॥

ಆಗ ಬ್ರಾಹ್ಮಣರು “ಎಲೈ ಧನಿಕನೇ, ಕಾಶೀಕ್ಷೇತ್ರದಲ್ಲಿ ದ್ರವ್ಯಲೋಭದಿಂದ ಪರರಿಗೋಸ್ಕರ ಪವಿತ್ರವಾದ ರುದ್ರಾಧ್ಯಾಯಜಪವನ್ನು ಕೈಗೊಳ್ಳುವುದು ಉಚಿತವೇ? ॥೨೮೧॥

ಹಿಂದೆ ಇಬ್ಬರು ಮೂರು ಮಂದಿ ಬ್ರಾಹ್ಮಣರು ಹಣದ ಆಸೆಯಿಂದ ಇತರರಿ

ಕಿಂ ಧನೇನಾದ್ಯ ಬಹುನಾ ಕಿಂ ಕಾರ್ಯಂ ತೇನ ಸಾದರಂ ।
ಕಿಮೇತದ್ಧನಪುಷ್ಟೇನ ಶರೀರೇಣಾಪಿ ತದ್ವದ ॥೨೮೩॥

ಅಸ್ಮಾಭಿಃ ಪೂರ್ವಪೂರ್ವೇಷು ಜನ್ಮಭಿಃ ಪ್ರತ್ಯಹಂ ತಪಃ ।
ಕೃತಂ ತೇನೈವ ಕಾಶೀಯಂ ಪ್ರಾಪ್ತಾ ಮಾಹೇಶ್ವರೀ ಪುರೀ ॥೨೮೪॥

ಅತಃ ಪರಂ ದ್ವಿಜಾಸ್ಮಾಭಿಃ ಕರ್ತವ್ಯಂ ನಾಸ್ತಿ ಸರ್ವಥಾ ।
ನ ಧನೇಚ್ಛಾ ಶರೀರೇಚ್ಛಾ ನ ಚಾನ್ಯೇಚ್ಛಾ ನ ಸಂಶಯಃ ॥೨೮೫॥

ಅತಃ ಪರಂ ದ್ವಿಜಾತ್ಯಲ್ಪಕಾಲೇನೈವಾತ್ರ ಸರ್ವಥಾ ।
ವಿಶ್ವೇಶಕೃಪಯಾ ಸಮ್ಯಕ್ತನುತ್ಯಾಗೋ ಭವಿಷ್ಯತಿ ॥೨೮೬॥

ತತೋ ವಿಶ್ವೇಶ್ವರಃ ಸ್ವಾಂಕೇ ನಿವೇಶ್ಯಾಸ್ಮಭ್ಯಮಾದರಾತ್ ।
ಶೈವಂ ಪಂಚಾಕ್ಷರಂ ದಿವ್ಯಂ ತಾರಕಂ ದಾಸ್ಯತಿ ಧ್ರುವಂ ॥೨೮೭॥

---

ಗೋಸ್ಕರ ರುದ್ರಾಧ್ಯಾಯವನ್ನು ಜಪಿಸಿ ದುಃಖಕರವಾದ ಪಿಶಾಚಜನ್ಮವನ್ನು ಪಡೆದರು. ॥೨೮೨॥

ಹೆಚ್ಚಾದ ಧನದಿಂದೇನು ಪ್ರಯೋಜನವಿರುವುದು ? ಅದರಿಂದ ಮಾಡಬೇಕಾದುದೇನಿರುವುದು ? ಅನ್ಯಾಯಾರ್ಜಿತವಾದ ಈ ಧನದಿಂದ ಬೆಳೆಸಲ್ಪಟ್ಟ ಈ ಶರೀರದಿಂದಲಾದರೂ ಯಾವ ಪ್ರಯೋಜನವಿರುವುದು ! ಹೇಳು ! ॥೨೮೩॥

ನಾವು ಈ ಹಿಂದಿನ ಅನೇಕ ಜನ್ಮಗಳಲ್ಲಿ ಪ್ರತಿದಿನವೂ ತಪಸ್ಸನ್ನಾಚರಿಸಿರುವೆವು. ಆದುದರಿಂದಲೇ ನಾವೀಗ ಶಿವನು ನೆಲಸಿರುವ ಈ ಕಾಶೀಕ್ಷೇತ್ರದಲ್ಲಿ ಜನ್ಮವನ್ನೆತ್ತಿರುವೆವು. ॥೨೮೪॥

ಇನ್ನು ಮುಂದೆ ಈಶ್ವರಾರಾಧನೆಯೊಂದನ್ನು ಬಿಟ್ಟರೆ ಇನ್ನಾವುದೂ ನಮ್ಮ ಕರ್ತವ್ಯವಾಗಿರುವುದಿಲ್ಲ. ನಮಗೆ ದ್ರವ್ಯದಲ್ಲಿ ಆಸೆಯಿರುವುದಿಲ್ಲ. ಶರೀರವೂ ಬೇಡವಾಗಿದೆ. ಇನ್ನಿತರ ಯಾವ ಇಚ್ಛೆಯೂ ನಮಗಿಲ್ಲ. ಇದರಲ್ಲಿ ಸಂಶಯಪಡಬೇಡ. ॥೨೮೫॥

ಎಲೈ ಬ್ರಾಹ್ಮಣರಾಜನೇ, ಇನ್ನು ಮುಂದೆ ವಿಶ್ವೇಶ್ವರನ ಕೃಪೆಯಿಂದ ನಮಗೆ ಅತ್ಯಲ್ಪಕಾಲದಲ್ಲಿಯೇ ಶರೀರವಿಯೋಗವುಂಟಾಗುವುದು. ॥೨೮೬॥

ಆಗ ವಿಶ್ವೇಶ್ವರನು ನಮ್ಮನ್ನು ಆದರದಿಂದ ಬರಮಾಡಿಕೊಂಡು ತನ್ನ

ತತೋಽನೇಕಮಹಾದುಃಖಸಂಗತ್ಯಾಗೋ ಭವಿಷ್ಯತಿ ।
ತತಃ ಪ್ರಾಪ್ತವ್ಯಮಸ್ಮಾಭಿಃ ಸ್ವರೂಪಂ ಶಂಕರಸ್ಯ ಹಿ ॥೨೮೮॥

ಧರ್ಮೇಽಸ್ಮಿನ್ನೇವ ಸದಾ ಸ್ಥೇಯಂ ತ್ವಯಾ ಕಾಶ್ಯಾಂ ಪ್ರಯತ್ನತಃ ।
ಮೋಕ್ಷಂ ದಾಸ್ಯತಿ ವಿಶ್ವೇಶೋ ದೇಹಾಂತೇ ಸರ್ವಥಾ ದ್ವಿಜ ॥೨೮೯॥

ಇತ್ಯುಕ್ತ್ವಾ ತೇ ದ್ವಿಜಾ ಧೀರಾ ನಿವೃತ್ತಾ ಧನಲೋಭತಃ ।
ಶಿವಲಿಂಗಾರ್ಚನಾಸಕ್ತಾಃ ಪಾಂಡುಪರ್ಣಜಲಾಶನಾಃ ॥೨೯೦॥

ತತಃ ಸ ವಿಪ್ರಃ ಸ್ವಧನಂ ವಿಲೋಕ್ಯಾತ್ಯಂತದುಃಖಿತಃ ।
ರುರೋದೋಚ್ಚೈರ್ಧನತ್ಯಾಗಃ ಪಾತ್ರೇ ನಾಸೀದಿತಿ ದ್ವಿಜಃ ॥೨೯೧॥

ತದಾನೀಮಾಗತಃ ಕಶ್ಚಿದ್ಬ್ರಾಹ್ಮಣೋ ವೇದಪಾರಗಃ ।
ಮಾ ರೋದೀಃ ಕಿಮಭೀಷ್ಟಂ ತೇ ತತ್ಕರೋಮೀತಿ ಸೋಽಬ್ರವೀತ್॥೨೯೨॥

---

ತೊಡೆಯ ಮೇಲೆ ನಮ್ಮನ್ನು ಕುಳ್ಳಿರಿಸಿಕೊಂಡು ಸಂಸಾರತಾರಕವಾದ ಶಿವಪಂಚಾಕ್ಷರ ಮಂತ್ರವನ್ನುಪದೇಶಿಸುವನು. ಇದು ನಿಜವು. ||೨೮೭||

ಶಿವಪಂಚಾಕ್ಷರಮಂತ್ರದ ಜಪದಿಂದ ನಾನಾಬಗೆಯ ಭಯಂಕರವಾದ ದುಃಖಗಳು ನಾಶಹೊಂದುವುವು. ಬಳಿಕ ನಾವು ಶಿವನ ಸಾರೂಪ್ಯವನ್ನೇ ಹೊಂದುವೆವು. ||೨೮೮||

ಎಲೈ ಬ್ರಾಹ್ಮಣನೇ, ನೀನು ಈ ಕಾಶೀಕ್ಷೇತ್ರದಲ್ಲಿ ಅತ್ಯಂತ ಜಾಗರೂಕನಾಗಿ ಧರ್ಮಮಾರ್ಗವನ್ನೇ ಅವಲಂಬಿಸಿರಬೇಕು. ಇಲ್ಲಿ ದೇಹತ್ಯಾಗವಾದ ಬಳಿಕ ಶಿವನು ನಿಮಗೆ ಮೋಕ್ಷವನ್ನು ದಯಪಾಲಿಸುವನು.'' ||೨೮೯||

ಹೀಗೆಂದು ಹೇಳಿ ಧೀರರಾದ ಆ ಬ್ರಾಹ್ಮಣರು ಧನದ ಆಸೆಗೆ ಒಳಗಾಗಲಿಲ್ಲ. ಶಿವಲಿಂಗಾರ್ಚನೆಯಲ್ಲಿ ಆಸಕ್ತರಾದ ಅವರು ಕೇವಲ ತರಗೆಲೆ ಮತ್ತು ಉದಕಗಳಿಂದಲೇ ಜೀವಿಸುತ್ತಿದ್ದರು. ||೨೯೦||

ತರುವಾಯ ಆ ಬ್ರಾಹ್ಮಣನು ತನ್ನ ದ್ರವ್ಯರಾಶಿಯ ಕಡೆ ನೋಡಿ ಅತ್ಯಂತ ದುಃಖಿತನಾಗಿ '' ಈ ಧನವು ಸತ್ಪಾತ್ರರಲ್ಲಿ ಅರ್ಪಿತವಾಗಲಿಲ್ಲ '' ಎಂದು ಹೇಳುತ್ತಾ ಗಟ್ಟಿಯಾಗಿ ಅತ್ತನು. ||೨೯೧||

ಆಗ ವೇದಾಧ್ಯಯನ ಸಂಪನ್ನನಾದ ಒಬ್ಬಾನೊಬ್ಬ ಬ್ರಾಹ್ಮಣನು ಅಲ್ಲಿಗೆ

ಇತ್ಯುಕ್ತಂ ತದ್ದ್ವಿಜಶ್ರೇಷ್ಠಂ ಪ್ರಣಮ್ಯ ದ್ವಿಜಸತ್ತಮಃ ।
ಕೃತಾಂಜಲಿಪುಟೋ ನಮ್ರೋ ಬಭಾಷೇ ವಚನಂ ದ್ವಿಜಃ ॥೨೯೩॥

ದ್ವಿಜವರ್ಯೋsತ್ತ್ರವಾಶ್ವಾನಾಮಸ್ತಿ ಕೋಟ್ಯಯುತಂ ಮಮ ।
ಮತ್ತಮಾತಂಗಕೋಟೀನಾಮಸ್ತಿ ಲಕ್ಷಚತುಷ್ಟಯಂ ॥೨೯೪॥

ಸುವರ್ಣರತ್ನರಚಿತಸ್ತ್ರಾಮ್ರಾಣಾಂ ತು ದ್ವಿಜೋತ್ತಮ ।
ಸಂಖ್ಯಾ ನಾಸ್ತಿ ನ ಸಂದೇಹೋ ಗವಾಮಪಿ ಮಮೈವ ಹಿ ॥೨೯೫॥

ಇದಂ ಧನಂ ಮಯಾ ದೇಯಂ ಮದರ್ಥಂ ಯಃ ಕರಿಷ್ಯತಿ ।
ರುದ್ರಾಧ್ಯಾಯಜಪಂ ಸಮ್ಯಕ್ತಸ್ಮೈ ನಾಸ್ತ್ಯತ್ರ ಸಂಶಯಃ ॥೨೯೬॥

ಏಕವಾರಂ ಕೃತೇನಾಪಿ ರುದ್ರಾಧ್ಯಾಯಜಪೇನ ಹಿ ।
ಏಕೇನೈವ ದ್ವಿಜೇನೇದಂ ಪ್ರಾಪ್ತವ್ಯಂ ಧನಮುತ್ತಮಂ ॥೨೯೭॥

---

ಬಂದು "ಎಲೈ ವಿಪ್ರನೇ, ಆಳಬೇಡ. ನೀನು ಬಯಸುವುದೇನು! ಅದನ್ನು ನಾನು ಈಡೇರಿಸುವೆನು" ಎಂದನು. ||೨೯೨||

ಹೀಗೆ ಹೇಳಿದ ಆ ಬ್ರಾಹ್ಮಣಶ್ರೇಷ್ಠನಿಗೆ ಈ ಧನಿಕನು ನಮಸ್ಕರಿಸಿ, ಅಂಜಲಿಬದ್ಧನಾಗಿ ವಿನಯದಿಂದ ಹೀಗೆಂದನು. ||೨೯೩||

"ಎಲೈ ಬ್ರಾಹ್ಮಣಶ್ರೇಷ್ಠನೇ, ನನ್ನ ಬಳಿ ಕೋಟ್ಯಂತರ ಶ್ರೇಷ್ಠವಾದ ಕುದುರೆಗಳೂ ನಾಲ್ಕು ಲಕ್ಷ ಕೋಟಿ ಸಂಖ್ಯೆಯ ಆನೆಗಳೂ ಇರುವುವು. ||೨೯೪||

ಅಲ್ಲದೇ ನನ್ನ ಬಳಿಯಲ್ಲಿರುವ ಸ್ವರ್ಣನಾಣ್ಯ ಮತ್ತು ರತ್ನನಾಣ್ಯಗಳನ್ನು ಲೆಕ್ಕಿಸಲು ಅಸಾಧ್ಯವಾಗಿರುವುದು. ಗೋವುಗಳ ಸಂಖ್ಯೆಯು ಅಗಣಿತವಾಗಿರುವುದು. ||೨೯೫||

ಯಾವನು ನನಗೋಸ್ಕರ ಭಕ್ತಿಪೂರ್ವಕವಾಗಿ ರುದ್ರಾಧ್ಯಾಯವನ್ನು ಜಪಿಸುವನೋ ಅವನಿಗೆ ಈ ಧನವನ್ನು ದಾನಮಾಡಬೇಕೆಂದು ಸಂಕಲ್ಪಿಸಿರುವೆನು. ||೨೯೬||

ಒಬ್ಬನೇ ಒಬ್ಬ ಬ್ರಾಹ್ಮಣನು ಒಂದು ಬಾರಿಯಾದರೂ ರುದ್ರಾಧ್ಯಾಯವನ್ನು ನನಗಾಗಿ ಜಪಿಸಿದರೆ ಆಗ ಅವನು ಈ ಧನವನ್ನೆಲ್ಲಾ ಪ್ರತಿಗ್ರಹಿಸಬಹುದು. ||೨೯೭||

ಇದಂ ಧರ್ಮಾರ್ಜಿತಂ ವಿತ್ತಂ ಶ್ರೀರುದ್ರಾಧ್ಯಾಯಜಾಪಕೇ ।
ವಿಧಾಯ ತದನು ಪ್ರೀತೋ ವಸಾಮ್ಯತ್ರ ನ ಸಂಶಯಃ ॥೨೯೮॥

ಇತ್ಯುದೀರಿತಮಾಕರ್ಣ್ಯ ಸ ಏವ ದ್ವಿಜಪುಂಗವಃ ।
ಉವಾಚ ವಚನಂ ಚಾರು ತದಾ ಧನನಿಧಿಂ ಪ್ರತಿ ॥೨೯೯॥

ಏಕವಾರಂ ದ್ವಿಜಶ್ರೇಷ್ಠ ತ್ವದರ್ಥಂ ಸಾವಧಾನತಃ ।
ರುದ್ರಾಧ್ಯಾಯಜಪಂ ಸಮ್ಯಕ್ಕರಿಷ್ಯೇ ಮುಕ್ತಿಮಂಡಪೇ ॥೩೦೦॥

ಇತ್ಯುಕ್ತ್ವಾ ತದನುಜ್ಞಾತೋ ಮುಕ್ತಿಮಂಡಪಮಾಶ್ರಿತಃ ।
ಏಕವಾರಂ ಚಕಾರಾಥ ರುದ್ರಾಧ್ಯಾಯಜಪಂ ದ್ವಿಜಃ ॥೩೦೧॥

ಸಮಾಪ್ತೇ ತು ಜಪೇ ತಸ್ಮೈ ಧನಂ ಧನನಿಧಿರ್ಮುದಾ ।
ದದೌ ಬಹುವಿಧಂ ಸರ್ವಂ ಗಜಾಶ್ವಾದಿಕಮಾದರಾತ್ ॥೩೦೨॥

---

ಸನ್ಮಾರ್ಗದಿಂದ ಸಂಗ್ರಹಿಸಿದ ಈ ಧನವನ್ನು ರುದ್ರಾಧ್ಯಾಯವನ್ನು ಜಪಿಸಿದ ಬ್ರಾಹ್ಮಣನಿಗೆ ದಾನಮಾಡಿ ನಾನು ತೃಪ್ತನಾಗಿ ಜೀವಿಸುವೆನು.'' ॥೨೯೮॥

ಧನನಿಧಿಯು ಹೀಗೆಂದು ಹೇಳಲು ಅದನ್ನು ಕೇಳಿ ಆ ಬ್ರಾಹ್ಮಣಶ್ರೇಷ್ಠನು ಧನನಿಧಿಯನ್ನು ಕುರಿತು ಮಧುರವಾದ ವಾಣಿಯಿಂದ ಹೀಗೆಂದನು.'' ॥೨೯೯॥

ಎಲೈ ಬ್ರಾಹ್ಮಣೋತ್ತಮನೇ, ನಾನು ನಿನಗೋಸ್ಕರ ಜಾಗರೂಕತೆಯಿಂದ *ಮುಕ್ತಿಮಂಡಪದಲ್ಲಿ ಕುಳಿತು ರುದ್ರಾಧ್ಯಾಯವನ್ನು ಜಪಿಸುವೆನು. ॥೩೦೦॥

ಹೀಗೆಂದು ಹೇಳಿ ಆ ಬ್ರಾಹ್ಮಣನು ಧನನಿಧಿಯೆಂಬ ಹೆಸರುಳ್ಳ ಬ್ರಾಹ್ಮಣ ಧನಿಕನ ಸಮ್ಮತಿಯನ್ನು ಪಡೆದು ಮುಕ್ತಿಮಂಟಪದಲ್ಲಿ ಕುಳಿತುಕೊಂಡು ಒಂದು ಬಾರಿ ರುದ್ರಾಧ್ಯಾಯವನ್ನು ಜಪಿಸಿದನು. ॥೩೦೧॥

ರುದ್ರಜಪವು ಮುಗಿಯಲು ಧನನಿಧಿಯು ಗಜ, ಅಶ್ವ ಮುಂತಾದುವುಗಳಿಂದ ಕೂಡಿರುವ ತನ್ನ ಸಕಲ ಸಂಪತ್ತನ್ನೂ ಆ ಬ್ರಾಹ್ಮಣನಿಗೆ ಸಂತೋಷದಿಂದ ದಾನಮಾಡಿದನು. ॥೩೦೨॥

---

*ಕಾಶೀಕ್ಷೇತ್ರದ ವಿಶ್ವೇಶ್ವರ ದೇವಾಲಯದ ಒಳಭಾಗದಲ್ಲಿ ವಿಶ್ವೇಶ್ವರನ ಮುಂಭಾಗದಲ್ಲಿರುವ ಒಂದಾನೊಂದು ಮಂಟಪಕ್ಕೆ ಮುಕ್ತಿಮಂಟಪವೆಂದು ಹೆಸರು.

ತತೋ ಧನನಿಧಿಃ ಕಾಶ್ಯಾಮಲ್ಪೈರೈವ ದಿನೈರ್ಮೃತಃ ।
ಅವಾಪ ಶಿವಸಾಯುಜ್ಯಂ ಶಿವಸ್ಯೈವ ಪ್ರಸಾದತಃ ॥೩೦೩॥

ದ್ವಿಜೋಽಪಿ ಸ ಧನಗ್ರಾಹೀ ತತಃ ಸಂತಪ್ತಮಾನಸಃ ।
ವಸಿಷ್ಠಂ ಪ್ರಣಿಪತ್ಯಾಹ ಕೃತಾಂಜಲಿಪುಟೋ ದ್ವಿಜಃ ॥೩೦೪॥

ಪರಾರ್ಥಂ ಧನಲೋಭೇನ ರುದ್ರಾಧ್ಯಾಯಜಪಃ ಕೃತಃ ।
ಮಯಾ ಪೂರ್ವಂ ಪ್ರಯತ್ನೇನ ಧರ್ಮಶಾಸ್ತ್ರವಿಚಕ್ಷಣ ॥೩೦೫॥

ಪರಾರ್ಥಕೃತತದ್ರುದ್ರಜಪಸಂಚಿತಪಾತಕಂ ।
ಕೇನ ನಶ್ಯತಿ ಕಿಂ ವಾತ್ರ ಸಾಧನಂ ವದ ಸಾದರಂ ॥೩೦೬॥

॥ ವಸಿಷ್ಠ ಉವಾಚ ॥

ರುದ್ರಾಧ್ಯಾಯಜಪಂ ಪುಣ್ಯಂ ಪರಾರ್ಥಂ ಯಃ ಕರಿಷ್ಯತಿ ।
ಸ ಪಿಶಾಚೋ ಭವತ್ಯೇವ ನಾಸ್ತಿ ತತ್ಪಾಪನಿಷ್ಕೃತಿಃ ॥೩೦೭॥

---

ಬಳಿಕ ಸ್ವಲ್ಪಕಾಲವು ಕಳೆಯಲು ಧನನಿಧಿಯು ಮೃತನಾಗಿ ಈಶ್ವರನ ಅನುಗ್ರಹದಿಂದ ಅವನು ಶಿವಸಾಯುಜ್ಯವನ್ನು ಹೊಂದಿದನು. ॥೩೦೩॥

ಧನದಾನವನ್ನು ಪ್ರತಿಗ್ರಹಿಸಿದ ಈ ಬ್ರಾಹ್ಮಣನೂ ಸಹ ಅತ್ಯಂತ ದುಃಖಿತನಾಗಿ ವಸಿಷ್ಠಮಹರ್ಷಿಯ ಬಳಿಗೆ ಹೋಗಿ ಅವನಿಗೆ ನಮಸ್ಕರಿಸಿ ಅಂಜಲಿಬದ್ಧನಾಗಿ ನಿಂತು, ॥೩೦೪॥

"ಓ ಧರ್ಮಶಾಸ್ತ್ರವಿಶಾರದನಾದ ಮುನಿಯೇ, ನಾನು ಈ ಹಿಂದೆ ಧನದ ಆಸೆಯಿಂದ ಪರರಿಗೋಸ್ಕರ ರುದ್ರಾಧ್ಯಾಯಜಪವನ್ನು ಆಚರಿಸಿರುವೆನು. ॥೩೦೫॥

ಪರರಿಗೋಸ್ಕರ ಜಪಿಸಿದ ಆ ರುದ್ರಾಧ್ಯಾಯಜಪದಿಂದ ಉಂಟಾದ ಪಾಪವನ್ನು ಹೋಗಲಾಡಿಸುವ ಸಾಧನವು ಅದಾವುದಿರುವುದು ? ನನಗೆ ಹೇಳು." ಎಂದು ಕೇಳಿದನು. ॥೩೦೬॥

ಆಗ ವಸಿಷ್ಠಋಷಿಯು ಹೀಗೆ ನುಡಿದನು. ಪುಣ್ಯಕರವಾದ ರುದ್ರಾಧ್ಯಾಯಜಪವನ್ನು ಯಾವನು ಪರರಿಗೋಸ್ಕರ ಆಚರಿಸುವನೋ ಅವನು ನಿಜವಾಗಿಯೂ ಪಿಶಾಚಿಯಾಗಿಯೇ ಹುಟ್ಟುವನು. ಆ ಪಾಪಕ್ಕೆ ಪ್ರಾಯಶ್ಚಿತ್ತವೇ ಇರುವುದಿಲ್ಲ ॥೩೦೭॥

ವೇದಪಾರಾಯಣೈರ್ಧರ್ಮೈರನಂತೈರಪಿ ಸರ್ವದಾ ।
ಉಗ್ರಾನಂತತಪೋಭಿಶ್ಚ ತತ್ಪಾಪಂ ನ ವಿನಶ್ಯತಿ ॥೩೦೮॥

ಕಾಶ್ಯಾಂ ರುದ್ರಜಪಂ ಕೃತ್ವಾ ಪರಾರ್ಥಂ ಯಸ್ತು ಜೀವತಿ ।
ಧಿಗ್ಧಿಗ್ಧಿಕ್ತಸ್ಯ ಧಿಗ್ಜನ್ಮ ಧಿಗ್ಧಿಕ್ತಸ್ಯ ಚ ಜೀವನಂ ॥೩೦೯॥

ಪರಾರ್ಥಂ ರುದ್ರವಿಕ್ರೇತಾ ಭವಾನಸ್ಯತಿದಾರುಣಂ ।
ದ್ವಿಜ ರುದ್ರಪಿಶಾಚತ್ವಂ ಪ್ರಾಪ್ಸ್ಯೋಽಸ್ಯತ್ರ ನ ಸಂಶಯಃ ॥೩೧೦॥

ಮಹಾಪರ್ವತಸಂಕಾಶಂ ಶರೀರಂ ತೇ ಭವಿಷ್ಯತಿ ।
ಸೂಚ್ಯಗ್ರಸದೃಶಂ ವಕ್ತ್ರಂ ಭವಿಷ್ಯತಿ ತವ ಸ್ಫುಟಂ ॥೩೧೧॥

ಅನೇಕಯುಗಪರ್ಯಂತಂ ಕ್ಷುತ್ಪಿಪಾಸಾತುರೋಽನಿಶಂ ।
ವಸಿಷ್ಯತಿ ನ ಸಂದೇಹೋ ನಿರ್ಜಲೇ ನಿರ್ಜನೇ ವನೇ ॥೩೧೨॥

---

ವೇದಪಾರಾಯಣಗಳಿಂದಾಗಲಿ, ಅಸಂಖ್ಯಾಕವಾದ ಸತ್ಕರ್ಮಾಚರಣೆಗಳಿಂದಾಗಲಿ ಅಥವಾ ಘೋರವಾದ ತಪಸ್ಸುಗಳಿಂದಾಗಲಿ ಆ ಪಾಪವು ಕ್ಷಯಿಸಲಾರದು. ॥೩೦೮॥

ಯಾವನು ಕಾಶಿಯಲ್ಲಿ ಪರರಿಗೋಸ್ಕರ ರುದ್ರಾಧ್ಯಾಯವನ್ನು ಜಪಿಸಿ ಜೀವಿಸುವನೋ ಅವನ ಜನ್ಮವು ನಿರರ್ಥಕವು. ಅವನ ಜೀವನಕ್ಕೆ ಧಿಕ್ಕಾರವಿರಲಿ. ॥೩೦೯॥

ಎಲೈ ಬ್ರಾಹ್ಮಣನೇ, ಪರರಿಗೋಸ್ಕರ ರುದ್ರಮಂತ್ರವನ್ನು ವಿಕ್ರಯಿಸಿದ ನೀನೂ ಸಹ ಅತ್ಯಂತ ಭಯಂಕರ ರುದ್ರಪಿಶಾಚಿಯ ಜನ್ಮವನ್ನು ಪಡೆಯುವೆ. ಇದರಲ್ಲಿ ಸಂಶಯವಿಲ್ಲ. ॥೩೧೦॥

ನೀನು ಉನ್ನತವಾದ ಪರ್ವತದಂತಿರುವ ಶರೀರವನ್ನು ಪಡೆಯುವೆ. ನಿನ್ನ ಬಾಯಿಯು ಸೂಜಿಯ ರಂಧ್ರದಂತೆ ಸೂಕ್ಷ್ಮವಾಗಿ ಆಗುವುದು. ॥೩೧೧॥

ನೀನು ಅನೇಕ ಯುಗಗಳ ವರೆಗೆ ಹಸಿವು ಬಾಯಾರಿಕೆಗಳಿಂದ ಪೀಡಿತನಾಗಿ ನಿರ್ಜಲವೂ, ನಿರ್ಜನವೂ ಆದ ವನದಲ್ಲಿ ವಾಸಮಾಡುವೆ. ॥೩೧೨॥

ಕಾಶ್ಯಾಮೇವ ಶರೀರಂತೇ ದೈವಾತ್ತ್ಯಕ್ತಂ ಯದಿ ತ್ವಯಾ ।
ತದಾ ರುದ್ರಪಿಶಾಚತ್ವಂ ಪ್ರಾಪ್ಯ ದುಃಖಮವಾಪ್ಸ್ಯಸಿ ॥೩೧೩॥

ಕೋಟಿಶಸ್ತವ ಪಾರ್ಶ್ವಸ್ಥಾಃ ಕಾಲಭೈರವಕಿಂಕರಾಃ ।
ದೀರ್ಘಂ ತಪ್ತೋರುಖಡ್ಗಾಗ್ರೈಸ್ತಾಡಯಿಷ್ಯಂತಿ ದುರ್ಮದಾಃ ॥೩೧೪॥

ಸಹಸ್ರಯುಗಪರ್ಯಂತಮೇವಂ ಸ್ಥಿತ್ವಾ ತತಃ ಪರಂ ।
ಪ್ರಾಪ್ನೋಷಿ ದುಃಖದಾಂ ನಿತ್ಯಂ ಕಾಲಭೈರವಯಾತನಾಂ ॥೩೧೫॥

ಏಕವಾರಂ ಕೃತೋಽನ್ನಾರ್ಥಂ ರುದ್ರಾಧ್ಯಾಯಜಪೋ ದ್ವಿಜ ।
ಏವಂ ದುಃಖಪ್ರದಃ ಸೋಽಯಂ ಕಿಂ ಪುನರ್ಬಹುಧಾ ಕೃತಃ ॥೩೧೬॥

ರುದ್ರಾಧ್ಯಾಯೋ ನ ಜಪ್ತವ್ಯೋ ಕಾಮ್ಯಮುದ್ದಿಶ್ಯ ಸರ್ವಥಾ ।
ಸ್ವೈರಪಿ ಸ್ವಾರ್ಥಮನಘೈಃ ಕದಾಚಿದಪಿ ಯತ್ನತಃ ॥೩೧೭॥

---

ದೈವಯೋಗದಿಂದ ನೀನು ಕಾಶೀಕ್ಷೇತ್ರದಲ್ಲಿಯೇ ಶರೀರವನ್ನು ತ್ಯಜಿಸಿದರೆ ರುದ್ರಪಿಶಾಚಿಯಾಗಿ ಜನಿಸಿ ಇನ್ನೂ ಹೆಚ್ಚಿನ ದುಃಖವನ್ನು ಹೊಂದುವೆ. ||೩೧೩||

ಕೋಟಿಸಂಖ್ಯಾತರಾದ ಕಾಲಭೈರವನ ಸೇವಕರು ನಿನ್ನ ಪಾರ್ಶ್ವದಲ್ಲಿ ನಿಂತು ಕೆಂಪಾಗಿ ಕಾದ ಖಡ್ಗಗಳಿಂದ ಬಹುಕಾಲದವರೆಗೆ ಹೊಡೆಯುವರು. ||೩೧೪||

ಸಹಸ್ರಯುಗಗಳ ವರೆಗೂ ಇದೇ ರೀತಿಯಲ್ಲಿದ್ದು ಬಳಿಕ ನಿರಂತರವೂ ಕಾಲಭೈರವನಿಂದ ಅಸಹ್ಯವಾದ ದುಃಖವನ್ನು ಅನುಭವಿಸುವೆ. ||೩೧೫||

ಬ್ರಾಹ್ಮಣನೇ, ಒಂದೇ ಒಂದು ಬಾರಿ ಧನಾರ್ಥವಾಗಿ ಆಚರಿಸಿದ ರುದ್ರಾಧ್ಯಾಯಜಪವೂ ಸಹ, ಸಹಿಸಲಸಾಧ್ಯವಾದ ದುಃಖವನ್ನುಂಟುಮಾಡುವುದು. ಹೀಗಿರಲು ಅನೇಕ ವೇಳೆ ದುಡ್ಡಿಗಾಗಿ ಆಚರಿಸಿದ ರುದ್ರಾಧ್ಯಾಯಜಪದಿಂದ ಸಂಭವಿಸುವ ದುಃಖವನ್ನು ವರ್ಣಿಸಲು ಸಾಧ್ಯವೇ! ||೩೧೬||

ತನಗೋಸ್ಕರವೇ ರುದ್ರಾಧ್ಯಾಯವನ್ನು ಜಪಿಸಿದರೂ ಯಾವುದಾದರೂ ಫಲವನ್ನಪೇಕ್ಷಿಸಿ ಎಂದಿಗೂ ಜಪಿಸಬಾರದು. ||೩೧೭||

ಶಿವಾರ್ಥಮೇವ ಕರ್ತವ್ಯೋ ರುದ್ರಾಧ್ಯಾಯಜಪಃ ಸದಾ ।
ನಿಷ್ಕಾಮೈರನಘೈಃ ಶುದ್ಧೈರ್ಮೋಕ್ಷದಃ ಶಿವಚಿಂತಕೈಃ ॥೩೧೮॥

ರುದ್ರಾಧ್ಯಾಯಸ್ಯ ಮಾಹಾತ್ಮ್ಯಂ ಬ್ರಹ್ಮಣಾಪಿ ನ ಬುಧ್ಯತೇ ।
ಕಿಂ ತು ತಚ್ಛಂಕರೇಣೈವ ಜ್ಞಾಯತೇ ತತ್ತ್ವತೋ ಧ್ರುವಂ ॥೩೧೯॥

ರುದ್ರಾಧ್ಯಾಯಜಪಃ ಸಮ್ಯಕ್ಕರ್ತುಮೇವ ನ ಶಕ್ಯತೇ ।
ಬ್ರಹ್ಮಣಾಪಿ ನ ಸಂದೇಹಃ ಸತ್ಯಮೇವ ನ ಸಂಶಯಃ ॥೩೨೦॥

ರುದ್ರಾಧ್ಯಾಯಜಪೇ ಪ್ರೋಕ್ತಾ ನಿಯಮಾ ಬಹವೋ ಮತಾಃ ।
ತೇ ಕಥಂ ನಿಯಮಾಃ ಕರ್ತುಂ ಶಕ್ಯತೇ ಮಾದೃಶೈರ್ದ್ವಿಜೈಃ ॥೩೨೧॥

ಯಥಾವಿಧಿ ಕೃತಃ ಸಮ್ಯಗ್ರುದ್ರಾಧ್ಯಾಯಜಪೋ ದ್ವಿಜೈಃ ।
ಮೋಕ್ಷಪ್ರದೋ ಭವತ್ಯೇವ ಪಾಪಾರಣ್ಯದವಾನಲಃ ॥೩೨೨॥

---

ಯಾವ ಫಲವನ್ನೂ ಅಪೇಕ್ಷಿಸದೇ ಪರಿಶುದ್ಧರಾಗಿ ಸದಾ ಶಿವನನ್ನೇ ಚಿಂತಿಸುತ್ತಾ “ಶಿವನಿಗೇ ಸಂತೋಷವಾಗಲೆಂದು” ಸಂಕಲ್ಪಿಸಿ ರುದ್ರಾಧ್ಯಾಯವನ್ನು ಜಪಿಸಬೇಕು. ||೩೧೮||

ರುದ್ರಾಧ್ಯಾಯದ ಮಹಿಮೆಯನ್ನು ಬ್ರಹ್ಮನೂ ಸಹ ಅರಿತಿರುವುದಿಲ್ಲ. ಅದರ ಮಹಿಮೆಯನ್ನು ಪರಶಿವನೊಬ್ಬನೇ ಅರಿತಿರುವನು. ||೩೧೯||

ಶಾಸ್ತ್ರೋಕ್ತವಿಧಾನದಿಂದ ರುದ್ರಾಧ್ಯಾಯವನ್ನು ಜಪಿಸಲು ಬ್ರಹ್ಮನಿಗೂ ಅಶಕ್ಯವಾಗಿರುವುದು. ಇದು ನಿಜ. ||೩೨೦||

ರುದ್ರಾಧ್ಯಾಯ ಜಪದಲ್ಲಿ ಅನೇಕ ನಿಯಮಗಳು ಹೇಳಲ್ಪಟ್ಟಿರುವುವು. ನಮ್ಮಂತಹ ಬ್ರಾಹ್ಮಣರಿಗೆ ಆ ನಿಯಮಗಳನ್ನು ಪರಿಪಾಲಿಸಲು ಸಾಧ್ಯವೇ ?||೩೨೧||

ಶಾಸ್ತ್ರೋಕ್ತವಿಧಾನದಿಂದ ಭಕ್ತಿಪೂರ್ವಕವಾಗಿ ಆಚರಿಸಿದ ರುದ್ರಾಧ್ಯಾಯ ಜಪವು ಮೋಕ್ಷವನ್ನು ಕೊಡುವುದಲ್ಲದೇ ಪಾಪಗಳೆಂಬ ಅರಣ್ಯಕ್ಕೆ ಕಾಡುಕಿಚ್ಚಿನಂತಿರುವುದು. ||೩೨೨||

ರುದ್ರಾಧ್ಯಾಯಜಪಂ ಕರ್ತುಂ ನ ಜಾನಾಸಿ ತತಸ್ತ್ವಯಾ ।
ಕಥಮನ್ಯಾರ್ಥಮನಘೋ ರುದ್ರಾಧ್ಯಾಯಜಪಃ ಕೃತಃ ॥೩೨೩॥

ರುದ್ರಾಧ್ಯಾಯಜಪಂ ಕರ್ತುಂ ಯಥಾವಿಧಿ ಯಥಾಕ್ರಮಂ ।
ಮಯಾಪಿ ಯತ್ನಃ ಕ್ರಿಯತೇ ನ ಭವತ್ಯೇವ ಸರ್ವಥಾ ॥೩೨೪॥

ಷಷ್ಟಿಕೋಟಿಮಹಾನ್ಯಾಸಾಃ ಸಂತಿ ಶಂಕರಚೋದಿತಾಃ ।
ರುದ್ರಾಧ್ಯಾಯಸ್ಯ ವಿಮಲಾಸ್ತಜ್ಜ್ಞಾನಂ ಚ ಕಥಂಭವೇತ್ ॥೩೨೫॥

ಇತಿ ತದ್ವಚನಂ ಶ್ರುತ್ವಾ ದ್ವಿಜೋ ದುಃಖಾಭಿಕರ್ಷಿತಃ ।
ಜಗಾಮ ನಿಲಯಂ ಸ್ವೀಯಂ ನಾನಾಧನವಿರಾಜಿತಂ ॥೩೨೬॥

ತಂ ದೃಷ್ಟ್ವಾ ಮುನಯಃ ಸರ್ವೇ ಭಾನುಂ ಪಶ್ಯಂತಿ ಸಾದರಂ ।
ಪ್ರಶಪಂತಿ ಚ ಪಾಪಿಷ್ಠೇತ್ಯನಿಶಂ ಪ್ರವದಂತಿ ಚ ॥೩೨೭॥

---

ನೀನು ರುದ್ರಾಧ್ಯಾಯವನ್ನು ಜಪಿಸುವ ಕ್ರಮವನ್ನೇ ಸರಿಯಾಗಿ ತಿಳಿದಿಲ್ಲ. ನೀನು ಪರರಿಗೋಸ್ಕರ ರುದ್ರಾಧ್ಯಾಯವನ್ನು ಹೇಗೆ ಜಪಿಸಿದೆ? ॥೩೨೩॥

ನಾನೂ ಸಹ ಶಾಸ್ತ್ರೋಕ್ತರೀತಿಯನ್ನನುಸರಿಸಿ ಕ್ರಮವರಿತು ರುದ್ರಾಧ್ಯಾಯವನ್ನು ಜಪಿಸಲು ಪ್ರಯತ್ನಿಸುತ್ತಿರುವೆನು. ಆದರೂ ಅದು ಸಿದ್ಧಿಸಿಲ್ಲ. ॥೩೨೪॥

ರುದ್ರಾಧ್ಯಾಯಕ್ಕೆ ಅಂಗಗಳಾಗಿ ಅರುವತ್ತುಕೋಟಿ ಮಹಾನ್ಯಾಸಗಳನ್ನು ಶಿವನು ಹೇಳಿರುವನು. ಅವುಗಳನ್ನು ತಿಳಿದುಕೊಳ್ಳುವ ಬಗೆ ಹೇಗೆ?" ॥೩೨೫॥

ವಸಿಷ್ಠಮಹರ್ಷಿಯ ಆ ಮಾತನ್ನು ಕೇಳಿ ಬ್ರಾಹ್ಮಣನು ಅತ್ಯಂತ ದುಃಖಿತನಾಗಿ ವಿವಿಧವಾದ ಧನರಾಶಿಯಿಂದ ತುಂಬಿದ ತನ್ನ ಮನೆಯನ್ನು ಕುರಿತು ತೆರಳಿದನು. ॥೩೨೬॥

ಮುನಿಗಳೆಲ್ಲರೂ ಅವನನ್ನು ನೋಡಿ ಅವನ ದರ್ಶನದಿಂದುಂಟಾದ ಪಾಪವನ್ನು ಪರಿಹರಿಸಿಕೊಳ್ಳುವುದಕ್ಕೋಸ್ಕರ ಸೂರ್ಯನ ಕಡೆ ನೋಡುವರು. ಅವನನ್ನು ನೋಡಿದೊಡನೆಯೇ "ಎಲೈ ಪಾಪಿಯೇ" ಎಂದು ಮನಬಂದಂತೆ ನಿಂದಿಸುತ್ತಾ ತಮ್ಮತಮ್ಮೊಳಗೆ ಹೀಗೆಂದು ಮಾತನಾಡಿಕೊಳ್ಳುವರು. ॥೩೨೭॥

ಸರ್ವಂ ಸನ್ನಿಹಿತಂ ಕ್ರೂರಂ ನಾಯಂ ಪಶ್ಯತಿ ಭೈರವಃ ।
ಅನೇನ ಕಥಮನ್ಯಾರ್ಥೇ ಕೃತೋ ರುದ್ರಜಪೋ ಮುದಾ ॥೩೨೮॥

ಅತ್ರ ಯಾಚಿತಮಪ್ಯನ್ನಂ ಬಹುಗ್ರಾಹ್ಯಂ ನ ಸರ್ವಥಾ ।
ಕಥಂ ಬಹುವಿಧಂ ದ್ರವ್ಯಂ ಗೃಹೀತಂ ಬಹು ಸಾದರಂ ॥೩೨೯॥

ಅನೇನಾನ್ಯಾರ್ಥಮನಘಃ ಕಥಂ ರುದ್ರಜಪಃ ಕೃತಃ ।
ಸ್ವಲ್ಪಗ್ರಹಜಪೋಽಪ್ಯತ್ರ ಕರ್ತುರ್ಮೇವ ನ ಶಕ್ಯತೇ ॥೩೩೦॥

ಕಥಂ ಕಾಶ್ಯಾಮಪಿ ಸ್ಥಿತ್ವಾ ಕ್ರಿಯತೇ ಪಾತಕಂ ಜನೈಃ ।
ನ ಶ್ರುತಾ ಪ್ರಾಯಶೋ ನೂನಂ ಘೋರಾ ಭೈರವಯಾತನಾ ॥೩೩೧॥

ಅಯಂ ವಿಲೋಕ್ಯತೇ ಕಾಶ್ಯಾಮೇಕಃ ಪಾತಕಸಂಶ್ರಯಃ ।
ಕದಾ ಗಚ್ಛತ್ಯಯಂ ನಾಶಂ ಶೀಘ್ರಮನ್ಯತ್ರ ವಾತ್ರ ವಾ ॥೩೩೨॥

---

ಕ್ರೂರನಾದ ಇವನು ಯಾವ ಅನಿಷ್ಟವು ಸಂಭವಿಸಿದರೂ ಅದನ್ನು ಪರಿಗಣಿಸುವುದಿಲ್ಲ. ಇವನು ಪರರಿಗೋಸ್ಕರ ಸಂತೋಷದಿಂದ ರುದ್ರಜಪವನ್ನಾಚರಿಸಿರುವನಲ್ಲವೇ! ॥೩೨೮॥

ಈ ಕಾಶೀಕ್ಷೇತ್ರದಲ್ಲಿ ಅನ್ನವನ್ನೂ ಸಹ ಯಾಚಿಸಬಾರದು. ಹೀಗಿರುವಲ್ಲಿ ಈ ಬ್ರಾಹ್ಮಣನು ನಾನಾವಿಧವಾದ ದ್ರವ್ಯವನ್ನು ಸಂತೋಷದಿಂದ ಸ್ವೀಕರಿಸಿರುವನಲ್ಲ! ಇದು ಉಚಿತವೇ. ॥೩೨೯॥

ಇವನು ಪರರಿಗೋಸ್ಕರ ಪವಿತ್ರವಾದ ರುದ್ರಾಧ್ಯಾಯವನ್ನು ಜಪಿಸಿರುವ ಬಗೆ ಹೇಗೆ? ಇಲ್ಲಿ ಚಿಕ್ಕದಾದ ನವಗ್ರಹ ಜಪವೂ ಸಹ ಆಚರಿಸಲಸಾಧ್ಯವಾಗಿರುವುದು. ॥೩೩೦॥

ಜನರು ಕಾಶೀಕ್ಷೇತ್ರದಲ್ಲಿ ವಾಸನಾಗಿದ್ದರೂ ಸಹ ಪಾಪಕರ್ಮಗಳನ್ನಾಚರಿಸುವರಲ್ಲ! ಇದು ಆಶ್ಚರ್ಯಕರವಲ್ಲವೇ! ಪ್ರಾಯಶಃ ಅವರು ಭೈರವೇಶ್ವರನಿಂದ ಘೋರಯಾತನೆಯು ಸಂಭವಿಸುವುದೆಂಬುದನ್ನು ಅರಿತಿರುವುದಿಲ್ಲವೆಂದು ತೋರುವುದು. ॥೩೩೧॥

ಈ ಕಾಶೀಕ್ಷೇತ್ರದಲ್ಲಿ ಇವನೊಬ್ಬನೇ ಪಾಪಿಯಾಗಿ ಕಾಣಿಸುವನು. ಇವನು ಯಾವಾಗ ಮರಣವನ್ನೈದುವನೋ ತಿಳಿಯುವುದಿಲ್ಲ. ಇಲ್ಲಿಯೇ ಮೃತನಾಗುವನೋ

ಪಾಪಿಷ್ಠಾಲೋಕನಾತ್ಪುಣ್ಯಂ ನಶ್ಯತ್ಯೇವ ಪ್ರತಿಕ್ಷಣಂ ।
ಕದಾ ಕಾಶೀಮಯಂ ತ್ಯಕ್ತ್ವಾ ಗಚ್ಛತ್ಯನ್ಯತ್ರ ಸತ್ವರಂ ॥೩೩೩॥

ಏವಮುಕ್ತ್ವಾ ಸ್ಥಿತಾಃ ಸರ್ವೇ ಕಾಶ್ಯಾಮೇವ ತತೋ ದ್ವಿಜಃ ।
ಮೃತೋ ರುದ್ರಪಿಶಾಚತ್ವಂ ಪ್ರಾಪ ಘೋರಂ ಕ್ಷಣೇನ ಸಃ ॥೩೩೪॥

ಹಿಮವತ್ಪರ್ವತಾಕಾರಾ ತನುಸ್ತಸ್ಯಾಭವತ್ತದಾ ।
ಸೂಚ್ಯಗ್ರಮಾತ್ರಮಭವದ್ವದನಂ ಚ ಭಯಾನಕಂ ॥೩೩೫॥

ತದೈವ ಕೋಟಿಶೋ ವೀರಾಃ ಕಾಲಭೈರವಕಿಂಕರಾಃ ।
ಶಸ್ತ್ರಾಗ್ರೈಸ್ತಾಡಯಂತಸ್ತಂ ಪೀಡಯಂತಃ ಸ್ಥಿತಾಃ ಸದಾ ॥೩೩೬॥

ಕ್ಷುತ್ಪಿಪಾಸಾತುರೋ ನಿತ್ಯಮಿದಾನೀಮಪಿ ತಿಷ್ಠತಿ ।
ಅಗ್ರೇ ಭವಿಷ್ಯತ್ಯನಿಶಂ ಭೈರವಸ್ಯಾಪಿ ಯಾತನಾ ॥೩೩೭॥

---

ಅಥವಾ ಬೇರೆ ಪ್ರದೇಶದಲ್ಲಿ ಮೃತನಾಗುವನೋ ಅದನ್ನು ನಾವು ನಿಶ್ಚಯಿಸಲಾರೆವು. ||೩೩೨||

ಪಾಪಿಷ್ಠರನ್ನು ನೋಡುವುದರಿಂದ ಪುಣ್ಯವು ಪ್ರತಿಕ್ಷಣದಲ್ಲಿಯೂ ನಾಶವನ್ನು ಹೊಂದುವುದು. ಇವನು ಕಾಶಿಯನ್ನು ತ್ಯಜಿಸಿ ಬೇರೆಯ ಕಡೆಗೆ ಯಾವಾಗ ಹೋಗುವನೋ ಅದು ನಮಗೆ ತಿಳಿಯುವುದಿಲ್ಲ. ||೩೩೩||

ಈ ದೂಷಣೆಯಲ್ಲಿ ಕೆಲವು ಕಾಲ ಕಳೆಯಲು ಆ ಬ್ರಾಹ್ಮಣನು ಕಾಶಿಯಲ್ಲಿಯೇ ಮೃತನಾಗಿ ಭಯಂಕರ ರುದ್ರಪಿಶಾಚಿಯ ಜನ್ಮವನ್ನು ಪಡೆದನು ಎಂದು ಅವರೆಲ್ಲರೂ ಹೇಳಿ ಸುಮ್ಮನಾದರು. ||೩೩೪||

ಆಗ ಅವನಿಗೆ ಹಿಮವತ್ಪರ್ವತದಂತೆ ಉನ್ನತವಾದ ಮತ್ತು ವಿಶಾಲವಾದ ಪಿಶಾಚಿ ಶರೀರವು ಪ್ರಾಪ್ತವಾಯಿತು. ಅದರ ಬಾಯಿಯು ಸೂಜಿಯ ಅಗ್ರಭಾಗದಲ್ಲಿರುವ ರಂಧ್ರದಂತೆ ಅತ್ಯಂತ ಸೂಕ್ಷ್ಮವಾಯಿತು. ||೩೩೫||

ಘೋರವಾದ ಪಿಶಾಚಶರೀರವನ್ನು ಧರಿಸಿದೊಡನೆಯೇ ಕಾಲಭೈರವನ ಸೇವಕರು ಅವನನ್ನು ಸುತ್ತುವರೆದು ಆಯುಧಗಳಿಂದ ಹೊಡೆಯಲಾರಂಭಿಸಿದರು.||೩೩೬||

ಆ ಪಿಶಾಚವು ಇಂದಿಗೂ ಹಸಿವು ಬಾಯಾರಿಕೆಗಳಿಂದ ಪೀಡಿತವಾಗಿಯೇ ಇರುವುದು. ಇನ್ನು ಮುಂದೆ ಅದು ಭೈರವನಿಂದ ಅಸಹ್ಯವಾದ ಯಾತನೆಯನ್ನನುಭವಿಸಬೇಕಾಗುವುದು. ||೩೩೭||

ಕಾಶೀಮನ್ಯಪುರೀತುಲ್ಯಾಂ ಮತ್ವಾ ಕುರ್ವಂತಿ ಪಾತಕಂ ।
ಅಸಹ್ಯಾಂ ನೈವ ಜಾನಂತಿ ಭಾವಿಭೈರವಯಾತನಾಂ ॥೩೩೮॥

ಯಃ ಕಾಶ್ಯಾಂ ಪಾತಕಂ ಕೃತ್ವಾ ಮೃತೋಽನ್ಯತ್ರ ಭವಿಷ್ಯತಿ ।
ತೇನ ಘೋರತರಾ ನಿತ್ಯಂ ಪ್ರಾಪ್ಯಾ ಯಾಮಿಯಾಯಯಾತನಾ ॥೩೩೯॥

ಪುನರ್ಜನ್ಮಾಂತರಂ ಪ್ರಾಪ್ಯ ಕಾಶೀಂ ಪ್ರಾಪ್ಯ ಮೃತಸ್ತತಃ ।
ಪ್ರಾಪ್ನೋತ್ಯಘೋರಮನಿಶಂ ಭೈರವಸ್ಯಾಪಿ ಯಾತನಾಂ ॥೩೪೦॥

ಕಾಶ್ಯಾಂ ತು ಕೃತಪಾಪಾನಾಂ ದುಃಖಸ್ಯಾಂತೋ ನ ವಿದ್ಯತೇ ।
ಹಾ ದುರಾಚಾರಸಂಪನ್ನಾಃ ಕಾಶ್ಯಾಂ ತಿಷ್ಠಂತಿ ಕಿಂ ವೃಥಾ ॥೩೪೧॥

ತಾದೃಶಾನಾಂ ತು ದುಷ್ಟಾನಾಂ ಕಾಶೀವಾಸೋ ನ ಯುಜ್ಯತೇ ।
ಗಚ್ಛ ದುಷ್ಟವಿಹಾಯ್ಯೈನಾಂ ಕಾಶೀಮನ್ಯತ್ರದುರ್ಭಗ ॥೩೪೨॥

---

ಈ ರೀತಿಯಲ್ಲಿ ಅಜ್ಞರಾದ ಜನರು ಕಾಶೀಕ್ಷೇತ್ರವನ್ನು ಸಾಧಾರಣವಾದ ಇತರ ಪಟ್ಟಣಗಳಂತೆ ಭಾವಿಸಿ, ಪಾಪಕೃತ್ಯಗಳನ್ನಾಚರಿಸುವರು. ಆದರೆ ಅವರು ಮುಂದೆ ತಮಗೆ ಸಂಭವಿಸಬಹುದಾದ ಭೈರವನ ಯಾತನೆಯನ್ನು ಅರಿಯರು. ||೩೩೮||

ಯಾವ ಮನುಜನು ಕಾಶಿಯಲ್ಲಿ ಪಾಪಕರ್ಮವನ್ನಾಚರಿಸಿ, ಸ್ಥಲಾಂತರದಲ್ಲಿ ಮೃತನಾಗುವನೋ ಅವನು ಭಯಂಕರವಾದ ಯಮಯಾತನೆಯನ್ನು ಅನುಭವಿಸಬೇಕಾಗುವುದು. ಅಲ್ಲದೆ ಬೇರೆಯ ಜನ್ಮವನ್ನು ತಾಳಿ ಕಾಶೀಕ್ಷೇತ್ರವನ್ನು ಸೇರಿ ಅಲ್ಲಿ ಮೃತನಾಗಿ ತರುವಾಯ ಭೈರವನ ಯಾತನೆಗೆ ಗುರಿಯಾಗುವನು. ||೩೪೦||

ಕಾಶಿಯಲ್ಲಿ ಆಚರಿಸಿದ ಪಾಪಕೃತ್ಯಗಳಿಂದ ಸಂಭವಿಸುವ ದುಃಖಕ್ಕೆ ಎಲ್ಲೆಯಿರುವುಲ್ಲ. ಅಯ್ಯೋ, ಹೀಗಿದ್ದರೂ ಜನರು ಪಾಪಕರ್ಮಾಚರಣೆಯಲ್ಲಿ ಆಸಕ್ತರಾಗಿ, ಕಾಶಿಯಲ್ಲಿ ವಾಸವಾಗಿ ವ್ಯರ್ಥವಾಗಿ ಜೀವಿಸುವರು. ||೩೪೧||

ಅಂತಹ ದುಷ್ಟರಿಗೆ ಕಾಶೀಕ್ಷೇತ್ರವಾಸವು ಉಚಿತವಾದುದಲ್ಲ. ಎಲೈ ದುರುಳನೇ, ಈ ಕಾಶೀಕ್ಷೇತ್ರವನ್ನು ಬಿಟ್ಟು ಬೇರೆಲ್ಲಿಗಾದರೂ ಹೋಗು. ||೩೪೨||

ಯೇನ ಕೇನಾಪಿ ರೂಪೇಣ ಜೀವಃ ಶಿವಮತಃ ಸ್ಥಿತಃ ।
ಪೂಜನೀಯಃ ಪ್ರಯತ್ನೇನ ದೇವಗಂಧರ್ವಮಾನವೈಃ ॥೩೪೩॥

ಅಯಂ ಶಿವಮಯಃ ಪಕ್ಷೀ ಪೂರ್ವಪೂರ್ವಭವೇಷ್ವಪಿ ।
ಏತದ್ದುಃಖಪ್ರದಾನೇನ ಪ್ರಾಪ್ಯಾ ಭೈರವಯಾತನಾ ॥೩೪೪॥

ಅನೇನ ಪೂರ್ವಂ ಬಹುಧಾ ಕಾಶೀಪ್ರಾಪ್ತ್ಯರ್ಥಮಾದರಾತ್ ।
ತಪಃ ಕೃತಂ ಮಹಾದೇವಮುದ್ದಿಶ್ಯ ಹಿಮವದ್ಗಿರೌ ॥೩೪೫॥

ತಪೋನಿಷ್ಠಮಮುಂ ದೃಷ್ಟ್ವಾ ಹಿಮವಾನ್ಕಂಪಮಾಗತಃ ।
ದೇವಾಶ್ಚ ಕಂಪಿತಾನೇನ ತಪೋನಿಷ್ಠೇನ ಸರ್ವದಾ ॥೩೪೬॥

ಚಚಾಲಾವನಿರೇವೈನಂ ದೃಷ್ಟ್ವೈವ ತಪಸಾಂ ನಿಧಿಂ ।
ಸಮುದ್ರಾಃ ಕ್ಷುಭಿತಾಃ ಸರ್ವೇ ಕ್ಷುಭಿತೋಽಹಮಪಿ ಸ್ಫುಟಂ॥೩೪೭॥

---

ಆದುದರಿಂದ ದೇವತೆಗಳಾಗಲಿ, ಮನುಷ್ಯರಾಗಲಿ, ಗಂಧರ್ವರಾಗಲಿ ಶಿವಾನುಗ್ರಹಕ್ಕೆ ಪಾತ್ರನಾದವನನ್ನು ಯಾವ ಬಗೆಯಿಂದಲಾದರೂ ಶ್ರದ್ಧೆಯಿಂದ ಪೂಜಿಸಲೇಬೇಕು. ||೩೪೩||

ಈ ಪಕ್ಷಿಯು ಕಳೆದ ಅನೇಕಜನ್ಮಗಳಲ್ಲಿ ಈಶ್ವರಭಕ್ತನಾಗಿದ್ದಿತು. ಇದಕ್ಕೆ ದುಃಖವನ್ನುಂಟುಮಾಡುವುದರಿಂದ ಭೈರವನಿಂದ ಯಾತನೆಯನ್ನು ಅನುಭವಿಸಬೇಕಾಗುವುದು. ||೩೪೪||

ಈ ಪಕ್ಷಿಯು ಪೂರ್ವಜನ್ಮದಲ್ಲಿ ಕಾಶೀಕ್ಷೇತ್ರವನ್ನು ಸೇರುವುದಕ್ಕೋಸ್ಕರ ಹಿಮವತ್ಪರ್ವತದಲ್ಲಿ ಈಶ್ವರನನ್ನು ಕುರಿತು ಭಕ್ತಿಯಿಂದ ಅನೇಕಬಾರಿ ತಪಸ್ಸನ್ನಾಚರಿಸಿರುವುದು. ||೩೪೫||

ತಪಸ್ವಿಯಾದ ಇದನ್ನು ನೋಡಿ ಹಿಮವಂತನು ನಡುಗಿದನು. ಇವನ ತಪಸ್ಸಿನ ಮಹಿಮೆಯಿಂದ ದೇವತೆಗಳೂ ಸಹ ನಡುಗಿದರು. ||೩೪೬||

ತಪಸ್ವಿಗಳಲ್ಲಿ ಅಗ್ರೇಸರನಾದ ಇವನನ್ನು ನೋಡಿದೊಡನೆಯೇ ಭೂಮಿಯೇ ನಡುಗಿತು. ಸಮುದ್ರಗಳು ಕ್ಷುಭಿತವಾದುವು. ನಾನೂ ಸಹ ತತ್ತರಿಸಿದೆನು. ||೩೪೭||

ಸಹಸ್ರಕೋಟಿಜನ್ಮಾನಿ ಕೃತಾನಿ ತಪಸಾ ಭೃಶಂ।
ಗತಾನಿ ಕಾಶೀಸಂಪ್ರಾಪ್ತ್ಯೈ ಕೃತೇನಾಸ್ಯ ಬಲೇನ ಹಿ ॥೩೪೮॥

ಅಯಂ ಭೂಚಕ್ರನಾಥೋಽಭೂತ್ಪೂರ್ವಂ ಶಂಕರಪೂಜಯಾ।
ಅನಂತಮತ್ತಮಾತಂಗಾಃ ಸ್ಥಿತಾಶ್ಚೈತದ್ಗೃಹಾಂಗಣೇ ॥೩೪೯॥

ಉಚ್ಚೈಃ ಶ್ರವಸನಾಮಾಶ್ವಾಃ ಕನಕಾಭರಣಾನ್ವಿತಾಃ।
ಅನಂತಾ ಪಾಲಿತಾ ನಿತ್ಯಮನೇನೈವ ಹಿ ಲೀಲಯಾ ॥೩೫೦॥

ಪ್ರತ್ಯಹಂ ಶಿವಭಕ್ತಾನಾಂ ಸಾರ್ಧಾರ್ಬುದಚತುಷ್ಟಯಂ।
ದಿವ್ಯಾನ್ನೈರ್ದಿವ್ಯವಸ್ತ್ರಾದ್ಯೈರನೇನೈವ ಹಿ ಪೋಷಿತಂ ॥೩೫೧॥

ಸಾರ್ಧಾರ್ಬುದಾನಿ ಲಿಂಗಾನಿ ಸ್ಥಾಪಿತಾನಿ ಹಿಮಾಲಯೇ।
ಅನೇನೈವ ಹಿ ರಮ್ಯಾಣಿ ಮೋಕ್ಷದಾನಿ ಶುಭಾನಿ ಚ ॥೩೫೨॥

---

ಇವನ ತಪಸ್ಸಿನಿಂದ ಅನೇಕಜನ್ಮಗಳು ಕಳೆದುವು. ಕಳೆದುಹೋದ ಆ ಜನ್ಮಗಳಲ್ಲೆಲ್ಲಾ ಇದು ಕಾಶೀಕ್ಷೇತ್ರದಲ್ಲಿ ಜನ್ಮವನ್ನು ತಾಳುವುದಕ್ಕೋಸ್ಕರ ತಪಸ್ಸನ್ನಾಚರಿಸಿರುವುದು. ॥೩೪೮॥

ಪೂರ್ವಜನ್ಮದಲ್ಲಿ ಇದು ಈಶ್ವರಪೂಜೆಯನ್ನಾಚರಿಸಿ ಆದರ ಬಲದಿಂದ ರಾಜನಾಯಿತು. ಅವನ ಮನೆಯ ಅಂಗಳದಲ್ಲಿ ಅಗಣಿತವಾದ ಮದಿಸಿದ ಆನೆಗಳಿದ್ದವು. ॥೩೪೯॥

ಇವನು ಉಚ್ಚೈಃಶ್ರವಸ್ಸೆಂಬ ಹೆಸರುಳ್ಳ ಅನೇಕ ಕುದುರೆಗಳನ್ನು ಅನಾಯಾಸದಿಂದ ರಕ್ಷಿಸುತ್ತಿದ್ದನು. ಅವೆಲ್ಲವೂ ಸ್ವರ್ಣಾಭರಣಗಳಿಂದ ಅಲಂಕೃತವಾಗಿದ್ದುವು. ॥೩೫೦॥

ಇವನು ಪ್ರತಿದಿನವೂ ನಾಲ್ಕುವರೆ ಅರ್ಬುದ ಈಶ್ವರಭಕ್ತರನ್ನು ಅನ್ನವಸ್ತ್ರಗಳಿಂದ ಸಲಹುತ್ತಿದ್ದನು. ॥೩೫೧॥

ಮೋಕ್ಷಪ್ರದವಾದ ಅನೇಕ ಶಿವಲಿಂಗಗಳನ್ನು ಹಿಮವತ್ಪರ್ವತದಲ್ಲಿ ಸ್ಥಾಪಿಸಿದ್ದನು. ॥೩೫೨॥

ಅನೇನೈವ ಶಿವಸ್ಥಾನಂ ಶ್ರೀಶೈಲೇ ಕೃತಮುತ್ತಮಂ ।
ಹೇಮರತ್ನಮಯಂ ದಿವ್ಯಂ ರತ್ನಶೃಂಗವಿರಾಜಿತಂ ॥೩೫೩॥

ತತ್ರೈವ ಹೇಮಪ್ರಾಕಾರಂ ಚಕಾರೈಕಂ ಮನೋಹರಂ ।
ಸ್ವರ್ಗಲೋಭಿಬೃಹಚ್ಛೃಂಗರತ್ನಪಂಕ್ತಿವಿರಾಜಿತಂ ॥೩೫೪॥

ತಸ್ಮಿನ್ನೇವ ಶಿವಸ್ಥಾನೇ ಲಿಂಗಂ ರತ್ನಮಯಂ ಶುಭಂ ।
ಸ್ಥಾಪಯಾಮಾಸ ವಿಧಿವನ್ಮೋಕ್ಷದಂ ರತ್ನನಾಮಕಂ ॥೩೫೫॥

ತತ್ರ ರತ್ನಮಯಂ ದಿವ್ಯಂ ಚಕಾರ ವೃಷಭೇಶ್ವರಂ ।
ಆಯಮೇವ ಶಿವಪ್ರೀತ್ಯೈ ಶಿವಪೂಜನತತ್ಪರಃ ॥೩೫೬॥

ಗೋದಾನಾನಿ ಚಕಾರಾಯಂ ತತ್ರೈವ ವಿಧಿಪೂರ್ವಕಂ ।
ಕೋಟಿಶಃ ಶಿವತುಷ್ಟ್ಯರ್ಥಂ ರತ್ನದಾನಾನಿ ಚಾನಘಃ ॥೩೫೭॥

---

ಶ್ರೀಶೈಲದಲ್ಲಿ ಸುವರ್ಣದಿಂದಲೂ ಮತ್ತು ರತ್ನದಿಂದಲೂ ನಿರ್ಮಿಸಲ್ಪಟ್ಟ ಸುಂದರವಾದ ಶಿವದೇವಾಲಯವನ್ನು ನಿರ್ಮಿಸಿದನು. ॥೩೫೩॥

ಆ ಶಿವದೇವಾಲಯದ ಸುತ್ತಲೂ ರತ್ನಗಳಿಂದ ನಿರ್ಮಿಸಲ್ಪಟ್ಟ ಉನ್ನತವಾದ ಒಂದು ಕೋಟೆಯನ್ನೂ ಕಟ್ಟಿಸಿದನು. ॥೩೫೪॥

ಆ ಶಿವದೇವಾಲಯದಲ್ಲಿಯೇ ಮೋಕ್ಷಪ್ರದವೂ ರತ್ನಖಚಿತವೂ "ರತ್ನ" ಎಂಬ ನಾಮಧೇಯದಿಂದ ಶೋಭಿಸುವುದೂ ಆದ ಒಂದು ಶಿವಲಿಂಗವನ್ನು ಸ್ಥಾಪಿಸಿದನು. ॥೩೫೫॥

ಈಶ್ವರಾರಾಧನೆಯಲ್ಲಿಯೇ ಆಸಕ್ತನಾದ ಇವನು ಶಿವನನ್ನು ತೃಪ್ತಿಪಡಿಸುವುದಕ್ಕೋಸ್ಕರ ಆ ದೇವಾಲಯದಲ್ಲಿ ಸ್ಥಾಪಿಸಿದ ಶಿವಲಿಂಗದ ಮುಂಭಾಗದಲ್ಲಿ ಒಂದಾನೊಂದು ರತ್ನಖಚಿತವಾದ ವೃಷಭವನ್ನು ಸ್ಥಾಪಿಸಿದನು. ॥೩೫೬॥

ಮತ್ತು ಆ ಲಿಂಗದ ಸನ್ನಿಧಾನದಲ್ಲಿಯೇ ಶಿವನನ್ನು ಸಂತೋಷಗೊಳಿಸುವುದಕ್ಕೋಸ್ಕರ ಅಗಣಿತವಾದ ರತ್ನಗಳನ್ನೂ ಮತ್ತು ಗೋವುಗಳನ್ನೂ ವಿಧಿವತ್ತಾಗಿ ದಾನಮಾಡಿದನು. ॥೩೫೭॥

ನಿತ್ಯಂ ಪಾರ್ಥಿವಲಿಂಗಾನಾಂ ಸಹಸ್ರಂ ಸಾರ್ಧಮುತ್ತಮಂ ।
ಕೃತ್ವಾ ಸಂಪೂಜ್ಯ ವಿಧಿವದಯಮಶ್ನಾತ್ಯತಸ್ತತಃ ॥೩೫೮॥

ಅನೇನ ಸ್ವರ್ಗಲೋಕೇಽಪಿ ಸಂಚಾರೋ ಬಹುಧಾ ಕೃತಃ ।
ಬಹುಧಾ ಸಮ್ಯಗೇವಾಸ್ಮೈ ದೇವೇಂದ್ರೇಣಾರ್ಚನಂ ಕೃತಂ ॥೩೫೯॥

ತೃಣೀಕರೋತಿ ದೇವೇಂದ್ರಮಯಮೇವ ಶಿವಾರ್ಚಕಃ ।
ಕರೋತಿ ಸೇವಾಮೇತಸ್ಮೈ ದೇವೇಂದ್ರೋಽಪಿ ಕೃತಾಂಜಲಿಃ॥೩೬೦॥

ಇಂದ್ರಾದ್ಯಾಶ್ಚ ಸುರಾಃ ಸರ್ವೇ ಕೃತಾಂಜಲಿಪುಟಾಃ ಸದಾ ।
ಕುರ್ವಂತಿ ಸೇವಾಮೇತಸ್ಮೈ ಕಂಪಮಾನಾ ನತಾನನಾಃ ॥೩೬೧॥

ಸರ್ವಭೋಗಸಮೃದ್ಧೋಽಪಿ ನಿತ್ಯಮುದ್ಧೂಲನೇ ರತಃ ।
ಚಕಾರಾಯಮತಿಪ್ರೀತ್ಯಾ ಭವ್ಯೋ ರುದ್ರಾಕ್ಷಧಾರಣಂ ॥೩೬೨॥

ಭಸ್ಮನ್ಯೇವಾನಿಶಂ ಶಯ್ಯಾಮಯಂ ಪ್ರತ್ಯಹಮಾದರಾತ್ ।
ಕರೋತಿ ಸುಖಶಯ್ಯೋಽಪಿ ಸರ್ವದಾ ಶಿವಚಿಂತಕಃ ॥೩೬೩॥

---

ಅಲ್ಲದೇ ಪ್ರತಿದಿನವೂ ಒಂದು ಸಹಸ್ರದ ಐನೂರು ಪಾರ್ಥಿವೇಶ್ವರಲಿಂಗಗಳನ್ನು ನಿರ್ಮಿಸಿ ಅವುಗಳನ್ನು ವಿಧಿವತ್ತಾಗಿ ಪೂಜಿಸಿ ಬಳಿಕ ಊಟಮಾಡುವನು. ॥೩೫೮॥

ಇವನು ಅನೇಕ ಬಾರಿ ಸ್ವರ್ಗಲೋಕದಲ್ಲಿ ಸಂಚರಿಸಿರುವನು. ದೇವೇಂದ್ರನು ಅನೇಕ ಬಾರಿ ಇವನನ್ನು ಶಾಸ್ತ್ರೋಕ್ತರೀತಿಯಿಂದ ಅರ್ಚಿಸಿರುವನು. ॥೩೫೯॥

ಈಶ್ವರಾರಾಧಕನಾದ ಇವನೇ ದೇವೇಂದ್ರನನ್ನು ತನ್ನ ಮಹಿಮೆಯಿಂದ ಮೀರಿಸುವನು. ದೇವೇಂದ್ರನು ಅಂಜಲಿಬದ್ಧನಾಗಿ ಇವನನ್ನು ಸೇವಿಸುವನು. ॥೩೬೦॥

ಇನ್ನಿತರ ದೇವತೆಗಳೂ ಸಹ ನಿರಂತರವೂ ಅಂಜಲಿಬದ್ಧರಾಗಿ ನಿಂತು ನಡುಗುತ್ತಾ ಮುಖವನ್ನು ತಗ್ಗಿಸಿ ಇವನನ್ನು ಪರಿಚರಿಸುವರು. ॥೩೬೧॥

ಇವನ ಬಳಿಯಲ್ಲಿ ಸಕಲ ಭೋಗ್ಯವಸ್ತುಗಳಿದ್ದರೂ ಅವುಗಳನ್ನು ತೊರೆದು, ಭಸ್ಮವನ್ನು ಲೇಪಿಸಿ ರುದ್ರಾಕ್ಷಗಳನ್ನು ಧರಿಸುತ್ತಿದ್ದನು. ॥೩೬೨॥

ಮೃದುವಾದ ಹಾಸಿಗೆಯಿದ್ದರೂ ಅದನ್ನು ತೊರೆದು ಆತನು ಭಸ್ಮಶಯ್ಯೆಯನ್ನು ನಿರ್ಮಿಸುವನು. ॥೩೬೩॥

ಶಿವೇತಿ ನಾಮ ವಿಮಲಂ ಜಪತ್ಯಯಮಹರ್ನಿಶಂ ।
ನೃತ್ಯತ್ಯಯಂ ಶಿವಸ್ಯಾಗ್ರೇ ಚಿತ್ರನೃತ್ಯವಿಶಾರದಃ ॥೩೬೪॥

ನಿತ್ಯಂ ರಾಜತಲಿಂಗಾನಾಂ ಸಾರ್ಧಕೋಟಿತ್ರಯಂ ಮುದಾ ।
ದದಾತಿ ಶಿವಭಕ್ತೇಭ್ಯಃ ಸದಕ್ಷಿಣಮಯಂ ದ್ವಿಜಃ ॥೩೬೫॥

ದಿವ್ಯಂ ಮಣಿಮಯಂ ಲಿಂಗಮೇಕಮಸ್ಯಾಭವತ್ಪುರಾ ।
ತಸ್ಮಿನ್ನೃತ್ಯತಿ ದೇವೇಶಃ ಶಿವೋ ಗೌರೀಮನೋಹರಃ ॥೩೬೬॥

ಅಯಂ ಶಿವೈಕಶರಣೋ ವಿಷ್ಣುಂ ಮಾಮಪಿ ಸರ್ವಥಾ ।
ಕದಾಚಿದಪಿ ಗರ್ವೇಣ ಗಣಯತ್ಯೇವ ನ ಧ್ರುವಂ ॥೩೬೭॥

ಅನೇನೈತಾದೃಶೀ ಪೂಜಾ ಶಂಕರಸ್ಯ ಕೃತಾ ಯಯಾ ।
ಶಿವಾನ್ಯದೇವಾಃ ಶಕ್ಯಂತೇ ಕರ್ತುಂ ಯೋ ವೇತ್ತಿ ಸರ್ವದಾ ॥೩೬೮॥

॥ ದ್ವಿಜ ಉವಾಚ ॥

ಈದೃಶೇನ ಶಕುಂತಸ್ಯ ರೂಪಂ ಪ್ರಾಪ್ತಂ ಕಥಂ ವದ ।
ಸರ್ವಜ್ಞೋಽಸಿ ಯತೋ ಬ್ರಹ್ಮನ್ಭವಾನ್ಶಂಕರಪೂಜಕಃ ॥೩೬೯॥

---

ಹಗಲಿರುಳೂ ಪವಿತ್ರವಾದ ಶಿವನಾಮವನ್ನು ಜಪಿಸುವನು. ಶಿವನ ಮುಂದೆ ನೃತ್ಯವನ್ನಭಿನಯಿಸುವನು. ॥೩೬೪॥

ಪ್ರತಿ ದಿನವೂ ಮೂರುವರೆಕೋಟಿ ಬೆಳ್ಳಿಯ ಶಿವಲಿಂಗಗಳನ್ನು ದಕ್ಷಿಣೆಯೊಂದಿಗೆ ಶಿವಭಕ್ತರಿಗೆ ದಾನಮಾಡುವನು. ॥೩೬೫॥

ಪೂರ್ವಜನ್ಮದಲ್ಲಿ ಇವನ ವಶದಲ್ಲಿ ರತ್ನಖಚಿತವಾದ ಒಂದಾನೊಂದು ಶಿವಲಿಂಗವಿದ್ದಿತು. ಆದರಲ್ಲಿ ದೇವೇಶನೂ ಗಿರಿಜಾರಮಣನೂ ಆದ ಶಿವನು ನಾಟ್ಯವಾಡುತ್ತಿದ್ದನು. ॥೩೬೬॥

ಶಿವನನ್ನೇ ಮರೆಹೊಕ್ಕಿರುವ ಇವನು ತಾನು ಈಶ್ವರಭಕ್ತನೆಂಬ ಗರ್ವದಿಂದ ನನ್ನನ್ನಾಗಲಿ, ವಿಷ್ಣುವನ್ನಾಗಲಿ ಲೆಕ್ಕಿಸುವುದೇ ಇಲ್ಲ. ॥೩೬೭॥

ಇವನು ಆಚರಿಸಿದ ಶಿವಪೂಜೆಯಿಂದ ಶಿವನನ್ನು ಬಿಟ್ಟು ಇನ್ನಿತರ ಸಕಲ ದೇವತೆಗಳನ್ನು ಪುನಃ ಈತನು ಸೃಷ್ಟಿಸಬಲ್ಲನು. ಎಂದು ಬ್ರಹ್ಮನು ನುಡಿದನು. ॥೩೬೮॥

ಓ ಬ್ರಹ್ಮನೇ, ಇಂತಹ ಮಹಾನುಭಾವನಿಗೆ ಪಕ್ಷಿಯರೂಪವು ಪ್ರಾಪ್ತವಾದ

॥ ಬ್ರಹ್ಮೋವಾಚ ॥

**ಅನೇನ ಕಾಶೀಯಾತ್ರಾರ್ಥಮುದ್ಯುಕ್ತಂ ಪೂರ್ವಮಾದರಾತ್ ।**
**ಶ್ರುತಾಶ್ಚ ಕಾಶೀಯಾತ್ರಾಯಾ ನಿಯಮಾಃ ಶ್ರುತಿಚೋದಿತಾಃ॥೩೭೦॥**

**ಶ್ರುತ್ವಾ ತಾನ್ನಿಯಮಾನ್ಕರ್ತುಮದಕ್ಷಃ ಶೋಕಕರ್ಷಿತಃ ।**
**ರುರೋದ ವಿಧಿವತ್ಕಾಶೀ ಪ್ರಾಪ್ಯಾ ನೇತಿ ಮುಹುರ್ಮುಹುಃ ॥೩೭೧॥**

**ನಿಯಮೇನ ವಿನಾ ನೇಯಂ ಕಾಶೀಯಾತ್ರಾ ಫಲಪ್ರದಾ ।**
**ನಿಯಮಾಚರಣಂ ಕರ್ತುಂ ಮನುಷ್ಯೈರ್ನೈವ ಶಕ್ಯತೇ ॥೩೭೨॥**

**ಧರ್ಮೋ ಹಿ ನಿಯಮಭ್ರಂಶಾತ್ಪೂರ್ವೋ ನಷ್ಟೋ ಭವಿಷ್ಯತಿ ।**
**ಧರ್ಮನಾಶೇ ನರೋ ರಿಕ್ತೋ ಭವಿಷ್ಯತ್ಯೇವ ಸರ್ವಥಾ ॥೩೭೩॥**

---

ಬಗೆ ಹೇಗೆ? ಎಂಬುದನ್ನು ನನಗೆ ಹೇಳು. ಈಶ್ವರಾರಾಧಕನಾದ ನೀನು ಸರ್ವಜ್ಞನಾಗಿರುವೆಯಲ್ಲವೆ! ಎಂದು ಕೇಳಲು, ಮತ್ತೆ ಬ್ರಹ್ಮನು ಈ ಪಕ್ಷಿಯ ಪೂರ್ವವೃತ್ತಾಂತವನ್ನು ವಿವರಿಸಿದನು. ॥೩೬೯॥

ಇವನು ಪೂರ್ವಜನ್ಮದಲ್ಲಿ ಕಾಶೀಯಾತ್ರೆಯನ್ನು ಮಾಡಬೇಕೆಂದು ಪ್ರಯತ್ನಿಸಿದನು. ವೇದೋಕ್ತವಾದ ಕಾಶೀಯಾತ್ರೆಯ ನಿಯಮಗಳನ್ನೆಲ್ಲಾ ಕೇಳಿದ್ದನು. ॥೩೭೦॥

ಯಾತ್ರಾನಿಯಮಗಳನ್ನು ಕೇಳಿ ಅವುಗಳನ್ನು ಪರಿಪಾಲಿಸಲಸಮರ್ಥನಾಗಿ ಅತ್ಯಂತ ದುಃಖಿತನಾಗಿ "ಯಾತ್ರಾನಿಯಮಗಳನ್ನು ಪರಿಪಾಲಿಸಿ ಕಾಶೀಯಾತ್ರೆಯನ್ನು ಮಾಡಲು ನನಗೆ ಅಸಾಧ್ಯವಾಗಿರುವುದಲ್ಲ." ಎಂದು ಹೇಳುತ್ತಾ ಅತ್ತನು. ॥೩೭೧॥

ಯಾತ್ರಾನಿಯಮಗಳನ್ನು ಪರಿಪಾಲಿಸದೇ ಕೈಗೊಂಡ ಕಾಶೀಯಾತ್ರೆಯು ಎಂದಿಗೂ ಫಲವನ್ನುಂಟುಮಾಡುವುದಿಲ್ಲ. ಆ ನಿಯಮಗಳನ್ನು ಪರಿಪಾಲಿಸಲು ಸಾಮಾನ್ಯ ಮನುಷ್ಯರಿಂದ ಅಸಾಧ್ಯವಾಗಿರುವುದು. ॥೩೭೨॥

ನಿಯಮಗಳನ್ನು ಅತಿಕ್ರಮಿಸಿದರೆ ಪೂರ್ವದಲ್ಲಿ ಸಂಗ್ರಹಿಸಿದ ಪುಣ್ಯವು ಕ್ಷಯಿಸುವುದು. ಪುಣ್ಯಕ್ಷಯದಿಂದ ಮನುಷ್ಯನು ಅಧೋಗತಿಯನ್ನೈದುವನು. ॥೩೭೩॥

ತಪಃಕ್ಲೇಶಕೃತಂ ಪೂರ್ವಂ ಮಯಾ ಯದ್ಬಹುಧಾ ಮುದಾ।
ತತ್ಸರ್ವಂ ನಿಯಮಭ್ರಂಶಾತ್ಕ್ಷಣೇನೈವ ವಿನಶ್ಯತಿ ॥೩೭೪॥

ನ ಮಾನುಷೇಣ ದೇಹೇನ ಕಾಶೀಯಾತ್ರಾ ಮಯಾ ತತಃ।
ಕರ್ತವ್ಯಾ ನಿಯಮಾಚಾರದಕ್ಷೇಣಾತ್ರ ನ ಸಂಶಯಃ ॥೩೭೫॥

ಕಾಶೀಪ್ರಾಪ್ತಿರ್ಮಯೋದ್ದೇಶ್ಯಾ ಕಾಶ್ಯಾಂ ಚ ಮರಣಂ ತತಃ।
ತಚ್ಚ ಸ್ವವಿಹಿತೇನೈವ ಧರ್ಮೇಣೈವ ಸ್ಥಿತಸ್ಯ ಮೇ ॥೩೭೬॥

ಧರ್ಮಾಸ್ತು ವಿಹಿತಾಃ ಶಾಸ್ತ್ರೇ ಮನುಷ್ಯಾಣಾಂ ನ ಪಕ್ಷಿಣಾಂ।
ತತಃ ಪಕ್ಷಿತನುಂ ಲಬ್ಧ್ವಾ ಕಾಶ್ಯಾಂ ತ್ಯಕ್ಷ್ಯೇ ತನುಂ ತತಃ ॥೩೭೭॥

ಕಾಶ್ಯಾಂ ಮರಣಮಾತ್ರೇಣ ಮಹ್ಯಂ ಶುದ್ಧಾಯ ಶಂಕರಃ।
ಶೈವಪಂಚಾಕ್ಷರಂ ದತ್ವಾ ಮೋಕ್ಷಂ ದಾಸ್ಯತ್ಯಸಂಶಯಂ ॥೩೭೮॥

---

ನಾನು ಈ ಹಿಂದೆ ಅನೇಕ ಕಷ್ಟಗಳನ್ನು ಸಹಿಸಿ ನಾನಾಬಗೆಯಿಂದ ಆಚರಿಸಿದ ತಪಸ್ಸು ಈ ನಿಯಮಾತಿಕ್ರಮದಿಂದ ಕ್ಷಣಕಾಲದಲ್ಲಿ ಕ್ಷಯಿಸುವುದು.॥೩೭೪॥

ಈ ಮನುಷ್ಯದೇಹದಿಂದ ನನಗೆ ಕಾಶೀಯಾತ್ರೆಯನ್ನು ನೆರವೇರಿಸಲು ಸಾಧ್ಯವಿಲ್ಲ. ನಿಯಮಗಳನ್ನು ಪಾಲಿಸುವುದರಲ್ಲಿ ಸಮರ್ಥರಾದವರೇ ಯಾತ್ರೆಯನ್ನು ನೆರವೇರಿಸಲು ಯೋಗ್ಯರಾಗಿರುವರು. ॥೩೭೫॥

ಕಾಶಿಯನ್ನು ಸೇರಿ ಅಲ್ಲಿ ಮರಣವನ್ನು ಹೊಂದುವುದೇ ನನ್ನ ಧ್ಯೇಯ. ಅದು ನಮ್ಮ ನಿಯಮಾಚರಣೆಯಿಂದಲೇ ಫಲಿಸುವುದು. ॥೩೭೬॥

ಶಾಸ್ತ್ರದಲ್ಲಿ ಯಾತ್ರಾನಿಯಮಗಳು ಮನುಷ್ಯರಿಗೇ ಹೇಳಿರುವುದಲ್ಲದೇ ಪಕ್ಷಿಗಳಿಗೆ ಯಾವ ನಿಯಮಗಳೂ ಉಕ್ತವಾಗಿಲ್ಲ. ಆದುದರಿಂದ ನಾನು ಪಕ್ಷಿಯ ಶರೀರವನ್ನು ಧರಿಸಿ ಕಾಶಿಯಲ್ಲಿ ದೇಹವನ್ನು ತ್ಯಜಿಸುವೆನು. ॥೩೭೭॥

ಕಾಶಿಯಲ್ಲಿ ಮೃತನಾದಮಾತ್ರದಿಂದಲೇ ಪರಿಶುದ್ಧನಾಗುವ ನನಗೆ ಶಿವನು ಶಿವಪಂಚಾಕ್ಷರೀಮಂತ್ರವನ್ನುಪದೇಶಿಸಿ ಮೋಕ್ಷವನ್ನು ದಯಪಾಲಿಸುವನು. ॥೩೭೮॥

**ಇತಿ ಸಮ್ಯಗ್ವಿಚಾರ್ಯಾಯಂ ತ್ಯಕ್ತ್ವಾ ಪೂರ್ವತನುಂ ತತಃ ।**
**ಅತ್ರೈವ ಶಕುನಿರ್ಜಾತೋ ಯೋಗಮಾರ್ಗವಿಚಕ್ಷಣಃ ॥೩೭೯॥**

**ಇದಾನೀಂ ಮರಣಾಸನ್ನಃ ಪ್ರಾಣಾನ್ಮುಂಚತ್ಯಯಂ ಖಗಃ ।**
**ಸಾಯುಜ್ಯರೂಪಾ ಮೋಕ್ಷಶ್ರೀರ್ಭವಿಷ್ಯತಿ ನ ಸಂಶಯಃ ॥೩೮೦॥**

**ಫಲಿತಾನಿ ತಪಾಂಸ್ಯದ್ಯ ದಾನಾನ್ಯತ್ಯದ್ಭುತಾನಿ ಚ ।**
**ಕಾಶ್ಯಾಂ ಮರಣಮಾಪನ್ನಃ ಶಾಂಕರೋಽಯಂ ಯತೋಮುದಾ ॥೩೮೧॥**

**ಧರ್ಮಾಃ ಫಲೋನ್ಮುಖಾಃ ಸರ್ವೇ ಪೂರ್ವಪೂರ್ವಭವಾರ್ಜಿತಾಃ ।**
**ಕಾಶ್ಯಾಂ ಮರಣಮಾಪನ್ನಂ ಯತೋಽನೇನ ವಿಮುಕ್ತಿದಂ ॥೩೮೨॥**

**ಸರ್ವೇ ಮನೋರಥಾಃ ಪೂರ್ಣಾಃ ಕಾಶ್ಯಾಂ ಮರಣಮಾತ್ರತಃ ।**
**ಪಾಪಲೇಶವಿಹೀನೋಽಯಂ ಧನ್ಯಃ ಶಂಕರಸಂಮತಃ ॥೩೮೩॥**

---

ಹೀಗೆಂದು ಯೋಚಿಸಿ, ಯೋಗವಿದ್ಯೆಯಲ್ಲಿ ನಿಪುಣನಾದ ಈತನ ಯೋಗ ಮಹಿಮೆಯಿಂದ ತನ್ನ ಪೂರ್ವಶರೀರವನ್ನು ತ್ಯಜಿಸಿ, ಪಕ್ಷಿಯ ದೇಹವನ್ನು ಧರಿಸಿದನು. ॥೩೭೯॥

ಈಗಲಾದರೋ ಈ ಪಕ್ಷಿಗೆ ಮರಣವು ಸಮೀಪಿಸಿರುವುದು. ಇದು ಈಗಲೇ ಪ್ರಾಣಗಳನ್ನು ತ್ಯಜಿಸಿ, ಶಿವಸಾಯುಜ್ಯರೂಪವಾದ ಮುಕ್ತಿಯನ್ನು ಹೊಂದುವುದು. ಇದರಲ್ಲಿ ಸಂಶಯವಿಲ್ಲ. ॥೮೦॥

ಈಶ್ವರಭಕ್ತನಾದ ಇದು ಕಾಶೀಕ್ಷೇತ್ರದಲ್ಲಿ ಸಂತೋಷದಿಂದ ತನ್ನ ಪ್ರಾಣಗಳನ್ನು ತ್ಯಜಿಸುವುದಾದುದರಿಂದ ಪೂರ್ವಜನ್ಮದಲ್ಲಿ ಆಚರಿಸಿದ ಸಮಸ್ತ ತಪಸ್ಸುಗಳೂ ಮತ್ತು ದಾನಧರ್ಮಗಳು ಫಲಿಸುವುವು. ॥೩೮೧॥

ಇದಕ್ಕೆ ಕಾಶೀಕ್ಷೇತ್ರದಲ್ಲಿ ಮುಕ್ತಿಯನ್ನು ಕೊಡುವ ಮರಣವು ಸನ್ನಿಹಿತವಾಗಿರುವುದರಿಂದ ಹಿಂದಿನ ಅನೇಕ ಜನ್ಮಗಳಲ್ಲಿ ಇದು ಸಂಗ್ರಹಿಸಿದ ಪುಣ್ಯರಾಶಿಗಳು ಫಲವನ್ನು ಕೊಡುವುದಕ್ಕೆ ಈಗ ಸಿದ್ಧವಾಗಿರುವುವು. ॥೩೮೨॥

ಕಾಶಿಯಲ್ಲಿ ಮರಣವನ್ನು ಹೊಂದಿದ ಮಾತ್ರದಿಂದಲೇ ಸಕಲ ಇಷ್ಟಾರ್ಥಗಳೂ ಫಲಿಸುವುವು. ಈಶ್ವರಾನುಗ್ರಹಕ್ಕೆ ಪಾತ್ರವಾದ ಈ ಪಕ್ಷಿಯು ಸಕಲ

ಈದೃಶಂ ಮರಣಂ ಕಾಶ್ಯಾಂ ದುರ್ಲಭಂ ಮುಕ್ತಿಸಾಧನಂ ।
ಅನಂತಧರ್ಮಸಂಘಾನಾಂ ಪರಿಪಾಕೋಽಯಮುದ್ಭುತಃ ॥೩೮೪॥

ಧನ್ಯಾನಾಂ ಮರಣಂ ಕಾಶ್ಯಾಮೇವಮೇವ ಹಿ ಜಾಯತೇ ।
ಶಿವಾರ್ಥಂ ಕೃತಧರ್ಮಾಣಾಂ ಶೈವಾನಾಂ ಮೋಕ್ಷದಾಯಕಂ ॥೩೮೫॥

ಏವಮುಕ್ತ್ವಾ ದ್ವಿಜಂ ಶಪ್ತ್ವಾ ನತ್ವಾ ಪಶುಪತೀಶ್ವರಂ ।
ಕಾಲಭೈರವಪೂಜಾರ್ಥಂ ಯಯೌ ಬ್ರಹ್ಮಾ ತತಃ ಪರಂ ॥೩೮೬॥

ತತೋ ಮರಣಮಾಪ್ತಸ್ಯ ತಸ್ಮೈ ಪಂಚಾಕ್ಷರೋ ಮಯಾ ।
ದತ್ತಸ್ತಸ್ಯ ಸ ಮೋಕ್ಷಂ ಚ ಪ್ರಾಪ ದೇವರ್ಷಿದುರ್ಲಭಂ ॥೩೮೭॥

---

ಪಾಪಗಳಿಂದಲೂ ಬಿಡುಗಡೆಯನ್ನು ಹೊಂದಿರುವುದಾದುದರಿಂದ ಇದೇ ಕೃತಕೃತ್ಯವೆಂದೆನಿಸಿಕೊಳ್ಳುವುದು. ॥೩೮೩॥

ಈರೀತಿಯಲ್ಲಿ ಕಾಶೀಕ್ಷೇತ್ರದಲ್ಲಿ ಮುಕ್ತಿಯನ್ನುಂಟುಮಾಡುವ ಮರಣವು ಸಾಧಾರಣ ಜನರಿಗೆ ದುರ್ಲಭವು. ಆಗಣಿತವಾದ ಪುಣ್ಯಕರ್ಮಗಳ ಪರಿಪಾಕದ ಮಹಿಮೆಯು ಅತ್ಯಾಶ್ಚರ್ಯಕರವಾಗಿರುವುದು. ॥೩೮೪॥

ಕಾಶೀಕ್ಷೇತ್ರದಲ್ಲಿ ಈರೀತಿಯಾದ ಮರಣವು ಪುಣ್ಯಶಾಲಿಗೆ ಮಾತ್ರವೇ ಲಭಿಸುವುದು. ಈಶ್ವರಾರ್ಪಣಬುದ್ಧಿಯಿಂದ ಕರ್ಮಗಳನ್ನು ಆಚರಿಸಿದ ಭಕ್ತರ ಮರಣವು ಅವರಿಗೆ ಮುಕ್ತಿಯನ್ನುಂಟುಮಾಡುವುದು. ॥೩೮೫॥

ಹೀಗೆಂದು ಹೇಳಿ ಬ್ರಹ್ಮನು ಆ ಬ್ರಾಹ್ಮಣನನ್ನು ಶಪಿಸಿ ಪಶುಪತಿಯನ್ನು ವಂದಿಸಿ ಬಳಿಕ ಕಾಲಭೈರವನನ್ನು ಪೂಜಿಸುವುದಕ್ಕೋಸ್ಕರ ಕಾಲಭೈರವೇಶ್ವರನ ಸನ್ನಿಧಿಗೆ ತೆರಳಿದನು. ॥೩೮೬॥

ದೇವಿ, ತರುವಾಯ ಪಕ್ಷಿಯ ದೇಹವನ್ನು ಧರಿಸಿ ಕಾಶಿಯಲ್ಲಿ ಮೃತನಾದ ಆ ಬ್ರಾಹ್ಮಣನಿಗೆ ನಾನು ಶಿವಪಂಚಾಕ್ಷರೀಮಂತ್ರವನ್ನುಪದೇಶಿಸಲು ಬಳಿಕ ಆ ಬ್ರಾಹ್ಮಣನು ದೇವರ್ಷಿಗಳಿಗೂ ದುರ್ಲಭವಾದ ಮೋಕ್ಷಪದವಿಯನ್ನು ಪಡೆದನು. ॥೩೮೭॥

ಪುರಾ ಪಶುಪತೀಶಸ್ಯ ಕುಂಡೇ ಸ್ನಾನಾರ್ಥಮುತ್ತಮಂ ।
ಯುವಾ ಶೈವವರಃ ಕಶ್ಚಿದಾಗತಃ ಸೂರ್ಯಸನ್ನಿಭಃ ॥೩೮೮॥

ಜಲಮಧ್ಯೇ ನಿವಿಷ್ಟಂ ತಂ ಸ್ನಾನಾರ್ಥಂ ಶೈವಪುಂಗವಂ ।
ಸುಂದರಂ ಮನ್ಮಥಾಕಾರಂ ದದೃಶುರ್ನಾಗಕನ್ಯಕಾಃ ॥೩೮೯॥

ತತಸ್ತಮತಿವೇಗೇನ ನಿನ್ಯುಃ ಶೇಷಾಲಯಂ ಚ ತಾಃ ।
ತಂ ದೃಷ್ಟ್ವಾ ಸಹಸೋತ್ಥಾಯ ಶೇಷೋ ನತ್ವಾ ಕೃತಾಂಜಲಿಃ॥೩೯೦॥

ನಾನಾಮಣಿಗಣಾಕೀರ್ಣೇ ಮೃದುಸಿಂಹಾಸನೇ ಶುಭೇ ।
ಉಪವೇಶ್ಯ ತತಶ್ಚಕ್ರೇ ಪೂಜಾಂ ಚೈವ ಯಥಾವಿಧಿ ॥೩೯೧॥

ತತಃ ಪ್ರಸನ್ನವದನಂ ಶೈವಂ ವೀಕ್ಷ್ಯ ಸ್ಥಿರಾಸನಂ ।
ಉವಾಚ ವಚನಂ ಚಾರು ಶೇಷೋ ನತ್ವಾ ಪುನಃ ಪುನಃ ॥೩೯೨॥

---

ಹಿಂದೆ ಒಂದಾನೊಂದು ಸಮಯದಲ್ಲಿ ಸೂರ್ಯನಂತೆ ತೇಜಸ್ವಿಯೂ ಈಶ್ವರಭಕ್ತನೂ ಆದ ಒಬ್ಬ ಯುವಕನು ಪಾಶುಪತ ಕುಂಡದಲ್ಲಿ ಸ್ನಾನವನ್ನು ಮಾಡುವುದಕ್ಕೋಸ್ಕರ ಕುಂಡದ ಬಳಿಗೆ ಬಂದನು. ॥೩೮೮॥

ಅಲ್ಲಿ ಅವನು ಸ್ನಾನವನ್ನು ಆಚರಿಸುವುದಕ್ಕೋಸ್ಕರ ನೀರಿನ ನಡುವೆ ಪ್ರವೇಶಿಸಲು, ಸುಂದರನೂ ಮನ್ಮಥನಂತೆ ಮನೋಹರವಾದ ಶರೀರವುಳ್ಳವನೂ ಆದ ಆ ಯುವಕನನ್ನು ಅಲ್ಲಿದ್ದ ನಾಗಕನ್ನಿಕೆಯರು ನೋಡಿ ಮೋಹಿತರಾದರು. ॥೩೮೯॥

ಬಳಿಕ ಅವರು ಆ ಯುವಕನನ್ನು ಅತಿವೇಗದಿಂದ ಪಾತಾಳಲೋಕಕ್ಕೆ ಕೊಂಡೊಯ್ಯಲು, ಅವನನ್ನು ನೋಡಿದೊಡನೆಯೇ ಆದಿಶೇಷನು ಮೇಲಕ್ಕೆದ್ದು ಅಂಜಲಿಬದ್ಧನಾಗಿ ನಿಂತು, ರತ್ನಖಚಿತವಾದ ಸಿಂಹಾಸನದಲ್ಲಿ ಅವನನ್ನು ಕುಳ್ಳಿರಿಸಿ ಕ್ರಮವರಿತು ಪೂಜಿಸಿದನು. ॥೩೯೦-೩೯೧॥

ತರುವಾಯ ಆಸನದಲ್ಲಿ ಸ್ಥಿರವಾಗಿ ಕುಳಿತು ಪ್ರಸನ್ನವಾದ ಮುಖಮುದ್ರೆಯಿಂದ ಕೂಡಿದ ಆ ಯುವಕನನ್ನು ನೋಡಿ ಆದಿಶೇಷನು ಅವನಿಗೆ ಮತ್ತೆ ಮತ್ತೆ ನಮಸ್ಕರಿಸಿ ಮಧುರವಾಣಿಯಿಂದ ಹೀಗೆಂದನು. ॥೩೯೨॥

ಕುತಃ ಸಮಾಗತಂ ಶ್ರೀಮನ್ದೇವಃ ಕಃ ಪೂಜ್ಯತೇ ತ್ವಯಾ ।
ಸರ್ವದೇವೋತ್ತಮಃ ಕೋ ವಾ ತತ್ಸರ್ವಂ ವದ ಸಾದರಂ ॥೩೯೩॥

॥ ಶೈವ ಉವಾಚ ॥

ಕಾಶೀತಿ ನಗರೀ ಕಾಚೀತ್ಸರ್ವವೇದೇಷು ವಿಶ್ರುತಾ ।
ನಾಗಲೋಕೋಪರಿ ಸ್ವಚ್ಛಾ ತಿಷ್ಠತ್ಯೇಕಾ ಶಿವಾತ್ಮಿಕಾ ॥೩೯೪॥

ಸಾ ಕಾಶೀಸರ್ವದೇವೈಶ್ಚ ಪೂಜಿತಾ ಸಾದರಂ ಸದಾ ।
ಸಾ ಚಾನಂತತಪೋ ಧರ್ಮಫಲಪ್ರಾಪ್ಯಾ ಹಿ ದುರ್ಲಭಾ ॥೩೯೫॥

ತತಃ ಸಮಾಗತಂ ನಿತ್ಯಂ ಮಯಾ ಸಂಪೂಜ್ಯತೇ ಶಿವಃ ।
ಯಂ ನ ವೇದಾ ವಿಜಾನಂತಿ ಸ ಶಿವಃ ಸ್ಮರ್ಯತೇ ಸದಾ ॥೩೯೬॥

ಯಸ್ಯಾಂತಂ ನ ವಿದುರ್ವೇದಾಃ ಬ್ರಹ್ಮವಿಷ್ಣ್ವಾದಯಃ ಸುರಾಃ ।
ತಸ್ಯೈವ ಶಂಕರಸ್ಯಾಚ್ಛಂ ಲಿಂಗಂ ಸಂಪೂಜ್ಯತೇ ಮಯಾ ॥೩೯೭॥

---

"ಓ ಶ್ರೀಮಂತನೇ, ನೀನು ಎಲ್ಲಿಂದ ಬಂದಿರುವೆ? ನೀನು ಯಾವ ದೇವತೆಯನ್ನು ಪೂಜಿಸುತ್ತಿರುವೆ? ದೇವತೆಗಳಲ್ಲೆಲ್ಲಾ ಶ್ರೇಷ್ಠನಾದವನಾರು? ಇದೆಲ್ಲವನ್ನೂ ನನಗೆ ವಿವರಿಸಿ ಹೇಳು." ಆಗ ಶೈವನಿಂತೆಂದನು. ॥೩೯೩॥

ಭೂಲೋಕದಲ್ಲಿ ಸಕಲ ವೇದಗಳಲ್ಲಿಯೂ ಪ್ರಸಿದ್ಧವಾದ ಕಾಶೀ ಎಂಬ ಒಂದು ಪಟ್ಟಣವಿರುವುದು. ಅದು ಅತ್ಯಂತ ಪವಿತ್ರವೂ, ಶಿವನ ವಾಸಸ್ಥಳವೂ ಆಗಿರುವುದು. ॥೩೯೪॥

ಆ ಕಾಶೀಕ್ಷೇತ್ರವು ಸಕಲ ದೇವತೆಗಳಿಗೂ ಪೂಜ್ಯವಾಗಿರುವುದಲ್ಲದೇ ಅದನ್ನು ಅಗಣಿತವಾದ ತಪಸ್ಸುಗಳಿಂದಲೂ ಮತ್ತು ಪುಣ್ಯಕರ್ಮಗಳಿಂದಲೂ ಮಾನವನು ಹೊಂದಬಲ್ಲನು. ಪುಣ್ಯವಿಲ್ಲದಿದ್ದರೆ ಅದನ್ನು ಪಡೆಯುವುದು ಅಸಾಧ್ಯ. ॥೩೯೫॥

ನಾನು ಆ ಕ್ಷೇತ್ರದಿಂದ ಇಲ್ಲಿಗೆ ಬಂದಿರುವೆನು. ನಾನು ಪ್ರತಿದಿನವೂ ಶಿವನನ್ನು ಪೂಜಿಸುತ್ತಿರುವೆನು. ಯಾವ ದೇವನ ಸ್ವರೂಪವನ್ನು ವೇದಗಳೂ ಸಹ ಅರಿತಿರುವುದಿಲ್ಲವೋ ಆ ಶಿವನನ್ನೇ ನಾನು ಸದಾ ಸ್ಮರಿಸುತ್ತಿರುವೆನು. ॥೩೯೬॥

ವೇದಗಳಾಗಲಿ, ಬ್ರಹ್ಮ, ವಿಷ್ಣು ಮೊದಲಾದ ದೇವತೆಗಳಾಗಲಿ ಯಾವನ ಅಂತ್ಯವನ್ನು ಅರಿತಿರುವುದಿಲ್ಲವೋ, ಆ ಶಿವನ ಪವಿತ್ರವಾದ ಲಿಂಗವನ್ನು ನಾನು ಪೂಜಿಸುವೆನು. ॥೯೭॥

ಯಲ್ಲಿಂಗಪೂಜನಂ ನಿತ್ಯಂ ಸರ್ವವೇದೇಷು ನಿಶ್ಚಿತಂ ।
ಯನ್ಮೋಕ್ಷದಮನಾಯಾಸಾತ್ತದೇವ ಕ್ರಿಯತೇ ಸದಾ ॥೩೯೮॥

ಶಿವೋಽಸ್ಮತ್ಕುಲಜೈಃ ಸರ್ವೈರಾಬಾಲ್ಯೈಃ ಪೂಜ್ಯತೇ ಸದಾ ।
ಶಿವಪೂಜಾಂ ವಿಹಾಯಾಂಬು ಪೀಯತೇ ನ ಕದಾಚನ ॥೩೯೯॥

ನಿತ್ಯಮಸ್ಮತ್ಕುಲೇ ಸ್ತ್ರೀಣಾಂ ವ್ರತಂ ಹಿ ಶಿವಪೂಜನಂ ।
ಶಿವನಾಮಾನಿ ಗಾಯಂತಿ ಕಲಕಂಠ್ಯಃ ಸ್ತ್ರಿಯಃ ಸದಾ ॥೪೦೦॥

ಬಾಲಾಃ ಕ್ರೀಡನಕಾಲೇಽಪಿ ಲಿಂಗಂ ಮೃನ್ಮಯಮುತ್ತಮಂ ।
ಕೃತ್ವಾ ಬಿಲ್ವದಲೈಃ ಶುದ್ಧೈಃ ಪೂಜಾಂ ಕುರ್ವಂತಿ ಸಾದರಂ ॥೪೦೧॥

ಲಿಂಗಂ ಮನೋಹರಂ ದೃಷ್ಟ್ವಾ ಪ್ರಣಮಂತಿ ಸ್ತುವಂತಿ ಚ ।
ನೃತ್ಯಂತಿ ಬಹುಧಾ ಬಾಲಾಃ ಶಂಭೋ ಶಿವ ಶಿವೇತಿ ಚ ॥೪೦೨॥

---

ಯಾವ ದೇವನ ಲಿಂಗವು ಪೂಜ್ಯವೆಂದು ಸಕಲ ವೇದಗಳೂ ಹೇಳುವುವೋ ಮತ್ತು ಯಾವ ದೇವನು ಮೋಕ್ಷವನ್ನು ದಯಪಾಲಿಸುವನೋ ಅವನನ್ನೇ ನಿರಂತರವೂ ನಾನು ಆರಾಧಿಸುವೆನು. ॥೩೯೮॥

ಬಾಲಕರಿಂದ ಮೊದಲುಗೊಂಡು ನಮ್ಮ ವಂಶದಲ್ಲಿ ಹುಟ್ಟಿದ ಸರ್ವರೂ ಶಿವನನ್ನೇ ಆರಾಧಿಸುತ್ತಿರುವರು. ಶಿವಪೂಜೆಯನ್ನು ನೆರವೇರಿಸದೇ ಜಲಪಾನವನ್ನೂ ಸಹ ಮಾಡುವುದಿಲ್ಲ. ॥೩೯೯॥

ನಮ್ಮ ವಂಶದ ಸ್ತ್ರೀಯರಿಗೆ ಶಿವಪೂಜೆಯೇ ಮುಖ್ಯವ್ರತವಾಗಿರುವುದು. ಅವರು ತಮ್ಮ ಅವ್ಯಕ್ತಮಧುರವಾದ ಸ್ವರವುಳ್ಳ ಕಂಠದಿಂದ ನಿರಂತರವೂ ಶಿವನಾಮಗಳನ್ನು ಹಾಡುತ್ತಿರುವರು. ॥೪೦೦॥

ಬಾಲಕರು ಆಟವಾಡುವ ಕಾಲದಲ್ಲಿಯೂ ಸಹ ಮಣ್ಣಿನಿಂದ ಶಿವಲಿಂಗವನ್ನು ನಿರ್ಮಿಸಿ ಅದನ್ನು ಬಿಲ್ವಪತ್ರೆಗಳಿಂದ ಪೂಜಿಸುವರು. ॥೪೦೧॥

ಅವರು ಸುಂದರವಾದ ಶಿವಲಿಂಗವನ್ನು ನೋಡಿ ಅದಕ್ಕೆ ನಮಸ್ಕರಿಸಿ ಸ್ತುತಿಸುವರು. ಶಿವ, ಶಿವ, ಶಂಭೋ ಎಂದು ಶಿವನಾಮಗಳನ್ನು ಹೇಳುತ್ತಾ ನೃತ್ಯವನ್ನಭಿನಯಿಸುವರು. ॥೪೦೨॥

ನಾಹಂ ಭೋಕ್ತಾ ಶಿವೋ ಭೋಕ್ತಾ ಶಿವಾನ್ನಮಿತಿ ಬಾಲಕಾಃ।
ಕುರ್ವಂತಿ ಭೋಜನಂ ಶುದ್ಧಂ ಪ್ರತಿಗ್ರಾಸೇಽಪಿ ಸರ್ವಥಾ ॥೪೦೩॥

ಶಿವಾಯ ನಾರ್ಪಿತಂ ಭೋಜ್ಯಂ ಭುಜ್ಯತೇ ನ ಕದಾಚನ।
ಶಿವಾಯಾನರ್ಪಿತಂ ನವ್ಯಂ ವಸ್ತ್ರಂ ನ ಪರಿಧಾರ್ಯತೇ ॥೪೦೪॥

ಶಿವಾಯ ನಾರ್ಪಿತಂ ದಿವ್ಯಂ ಚಂದನಂ ಪುಷ್ಪಮೇವ ವಾ।
ನೈವಾಸ್ಮದುಪಭೋಗಾರ್ಥಂ ಕ್ರಿಯತೇಽಸ್ಮತ್ಕುಲೋದ್ಭವೈಃ ॥೪೦೫॥

ಉದ್ಧೂಲನಂ ತ್ರಿಪುಂಡ್ರಂ ಚ ತಥಾ ರುದ್ರಾಕ್ಷಧಾರಣಂ।
ಸರ್ವಪಾಪಹರಂ ನಿತ್ಯಂ ಕ್ರಿಯತೇಽಸ್ಮತ್ಕುಲೋದ್ಭವೈಃ ॥೪೦೬॥

ಶೈವಮಂತ್ರಂ ವಿಹಾಯಾನ್ಯೋ ಮಂತ್ರೋ ನೈವ ಹಿ ಜಪ್ಯತೇ।
ಸರ್ವೈರಸ್ಮತ್ಕುಲೋತ್ಪನ್ನೈಃ ಶಿವಶಾಸ್ತ್ರಪರಾಯಣೈಃ ॥೪೦೭॥

---

ಪ್ರತಿದಿನವೂ ಊಟಮಾಡುವಾಗ ಪ್ರತಿಯೊಂದು ತುತ್ತಿಗೂ ಶಿವನೇ ಯಜಮಾನನು, ಶಿವನೇ ತನ್ನ ಅನ್ನವನ್ನು ತಾನು ಊಟಮಾಡುತ್ತಿರುವನು, ಎಂದು ಹೇಳುತ್ತಾ ಭೋಜನವನ್ನಾಚರಿಸುವರು. ॥೪೦೩॥

ಯಾವ ಭೋಜ್ಯವಸ್ತುವನ್ನೇ ಆಗಲಿ ಶಿವನಿಗೆ ಅರ್ಪಿಸದೇ ಭುಂಜಿಸಬಾರದು ಎಂದು ಅವರೆಂದಿಗೂ ಭೋಜ್ಯವಸ್ತುಗಳನ್ನು ಶಿವನಿಗರ್ಪಿಸದೇ ತಿನ್ನುವುದಿಲ್ಲ. ನೂತನವಾದ ವಸ್ತ್ರವನ್ನು ಶಿವನಿಗರ್ಪಿಸದೇ ಎಂದೂ ಧರಿಸುವುದಿಲ್ಲ. ॥೪೦೪॥

ನಮ್ಮ ವಂಶಜರು ಚಂದನವನ್ನಾಗಲಿ ಪುಷ್ಪಗಳನ್ನಾಗಲಿ ಶಿವನಿಗೆ ಅರ್ಪಿಸದೇ ತಾವು ಉಪಯೋಗಿಸುವುದಿಲ್ಲ. ॥೪೦೫॥

ಅವರು ಪ್ರತಿದಿನವೂ ಸರ್ವಾಂಗಗಳಿಗೂ ಭಸ್ಮವನ್ನು ಲೇಪಿಸಿ ಭಸ್ಮತ್ರಿಪುಂಡ್ರಗಳನ್ನು ಧರಿಸುವರು. ರುದ್ರಾಕ್ಷಮಾಲೆಗಳನ್ನು ಧರಿಸುವರು. ॥೪೦೬॥

ಶಿವಕಥೆಯಲ್ಲಿ ಆಸಕ್ತರಾದ ಅವರೆಲ್ಲರೂ ಶಿವಪಂಚಾಕ್ಷರ ಮಂತ್ರವನ್ನು ಬಿಟ್ಟು ಇನ್ನಾವ ಮಂತ್ರವನ್ನೂ ಜಪಿಸುವುದಿಲ್ಲ. ॥೪೦೭॥

ಶಂಕರಧ್ಯಾನನಿರತಾಃ ಸರ್ವೇಽಪ್ಯಸ್ಮತ್ಕುಲೋದ್ಭವಾಃ ।
ಶಿವಾನ್ಯಸ್ಯ ನ ಕುರ್ವಂತಿ ಧ್ಯಾನಂ ಸ್ವಪ್ನೇಽಪಿ ಸರ್ವಥಾ ॥೪೦೮॥

ಆಬಾಲವೃದ್ಧಮಪ್ಯಸ್ಮತ್ಕುಲಜೈಃ ಶಿವದೈವತೈಃ ।
ಶಿವನಾಮಾನ್ಯನಾಮಾನಿ ಗೃಹ್ಯಂತೇ ನ ಕದಾಚನ ॥೪೦೯॥

ಸರ್ವೇಽಪ್ಯಸ್ಮತ್ಕುಲೋತ್ಪನ್ನಾಃ ಶಿವನಾಮೈಕಜೀವನಾಃ ।
ಶಿವನಾಮಾಂಕಿತಾ ಧನ್ಯಾಃ ಶಿವೈಕಶರಣಾಃ ಸದಾ ॥೪೧೦॥

ಶಿವೋಽಸ್ಮಾಕಂ ಧನಂ ಬಂಧುಃ ಶಿವೋಽಸ್ಮಾಕಂ ಪ್ರಭುಃ ಪಿತಾ ।
ಶಿವೋಽಸ್ಮಾಕಂ ಹಿತಾ ಮಾತಾ ಶಿವೋಽಸ್ಮಾಕಂ ಹಿ ಜೀವನಂ ॥೪೧೧॥

ಪುರಾ ಹಿಮಾಲಯೇ ವಿಷ್ಣುಂ ತಪೋನಿಷ್ಠಂ ಚತುರ್ಮುಖಃ ।
ಪ್ರಣಮ್ಯೋವಾಚ ಚತುರೋ ವಾಕ್ಯಂ ವಾಕ್ಯವಿಶಾರದಃ ॥೪೧೨॥

---

ಅಲ್ಲದೇ ಈಶ್ವರಧ್ಯಾನದಲ್ಲಿ ಆಸಕ್ತರಾಗಿ ಸ್ವಪ್ನದಲ್ಲಿಯೂ ಸಹ ಶಿವನನ್ನು ಬಿಟ್ಟು ಇನ್ನಾವ ದೇವರನ್ನೂ ಧ್ಯಾನಿಸುವುದಿಲ್ಲ. ಬಾಲಕರಿಂದ ಮೊದಲುಗೊಂಡು ವೃದ್ಧರವರೆಗಿರುವ ಸಮಸ್ತ ಜನರೂ ಶಿವನಾಮುಗಳನ್ನಲ್ಲದೇ ಇನ್ನಾವ ದೇವರ ನಾಮುಗಳನ್ನೂ ಅಲ್ಲಿ ಉಚ್ಚರಿಸುವುದಿಲ್ಲ. ॥೪೦೮-೪೦೯॥

ನಮ್ಮ ವಂಶದಲ್ಲಿ ಜನಿಸಿದ ಸಮಸ್ತ ಜನರಿಗೂ ಶಿವನಾಮುಗಳೇ ಜೀವನ. ಮತ್ತು ಶಿವನ ನಾಮುವೇ ಅವರ ನಾಮಧೇಯವು. ಈ ಪ್ರಕಾರವಾಗಿ ನಿರಂತರವೂ ಶಿವನನ್ನೇ ಮೊರೆಹೋಗಿರುವರು. ॥೪೧೦॥

ಶಿವನೇ ನಮ್ಮ ಧನವು. ಶಿವನೇ ಬಂಧುವು. ಶಿವನು ನಮ್ಮ ರಕ್ಷಕನು. ತಾಯಿಯೂ ಶಿವನೇ. ತಂದೆಯೂ ಶಿವನೇ. ಇಷ್ಟೇಕೆ! ಶಿವನೇ ನಮ್ಮ ಜೀವನ. ನಮ್ಮ ಸರ್ವಸ್ವ. ॥೪೧೧॥

ಹಿಂದೆ ಒಂದಾನೊಂದು ಸಮಯದಲ್ಲಿ ಹಿಮವತ್ಪರ್ವತದಲ್ಲಿ ತಪಸ್ಸಿಗಾಗಿ ಬದ್ಧಕಂಕಣನಾಗಿ ಕುಳಿತಿದ್ದ ವಿಷ್ಣುವನ್ನು ನೋಡಿ, ಅವನಿಗೆ ನಮಸ್ಕರಿಸಿ ಬ್ರಹ್ಮನು ಹೀಗೆಂದನು. ॥೪೧೨॥

ಸರ್ವವೇದೇಷು ವಿಖ್ಯಾತಂ ಶಿವಲಿಂಗಾರ್ಚನಂ ಹರೇ ।
ತಲ್ಲಿಂಗಮನಘಂ ಭವ್ಯಂ ನಿರ್ವಿಕಾರಂ ನಿರಂಜನಂ ॥೪೧೩॥

ಲಿಂಗಾರ್ಚನಸ್ಯ ಮಾಹಾತ್ಮ್ಯಮಮೇಯಂ ನಿಗಮೈರಪಿ ।
ನ ಜ್ಞಾತಂ ಸರ್ವಥಾ ಸಮ್ಯಗಿತಿ ಜ್ಞಾತಂ ಮಯಾ ಧ್ರುವಂ ॥೪೧೪॥

ಶಿವಃ ಕೇನ ಸ್ವರೂಪೇಣ ಪೂಜಿತೋ ಮುಕ್ತಿದಾಯಕಃ ।
ಶಿವಮೂರ್ತಿಃ ಕಥಂ ಧ್ಯೇಯಾ ಶಿವಸ್ಯ ಕ್ವಾಸ್ತಿ ಸನ್ನಿಧಿಃ ॥೪೧೫॥

ತ್ವಯಾಪಿ ಲಿಂಗಮಾಹಾತ್ಮ್ಯಂ ಕಥಂ ಜ್ಞಾತಂ ಜನಾರ್ದನ ।
ತತ್ತ್ವಮಾಚಕ್ಷ್ವ ವಿಜ್ಞಾಯ ಸಮ್ಯಗಾದರಪೂರ್ವಕಂ ॥೪೧೬॥

॥ ವಿಷ್ಣುರುವಾಚ ॥

ನ ಮಯಾ ಶಿವಲಿಂಗಸ್ಯ ಮಾಹಾತ್ಮ್ಯಂ ಜ್ಞಾಯತೇ ವಿಧೇ ।
ಪರಂ ತು ವೇದ ವಿಹಿತಂ ಕ್ರಿಯತೇ ಲಿಂಗಪೂಜನಂ ॥೪೧೭॥

---

"ಓ ಹರಿಯೇ, ಶಿವಲಿಂಗಾರ್ಚನೆಯು ಸಕಲ ವೇದಗಳಲ್ಲಿಯೂ ಪ್ರಸಿದ್ಧವಾಗಿರುವುದು. ಆ ಲಿಂಗವು ಪವಿತ್ರವೂ, ಅದ್ಭುತವೂ, ವಿಕಾರಶೂನ್ಯವೂ, ದುಃಖರಹಿತವೂ ಆಗಿರುವುದು. ॥೪೧೩॥

ವೇದಗಳಿಗೂ ಅಗೋಚರವಾದ ಶಿವಲಿಂಗಪೂಜೆಯ ಮಹಿಮೆಯನ್ನು ನಾನೆಂದಿಗೂ ತಿಳಿದಿರುವುದಿಲ್ಲವೆಂದು ಭಾವಿಸುವೆನು. ಇದು ನಿಜವು. ॥೪೧೪॥

ಶಿವನನ್ನು ಯಾವ ರೂಪದಿಂದ ಪೂಜಿಸಿದರೆ ಆವನು ಮುಕ್ತಿಯನ್ನು ಕೊಡುವನು? ಶಿವನ ವಿಗ್ರಹವನ್ನು ಧ್ಯಾನಿಸುವ ಬಗೆ ಹೇಗೆ? ಮತ್ತು ಶಿವನ ಸನ್ನಿಧಿಯು ಯಾವುದು? ॥೪೧೫॥

ಓ ಜನಾರ್ದನನೆ, ನೀನು ಲಿಂಗಮಹಿಮೆಯನ್ನು ತಿಳಿದುಕೊಂಡ ಬಗೆ ಹೇಗೆ? ಅದನ್ನು ವಿಮರ್ಶಿಸಿ ನನಗೆ ಹೇಳುವವನಾಗು." ಆಗ ವಿಷ್ಣುವು, ॥೪೧೬॥

ಎಲೈ ಬ್ರಹ್ಮನೇ, ನಾನು ಶಿವಲಿಂಗದ ಮಹಿಮೆಯನ್ನು ತಿಳಿದಿರುವುದಿಲ್ಲ. ಆದರೂ ವೇದೋಕ್ತವಾದ ವಿಧಾನವನ್ನನುಸರಿಸಿ ನಾನು ಲಿಂಗವನ್ನು ಪೂಜಿಸುತ್ತಿರುವೆನು. ಎಂದು ತನ್ನ ಅನುಭವವನ್ನು ಹೇಳತೊಡಗಿದನು. ॥೪೧೭॥

ಯನ್ನ ವೇದೈರಪಿ ಜ್ಞಾತಂ ಲಿಂಗಮಾಹಾತ್ಮ್ಯಮದ್ಭುತಂ ।
ತನ್ಮಯಾ ಮಾದೃಶೈರ್ವಾನ್ಯೈಃ ಕಥಂ ಜ್ಞೇಯಂ ಭವಿಷ್ಯತಿ ॥೪೧೮॥

ಅಶೇಷಂ ಲಿಂಗಮಾಹಾತ್ಮ್ಯಂ ಜ್ಞಾನಮೇವ ಸದಾ ಮಯಾ ।
ಕ್ರಿಯತೇಽತ್ರ ತಪೋ ಘೋರಂ ಶಿವಮುದ್ದಿಶ್ಯ ಸಾದರಂ ॥೪೧೯॥

ಪಂಚಾಗ್ನಿಮಧ್ಯೇ ವಸತಸ್ತಪೋನಿಷ್ಠಸ್ಯ ಸಂತತಂ ।
ಷಷ್ಟಿಕೋಟಿಯುಗಾ ಜಾತಾ ಮಮ ಶೈವವ್ರತಸ್ಯ ಹಿ ॥೪೨೦॥

ಇದಾನೀಮಪಿ ದೇವೇಶಃ ಶಂಭುರ್ಮೇ ನ ಪ್ರಸೀದತಿ ।
ಜೀರ್ಣಮೇತದಭೂದಂಗಂ ಕಿಂ ಕರ್ತವ್ಯಮತಃ ಪರಂ ॥೪೨೧॥

ಶಿವಪ್ರಸಾದಪರ್ಯಂತಂ ತಪೋನಿಷ್ಠೋ ಜಿತೇಂದ್ರಿಯಃ ।
ನಿರಾಹಾರೇಣ ಸತತಮತ್ರೈವ ನಿವಸಾಮ್ಯಹಂ ॥೪೨೨॥

---

ಯಾವ ಲಿಂಗಮಾಹಾತ್ಮ್ಯವನ್ನು ವೇದಗಳೂ ತಿಳಿದಿರುವುದಿಲ್ಲವೋ ಅಂತಹ ಲಿಂಗಮಹಿಮೆಯನ್ನು ನನ್ನಿಂದಲಾಗಲಿ, ನನ್ನಂತಹವರಿಂದಾಗಲಿ ಅಥವಾ ಇತರರಿಂದಾಗಲಿ ಹೇಗೆತಾನೆ ತಿಳಿದುಕೊಳ್ಳಲು ಸಾಧ್ಯ? ॥೪೧೮॥

ಶಿವಲಿಂಗಮಹಿಮೆಯನ್ನು ಸಂಪೂರ್ಣವಾಗಿ ತಿಳಿದುಕೊಳ್ಳುವುದಕ್ಕೋಸ್ಕರ ನಾನು ಇಲ್ಲಿ ಶಿವನನ್ನು ಕುರಿತು ಭಕ್ತಿಯಿಂದ ಭಯಂಕರವಾದ ತಪಸ್ಸನ್ನಾಚರಿಸುತ್ತಿರುವೆನು. ॥೪೧೯॥

ಈಶ್ವರಾರಾಧಕನಾಗಿ ಪಂಚಾಗ್ನಿಗಳ ನಡುವೆ ನಿಂತು ತಪಸ್ಸನ್ನಾಚರಿಸುತ್ತಿರುವ ನನಗೆ ಅರುವತ್ತು ಕೋಟಿಯುಗಗಳು ಈಗಾಗಲೇ ಕಳೆದುಹೋದುವು. ॥೪೨೦॥

ಈಗಲೂ ಶಿವನು ನನಗೆ ಪ್ರಸನ್ನನಾಗಿರುವುದಿಲ್ಲ. ಅವಯವಗಳು ಜರ್ಜರಿತವಾದುವು. ಮುಂದೇನು ಮಾಡಲಿ ಎಂಬುದೇ ನನ್ನ ಯೋಚನೆ. ॥೪೨೧॥

ಶಿವನು ಪ್ರಸನ್ನನಾಗುವವರೆಗೂ ತಪಸ್ಸನ್ನಾಚರಿಸುತ್ತಾ ಜಿತೇಂದ್ರಿಯನಾಗಿ ನಿರಾಹಾರವ್ರತದಿಂದ ನಾನು ಇಲ್ಲಿ ವಾಸವಾಗಿರುವೆನು. ॥೪೨೨॥

ತ್ವಯಾಪ್ಯತ್ರ ತಪಶ್ಚರ್ಯಾ ಕರ್ತವ್ಯಾ ಸಾದರಂ ಸದಾ ।
ಶಿವಮುದ್ದಿಶ್ಯ ವಿಶ್ವೇಶಮಾಪ್ರಸಾದಂ ಮಹೇಶಿತುಃ ॥೪೨೩॥

ಅಜ್ಞಾತಲಿಂಗತತ್ತ್ವಸ್ಯ ಮೋಕ್ಷೋ ನ ಭವತಿ ಧ್ರುವಂ ।
ತತಃ ಕುರುಷ್ವ ಯತ್ನೇನ ತಪೋ ಘೋರತರಂ ಮುದಾ ॥೪೨೪॥

ಇತ್ಯುಕ್ತೋ ವಿಷ್ಣುನಾ ಬ್ರಹ್ಮಾ ತತಃ ಪಂಚಾಗ್ನಿಮಧ್ಯಗಃ ।
ತ್ರಿಕೋಟಿಯುಗಪರ್ಯಂತಂ ಚಕಾರೋಗ್ರಂ ತಪೋ ಮುದಾ॥೪೨೫॥

ತದಾ ತತ್ತಪಸಾ ಕ್ಷುಬ್ಧಾಃ ಸರ್ವೇಭೂತಾಃ ಸುರಾಸ್ತದಾ ।
ಚಕಂಪೇ ಭೂಮಿರಖಿಲಾ ಸಶೈಲವನಕಾನನಾ ॥೪೨೬॥

ತತೋಽತೀತೇಷು ಬಹುಷು ದೇವಕಲ್ಪೇಷು ಶಂಕರಃ ।
ಆವಿರಾಸೀಲ್ಲಿಂಗಮೂರ್ತಿ ಸ್ತಯೋರ್ಮಧ್ಯೇ ಸದಾಶಿವಃ ॥೪೨೭॥

---

ನೀನೂ ಸಹ ಇಲ್ಲಿಯೇ ವಾಸವಾಗಿದ್ದು ಈಶ್ವರಾನುಗ್ರಹವು ಲಭಿಸುವವರೆಗೂ ಶಿವನನ್ನುದ್ದೇಶಿಸಿ ತಪಸ್ಸನ್ನಾಚರಿಸು. ॥೪೨೩॥

ಶಿವಲಿಂಗದ ಮಹಿಮೆಯನ್ನು ತಿಳಿದುಕೊಳ್ಳದಿರುವವನಿಗೆ ಮೋಕ್ಷವು ಎಂದೂ ಲಭಿಸಲಾರದು. ಆದುದರಿಂದ ಕಷ್ಟಗಳನ್ನು ಸಹಿಸಿ ಭಕ್ತಿಯಿಂದ ತಪಸ್ಸನ್ನು ಆಚರಿಸು.'' ॥೪೨೪॥

ವಿಷ್ಣುವು ಹೀಗೆನ್ನಲು ಆಗ ಬ್ರಹ್ಮನು ಪಂಚಾಗ್ನಿಗಳ ಮಧ್ಯದಲ್ಲಿ ನಿಂತು ಮೂರುಕೋಟಿ ಯುಗಗಳವರೆಗೆ ಘೋರವಾದ ತಪಸ್ಸನ್ನು ಆಚರಿಸಿದನು. ॥೪೨೫॥

ಆಗ ಅವನ ತಪಸ್ಸಿನ ಜ್ವಾಲೆಗೆ ದೇವತೆಗಳೂ ಹೆದರಿದರು. ಸಕಲ ಪ್ರಾಣಿಗಳೂ ಭಯದಿಂದ ತತ್ತರಿಸಿದವು. ಭೂಮಿಯು ನಡುಗಿತು. ಪರ್ವತಗಳೂ, ಉದ್ಯಾನವನಗಳೂ ಮತ್ತು ಘೋರವಾದ ಅರಣ್ಯಗಳೂ ಅಲುಗಿದುವು. ॥೪೨೬॥

ಬಳಿಕ ಹೀಗೆಯೇ ಅನೇಕ ದೇವಕಲ್ಪಗಳು ಕಳೆಯಲು, ಲಿಂಗರೂಪಿಯಾಗಿ ಶಿವನು ಅವರಿಬ್ಬರ ನಡುವೆ ಆವಿರ್ಭವಿಸಿದನು. ॥೪೨೭॥

ತಲ್ಲಿಂಗಮನಲಪ್ರಖ್ಯಮನಾದ್ಯಂತಂ ವಿಧಿರ್ಹರಿಃ ।
ದೃಷ್ಟ್ವಾ ಬಭೂವತುಃ ಶೀಘ್ರಂ ತತ್ತೇಜೋಽಭಿಹತಪ್ರಭೌ ॥೪೨೮॥

ಜ್ವಲದ್ವಹ್ನಿಗಣಾಕಾರತಲ್ಲಿಂಗಪ್ರಭಯಾ ದಿಶಃ ।
ಪ್ರದೀಪಿತಾಃ ಪ್ರಭಾಶ್ಚೈವ ಜಗದ್ವ್ಯಾಪ್ಯ ಸ್ಥಿತಾಃ ಸದಾ ॥೪೨೯॥

ತದಾ ವಿಧಿರುವಾಚೇಹ ವಿಷ್ಣುಂ ಪ್ರತಿಹತಪ್ರಭಂ ।
ಕಂಪಮಾನಃ ಸ್ವಯಂ ಧೈರ್ಯಾನ್ಮಾಭೈಷೀರಿತಿ ಸಾದರಂ ॥೪೩೦॥

ಜ್ಯೋತಿಃ ಸ್ವರೂಪಮತುಲಂ ಶಿವಲಿಂಗಮಿದಂ ಶುಭಂ ।
ಪ್ರಲಯಾನಲಸಂಕಾಶಂ ದೃಷ್ಟಮದ್ಯ ಶುಭಾವಹಂ ॥೪೩೧॥

ಆವಿರಾಸೀತ್ಕಥಂ ಲಿಂಗಮೇತನ್ಮೂಲಂ ಕ್ವ ವರ್ತತೇ ।
ಕ್ವಾಗ್ರಭಾಗೋಽಸ್ಯ ವಿಮಲಃ ಸಂಪೂಜ್ಯಃ ಸರ್ವಸಾಧನೈಃ ॥೪೩೨॥

---

ಅಗ್ನಿಯಂತೆ ಪ್ರಜ್ವಲಿಸುತ್ತಿದ್ದ ಆ ಶಿವಲಿಂಗವನ್ನು ನೋಡಿದೊಡನೆಯೇ ಅದರ ಕಾಂತಿಯಿಂದ ಇವರಿಬ್ಬರೂ ನಿಸ್ತೇಜಸ್ಕರಾದರು. ॥೪೨೮॥

ಪ್ರಜ್ವಲಿಸುವ ಅಗ್ನಿಗಳ ಸಮುದಾಯವೋ ಎಂಬಂತಿರುವ ಆ ಲಿಂಗದ ಕಾಂತಿಯಿಂದ ದಿಕ್ಕುಗಳು ಪ್ರಜ್ವಲಿಸಿದವು. ಶಿವಲಿಂಗದ ತೇಜಸ್ಸು ಪ್ರಪಂಚವನ್ನೇ ವ್ಯಾಪಿಸಿತು. ॥೪೩೦॥

ಆಗ ಆ ಲಿಂಗವನ್ನು ನೋಡಿ ನಡುಗುತ್ತಿದ್ದ ಬ್ರಹ್ಮನು ಕಾಂತಿಹೀನನಾದ ವಿಷ್ಣುವನ್ನು ಕುರಿತು, " ಭಯಪಡಬೇಡ " ಎಂದು ಅಭಯವಚನವನ್ನೀಯುತ್ತಾ ಧೈರ್ಯದಿಂದ ಹೀಗೆಂದನು. ॥೪೩೦॥

ತೇಜಸ್ಸಿನಿಂದ ಪ್ರಜ್ವಲಿಸುತ್ತಿರುವ ಪವಿತ್ರವಾದ ಈ ಶಿವಲಿಂಗವನ್ನು ನಾವೀಗ ನೋಡಿದೆವು. ಇದು ಪ್ರಲಯಾಗ್ನಿಯಂತೆ ಭಯಂಕರವಾಗಿರುವುದು. ॥೪೩೧॥

ಈ ಲಿಂಗವು ಅಕಸ್ಮಾತ್ತಾಗಿ ಇಲ್ಲಿ ಆವಿರ್ಭವಿಸಿದ ಬಗೆ ಹೇಗೆ? ಇದರ ಮೂಲಭಾಗವು ಎಲ್ಲಿರುವುದು? ಅಗ್ರವು ಯಾವುದು ಎಂಬುದನ್ನು ಪ್ರಯತ್ನ ಪೂರ್ವಕವಾಗಿ ತಿಳಿದು ಶಿವಲಿಂಗದ ಅಗ್ರಭಾಗವನ್ನು ನಾವು ಪೂಜಿಸಬೇಕು.॥೪೩೨॥

ಮೂಲಾಗ್ರಭಾಗೋ ಲಿಂಗಸ್ಯ ದ್ರಷ್ಟವ್ಯಶ್ಚಾತಿಯತ್ನತಃ ।
ತದ್ದರ್ಶನೇನ ಮೋಕ್ಷೋಽಪಿ ಕರಸ್ಥೋಽದ್ಯ ಭವಿಷ್ಯತಿ ॥೪೩೩॥

ಲಿಂಗಮೂಲಂ ವಿದಿತ್ವೈವ ಶೀಘ್ರಮಾಯಾಹಿ ಮಾಧವ ।
ಮಯಾ ಲಿಂಗಾಗ್ರಭಾಗೋಽಪಿ ದೃಷ್ಟ್ವೈವಾಗಮ್ಯತೇ ಧ್ರುವಂ ॥೪೩೪॥

ಇತ್ಯುಕ್ತ್ವಾ ಹಂಸರೂಪೇಣ ಯಯಾವೂರ್ಧ್ವಂ ವಿಧಿಸ್ತದಾ ।
ವಿಷ್ಣುರ್ವರಾಹವಪುಷಾ ಪಾತಾಲಮಗಮತ್ತತಃ ॥೪೩೫॥

ವಿದಾರ್ಯ ಸಪ್ತಪಾತಾಲಾನ್ವರಾಹವಪುಷಾ ಹರಿಃ ।
ಯಯೌ ತೀಕ್ಷ್ಣೋಗ್ರದಂಷ್ಟ್ರಾಭ್ಯಾಂ ವಾಯುವೇಗಮುಪಾಶ್ರಿತಃ ॥೪೩೬॥

ತತೋ ದದರ್ಶ ವಿಪುಲಂ ಲೋಕಾಧಾರಮುಪಸ್ಥಿತಂ ।
ಕೂರ್ಮಂ ಜಲಮಯೇ ಲೋಕೇ ದೃಢಪೃಷ್ಠಮನಾಮಯಂ ॥೪೩೭॥

---

ಈ ಲಿಂಗದ ಮೂಲವನ್ನು ಮತ್ತು ಅಗ್ರವನ್ನು ಕಷ್ಟಪಟ್ಟು ನೋಡಬೇಕು. ಅವುಗಳನ್ನು ನೋಡುವುದರಿಂದ ಮೋಕ್ಷವು ಸುಲಭವಾಗಿ ಸಿದ್ಧಿಸುವುದು. ॥೧೩೩॥

ಎಲೈ ವಿಷ್ಣುವೇ, ನೀನು ಜಾಗ್ರತೆಯಾಗಿ ಈ ಲಿಂಗದ ಮೂಲವನ್ನು ನೋಡಿಬಾ. ನಾನೂ ಸಹ ಲಿಂಗದ ಅಗ್ರಭಾಗವನ್ನು ನೋಡಿಯೇ ಹಿಂತಿರುಗುವೆನು. ॥೪೩೪॥

ಹೀಗೆಂದು ಹೇಳಿ ಬ್ರಹ್ಮನು ಹಂಸಪಕ್ಷಿಯ ರೂಪವನ್ನು ಧರಿಸಿ, ಲಿಂಗದ ಅಗ್ರಭಾಗವನ್ನು ನೋಡಲು ಮೇಲಕ್ಕೆ ಹೋದನು. ವಿಷ್ಣುವು ಹಂದಿಯ ದೇಹವನ್ನು ಧರಿಸಿ ಪಾತಾಳಲೋಕಕ್ಕೆ ತೆರಳಿದನು. ॥೪೩೫॥

ವರಾಹರೂಪಧಾರಿಯಾದ ವಿಷ್ಣುವು ತೀಕ್ಷ್ಣವೂ, ಭಯಂಕರವೂ ಆದ ತನ್ನ ಕೋರೆದಾಡೆಗಳಿಂದ ಏಳು ಪಾತಾಲಲೋಕಗಳನ್ನು ಭೇದಿಸಿ ವಾಯುವೇಗದಿಂದ ಮುನ್ನಡೆದನು. ॥೪೩೬॥

ಬಳಿಕ ಜಲಲೋಕದಲ್ಲಿ (ಪಾತಾಲಲೋಕದಲ್ಲಿ) ದೃಢಕಾಯನೂ, ಲೋಕಗಳಿಗೆ ಆಧಾರನೂ, ವಿಸ್ತಾರವಾದ ಶರೀರದಿಂದ ಕೂಡಿದವನೂ ಆದ ಆದಿಕೂರ್ಮನನ್ನು ನೋಡಿದನು. ॥೪೩೭॥

ತಮುಪ್ಯತೀತ್ಯ ಸಹಸಾ ಪ್ರವಿಶ್ಯ ಚ ಮಹಾಜಲಂ ।
ಸಹಸ್ರಯುಗಪರ್ಯಂತಂ ಚಚಾರ ಜಲಮಂಡಲೇ ॥೪೩೮॥

ತತಶ್ಶಾಂತಃ ಕ್ವಚಿದ್ವಿಷ್ಣುಃ ಕಿಂಚಿತ್ಕಾಲಂ ಜಲೇ ಸ್ಥಿತಃ ।
ಪುನರ್ಬಭ್ರಾಮ ಬಹುಧಾ ಬಹುಕಾಲಂ ಜಲೇ ಬಲೀ ॥೬೩೯॥

ತಲ್ಲಿಂಗಮೂಲಮತುಲಮದೃಷ್ಟ್ವೈವ ತತೋ ಹರಿಃ ।
ಚಿರಕಾಲೇನ ಸಂಪ್ರಾಪ ಭುವಂ ಭಗ್ನಮನೋರಥಃ ॥೪೪೦॥

ತದಾ ವಿಧಿರಪಿ ಭ್ರಾಂತ್ವಾ ಬಹುಕಾಲಮನಾಕುಲಃ ।
ತದಾ ಸರ್ವೋರ್ಧ್ವಲೋಕೇಷು ತಲ್ಲಿಂಗಾಗ್ರದಿದೃಕ್ಷಯಾ ॥೪೪೧॥

ಲಿಂಗಾಗ್ರಭಾಗಮತುಲಮದೃಷ್ಟ್ವಾಽಶಾಂಗವಿಗ್ರಹಂ ।
ಖಿನ್ನಚಿತ್ತೋ ಭುವಂ ಪ್ರಾಪ ಛಿನ್ನವೀರ್ಯ ಇವೋರಗಃ ॥೪೪೨॥

ತತೋ ಬ್ರಹ್ಮಾ ಸ್ವಕಂ ರೂಪಂ ಸಮಾಸ್ಥಾಯ ಶಿವಂ ಮುಹುಃ ।
ಪ್ರಣಮ್ಯ ಬಹುಧಾ ಚಕ್ರೇ ಸ್ತೋತ್ರಮೇತದಘಾಪಹಂ ॥೪೪೩॥

---

ಹಾಗೂ ಜಲಲೋಕವನ್ನು ದಾಟಿ ಮಹಾಜಲಲೋಕವನ್ನು ಪ್ರವೇಶಿಸಿ ಅಲ್ಲಿ ಸಹಸ್ರ ಯುಗಗಳು ಕಳೆಯುವ ವರೆಗೂ ಸಂಚರಿಸಿದನು. ॥೪೩೮॥

ಬಳಿಕ ವಿಷ್ಣುವು ಸ್ವಲ್ಪ ಕಾಲ ಚಲಿಸದೇ ನೀರಿನ ಮಧ್ಯದೊಳಗಿದ್ದು ತರುವಾಯ ಬಹು ದೀರ್ಘಕಾಲದ ವರೆಗೆ ಪುನಃ ಪುನಃ ಸಂಚರಿಸಿದನು. ॥೪೩೯॥

ಆಗಲೂ ಅವನು ಲಿಂಗಮೂಲವನ್ನು ಹುಡುಕಲಾರದೆ, ಬಹುಕಾಲ ಕಳೆದ ತರುವಾಯ ಭೂಲೋಕವನ್ನು ಸೇರಿದನು. ॥೪೪೦॥

ಇತ್ತ ಲಿಂಗದ ಅಗ್ರಭಾಗವನ್ನು ಹುಡುಕುವುದಕ್ಕೆಂದು ಹೋದಬ್ರಹ್ಮನು ಬಹುಕಾಲದ ವರೆಗೆ ಲಿಂಗಾಗ್ರವನ್ನು ನೋಡುವ ಇಚ್ಛೆಯಿಂದ ಊರ್ಧ್ವಲೋಕಗಳಲ್ಲೆಲ್ಲಾ ಸಂಚರಿಸಿ ಅದು ಸಿಕ್ಕದಿರಲು ದಿಗ್ಭ್ರಾಂತನಾದನು. ॥೪೪೧॥

ಕೊನೆಗೂ ಅವನು ಲಿಂಗದ ಅಗ್ರಭಾಗವನ್ನು ನೋಡದೇ ಅತ್ಯಂತ ದುಃಖಿತನಾಗಿ ನಿರ್ವೀರ್ಯವಾದ ಸರ್ಪದಂತೆ ಭೂಲೋಕವನ್ನು ಸೇರಿದನು. ॥೪೪೨॥

ತರುವಾಯ ಬ್ರಹ್ಮನು ತನ್ನ ನಿಜರೂಪವನ್ನು ಧರಿಸಿ ಶಿವನಿಗೆ ನಮಸ್ಕರಿಸಿ, ಮುಂದೆ ಹೇಳುವಂತೆ ನಾನಾಬಗೆಯಿಂದ ಶಿವನನ್ನು ಸ್ತುತಿಸಿದನು. ॥೪೪೩॥

|| ಬ್ರಹ್ಮೋವಾಚ ||

ನಮಸ್ತೇ ದೇವದೇವಾಯ ನಮಸ್ತೇಽನಂತಮೂರ್ತಯೇ ।
ನಮೋ ಲೋಕೈಕನಾಥಾಯ ನಮಸ್ತೇ ಸರ್ವಸಾಕ್ಷಿಣೇ ॥೪೪೪॥

ನಮಸ್ತೇ ನಿರ್ವಿಕಾರಾಯ ನಮಸ್ತೇಽನಂತಚಕ್ಷುಷೇ ।
ನಮಸ್ತೇಽನಂತಹಸ್ತಾಯ ನಮಸ್ತೇಽನಂತರೂಪಿಣೇ ॥೪೪೫॥

ನಮಸ್ತೇ ನಿರ್ಗುಣಾನಂತ ನಮಸ್ತೇ ಸಗುಣಪ್ರಭೋ ।
ನಮಸ್ತೇ ಜಗದಾಧಾರ ನಮಸ್ತೇ ವಿಶ್ವಭಾವನ ॥೪೪೬॥

ನಮಸ್ತೇ ಸತ್ತ್ವರೂಪಾಯ ನಮಸ್ತೇ ಲೋಕರೂಪಿಣೇ ।
ನಮಸ್ತೇ ಸರ್ವರೂಪಾಯ ರೂಪಾತೀತಾಯ ತೇ ನಮಃ ॥೪೪೭॥

ನಮಸ್ತೇ ಶುದ್ಧ ಬುದ್ಧಾಯ ನಮಸ್ತೇ ಪರಮಾತ್ಮನೇ ।
ನಮಸ್ತೇ ಲಿಂಗರೂಪಾಯ ನಮಸ್ತೇ ವಿಜ್ವರಾನಘ ॥೪೪೮॥

---

ಓ ದೇವೇಶನೇ, ನಾನಾಬಗೆಯ ಶರೀರಗಳನ್ನು ಧರಿಸುವವನೇ! ಜಗತ್ಪ್ರಭುವೇ! ಸ್ವಪ್ರಕಾಶಸ್ವರೂಪನೇ, ನಿನಗೆ ನಮಸ್ಕಾರವು. ||೪೪೪||

ನಿರ್ವಿಕಾರನೂ, ಅಗಣಿತವಾದ ಕಣ್ಣುಗಳುಳ್ಳವನೂ, ಅನೇಕ ಕೈಗಳುಳ್ಳವನೂ ಅನೇಕ ರೂಪಗಳನ್ನು ಧರಿಸುವವನೂ ಆದ ನಿನ್ನನ್ನು ವಂದಿಸುವೆನು. ||೪೪೫||

ಓ ಪ್ರಭುವೇ, ನೀನು ನಿಜರೂಪದಿಂದ ನಿರ್ಗುಣನೂ, ವ್ಯಾಪಕನೂ ಆಗಿರುವೆ. ಔಪಾಧಿಕವಾದ ರೂಪದಿಂದ ಸಗುಣನೂ ಆಗಿರುವೆ. ನೀನೇ ಜಗತ್ತಿಗೆ ಆಧಾರನು. ಪ್ರಲಯಕಾಲದಲ್ಲಿ ಜಗತ್ತುಗಳೆಲ್ಲಾ ನಿನ್ನಲ್ಲಿಯೇ ಲಯವನ್ನು ಹೊಂದುವುವು. ಅಂತಹ ನಿನಗೆ ನಮಸ್ಕಾರವು. ||೪೪೬||

ಸದ್ರೂಪನೂ, ಜಗತ್ಸ್ವರೂಪನೂ ಆದ ನಿನ್ನನ್ನು ವಂದಿಸುವೆನು. ನೀನು ಸಕಲ ಪ್ರಾಣಿಗಳ ಶರೀರದಲ್ಲಿಯೂ ಸಾಕ್ಷಿರೂಪದಿಂದ ವಾಸವಾಗಿದ್ದು ಉಪಾಧಿಭೂತವಾದ ಆ ಶರೀರೇಂದ್ರಿಯಗಳ ಸಂಬಂಧದಿಂದ ಅನೇಕ ರೂಪವುಳ್ಳವನಾಗಿ ತೋರುವೆ. ಆದರೆ ನೀನು ನಿನ್ನ ನಿಜಸ್ವರೂಪದಿಂದ ರೂಪಹೀನನೇ ನಿಜ. ||೪೪೭||

ಓ ದೇವನೇ, ನೀನು ಬಾಹ್ಯಪ್ರಪಂಚದ ಯಾವ ಸಂಬಂಧವೂ ಇಲ್ಲದೇ ಪವಿತ್ರನೂ, ಕೇವಲ ಚಿದ್ರೂಪನೂ, ವಿಭುವೂ, ಆಗಿರುವೆ. ನೀನು ಭಕ್ತರನ್ನು

ನಮೋ ವೇದಾಂತವೇದ್ಯಾಯ ನಮಸ್ತೇ ವೇದರೂಪಿಣೇ ।
ನಮಸ್ತೇ ಜ್ಞಾನರೂಪಾಯ ನಮಸ್ತೇ ಜ್ಞಾನದಾಯಕ ॥೪೯॥

ನಮಸ್ತೇ ನಿಷ್ಪ್ರಪಂಚಾಯ ನಿರೀಹಾಯ ನಮೋಽಸ್ತು ತೇ ।
ನಿರ್ದ್ವಂದ್ವಾಯ ನಮಸ್ತೇಽಸ್ತು ನಿರ್ಮಲಾಯ ನಮೋ ನಮಃ ॥೫೦॥

ನಿರವದ್ಯ ನಮಸ್ತೇಽಸ್ತು ನಿರಾಮಯ ನಮೋಽಸ್ತು ತೇ ।
ನಿಷ್ಕಲಂಕ ನಮಸ್ತೇಽಸ್ತು ವ್ಯಾಪಕಾಯ ನಮೋಽಸ್ತು ತೇ ॥೫೧॥

ನಮಸ್ತೇ ಯಜ್ಞರೂಪಾಯ ಯಜ್ಞಕರ್ತ್ರೇ ನಮೋಽಸ್ತು ತೇ ।
ನಮಸ್ತೇ ಭೂರಿರೂಪಾಯ ನಮಸ್ತೇ ಶರ್ಮದಾಯಿನೇ ॥೫೨॥

---

ಅನುಗ್ರಹಿಸುವುದಕ್ಕೋಸ್ಕರ ಲಿಂಗರೂಪವನ್ನು ಧರಿಸಿ ಅವರಿಗೆ ಪೂಜ್ಯನಾಗಿರುವೆ. ನಿನಗೆ ಆಧ್ಯಾತ್ಮಿಕ, ಆಧಿದೈವಿಕ, ಆದಿಭೌತಿಕವೆಂಬ ತಾಪತ್ರಯಗಳು ಇರುವುದಿಲ್ಲ. ಪಾಪಗಳು ನಿನ್ನನ್ನು ಬಂಧಿಸಲಾರವು. ಅಂತಹ ನಿನ್ನನ್ನು ವಂದಿಸುವೆನು. ||೪೮||

ನಿನ್ನ ನಿಜರೂಪವನ್ನು ಉಪನಿಷತ್ತುಗಳಿಂದಲೇ ತಿಳಿದುಕೊಳ್ಳಲು ಸಾಧ್ಯ. ನೀನೇ ವೇದಗಳ ರೂಪದಿಂದಿರುವೆ. ಜ್ಞಾನಸ್ವರೂಪನೂ ನೀನೇ. ನೀನೇ ಅಜ್ಞಾನಿಗಳಿಗೆ ಜ್ಞಾನವನ್ನು ದಯಪಾಲಿಸುವವನು. ||೪೯||

ನಿನ್ನಲ್ಲಿ ಯಾವ ಗುಣಧರ್ಮಗಳೂ ಇಲ್ಲದಿರುವುದರಿಂದ ನೀನು ನಿಷ್ಪ್ರಪಂಚನಾಗಿರುವೆ. ಆಪ್ತಕಾಮನಾದುದರಿಂದ ನಿಸ್ಪೃಹನಾಗಿರುವೆ. ಶೋಕಮೋಹಗಳು ನಿನ್ನನ್ನು ಆವರಿಸಲಾರವು. ಅಜ್ಞಾನಸಂಸರ್ಗವು ನಿನ್ನಲ್ಲಿಲ್ಲದುದರಿಂದ ನೀನು ಕೇವಲ ಚಿದ್ರೂಪನಾಗಿ ಪವಿತ್ರಮೂರ್ತಿಯಾಗಿರುವೆ. ಅಂತಹ ನಿನ್ನನ್ನು ವಂದಿಸುವೆನು. ||೫೦||

ಶುದ್ಧನೂ, ನೀರೋಗಿಯೂ, ಪಾಪರಹಿತನೂ, ವಿಭುವೂ ಆದ ನಿನಗೆ ನಮಸ್ಕಾರವು. ||೫೧||

ಯಜ್ಞಸ್ವರೂಪನೂ ನೀನೇ, ಯಜ್ಞಕರ್ಮಗಳನ್ನಾಚರಿಸುವವನೂ ನೀನೇ. ಪ್ರಾಣಿಗಳಿಗೆ ನೆಮ್ಮದಿಯನ್ನುಂಟುಮಾಡುವವನೂ ನೀನೇ, ಭಕ್ತಾನುಗ್ರಹಕ್ಕೋಸ್ಕರ ನಾನಾ ರೂಪಗಳಿಂದ ವ್ಯವಸ್ಥಿತನಾಗಿರುವ ನಿನಗೆ ನಮಸ್ಕಾರವು. ||೫೨||

ನಮೋ ಹಿರಣ್ಯಹಸ್ತಾಯ ಸೇನಾನ್ಯೈ ತೇ ನಮೋ ನಮಃ ।
ನಮೋ ದಿಕ್ಪತಯೇ ತುಭ್ಯಂ ಕಕ್ಷಾಣಾಂ ಪತಯೇ ನಮಃ ॥೪೫೩॥

ನಮಃ ಸಸ್ಪಿಂಜರಾಯಾದ್ಯ ನಮಸ್ತೇಽಸ್ತು ತ್ವಿಷೀಮತೇ ।
ನಮಃ ಪಥೀನಾಂ ಪತಯೇ ಕುಲುಂಚಾಯ ನಮೋಽಸ್ತುತೇ॥೪೫೪॥

ವಿವ್ಯಾಧಿನೇ ನಮೋಽನ್ನಾನಾಂ ಪತಯೇ ತೇ ನಮೋ ನಮಃ ।
ನಮಸ್ತೇ ಹರಿಕೇಶಾಯ ನಮೋ ಭವ್ಯೋಪವೀತಿನೇ ॥೪೫೫॥

ಪುಷ್ಟಾನಾಂ ಪತಯೇ ತುಭ್ಯಂ ನಮಸ್ತೇ ಪುಷ್ಟಿದಾಯಿನೇ ।
ಜಗತಾಂ ಪತಯೇ ನಿತ್ಯಂ ನಮೋ ರುದ್ರಾಯ ತೇ ನಮಃ ॥೪೫೬॥

ಪರಾತತಾಯಿನೇ ನಿತ್ಯಂ ನಮಸ್ತೇ ಗೂಢರೂಪಿಣೇ ।
ಕ್ಷೇತ್ರಾಣಾಂ ಪತಯೇ ತುಭ್ಯಂ ನಮಃ ಸೂತಾಯ ತೇ ನಮಃ॥೪೫೭॥

---

ನಿನ್ನ ಹಸ್ತಗಳು ಸುವರ್ಣಮಯಗಳಾಗಿವೆ. ನೀನೇ ದೇವತೆಗಳ ಸೇನಾಪತಿಯಾದ ಷಣ್ಮುಖನ ರೂಪದಿಂದ ವ್ಯವಸ್ಥಿತನಾಗಿರುವೆ. ದಿಕ್ಕುಗಳಿಗೆ ನೀನೇ ಪ್ರಭುವು. ದಿಕ್ಕುಗಳ ಸ್ವರೂಪನೂ ನೀನೇ ಆಗಿರುವೆ. ॥೪೫೩॥

ಸಸ್ಪಿಂಜರಾಯ-ಹೊಂಬಣ್ಣ ಮತ್ತು ಕೆಂಪು ಬಣ್ಣಗಳಿಂದ ಕೂಡಿದವನಿಗೆ ತ್ವಿಷೀಮತೇ-ಕಾಂತಿಯುಕ್ತನಿಗೆ, ಪಥೀನಾಂ ಪತಯೇ-ಶಾಸ್ತ್ರೋಕ್ತವಾದ, ದಕ್ಷಿಣ, ಉತ್ತರ, ತೃತೀಯ, ಎಂಬ ಮೂರು ಮಾರ್ಗಗಳಿಗೆ ಪ್ರಭುವಾದವನಿಗೆ, ಕುಲುಂಚಾಯ-ಧನಕನಕಾದಿಗಳನ್ನು ಅಪಹರಿಸುವ ಚೋರರ ಹೃದಯದಲ್ಲಿ, ಸಾಕ್ಷಿರೂಪದಿಂದ ಇದ್ದು, ಅವರ ಧರ್ಮಾಧರ್ಮಗಳನ್ನು ನಿರೀಕ್ಷಿಸುವವನಿಗೆ, ॥೪೫೪॥

ವಿವ್ಯಾಧಿನೇ-ಶತ್ರುಸಂಹಾರಕನಿಗೆ, ಅನ್ನಾನಾಂ ಪತಯೇ-ಅನ್ನರಕ್ಷಕನಿಗೆ, ಹರಿಕೇಶಾಯ-ವಾರ್ಧಕ್ಯವಿಲ್ಲದವನಿಗೆ, ಉಪವೀತಿನೇ-ಮಂಗಳಕರವಾದ ಯಜ್ಞೋಪವೀತವನ್ನು ಧರಿಸಿದವನಿಗೆ, ॥೪೫೫॥

ಪುಷ್ಟಾನಾಂ ಪತಯೇ-ಸದ್ಗುಣಗಳಿಂದ ಪರಿಪೂರ್ಣರಾದ ಮನುಜರಸ್ವಾಮಿಯಾದವನಿಗೆ, ರುದ್ರಾಯ-ಪ್ರಲಯಾಂತಕನಿಗೆ, ಪುಷ್ಟಿದಾಯಿನೇ-ಶರೀರಪುಷ್ಟಿಯನ್ನು ಕರುಣಿಸುವವನಿಗೆ, ಜಗನ್ನಾಥನಿಗೆ, ॥೪೫೬॥

ಪರಾತತಾಯಿನೇ-ಶತ್ರುಗಳನ್ನು ಪೀಡಿಸುವವನಿಗೆ, ಗೂಢವಾದ ರೂಪವನ್ನು

**ನಮೋಽಹಂತ್ಯಾಯ ದಾರ್ಢ್ಯಾಯ ವಿಶ್ವಗುಪ್ತಾಯ ತೇ ನಮಃ ।**
**ವನಾನಾಂ ಪತಯೇ ತುಭ್ಯಂ ರೋಹಿತಾಯ ನಮೋಽಸ್ತು ತೇ ॥೪೫೮॥**

**ನಮಃ ಸ್ಥಪತಯೇ ನಿತ್ಯಂ ವೃಕ್ಷಾಣಾಂ ಪತಯೇ ನಮಃ ।**
**ನಮಸ್ತೇ ಮಂತ್ರಿಣೇ ನಿತ್ಯಂ ವಾಣಿಜಾಯ ನಮೋಽಸ್ತು ತೇ ॥೪೫೯॥**

**ಕಕ್ಷಾಣಾಂ ಪತಯೇ ನಿತ್ಯಂ ನಮಸ್ತೇಽಸ್ತು ಭುವಂತಯೇ ।**
**ತೇ ವಾರಿವಸ್ಕೃತಾಯೇಶ ನಮಸ್ತೇ ವಾರಿರೂಪಿಣೇ ॥೪೬೦॥**

**ಉಚ್ಚೈರ್ಘೋಷಾಯ ವೀರಾಯ ನಿತ್ಯಾಕ್ರಂದಾಯ ತೇ ನಮಃ ।**
**ಪತ್ತೀನಾಂ ಪತಯೇ ನಿತ್ಯಂ ಕೃತ್ಸ್ನವೀತಾಯ ತೇ ನಮಃ ॥೪೬೧॥**

---

ಧರಿಸಿದವನಿಗೆ, ಕ್ಷೇತ್ರಾಣಾಂ ಪತಯೇ-ಕ್ಷೇತ್ರಪಾಲಕನಿಗೆ, ಸೂತಾಯ-ಸಾರಥಿಗೆ ನಮಸ್ಕಾರ. ॥೪೫೭॥

ಅಹಂತ್ಯಾಯ-ಶತ್ರುಗಳಿಗೆ ಸಂಹರಿಸಲು ಅಸಾಧ್ಯನಿಗೆ, ದಾರ್ಢ್ಯಾಯ-ಶಕ್ತಿಶಾಲಿಗೆ, ವಿಶ್ವಗುಪ್ತಾಯ-ಪ್ರಲಯಕಾಲದಲ್ಲಿ ಸಕಲಜಗತ್ತನ್ನು ಸೂಕ್ಷ್ಮರೂಪದಿಂದ ತನ್ನಲ್ಲಿ ಇರಿಸಿಕೊಂಡವನಿಗೆ, ವನಾನಾಂಪತಯೇ-ಅರಣ್ಯರಕ್ಷಕನಿಗೆ, ರೋಹಿತಾಯ-ರಕ್ತವರ್ಣದಿಂದ ಶೋಭಿಸುವವನಿಗೆ, ॥೪೫೮॥

ಸ್ಥಪತಯೇ-ಜಗದ್ರಕ್ಷಕನಿಗೆ, ವೃಕ್ಷಾಣಾಂಪತಯೇ-ವೃಕ್ಷಗಳನ್ನು ಕಾಪಾಡುವವನಿಗೆ, ಮಂತ್ರಿಣೇ-ಮಂತ್ರಿಯ ರೂಪದಿಂದಿದ್ದು ರಾಜಸಭೆಯಲ್ಲಿ ಮಂತ್ರಾಲೋಚನೆಯನ್ನು ಮಾಡುವವನಿಗೆ, ವಾಣಿಜಾಯ-ವೈಶ್ಯರ ಸ್ವಾಮಿಗೆ. ॥೪೫೯॥

ಕಕ್ಷಾಣಾಂಪತಯೇ-ಅರಣ್ಯದಲ್ಲಿರುವ ಲತಾಗುಲ್ಮಾದಿಗಳ ರಕ್ಷಕನಿಗೆ, ಭುವಂತಯೇ-ಪ್ರಪಂಚವನ್ನು ವಿಸ್ತಾರಗೊಳಿಸುವವನಿಗೆ, ವಾರಿವಸ್ಕೃತಾಯ-ಧನಕನಕಾದಿಗಳ ಜನಕನಿಗೆ, ವಾರಿರೂಪಿಣೇ-ಜಲರೂಪದಿಂದ ವ್ಯವಸ್ಥಿತನಾಗಿರುವವನಿಗೆ, ॥೪೬೦॥

ಉಚ್ಚೈರ್ಘೋಷಾಯ-ಯುದ್ಧಕಾಲದಲ್ಲಿ ಗಟ್ಟಿಯಾದ ಧ್ವನಿಯನ್ನುಂಟು ಮಾಡುವವನಿಗೆ, ವೀರಾಯ-ಪರಾಕ್ರಮಶಾಲಿಗೆ, ನಿತ್ಯಾಕ್ರಂದಾಯ-ಶತ್ರುಗಳನ್ನು ನಿರಂತರವೂ ಅಳುವಂತೆ ಮಾಡುವವನಿಗೆ, ಪತ್ತೀನಾಂಪತಯೇ-ಸೇನೆಯಲ್ಲಿರುವ ಯೋಧರನ್ನು ರಕ್ಷಿಸುವವನಿಗೆ, ಕೃತ್ಸ್ನವೀತಾಯ-ಸುತ್ತುಮುತ್ತಲೂ ಸೇನೆಗಳಿಂದ ಆವೃತನಾಗಿರುವವನಿಗೆ. ॥೪೬೧॥

ನಮಸ್ತೇ ಧಾವತೇ ನಿತ್ಯಂ ಪಶೂನಾಂ ಪತಯೇ ನಮಃ ।
ನಮಸ್ತೇ ಸಹಮಾನಾಯ ಮಾನಾತೀತಾಯ ತೇ ನಮಃ ॥೪೬೨॥

ನಮೋ ಹರಾವ್ಯಾಧಿನೀನಾಂ ಪತಯೇ ಜ್ಞಾನಚಕ್ಷುಷೇ ।
ನಮಸ್ತೇ ಕಕುಭಾಯೇಶ ಕಾಮರೂಪಾಯ ತೇ ನಮಃ ॥೪೬೩॥

ನಿಷಂಗಿಣೇ ನಮಸ್ತೇಽಸ್ತು ದಿವ್ಯೇಷುಧಿಮತೇ ನಮಃ ।
ನಮಸ್ತೇ ತಸ್ಕರಾಣಾಂ ಚ ಪತಯೇ ನೀತಿದಾಯಿನೇ ॥೪೬೪॥

ನಮಸ್ತೇ ವಂಚತೇ ನಿತ್ಯಂ ನಮಸ್ತೇ ಪರಿವಂಚತೇ ।
ಸ್ತಾಯೂನಾಂ ಪತಯೇ ನಿತ್ಯಂ ನಮಸ್ತೇಽಸ್ತು ನಿಚೇರವೇ ೪೬೫॥

---

ಧಾವತೇ-ರಣರಂಗದಲ್ಲಿ ಹೆದರಿ ಓಡಿಹೋಗುವ ಸೈನಿಕರನ್ನು ಹಿಂಬಾಲಿಸಿ ಓಡುವವನಿಗೆ, ಪಶೂನಾಂಪತಯೇ-ಪಶುಗಳನ್ನು ರಕ್ಷಿಸುವವನಿಗೆ, ಸಹಮಾನಾಯ-ಶತ್ರುಗಳನ್ನು ತಿರಸ್ಕರಿಸುವವನಿಗೆ, ಮಾನಾತೀತಾಯ-ಅಪ್ರಮೇಯನಿಗೆ. ॥೪೬೨॥

ಆವ್ಯಾಧಿನೀನಾಂಪತಯೇ-ಶೂರರಾದ ಜನರ ಸೇನೆಗಳನ್ನು ರಕ್ಷಿಸುವವನಿಗೆ, ಜ್ಞಾನಚಕ್ಷುಷೇ-ಜ್ಞಾನವೆಂಬ ಚಕ್ಷುರಿಂದ್ರಿಯದಿಂದ ಶೋಭಿಸುವವನಿಗೆ, ಕಕುಭಾಯ-ಪ್ರಧಾನಭೂತನಿಗೆ, ಕಾಮರೂಪಾಯ-ಇಷ್ಟಾನುಸಾರವಾಗಿ ಆಯಾ ರೂಪಗಳನ್ನು ಧರಿಸುವವನಿಗೆ. ॥೪೬೩॥

ನಿಷಂಗಿಣೇ-ಖಡ್ಗವನ್ನು ಧರಿಸಿರುವವನಿಗೆ, ದಿವ್ಯೇಷುಧಿಮತೇ-ಅಮೂಲ್ಯವಾದ ಬತ್ತಳಿಕೆಯನ್ನು ಧರಿಸಿರುವವನಿಗೆ, ತಸ್ಕರಾಣಾಂಪತಯೇ-ಕಳ್ಳರ ಯಜಮಾನನ ಶರೀರದಲ್ಲಿ ಸಾಕ್ಷಿರೂಪದಿಂದ ನೆಲಸಿರುವವನಿಗೆ, ನೀತಿದಾಯಿನೇ-ಜನರಲ್ಲಿ ಸದ್ವೃತ್ತಿಯುಂಟಾಗುವಂತೆ ಮಾಡುವವನಿಗೆ. ॥೪೬೪॥

ವಂಚತೇ-(ಸ್ವಾಮಿಯ ಬಳಿಯಲ್ಲಿದ್ದು ಅವನ ಕ್ರಯವಿಕ್ರಯಾದಿ ವ್ಯವಹಾರಗಳಲ್ಲಿ ಆಸಕ್ತನಾಗಿದ್ದು ಸ್ವಾಮಿಯ ದ್ರವ್ಯವನ್ನು ಅಪಹರಿಸುವ ಕ್ರಿಯೆಗೆ ವಂಚನವೆಂದು ಹೆಸರು.) ಅಂತಹ ವಂಚನ ಸ್ವರೂಪನಾದ ನಿನಗೆ, ಪರಿವಂಚತೇ-(ಧನವನ್ನು ಅಪಹರಿಸಿದರೂ ಸಹ, ಸ್ವಾಮಿಯ ಬಳಿಯಲ್ಲಿ ತನ್ನ ಪ್ರಾಮಾಣಿಕತೆಯನ್ನೇ ವ್ಯಕ್ತಪಡಿಸುವ ಕ್ರಿಯೆಗೆ ಪರಿವಂಚನವೆಂದು ಹೆಸರು.) ಅಂತಹ ಪರಿವಂಚನಸ್ವರೂಪನಾದ ನಿನಗೆ, ಸ್ತಾಯೂನಾಂಪತಯೇ- ಸ್ವಕೀಯರಾಗಿಯೇ

ನಮಃ ಪರಿಚರಾಯೇಶ ಪರಾತ್ಪರ ನಮೋಽಸ್ತು ತೇ ।
ಅರಣ್ಯಾನಾಂ ಚ ಪತಯೇ ನಮೋ ವಿಶ್ವಾತ್ಮಕಾಯ ತೇ ॥೪೬೬॥

ಮುಷ್ಣತಾಂ ಪತಯೇ ನಿತ್ಯಂ ನಮಸ್ತೇ ಪಾಪನಾಶಕ ।
ಪ್ರಕೃಂತಾನಾಂ ಚ ಪತಯೇ ನೀಲೋಷ್ಣೀಷಾಯ ತೇ ನಮಃ॥೪೬೭॥

ನಮೋ ಗಿರಿಚರಾಯೇಶ ಗಿರಿವರ್ಯಪ್ರಿಯಾಯ ತೇ ।
ಕುಲುಂಚಾನಾಂ ಚ ಪತಯೇ ನಮಸ್ತೇ ಶುದ್ಧರೂಪಿಣೇ ॥೪೬೮॥

---

ಇದ್ದು, ತಮ್ಮವರ ಮನೆಯಲ್ಲಿ ದ್ರವ್ಯವನ್ನು ಅಪಹರಿಸುವವರಿಗೆ ಸ್ತಾಯು ಎಂದು ಹೆಸರು. ಅಂತಹ ಸ್ತಾಯುಗಳನ್ನು ರಕ್ಷಿಸುವವನಿಗೆ, ನಿಚೇರವೇ-ಸ್ವಾಮಿಯು ಗೃಹದಲ್ಲಿಯೇ ಇದ್ದು ಯಾವಾಗ ಸ್ವಾಮಿಯ ಧನವನ್ನು ಅಪಹರಿಸುವೆನು ? ಎಂದು ಯೋಚಿಸುತ್ತಾ ಬಲು ಎಚ್ಚರಿಕೆಯಿಂದ ಮೆಲ್ಲಮೆಲ್ಲನೆ ಸ್ವಾಮಿಗೃಹದಲ್ಲಿ ಅಲ್ಲಲ್ಲಿ ತಿರುಗಾಡುತ್ತಿರುವ ಸೇವಕನಿಗೆ, ನಿಚೇರು ಎಂದು ಹೆಸರು. ಅಂತಹ ನಿಚೇರುವಿನ ಶರೀರದಲ್ಲಿ ಸಾಕ್ಷಿರೂಪದಿಂದ ನೆಲಸಿರುವವನಿಗೆ. ||೪೬೫||

ಪರಿಚರ-ಪರಸ್ವತ್ತನ್ನು ಅಪಹರಿಸಬೇಕೆಂಬ ಬುದ್ಧಿಯಿಂದ ಅಂಗಡಿ ಬೀದಿಗಳಲ್ಲಿ ತಿರುಗಾಡುವವನಿಗೆ ಪರಿಚರವೆಂದು ಹೆಸರು. ಅಂತಹ ಪರಿಚರನ ಸ್ವರೂಪನಾದವನಿಗೆ, ಅರಣ್ಯಾನಾಂಪತಯೇ-(ಅರಣ್ಯದ ಮಾರ್ಗದಲ್ಲಿ ಸುತ್ತಾಡುತ್ತಾ ಪಥಿಕರ ದ್ರವ್ಯವನ್ನು ಅಪಹರಿಸುವ ಕಳ್ಳರಿಗೆ ಆರಣ್ಯಕರೆಂದು ಹೆಸರು) ಅವರಿಗೆ ಅಧಿಪತಿಯಾದ ನಿನಗೆ, ವಿಶ್ವಾತ್ಮಕಾಯ-ಪ್ರಪಂಚಸ್ವರೂಪದಿಂದ ವ್ಯವಸ್ಥಿತ ನಾದವನಿಗೆ ನಮಸ್ಕಾರವು. ||೪೬೬||

ಮುಷ್ಣತಾಂಪತಯೇ-ಕೃಷೀವಲನ ವೃತ್ತಿಯನ್ನನುಸರಿಸಿ ಸ್ವಾಮಿಯ ಧನವನ್ನು ಅಪಹರಿಸುವ ಸ್ವಭಾವವುಳ್ಳ ಕಳ್ಳರ ಸ್ವಾಮಿಯಾದವನಿಗೆ, ಪ್ರಕೃತಾನಾಂ ಪತಯೇ-ಪ್ರಯಾಣಿಕರ ಪ್ರಾಣಗಳನ್ನು ಸಂಹರಿಸಿ ಅವರ ದ್ರವ್ಯವನ್ನು ಅಪಹರಿಸುವ ಸ್ವಭಾವವುಳ್ಳ ಕಳ್ಳರ ಅಧಿಪತಿಯಾದವನಿಗೆ, ನೀಲೋಷ್ಣೀಷಾಯ-ಕಪ್ಪಾದ ಶಿರೋವೇಷ್ಟನವನ್ನು ಧರಿಸಿದವನಿಗೆ ವಂದನೆ. ||೪೬೭||

ಗಿರಿಚರಾಯ-ಗುಡ್ಡಗಾಡುಗಳಲ್ಲಿ ವಾಸವಾಗಿದ್ದು ಅಲ್ಲಿಗೆ ಕಾಷ್ಠಾದಿಗಳನ್ನು ತರಲು ಬರುವವರನ್ನು ಬಲಾತ್ಕರಿಸಿ, ಅವರ ವಸ್ತ್ರಾದಿಗಳನ್ನು ಕಸಿದುಕೊಳ್ಳುವ ಚೋರನ ಸ್ವರೂಪದಿಂದಿರುವವನಿಗೆ, ಗಿರಿವರ್ಯಪ್ರಿಯಾಯ-ಪರ್ವತಶ್ರೇಷ್ಠನಾದ

ನಮೋ ವಿಚಿತ್ರವೇಷಾಯ ವೇದಖೇಟಕ ತೇ ನಮಃ ।
ವೇದಮಾರ್ಗಾಯ ದುರ್ಗಾಯ ನಮಸ್ತೇ ಪಾಶಧಾರಿಣೇ ॥೪೭೯॥

ನಮಃ ಪರಶುಹಸ್ತಾಯ ನಮಸ್ತೇ ಶೂಲಧಾರಿಣೇ ।
ನಮಸ್ತೇ ಮೃಗಹಸ್ತಾಯ ನಮಸ್ತೇ ಮೃಗರೂಪಿಣೇ ॥೪೮೦॥

ನಮೋ ಭವಾಯ ರುದ್ರಾಯ ನಮಃ ಶರ್ವಾಯ ಸರ್ವದಾ ।
ಪಶುಪಾಶಹರೇಶಾಯ ನಮಃ ಪಶುಪತೀಶ ತೇ ॥೪೮೧॥

ನಮೋಗ್ರಾಯ ನಮೋ ನಿತ್ಯಂ ಭೀಮಾಯ ಭಯದಾಯ ತೇ ।
ಅಗ್ರೇವಧಾಯ ಭೂತಾಯ ನಮೋ ದೂರೇವಧಾಯ ಚ ॥೪೯೨॥

---

ಹಿಮವಂತನಿಗೆ ಪ್ರಿಯನಾಗಿರುವವನಿಗೆ, ಕುಲುಂಚಾನಾಂಪತಯೇ-ಗೃಹಕ್ಷೇತ್ರಾದಿಗಳನ್ನು ಅಪಹರಿಸುವ ಕಳ್ಳರ ಸ್ವರೂಪದಿಂದಿರುವವನಿಗೆ, ಶುದ್ಧರೂಪಿಣೇ-ಜರಾಮರಣಗಳಿಂದ ವಿನಿರ್ಮುಕ್ತವಾದ ಸ್ವರೂಪವುಳ್ಳವನಿಗೆ ಪ್ರಣಾಮಗಳು. ॥೪೭೮॥

ವಿಚಿತ್ರವೇಷಾಯ-ಅದ್ಭುತವಾದ ನಾನಾಬಗೆಯ ರೂಪಗಳನ್ನು ಧರಿಸುವವನಿಗೆ, ವೇದಖೇಟಕ-ವೇದವನ್ನೇ ಒಂದು ಗುರಾಣಿಯನ್ನಾಗಿ ಉಳ್ಳವನಿಗೆ, ವೇದಮಾರ್ಗಾಯ-ದುರ್ಮಾರ್ಗಿಗಳಾದ ಪಥಿಕರಿಗೆ ವೇದವೆಂಬ ಮಾರ್ಗವನ್ನು ತೋರಿಸುವವನಿಗೆ, ಪಾಶಧಾರಿಣೇ-ಪಾಶವನ್ನು ಧರಿಸಿರುವವನಿಗೆ ನಮಸ್ಕಾರ.॥೪೭೯॥

ಪರಶುಹಸ್ತಾಯ-ಕೈಯಲ್ಲಿ ಕೊಡಲಿಯನ್ನು ಧರಿಸಿದವನಿಗೆ, ಶೂಲಧಾರಿಣೇ-ಶೂಲವನ್ನು ಧರಿಸಿದವನಿಗೆ, ಮೃಗರೂಪಿಣೇ-ಜಿಂಕೆಯ ರೂಪದಿಂದ ಸಂಚರಿಸುವವನಿಗೆ. ॥೪೮೦॥

ಭವಾಯ-ಪ್ರಾಣಿಗಳ ಉತ್ಪತ್ತಿಗೆ ಕಾರಣನಾದವನಿಗೆ, ರುದ್ರಾಯ-ದುಃಖನಾಶಕನಿಗೆ, ಶರ್ವಾಯ-ಪಾಪನಾಶಕನಿಗೆ, ಪಶುಪಾಶಹರ-ಪಶುಗಳಂತೆ ಅಜ್ಞಾನಿಗಳಾದ ಜನರ ಅಜ್ಞಾನವೆಂಬ ಬಂಧನವನ್ನು ಹೋಗಲಾಡಿಸುವವನಿಗೆ, ಪಶುಪತಿ-ಪಶುಗಳ ರಕ್ಷಕನಿಗೆ ಈಶ-ಜಗನ್ನಾಥನಿಗೆ ವಂದನೆ. ॥೪೮೧॥

ಉಗ್ರಾಯ-ಉಗ್ರರೂಪಧಾರಿಯಾದವನಿಗೆ, ಭೀಮಾಯ-ದರ್ಶನಮಾತ್ರದಿಂದ ಭಯವನ್ನುಂಟುಮಾಡುವವನಿಗೆ, ಅಗ್ರೇ-ರಣರಂಗದ ಮುಂಭಾಗದಲ್ಲಿಯೇ ಶತ್ರುಗಳನ್ನು ಸಂಹರಿಸುವವನಿಗೆ, ದೂರೇವಧಾಯ-ದೂರದೇಶದಲ್ಲಿಯೇ ಇದ್ದು

**ಹಂತ್ರೇ ಹನೀಯಸೇ ನಿತ್ಯಂ ನಮಸ್ತಾರಾಯ ತೇ ನಮಃ ।**
**ನಮಸ್ತೇ ಶಂಭವೇ ನಿತ್ಯಂ ನಮಸ್ತೇಽಸ್ತು ಮಯೋಭವೇ ॥೪೭೩॥**

**ಶಂಕರಾಯ ನಮಸ್ತೇಽಸ್ತು ಸರ್ವಜ್ಞಾಯ ನಮೋಽಸ್ತು ತೇ ।**
**ನಮೋ ಮಯಸ್ಕರಾಯೇಶ ನಮೋಮೇಶಾಯ ತೇ ಸದಾ ॥೪೭೪॥**

**ನಮಃ ಶಿವಾಯ ದೇವಾಯ ನಮಃ ಶಿವತರಾಯ ತೇ ।**
**ನಮಸ್ತೀರ್ಥ್ಯಾಯ ಕೂಲ್ಯಾಯ ನಮಃ ಪಾರ್ಯಾಯ ತೇ ನಮಃ ॥೪೭೫॥**

---

ಶತ್ರುಗಳನ್ನು ಸಂಹರಿಸುವವನಿಗೆ, ಭಯದಾಯ-ದರ್ಶನಮಾತ್ರದಿಂದಲೇ ಶತ್ರುಗಳಿಗೆ ಭಯವನ್ನುಂಟುಮಾಡುವವನಿಗೆ ನಮಸ್ಕಾರ. ॥೪೭೨॥

ಹಂತ್ರೇ-ಶತ್ರುಸಂಹಾರಕಾಲದಲ್ಲಿ ದಯೆಯಿಲ್ಲದೇ ಶತ್ರುಗಳನ್ನು ಸಂಹರಿಸುವವನಿಗೆ, ಹನೀಯಸೇ-ಲೋಕದಲ್ಲಿ ಯಾವ ಪರಾಕ್ರಮಿಯಾದ ಮನುಷ್ಯನು ತನ್ನ ಶತ್ರುಗಳನ್ನು ಸಂಹರಿಸಿದರೂ ಸಹ ಆ ಸ್ಥಳದಲ್ಲಿ ತಾನಿದ್ದು ಅವನ ಸಂಹಾರ ಕಾರ್ಯವು ಸುಗಮವಾಗುವಂತೆ ಸಹಾಯವನ್ನು ನೀಡುವವನಿಗೆ, ಶಂಭವೇ-ಸುಖದಾಯಕನಿಗೆ, ತಾರಾಯ-ಓಂಕಾರದಿಂದ ಪ್ರತಿಪಾದ್ಯನಾದವನಿಗೆ, ಮಯೋಭವೇ-ಸುಖಚಿಂತಕನಾದವನಿಗೆ ನಮಸ್ಕಾರ. ॥೪೭೩॥

ಶಂಕರಾಯ-ಸುಖಕರನಿಗೆ, ಸರ್ವಜ್ಞಾಯ-ಸಕಲ ಪದಾರ್ಥಗಳನ್ನೂ ತಿಳಿದಿರುವವನಿಗೆ, ಮಯಸ್ಕರಾಯ-ಗುರು, ಶಾಸ್ತ್ರ ಮುಂತಾದ ರೂಪದಿಂದಿದ್ದು ಮೋಕ್ಷವನ್ನು ದಯಪಾಲಿಸುವವನಿಗೆ, ಈಶಾಯ-ಜಗತ್ಪ್ರಭುವಾದ, ಉಮೇಶಾಯ-ಗಿರಿಜಾವಲ್ಲಭನಿಗೆ ವಂದನೆಗಳು. ॥೪೭೪॥

ಶಿವಾಯ-ದೇವಾಯ-ಮಂಗಳರೂಪಿಯಾದ ದೇವತೆಗೆ, ಶಿವತರಾಯ-ಅತ್ಯಂತ ಮಂಗಳಸ್ವರೂಪನಾದವನಿಗೆ, ತೀರ್ಥ್ಯಾಯ-ಪ್ರಯಾಗಾದಿ ಕ್ಷೇತ್ರಗಳಲ್ಲಿ ನೆಲಸಿರುವವನಿಗೆ, ಕೂಲ್ಯಾಯ-ನದೀತೀರದಲ್ಲಿ ಪ್ರತಿಷ್ಠಿಸಿದ ಲಿಂಗರೂಪದಿಂದ ಇರುವವನಿಗೆ, ಪಾರ್ಯಾಯ-ಸಂಸಾರವೆಂಬ ಸಾಗರದ ಪರತೀರದಂತಿದ್ದು ಮುಮುಕ್ಷುಗಳಿಗೆ ಧ್ಯೇಯನಾದವನಿಗೆ ಪ್ರಣಾಮವು. ॥೪೭೫॥

ನಮೋಽವರ್ಯಾಯ ದೇವಾಯ ನಮಃ ಪ್ರತರಣಾಯ ತೇ ।
ನಮ ಉತ್ತರಣಾಯೇಶ ಕ್ಷತಾಯರ್ಯಾಯ ಚ ತೇ ನಮಃ ॥೪೭೬॥

ಆಲಾದ್ಯಾಯ ನಮಸ್ತೇಽಸ್ತು ನಮಃ ಶಷ್ಪ್ಯಾಯ ತೇ ಮೃಡ ।
ನಮಃ ಫೇನ್ಯಾಯ ದೇವಾಯ ಸಿಕತ್ಯಾಯ ಚ ತೇ ನಮಃ ॥೪೭೭॥

ಪ್ರವಾಹ್ಯಾಯ ನಮಸ್ತೇಽಸ್ತು ಇರಿಣ್ಯಾಯ ನಮೋಽಸ್ತು ತೇ ।
ಪ್ರಪಥ್ಯಾಯ ನಮಸ್ತೇಽಸ್ತು ಕಿಂಶಿಲಾಯ ನಮೋಽಸ್ತುತೇ ॥೪೭೮॥

ನಮಸ್ತೇಽಸ್ತು ಸದಾ ದೇವ ಕ್ಷಯಣಾಯ ಕಪರ್ದಿನೇ ।
ಪುಲಸ್ತ್ಯಾಯ ನಮಸ್ತೇಽಸ್ತು ನಮೋ ಗೋಷ್ಠ್ಯಾಯ ತೇ ನಮಃ ॥೪೭೯॥

---

ಅವರ್ಯಾಯ-ಸಂಸಾರಿಗಳಿಗೆ ಕಾಮ್ಯವಾದ ಫಲವನ್ನು ಕೊಡುವವನಿಗೆ, ಪ್ರತರಣಾಯ-ಮಂತ್ರ ಜಪ ಮುಂತಾದುವುಗಳ ಸಹಾಯದಿಂದಿದ್ದು ಪಾಪನಾಶಕನಾದ ದೇವನಿಗೆ, ಉತ್ತರಣಾಯ-ತತ್ತ್ವಜ್ಞಾನರೂಪದಿಂದಿದ್ದು ಮೋಕ್ಷಕಾರಣನಾದವನಿಗೆ, ಆತಾರ್ಯಾಯ-ತತ್ತ್ವಜ್ಞಾನವು ಸಂಭವಿಸಿದ್ದರೂ ದುಷ್ಟನಿಗ್ರಹ ಶಿಷ್ಟಪರಿಪಾಲನ ಗಳಿಗೋಸ್ಕರ ಸಂಸಾರಿಯಾಗುವವನಿಗೆ ನಮಸ್ಕಾರ. ॥೪೭೬॥

ಆಲಾದ್ಯಾಯ-ಕರ್ಮಫಲವನ್ನು ಅನುಭವಿಸುವ ಜೀವನಿಗೆ ಆಯಾ ಫಲ ಗಳನ್ನು ಅನುಭವಿಸುವಂತೆ ಪ್ರೇರೇಪಿಸುವವನಿಗೆ, ಶಷ್ಪ್ಯಾಯ-ಎಳೆಯ ಹುಲ್ಲು, ಕಡ್ಡಿ ಮತ್ತು ಗಂಗಾನದಿಯೇ ಮೊದಲಾದ ಪುಣ್ಯನದಿಗಳ ದಡದಲ್ಲಿ ಹುಟ್ಟಿದ ಕುಶಪಲಾಶ ಗಳ ರೂಪದಿಂದಿರುವವನಿಗೆ, ಫೇನ್ಯಾಯ-ನದಿಯಲ್ಲಿರುವ ನೊರೆಯ ಸ್ವರೂಪ ದಿಂದಿರುವನಿಗೆ, ಸಿಕತ್ಯಾಯ-ಮರಳಿನ ರೂಪದಿಂದಿರುವವನಿಗೆ ನಮಸ್ಕಾರ. ॥೪೭೭॥

ಪ್ರವಾಹ್ಯಾಯ-ಪ್ರವಾಹದ ಸ್ವರೂಪದಿಂದಿರುವವನಿಗೆ, ಇರಿಣ್ಯಾಯ-ಫಲವತ್ತಾದ ಭೂಮಿಯಲ್ಲಿರುವವನಿಗೆ, ಪ್ರಪಥ್ಯಾಯ-ಬಹುಜನರು ಸಂಚರಿಸುವ ಮಾರ್ಗದಲ್ಲಿರುವವನಿಗೆ, ಕಿಂಶಿಲಾಯ-ಚಿಕ್ಕ ಚಿಕ್ಕ ಕಲ್ಲುಗಳಿಂದ ಕೂಡಿದ ಪ್ರದೇಶದ ರೂಪದಿಂದಿರುವವನಿಗೆ ಪ್ರಣಾಮಗಳು. ॥೪೭೮॥

ಕ್ಷಯಣಾಯ-ಜನವಸತಿಯುಳ್ಳ ಪ್ರದೇಶದ ಸ್ವರೂಪದಿಂದಿರುವವನಿಗೆ, ಕಪರ್ದಿನೇ-ಜಟಾಧಾರಿಗೆ, ಪುಲಸ್ತ್ಯಾಯ-ಭಕ್ತರಿಗೆ ಪ್ರತ್ಯಕ್ಷನಾಗುವವನಿಗೆ, ಗೋಷ್ಠ್ಯಾಯ-ಗೋಶಾಲೆಯಲ್ಲಿರುವವನಿಗೆ ವಂದನೆಗಳು. ॥೪೭೯॥

ನಮೋ ಗೃಹ್ಯಾಯ ತಲ್ಪ್ಯಾಯ ಗೇಹ್ಯಾಯ ಚ ನಮೋಽಸ್ತು ತೇ ।
ಕಾಟ್ಯಾಯ ಗಹ್ವರೇಷ್ಠಾಯ ಹ್ರದಯ್ಯಾಯ ನಮೋಽಸ್ತು ತೇ ॥೪೮೦॥

ನಿವೇಷ್ಪ್ಯಾಯ ನಮೋ ನಿತ್ಯಂ ಪಾಂಸವ್ಯಾಯ ನಮೋ ನಮಃ ।
ರಜಸ್ಯಾಯ ನಮೋ ನಿತ್ಯಂ ಶುಷ್ಕ್ಯಾಯ ಚ ನಮೋಽಸ್ತು ತೇ ॥೪೮೧॥

ಹರಿತ್ಯಾಯ ನಮೋ ದೇವ ನಮೋ ಲೋಪ್ಯಾಯ ತೇ ಸದಾ ।
ಉಲಪ್ಯಾಯ ನಮಸ್ತೇಽಸ್ತು ನಮ ಊರ್ವ್ಯಾಯ ತೇ ನಮಃ ॥೪೮೨॥

ನಮಃ ಸೂರ್ಮ್ಯಾಯ ಪರ್ಣ್ಯಾಯ ಪರ್ಣಶದ್ಯಾಯ ತೇ ನಮಃ ।
ನಮೋಽಪಗುರಮಾಣಾಯ ನಮಸ್ತೇಽಭಿಘ್ನ ತೇ ಸದಾ ॥೪೮೩॥

---

ಗೃಹ್ಯಾಯ-ಮನೆಯಲ್ಲಿ ವಾಸವಾಗಿರುವವನಿಗೆ, ತಲ್ಪ್ಯಾಯ-ಮಂಚದಲ್ಲಿ ಮಲಗಿರುವವನಿಗೆ, ಗೇಹ್ಯಾಯ-ಪ್ರಾಸಾದದಲ್ಲಿರುವವನಿಗೆ, ಕಾಟ್ಯಾಯ-ಪ್ರವೇಶಿಸಲಸಾಧ್ಯವಾದ ಮಹಾರಣ್ಯದಲ್ಲಿ ವಾಸವಾಗಿರುವವನಿಗೆ, ಗಹ್ವರೇಷ್ಠಾಯ-ಭಯಂಕರವಾದ ಪರ್ವತದ ಗುಹೆಗಳಲ್ಲಿ ವಾಸವಾಗಿರುವವನಿಗೆ, ಹ್ರದಯ್ಯಾಯ-ಮಡುವಿನಲ್ಲಿ ನೆಲಸಿರುವವನಿಗೆ ನಮಸ್ಕಾರ. ॥೪೮೦॥

ನಿವೇಷ್ಪ್ಯಾಯ-ಹಿಮಜಲದಲ್ಲಿ ಇರುವವನಿಗೆ, ಪಾಂಸವ್ಯಾಯ-ಪರಮಾಣುಗಳಲ್ಲಿ ವಾಸವಾಗಿರುವವನಿಗೆ, ದೂಳಿಯಲ್ಲಿ ನೆಲಸಿರುವವನಿಗೆ, ಶುಷ್ಕ್ಯಾಯ-ಒಣಗಿದ ಕಟ್ಟಿಗೆಗಳಲ್ಲಿ ಇರುವವನಿಗೆ ವಂದನೆಗಳು. ॥೪೮೧॥

ಹರಿತ್ಯಾಯ-ಹಸಿಯ ಪದಾರ್ಥಗಳಲ್ಲಿ ನೆಲಸಿರುವವನಿಗೆ, ಲೋಪ್ಯಾಯ-ಕಠಿಣವಾದ ಪ್ರದೇಶದಲ್ಲಿ ಇರುವವನಿಗೆ, ಉಲಪ್ಯಾಯ-ಹಸಿಯ ಹುಲ್ಲಿನಲ್ಲಿ ಇರುವವನಿಗೆ, ಊರ್ವ್ಯಾಯ-ಪೃಥಿವಿಯಲ್ಲಿರುವವನಿಗೆ. ॥೪೮೨॥

ಸೂರ್ಮ್ಯಾಯ-ಮನೋಹರವಾದ ಅಲೆಗಳಿಂದ ಕೂಡಿರುವ ನದಿಯಲ್ಲಿ ವಾಸವಾಗಿರುವವನಿಗೆ, ಪರ್ಣ್ಯಾಯ-ತರಗೆಲೆಗಳಲ್ಲಿ ಇರುವವನಿಗೆ, ಪರ್ಣಶದ್ಯಾಯ-ಒಣಗಿದ ಎಲೆಗಳ ಸಮುದಾಯದಲ್ಲಿ ನೆಲಸಿರುವವನಿಗೆ, ಅಪಗುರಮಾಣಾಯ-ಮೇಲಕ್ಕೆತ್ತಿದ ಆಯುಧವುಳ್ಳವನಿಗೆ, ಅಭಿಘ್ನ-ಶತ್ರುಸಂಹಾರಕನಾದವನಿಗೆ ನಮಸ್ಕಾರ. ॥೪೮೩॥

ನಮ ಆಕ್ಷಿದತೇ ನಿತ್ಯಂ ನಮಃ ಪ್ರಕ್ಷಿದತೇ ಸದಾ ।
ನಮೋ ವಿಶ್ವಸ್ವರೂಪಾಯ ಗುಣಾತೀತಾಯ ತೇ ನಮಃ ॥೪೮೪॥

ನೀಲಗ್ರೀವಾಯ ನಿತ್ಯಾಯ ಶಿತಿಕಂಠಾಯ ತೇ ನಮಃ ।
ವ್ಯುಪ್ತಕೇಶಾಯ ತೇ ನಿತ್ಯಂ ಸಹಸ್ರಾಕ್ಷಾಯ ತೇ ನಮಃ ॥೪೮೫॥

ನಮಸ್ತೇಽಘೋರರೂಪಾಯ ನಮಸ್ತೇ ಶತಧನ್ವನೇ ।
ಗಿರಿಶಾಯ ನಮಸ್ತೇಽಸ್ತು ಶಿಪಿವಿಷ್ಟಾಯ ತೇ ನಮಃ ॥೪೮೬॥

ಮೀಢುಷ್ಟಮಾಯ ದೇವಾಯ ಭವ್ಯಾಯೇಷುಮತೇ ನಮಃ ।
ನಮೋ ಹ್ರಸ್ವಾಯ ದೇವಾಯ ವಾಮನಾಯ ನಮೋ ನಮಃ॥೪೮೭॥

---

ಆಕ್ಷಿದತೇ-ಕೊಂಚ ಮನಸ್ತಾಪವನ್ನುಂಟುಮಾಡುವವನಿಗೆ, ಪ್ರಕ್ಷಿದತೇ-ಅತ್ಯಂತ ದುಃಖವನ್ನುಂಟುಮಾಡುವವನಿಗೆ, ವಿಶ್ವಸ್ವರೂಪಾಯ-ನಿಖಿಲವಸ್ತುಗಳ ಸ್ವರೂಪದಿಂದ ವ್ಯವಸ್ಥಿತನಾದವನಿಗೆ, ಗುಣಾತೀತಾಯ-ರೂಪಾದಿಗುಣವಿಹೀನನಿಗೆ ನಮಸ್ಕಾರ. ॥೪೮೪॥

ನೀಲಗ್ರೀವಾಯ-ವಿಷಪಾನದಿಂದ ಕಪ್ಪಾದ ಕಂಠದ ಏಕದೇಶವುಳ್ಳವನಿಗೆ, ಶಿತಿಕಂಠಾಯ-ಬಿಳುಪಾದ ಕಂಠಪ್ರದೇಶವುಳ್ಳವನಿಗೆ, ವ್ಯುಪ್ತಕೇಶಾಯ-ಮುಂಡಿತವಾದ ಕೇಶಗಳುಳ್ಳವನಿಗೆ, ಸಹಸ್ರಾಕ್ಷಾಯ-ಇಂದ್ರನ ರೂಪದಿಂದಿದ್ದು ಸಹಸ್ರಾಕ್ಷನೆಂಬ ಹೆಸರನ್ನು ಧರಿಸಿದವನಿಗೆ. ॥೪೮೫॥

ಅಘೋರರೂಪಾಯ-ಅಘೋರವೆಂಬ ಮುಖವನ್ನು ಧರಿಸಿದವನಿಗೆ, ಶತಧನ್ವನೇ-ನೂರು ಧನುಸ್ಸುಗಳನ್ನು ಧರಿಸಿದವನಿಗೆ, ಗಿರಿಶಾಯ-ಹಿಮವತ್ಪರ್ವತದಲ್ಲಿ ವಾಸವಾಗಿರುವವನಿಗೆ, ಶಿಪಿವಿಷ್ಟಾಯ-ವಿಷ್ಣುವಿನ ರೂಪದಿಂದಿರುವವನಿಗೆ. ॥೪೮೬॥

ಮೀಢುಷ್ಟಮಾಯ-ಮೇಘರೂಪದಿಂದಿದ್ದು ಮಳೆಗರೆಯುವವನಿಗೆ, ಭವ್ಯಾಯ-ಅದ್ಭುತವಾದ ರೂಪವನ್ನು ಧರಿಸುವವನಿಗೆ, ಇಷುಮತೇ-ಬಾಣವನ್ನು ಧರಿಸಿದವನಿಗೆ, ಹ್ರಸ್ವಾಯ-ಅಲ್ಪವಾದ ಪ್ರಮಾಣದಿಂದ ಪ್ರಾಣಿಗಳ ಹೃದಯದಲ್ಲಿ ನೆಲಸಿರುವವನಿಗೆ, ವಾಮನಾಯ-ಅಂಗುಷ್ಠಪ್ರಮಾಣದಿಂದ ಹೃದಯಾಕಾಶದಲ್ಲಿ ನೆಲಸಿರುವವನಿಗೆ ವಂದನೆಗಳು. ॥೪೮೭॥

ನಮೋಽಸ್ತು ಬೃಹತೇ ನಿತ್ಯಂ ನಮೋ ವರ್ಷೀಯಸೇ ಸದಾ ।
ನಮೋ ವೃದ್ಧಾಯ ದೇವಾಯ ನಮಃ ಸಂವೃಧ್ವನಾಯ ತೇ ॥೪೮೮॥

ನಮಸ್ತೇ ಆಹನನ್ಯಾಯ ಧೃಷ್ಣವೇ ಪ್ರಮುಶಾಯ ಚ ।
ತೀಕ್ಷ್ಣೇಷವೇ ನಮಸ್ತುಭ್ಯಂ ನಮ ಆಯುಧಿನೇ ಸದಾ ॥೪೮೯॥

ನಮೋ ಗೋಪ್ತ್ರೇ ವಿಶ್ವಹಂತ್ರೇ ಸ್ವಾಯುಧಾಯ ಸುಧನ್ವಿನೇ ।
ನಮಃ ಸ್ರುತ್ಯಾಯ ನಮಃ ನಮಃ ಸೂದ್ಯಾಯ ತೇ ನಮಃ ॥೪೯೦॥

ಸ್ರೋತಸ್ಯಾಯ ನಮೋ ನಿತ್ಯಂ ದ್ವೀಪ್ಯಾಯ ಚ ನಮೋನಮಃ ।
ನಮೋ ಜ್ಯೇಷ್ಠಾಯ ಶೂರ್ಯಾಯ ಕನಿಷ್ಠಾಯ ನಮೋನಮಃ ॥೪೯೧॥

---

ಬೃಹತೇ-ಪ್ರೌಢವಾದ ಆಕಾರವನ್ನು ಧರಿಸಿರುವವನಿಗೆ, ವರ್ಷೀಯಸೇ-ಅನಂತಕಲ್ಯಾಣಗುಣಗಳಿಂದ ತುಂಬಿರುವವನಿಗೆ, ವೃದ್ಧಾಯ-ವಯಸ್ಸಿನಿಂದ ವೃದ್ಧನಾಗಿರುವವನಿಗೆ, ಸಂವೃಧ್ವನಾಯ-ವೇದವೇದಾಂತಗಳಿಂದ ಪ್ರತಿಪಾದ್ಯವಾದ ಸ್ವರೂಪವುಳ್ಳವನಿಗೆ ನಮಸ್ಕಾರ. ॥೪೮೮॥

ಆಹನನ್ಯಾಯ-ಭೇರೀದಂಡದಲ್ಲಿ ತಾಡನಕ್ರಿಯೆಯಿಂದ ಇರುವವನಿಗೆ, ಧೃಷ್ಣವೇ-ಯುದ್ಧದಲ್ಲಿ ಹಿಮ್ಮೆಟ್ಟದಿರುವವನಿಗೆ, ಪ್ರಮುಶಾಯ-ಶತ್ರುಸೈನ್ಯಗಳ ವೃತ್ತಾಂತಗಳನ್ನು ಪರಾಮರ್ಶಿಸುವವನಿಗೆ, ತೀಕ್ಷ್ಣೇಷವೇ-ಹರಿತವಾದ ಬಾಣಗಳನ್ನು ಕೈಯಲ್ಲಿ ಧರಿಸಿದವನಿಗೆ, ಆಯುಧಿನೇ-ಅನೇಕ ಆಯುಧಗಳನ್ನು ಧರಿಸಿದವನಿಗೆ. ॥೪೮೯॥

ಗೋಪ್ತ್ರೇ-ಪಶುಗಳನ್ನು ದುಃಖದಿಂದ ಪಾರುಗಾಣಿಸುವವನಿಗೆ, ವಿಶ್ವಹಂತ್ರೇ-ಜಗತ್ಪ್ರಲಯವನ್ನುಂಟುಮಾಡುವವನಿಗೆ, ಸ್ವಾಯುಧಾಯ-ತ್ರಿಶೂಲಧಾರಿಗೆ, ಸುಧನ್ವಿನೇ-ಸುಂದರವಾದ ಧನುಸ್ಸನ್ನು ಧರಿಸಿದವನಿಗೆ, ಸ್ರುತ್ಯಾಯ-ಕಾಲುದಾರಿಯಲ್ಲಿ ಸಂಚರಿಸುವವನಿಗೆ, ಪಥ್ಯಾಯ-ರಥ, ಅಶ್ವ ಮುಂತಾದ ವಾಹನಸಂಚಾರ ಯೋಗ್ಯವಾದ ಮಾರ್ಗದಲ್ಲಿ ಸಂಚರಿಸುವವನಿಗೆ, ಸೂದ್ಯಾಯ-ಕೆಸರಿನಿಂದ ಕೂಡಿರುವ ನೀರಿನ ರೂಪದಿಂದ ಇರುವವನಿಗೆ. ॥೪೯೦॥

ಸ್ರೋತಸ್ಯಾಯ-ನದಿಯ ಪ್ರವಾಹರೂಪದಿಂದಿರುವವನಿಗೆ, ದ್ವೀಪ್ಯಾಯ-ದ್ವೀಪದಲ್ಲಿರುವವನಿಗೆ, ಜ್ಯೇಷ್ಠಾಯ-ಸರ್ವರಿಗೂ ಜ್ಯೇಷ್ಠನಾದವನಿಗೆ, ಸೂರ್ಯಾಯ-

ಪೂರ್ವಜಾಯ ನಮಸ್ತೇಽಸ್ತು ನಮಸ್ತೇಽಪರಜಾಯ ಚ ।
ಮಧ್ಯಮಾಯ ನಮಸ್ತೇಽಸ್ತು ಕೂಷ್ಮಾಂಡಾಯ ಚ ತೇ ನಮಃ ॥೪೯೨॥

ನಮಃ ಪರಂತಪಾಯೇಶ ತಾರಾಯ ಸಕಲಾತ್ಮನೇ ।
ಜಘನ್ಯಾಯ ನಮಸ್ತೇಽಸ್ತು ಬುಧ್ನಿಯಾಯ ನಮೋ ನಮಃ ॥೪೯೩॥

ಸೋಭ್ಯಾಯ ಪ್ರತಿಸರ್ಯಾಯ ನಮೋ ಯಾಮ್ಯಾಯ ತೇ ನಮಃ ।
ನಮಃ ಕ್ಷೇಮ್ಯಾಯ ವರ್ಯಾಯ ಉರ್ವರ್ಯಾಯ ನಮೋನಮಃ॥೪೯೪॥

---

ಸೂರ್ಯನ ರೂಪದಿಂದಿರುವವನಿಗೆ, ಕನಿಷ್ಠಾಯ-ವಿದ್ಯೈಶ್ವರ್ಯಾದಿಗಳಿಂದ ರಹಿತವಾದ ನಿರ್ಗುಣಸ್ವರೂಪವನ್ನು ಧರಿಸಿರುವವನಿಗೆ ಪ್ರಣಾಮವು. ॥೪೯೧॥

ಪೂರ್ವಜಾಯ- ಜಗತ್ಸೃಷ್ಟಿಯ ಆದಿಯಲ್ಲಿ ಹಿರಣ್ಯಗರ್ಭನ ರೂಪದಿಂದ ಆವಿರ್ಭೂತನಾದವನಿಗೆ, ಅಪರಜಾಯ-ಜಗತ್ಪ್ರಲಯ ಕಾಲದಲ್ಲಿ ಕಾಲಾಗ್ನಿಯ ರೂಪದಿಂದ ಅಭಿವ್ಯಕ್ತನಾದವನಿಗೆ, ಮಧ್ಯಮಾಯ-ಜಗತ್ತಿನ ಸ್ಥಿತಿಕಾಲದಲ್ಲಿ ದೇವ, ಮನುಷ್ಯ, ತಿರ್ಯಕ್ಪ್ರಾಣಿ ಇವುಗಳ ರೂಪದಿಂದ ಅಭಿವ್ಯಕ್ತನಾಗುವವನಿಗೆ, ಕೂಷ್ಮಾಂಡಾಯ-ಬ್ರಹ್ಮಾಂಡರೂಪಿಯಾದವನಿಗೆ ನಮಸ್ಕಾರವು. ॥೪೯೨॥

ಪರಂತಪಾಯ-ಆಪ್ತಕಾಮನಾಗಿದ್ದರೂ ತಪಸ್ಸನ್ನಾಚರಿಸುವವನಿಗೆ, ತಾರಾಯ-ಸಂಸಾರಸಾಗರದಿಂದ ಮನುಷ್ಯರನ್ನು ಪಾರುಗಾಣಿಸುವವನಿಗೆ, ಸಕಲಾತ್ಮನೇ-ಸಕಲ ವಸ್ತುಗಳ ರೂಪದಿಂದಿರುವವನಿಗೆ, ಜಘನ್ಯಾಯ-ಗೋವು ಮುಂತಾದ ಪ್ರಾಣಿಗಳ ಹಿಂಭಾಗದಿಂದ ಕರುವಿನ ರೂಪದಿಂದ ಜನಿಸುವವನಿಗೆ, ಬುಧ್ನಿಯಾಯ-ವೃಕ್ಷಗಳ ಮೂಲಭಾಗದಲ್ಲಿ ಕೊಂಬೆಗಳ ರೂಪದಿಂದ ಉತ್ಪನ್ನನಾಗುವವನಿಗೆ.॥೪೯೩॥

ಸೋಭ್ಯಾಯ-ಪುಣ್ಯಪಾಪಗಳ ಸಮಷ್ಟಿರೂಪವಾದ ಮನುಷ್ಯಲೋಕದ ರೂಪದಿಂದ ಇರುವವನಿಗೆ, ಪ್ರತಿಸರ್ಯಾಯ-ವಿವಾಹಾದಿ ಮಂಗಳಕಾರ್ಯಗಳಲ್ಲಿ ಕೈಗಳಲ್ಲಿ ಧರಿಸುವ ಕಂಕಣದ ರೂಪದಿಂದ ಇರುವವನಿಗೆ, ಯಾಮ್ಯಾಯ-ಯಮಲೋಕದಲ್ಲಿದ್ದು ಪಾಪಿಗಳನ್ನು ಶಿಕ್ಷಿಸುವವನಿಗೆ, ಕ್ಷೇಮ್ಯಾಯ-ನಿತ್ಯಮುಕ್ತನಾದವನಿಗೆ, ವರ್ಯಾಯ-ಸರ್ವಶ್ರೇಷ್ಠನಿಗೆ, ಉರ್ವರ್ಯಾಯ-ಸಸ್ಯಗಳಿಂದ ಭರಿತವಾದ ಭೂಪ್ರದೇಶದಲ್ಲಿ ಧಾನ್ಯಗಳ ರೂಪದಿಂದ ಆವಿರ್ಭವಿಸುವವನಿಗೆ ನಮಸ್ಕಾರ. ॥೪೯೪॥

ಶ್ಲೋಕ್ಯಾಯ ಚಾವಸಾನ್ಯಾಯ ನಮೋ ಮಂಗಲರೂಪಿಣೇ ।
ನಮೋ ವನ್ಯಾಯ ಕಕ್ಷ್ಯಾಯ ಶ್ರಾವ್ಯಾಯ ಚ ನಮೋನಮಃ ॥೪೯೫॥

ಪ್ರತಿಶ್ರಾವ್ಯಾಯ ಶಾಂತಾಯ ಶರಣ್ಯಾಯ ನಮೋ ನಮಃ ।
ನಮಃ ಸದಾಶುಷೇಣಾಯ ನಮುಶ್ಚಾಶುರಥಾಯ ಚ ॥೪೯೬॥

ನಮಃ ಶೂರಸ್ವರೂಪಾಯ ಭೇತ್ರೇ ಚ ಭಯದಾಯಿನೇ ।
ನಮೋಽಸ್ತು ವರ್ಮಿಣೇ ತುಭ್ಯಂ ನಮೋ ನಿತ್ಯಂ ವರೂಥಿನೇ ॥೪೯೭॥

ಬಿಲ್ಮಿನೇ ತೇ ನಮೋ ನಿತ್ಯಂ ನಮಃ ಕವಚಿನೇ ಸದಾ ।
ಶ್ರುತಾಯ ಶ್ರುತಸೇನಾಯ ದುಂದುಭ್ಯಾಯ ಚ ತೇ ನಮಃ ॥೪೯೮॥

---

ಶ್ಲೋಕ್ಯಾಯ-ವೈದಿಕಮಂತ್ರಗಳಿಂದ ಪ್ರತಿಪಾದ್ಯನಾದವನಿಗೆ, ಅವಸಾನ್ಯಾಯ-ವೇದಾಂತ ಪ್ರತಿಪಾದ್ಯನಾದವನಿಗೆ, ಮಂಗಲರೂಪಿಣೇ-ಮಂಗಲಮೂರ್ತಿಗೆ, ವನ್ಯಾಯ-ಅರಣ್ಯದಲ್ಲಿ ವೃಕ್ಷಾದಿಗಳರೂಪದಿಂದ ಬೆಳೆಯುವವನಿಗೆ, ಕಕ್ಷ್ಯಾಯ-ವೃಕ್ಷಗಳ ಸ್ಕಂಧಪ್ರದೇಶದಲ್ಲಿ ಲತಾದಿರೂಪದಿಂದ ಜನಿಸುವವನಿಗೆ, ಶ್ರಾವ್ಯಾಯ-ಶಬ್ದರೂಪದಿಂದಿರುವವನಿಗೆ ವಂದನೆ. ॥೪೯೫॥

ಪ್ರತಿಶ್ರಾವ್ಯಾಯ-ಪ್ರತಿಧ್ವನಿಯ ಸ್ವರೂಪದಿಂದಿರುವವನಿಗೆ, ಶಾಂತಾಯ-ಶಾಂತಮೂರ್ತಿಗೆ, ಶರಣ್ಯಾಯ-ಶರಣಾಗತರಕ್ಷಕನಿಗೆ, ಆಶುಷೇಣಾಯ-ಶೀಘ್ರಗಾಮಿಯಾದ ಸೇನೆಯಿಂದ ಯುಕ್ತನಾಗಿರುವವನಿಗೆ, ಆಶುರಥಾಯ-ಶೀಘ್ರಗಾಮಿಯಾದ ರಥದಿಂದ ಯುಕ್ತನಾದವನಿಗೆ. ॥೪೯೬॥

ಶೂರಸ್ವರೂಪಾಯ-ಯುದ್ಧದಲ್ಲಿ ಧೈರ್ಯಶಾಲಿಯಾದವನಿಗೆ, ಭೇತ್ರೇ-ಶತ್ರುಸಂಹಾರಕನಿಗೆ, ಭಯದಾಯಿನೇ-ಶತ್ರುಗಳಿಗೆ ಭಯವನ್ನುಂಟುಮಾಡುವವನಿಗೆ ವರ್ಮಿಣೇ-ಕವಚಧಾರಿಗೆ, ವರೂಥಿನೇ-ಸೇನಾಸಮೇತನಾಗಿರುವವನಿಗೆ. ॥೪೯೭॥

ಬಿಲ್ಮಿನೇ-ಯುದ್ಧದಲ್ಲಿ ರಂಧ್ರದಿಂದ ಯುಕ್ತವಾದ ಶಿರಸ್ತ್ರಾಣವನ್ನು ಧರಿಸುವವನಿಗೆ, ಕವಚಿನೇ-ಕವಚಧಾರಿಗೆ. ಶ್ರುತಾಯ-ವೇದಗಳಲ್ಲಿ ಪ್ರಸಿದ್ಧನಾದವನಿಗೆ, ಶ್ರುತಸೇನಾಯ-ಪ್ರಸಿದ್ಧವಾದ ಸೇನೆಯಿಂದ ಕೂಡಿರುವವನಿಗೆ, ದುಂದುಭ್ಯಾಯ-ಭೇರಿಯಲ್ಲಿ ಶಬ್ದರೂಪದಿಂದ ಉತ್ಪನ್ನನಾಗುವವನಿಗೆ ಪ್ರಣಾಮಗಳು. ॥೪೯೮॥

ನಮಸ್ತೇ ಆಹನನ್ಯಾಯ ಧೃಷ್ಣವೇ ಪ್ರಮೃಶಾಯ ಚ ।
ತೀಕ್ಷ್ಣೇಷವೇ ನಮಸ್ತುಭ್ಯಂ ನಮ ಆಯುಧಿನೇ ಸದಾ ॥೪೯೯॥

ನಮೋ ಗೋಪ್ತ್ರೇ ವಿಶ್ವಹಂತ್ರೇ ಸ್ವಾಯುಧಾಯ ಸುಧನ್ವಿನೇ ।
ನಮಃ ಸ್ರುತ್ಯಾಯ ಪಥ್ಯಾಯ ನಮಃ ಸೂದ್ಯಾಯ ತೇ ನಮಃ ॥೫೦೦॥

ಸರಸ್ಯಾಯ ನಮೋ ನಿತ್ಯಂ ನಮೋ ನಾದ್ಯಾಯ ತೇ ನಮಃ ।
ವೈಶಂತಾಯ ನಮೋ ನಿತ್ಯಮಗ್ರ್ಯಗಣ್ಯಾಯ ತೇ ನಮಃ ॥೫೦೧॥

ನಮೋಽಸ್ತ್ವಮೇಯರೂಪಾಯ ನಮಃ ಕೂಪ್ಯಾಯ ತೇ ಸದಾ ।
ನಮೋ ವದ್ಯಾಯ ವರ್ಷ್ಯಾಯಾವರ್ಷ್ಯಾಯಾಮೃತರೂಪಿಣೇ॥೫೦೨॥

---

ಆಹನನ್ಯಾಯ-ಭೇರಿಯನ್ನು ಬಾರಿಸುವ ದಂಡದಲ್ಲಿ, ತಾಡನಕ್ರಿಯೆಯರೂಪ ದಿಂದ ಇರುವವನಿಗೆ, ಧೃಷ್ಣವೇ-ಯುದ್ಧದಲ್ಲಿ ಓಡಿ ಹಿಮ್ಮೆಟ್ಟದಿರುವವನಿಗೆ, ಪ್ರಮೃ ಶಾಯ-ಶತ್ರುಸೈನ್ಯಗಳ ಚಲನವಲನಗಳನ್ನು ಪರೀಕ್ಷಿಸುವವನಿಗೆ, ತೀಕ್ಷ್ಣೇಷವೇ-ಹರಿತವಾದ ಬಾಣಗಳನ್ನು ಧರಿಸಿರುವವನಿಗೆ, ಆಯುಧಿನೇ-ಅನೇಕ ಆಯುಧಗಳನ್ನು ಧರಿಸಿರುವವನಿಗೆ ನಮಸ್ಕಾರ. ||೪೯೯||

ಜಗತ್ಪ್ರಲಯವನ್ನುಂಟುಮಾಡುವವನಿಗೆ, ಸ್ವಾಯುಧಾಯ-ತ್ರಿಶೂಲಧಾರಿಗೆ, ಸುಧನ್ವಿನೇ-ಸುಂದರವಾದ ಧನುಸ್ಸನ್ನು ಧರಿಸಿದವನಿಗೆ, ಸ್ರುತ್ಯಾಯ-ಕಾಲುದಾರಿ ಯಲ್ಲಿ ಸಂಚರಿಸುವವನಿಗೆ, ಪಥ್ಯಾಯ-ರಥ, ಅಶ್ವ, ಮುಂತಾದ ವಾಹನಗಳು ಸಂಚ ರಿಸುವ ಪ್ರದೇಶದಲ್ಲಿ ಸಂಚರಿಸುವವನಿಗೆ, ಸೂದ್ಯಾಯ-ಕೆಸರಿನಿಂದ ಕೂಡಿರುವ ನೀರಿನರೂಪದಿಂದಿರುವವನಿಗೆ, ||೫೦೦||

ಸರಸ್ಯಾಯ-ಸರೋವರದಲ್ಲಿರುವ ಜಲದರೂಪದಿಂದಿರುವವನಿಗೆ, ನಾದ್ಯಾಯ-ನದೀಜಲರೂಪದಿಂದಿರುವವನಿಗೆ, ವೈಶಂತಾಯ-ಕ್ಷುದ್ರವಾದ ಸರೋವರದ ನೀರಿನ ರೂಪದಿಂದಿರುವವನಿಗೆ, ಅಗ್ರಗಣ್ಯಾಯ-ದೇವತೆಗಳಲ್ಲಿ ಅಗ್ರೇಸರನಾದವನಿಗೆ. ||೫೦೧||

ಅಮೇಯರೂಪಾಯ-ಪ್ರತ್ಯಕ್ಷಾದಿಪ್ರಮಾಣಗಳಿಂದ ನಿರ್ಧರಿಸಲು ಅಶಕ್ಯವಾದ ರೂಪದಿಂದ ಇರುವವನಿಗೆ, ಕೂಪ್ಯಾಯ-ಬಾವಿಯಲ್ಲಿರುವ ಜಲದ ರೂಪದಿಂದಿರುವವ ನಿಗೆ, ವಂದ್ಯಾಯ-ನಮಸ್ಕರಿಸಲು ಯೋಗ್ಯನಾದವನಿಗೆ, ವರ್ಷ್ಯಾಯ-ವರ್ಷಾಕಾಲದ ನೀರಿನ ರೂಪದಿಂದಿರುವವನಿಗೆ, ಅವರ್ಷ್ಯಾಯ-ಸಮುದ್ರಜಲದ ರೂಪದಿಂದಿರು

**ನಮೋ ಮೇಘ್ಯಾಯ ಭೌಮಾಯ ವಾಸ್ತವ್ಯಾಯ ನಮೋನಮಃ ।**
**ಈಧ್ರಿಯಾಯ ನಮಸ್ತೇಽಸ್ತು ಆತಪ್ಯಾಯ ನಮೋನಮಃ ॥೫೦೩॥**

**ನಮೋ ವಾತ್ಯಾಯ ರೇಷ್ಮ್ಯಾಯ ವಾಸ್ತವ್ಯಾಯ ನಮೋನಮಃ ।**
**ವಾಸ್ತುಪಾಯ ನಮಸ್ತೇಽಸ್ತು ನಮಃ ಸಾಂಬಾಯ ಸರ್ವದಾ ॥೫೦೪॥**

**ನಮಶ್ಚಂದ್ರಕಿರೀಟಾಯ ನಿಯಂತಾಯ ನಮೋಽಸ್ತು ತೇ ।**
**ನಮೋ ಬ್ರಹ್ಮಣ್ಯದೇವಾಯ ದೇವೇಶಾಯ ನಮೋನಮಃ ॥೫೦೫॥**

**ನಮೋ ವಿಶ್ವೈಕವಂದ್ಯಾಯ ಸರ್ವಾಧಾರಾಯ ತೇ ನಮಃ ।**
**ನಮೋಽನಂತಗುಣೋಪೇತ ಸೋಮಸರ್ವೋತ್ತಮ ಪ್ರಭೋ ॥೫೦೬॥**

---

ವವನಿಗೆ, ಅಮೃತರೂಪಿಣೇ-ತ್ರಿಕಾಲಾಬಾಧ್ಯವಾದ ಸ್ವರೂಪವುಳ್ಳವನಿಗೆ ವಂದನೆಗಳು. ॥೫೦೨॥

ಮೇಘ್ಯಾಯ-ಮೇಘದಲ್ಲಿರುವ ಜಲರೂಪದಿಂದ ವಾಸವಾಗಿರುವವನಿಗೆ, ಭೌಮಾಯ-ಭೂಮಿಯಲ್ಲಿ ಮಣ್ಣಿನರೂಪದಿಂದ ನೆಲಸಿರುವವನಿಗೆ, ವಾಸ್ತವ್ಯಾಯ-ಗೋವು, ಅಶ್ವ ಮುಂತಾದ ದನದಲ್ಲಿ ಹಾಲು ಮುಂತಾದ ಪದಾರ್ಥಗಳ ರೂಪದಿಂದ ವಾಸವಾಗಿರುವವನಿಗೆ, ಈಧ್ರಿಯಾಯ-ಶರತ್ಕಾಲದ ಮೇಘದಲ್ಲಿ ಜಲರೂಪದಿಂದ ಇರುವವನಿಗೆ, ಆತಪ್ಯಾಯ-ಬಿಸಿಲಿನ ರೂಪದಿಂದ ಇರುವವನಿಗೆ, ॥೫೦೩॥

ವಾತ್ಯಾಯ-ವಾಯುವಿನೊಂದಿಗೆ ವೃಷ್ಟಿಯ ರೂಪದಿಂದ ಕೆಳಕ್ಕೆ ಬೀಳುವವನಿಗೆ, ರೇಷ್ಮ್ಯಾಯ-ಪ್ರಲಯಕಾಲದಲ್ಲಿ ಉಂಟಾಗುವ ಚಿಕ್ಕಚಿಕ್ಕ ಕಲ್ಲುಗಳಿಂದ ಕೂಡಿರುವ ವೃಷ್ಟಿಗೆ ರೇಷ್ಮ್ಯವೆಂದು ಹೆಸರು. ಅಂತಹ ರೇಷ್ಮ್ಯರೂಪದಿಂದ ಬೀಳುವವನಿಗೆ, ವಾಸ್ತವ್ಯಾಯ-ಗೋವು, ಅಶ್ವ ಮುಂತಾದ ಪ್ರಾಣಿಗಳಲ್ಲಿ ಕ್ಷೀರಾದಿರೂಪದಿಂದ ನೆಲಸಿರುವವನಿಗೆ, ವಾಸ್ತುಪಾಯ-ಮನೆಯನ್ನು ಕಟ್ಟುವ ಪ್ರದೇಶವನ್ನು ರಕ್ಷಿಸುವವನಿಗೆ, ಸಾಂಬಾಯ-ದೇವೀಸಹಿತನಾದವನಿಗೆ ನಮಸ್ಕಾರ. ॥೫೦೪॥

ಚಂದ್ರಕಿರೀಟಾಯ-ಕಿರೀಟದಲ್ಲಿ ಚಂದ್ರನನ್ನು ಧರಿಸಿರುವವನಿಗೆ, ನಿಯಂತಾಯ-ಜಗನ್ನಿಯಾಮಕನಿಗೆ, ಬ್ರಹ್ಮಣ್ಯದೇವಾಯ-ಆಕಾಶದಂತೆ ವ್ಯಾಪಕವಾದ ಸ್ವರೂಪವುಳ್ಳವನಿಗೆ, ದೇವೇಶಾಯ-ದೇವತೆಗಳ ಸ್ವಾಮಿಯಾದವನಿಗೆ, ॥೫೦೫॥

ವಿಶ್ವೈಕವಂದ್ಯಾಯ-ಸಕಲ ಜಗತ್ತಿನಲ್ಲಿಯೂ ಪೂಜ್ಯನಾದವನಿಗೆ, ಸರ್ವಾಧಾರಾಯ-ಸಕಲ ವಸ್ತುಗಳಿಗೂ ಆಧಾರನಾಗಿರುವವನಿಗೆ, ಅನಂತ ಗುಣೋಪೇತ-

ನಮಸ್ತೇ ತ್ರ್ಯಂಬಕ ಶ್ರೀಮನ್ನಮಸ್ತಾಮ್ರಾಯ ತೇ ನಮಃ ।
ನಮೋ ವಿಶ್ವೈಕನಿಲಯ ನಮೋ ವಿಶ್ವೈಕಸಂಸ್ತುತ ॥೫೦೭॥

ನಮೋ ವಿಧೂತಪಾಪಾಯ ಮಹಾದೇವಾಯ ತೇ ನಮಃ ।
ನಮಸ್ತೇ ಪಾರ್ವತೀನಾಥ ನಮಸ್ತೇ ತ್ರಿಪುರಾಂತಕ ॥೫೦೮॥

ನಮಸ್ತೇ ಕರುಣಾಸಿಂಧೋ ನಮಸ್ತೇ ಭಕ್ತವತ್ಸಲ ।
ನಮಸ್ತ್ರಿಕಾಗ್ನಿಕಾಲಾಯ ಕಾಲಕಾಲಾಯ ತೇ ಸದಾ ॥೫೦೯॥

ನಮಸ್ತೇ ಕಾಲರೂಪಾಯ ನಮಸ್ತೇ ವರದಾಯ ಚ ।
ನಮಃ ಸರ್ವೋತ್ತಮ ಶ್ರೀಮನ್ಸದಾಶಿವ ನಮೋಽಸ್ತು ತೇ ॥೫೧೦॥

---

ಅನೇಕ ಕಲ್ಯಾಣಗಳಿಂದ ಶೋಭಿಸುವವನೇ, ಸೋಮ-ಉಮಾಸಹಿತನೇ, ಸರ್ವೋತ್ತಮ-ಸರ್ವ ಪ್ರಾಣಿಗಳಿಗೂ, ಶ್ರೇಷ್ಠನೇ-ಪ್ರಭೋ—ಜಗತ್ಪ್ರಭುವೇ ನಿನಗೆ ವಂದನೆ. ॥೫೦೬॥

ತ್ರ್ಯಂಬಕ-ಮುಕ್ಕಣ್ಣನೇ, ಶ್ರೀಮನ್-ಸಂಪದ್ಭರಿತನೇ, ವಿಶ್ವೈಕಸಂಸ್ತುತ-ಸಕಲ ಪ್ರಾಣಿಗಳಿಂದಲೂ ಸ್ತುತಿಸಲ್ಪಟ್ಟಿರುವವನೇ, ನಿನಗೆ ವಂದನೆ. ತಾಮ್ರಾಯ-ರಕ್ತವರ್ಣದಿಂದ ಕೂಡಿರುವ ಮುಖಮುದ್ರೆಯುಳ್ಳವನಿಗೆ, ವಿಶ್ವೈಕನಿಲಯ-ಜಗದಾಧಾರನೇ ನಿನಗೆ ಪ್ರಣಾಮವಿರಲಿ. ॥೫೦೭॥

ವಿಧೂತಪಾಪಾಯ-ಪಾಪರಹಿತನಿಗೆ, ಮಹಾದೇವಾಯ-ಶ್ರೇಷ್ಠತಮನಾದ, ದೇವನಿಗೆ ನಮಸ್ಕಾರವು. ಓ ಪಾರ್ವತೀರಮಣನೇ, ತ್ರಿಪುರಸಂಹಾರಕನೇ, ನಿನಗೆ ವಂದಿಸುವೆನು. ॥೫೦೮॥

ಓ ಕರುಣಾಸಾಗರನೇ, ಭಕ್ತವತ್ಸಲನೇ, ನಿನ್ನನ್ನು ವಂದಿಸುವೆನು. ನೀನು ಆಧ್ಯಾತ್ಮಿಕ ಆಧಿದೈವಿಕ, ಆಧಿಭೌತಿಕಗಳೆಂಬ ತಾಪತ್ರಯಗಳನ್ನು ಹೋಗಲಾಡಿಸುವೆ. ಮೃತ್ಯುಂಜಯನಾದ ನಿನಗೆ ವಂದನೆಗಳು. ॥೫೦೯॥

ನೀನು ಮೃತ್ಯುಸ್ವರೂಪನೂ ಭಕ್ತರಿಗೆ ವರವನ್ನು ದಯಪಾಲಿಸುವವನೂ, ಸರ್ವಶ್ರೇಷ್ಠನೂ ಆಗಿರುವೆ. ನಿತ್ಯಮಂಗಳಮೂರ್ತಿಯಾದ ನಿನಗೆ ನಮಸ್ಕಾರವು. ॥೫೧೦॥

ಹಿರಣ್ಯರೂಪ ಚಿದ್ರೂಪ ಹಿರಣ್ಯನಿಲಯಾಮಲ ।
ನಮಸ್ತೇಽಸ್ತು ಹಿರಣ್ಯಾತ್ಮಹಿರಣ್ಯಪತಯೇ ನಮಃ ॥೫೧೧॥

ನ ತ್ವದನ್ಯೋ ಮಹಾದೇವ ಲೋಕದೇವೋ ಜಗನ್ಮಯ ।
ನ ತ್ವದನ್ಯಃ ಸುರಾರಾಧ್ಯೋ ನ ತ್ವದನ್ಯೋ ಜಗತ್ಪ್ರಭುಃ ॥೫೧೨॥

ನಮೋ ಭವಾಯ ಭೀಮಾಯ ಭರ್ಗಾಯಾಭಯದಾಯ ತೇ ।
ದೇವತಾಸಾರ್ವಭೌಮಾಯ ಶಂಭವೇ ಪ್ರಭವೇ ನಮಃ ॥೫೧೩॥

ತ್ವದನ್ಯೋ ವೇದವೇದ್ಯೋ ನ ನ ತ್ವದನ್ಯಃ ಸುರೇಷ್ಟದಃ ।
ನ ತ್ವದನ್ಯಃ ಸದಾ ಸೇವ್ಯೋ ನ ತ್ವದನ್ಯೋ ಜಗತ್ಪಿತಾ ॥೫೧೪॥

ತ್ವಮೇವ ಭೂಷಣಂ ರಮ್ಯಂ ತ್ವಮೇವ ಮಮ ಜೀವನಂ ।
ತ್ವಮೇವ ಮಮ ಮಾತಾಪಿ ತ್ವಮೇವ ಹಿ ಪಿತಾ ಮಮ ॥೫೧೫॥

---

ಓ ಹಿರಣ್ಯರೂಪನೇ, ಚಿದ್ರೂಪನೇ, ಸುವರ್ಣಕ್ಕೆ ಆಶ್ರಯನೇ, ಶುದ್ಧನೇ, ಸುವರ್ಣಪ್ರಭುವೇ, ನಿನ್ನನ್ನು ವಂದಿಸುವೆನು. ॥೫೧೧॥

ಓ ಮಹಾದೇವನೇ, ನೀನೇ ಜಗದ್ರಕ್ಷಕನು. ನಿನ್ನನ್ನು ಬಿಟ್ಟರೆ ಇನ್ನಾರೂ ಈ ಲೋಕಗಳನ್ನು ರಕ್ಷಿಸುವವರಿಲ್ಲ. ದೇವತೆಗಳೂ ಸಹ ನಿನ್ನನ್ನೇ ಪೂಜಿಸುವರು. ಆದುದರಿಂದ ನೀನೇ ಜಗದೀಶನಾಗಿರುವೆ. ॥೫೧೨॥

ನಿನ್ನ ಉತ್ಪತ್ತಿಗೆ ಬೇರೆ ಯಾವ ಕಾರಣವೂ ಇಲ್ಲದೇ ನೀನು ನಿನ್ನ ಮಹಿಮೆಯಿಂದಲೇ ಸಗುಣವಾದ ರೂಪದಿಂದ ಉತ್ಪನ್ನವಾಗುವೆ. ರುದ್ರರೂಪನೂ ನೀನೇ ಆಗಿರುವೆ. ನೀನು ತೇಜಃಸ್ವರೂಪನೂ, ಭಕ್ತರಿಗೆ ಅಭಯವನ್ನು ನೀಡುವವನೂ ಆಗಿರುವೆ. ದೇವೇಶನಾದ ನಿನ್ನನ್ನು ವಂದಿಸುವೆನು. ॥೫೧೩॥

ವೇದಗಳು ನಿನ್ನನ್ನಲ್ಲದೇ ಇನ್ನಾರನ್ನೂ ಪ್ರತಿಪಾದಿಸುತ್ತಿರುವುದಿಲ್ಲ. ನೀನಲ್ಲದೇ ಇನ್ನಾವ ದೇವತೆಯೂ ಭಕ್ತರಿಗೆ ಅಭೀಷ್ಟವನ್ನು ಹೀಗೆ ಕೊಡುವುದಿಲ್ಲ. ನಿರಂತರವೂ ನಿನ್ನನ್ನೇ ಸೇವಿಸುವೆವು. ನೀನೇ ಜಗತ್ತಿನ ಜನಕನು. ॥೫೧೪॥

ಲೋಕಕ್ಕೆ ನೀನೊಂದು ಸುಂದರವಾದ ಒಡವೆ. ನೀನೇ ನನ್ನ ಜೀವನವು ನೀನೇ ತಂದೆ, ನೀನೇ ತಾಯಿ. ॥೫೧೫॥

ತ್ವಮಾರಾಧ್ಯತಮಃ ಶಂಭೋ ಮಮ ದೇವೋತ್ತಮ ಪ್ರಭೋ ।
ನ ತ್ವದನ್ಯಪದದ್ವಂದ್ವಮರ್ಚಯಾಮಿ ಕೃಪಾನಿಧೇ ॥೫೧೬॥

ನ ಶೃಣೋಮಿ ಕಥಾಮನ್ಯಾಂ ಶಿವನಾಮವಿವರ್ಜಿತಾಂ ।
ಶಿವನಾಮಾನ್ಯನಾಮಾನಿ ನ ವದಾಮಿ ಮಹೇಶ್ವರ ॥೫೧೭॥

ಶಿವಲಿಂಗಂ ವಿಹಾಯಾನ್ಯಧ್ಯಾನಂ ಚ ನ ಕದಾಚನ ।
ಶಿವಲಿಂಗಂ ವಿಹಾಯಾನ್ಯಂ ನ ಪಶ್ಯಾಮಿ ಚ ಸಾದರಂ ॥೫೧೮॥

ಅಪರಾಧಾನ್‌ಕ್ಷಮಸ್ವೇಶ ಮಮ ಶಂಕರ ಸರ್ವದಾ ।
ಸ್ವರೂಪಂ ತವ ವಿಜ್ಞಾತುಂ ಶಕ್ಯಮೇವ ನ ಸರ್ವಥಾ ॥೫೧೯॥

ವೇದೈಃ ಸರ್ವೈರಪಿ ಶ್ರೀಮಂಸ್ತವ ರೂಪಂ ಸದಾ ಶಿವ ।
ನ ಜ್ಞಾತಂ ತಾದೃಶಂ ರೂಪಂ ಮಯಾ ಜ್ಞೇಯಂ ಕಥಂ ಪ್ರಭೋ ॥೫೨೦॥

---

ಓ ಪ್ರಭುವೇ, ನೀನು ಪೂಜ್ಯರಲ್ಲಿ ಅಗ್ರೇಸರನಾಗಿರುವೆ. ನೀನೇ ನನ್ನ ಇಷ್ಟದೇವತೆಯಾಗಿರುವೆ. ನಿನ್ನ ಪಾದಗಳನ್ನಲ್ಲದೇ ಇನ್ನಾರ ಪಾದಗಳನ್ನೂ ನಾನು ಪೂಜಿಸುವುದಿಲ್ಲ. ॥೫೧೬॥

ಓ ಮಹೇಶ್ವರನೇ, ಶಿವನಾಮದಿಂದ ಶೂನ್ಯವಾದ ಕಥೆಯನ್ನು ಎಂದಿಗೂ ಕೇಳಲಾರೆ. ಶಿವನಾಮಗಳನ್ನು ಬಿಟ್ಟು ಇನ್ನಾವ ನಾಮಗಳನ್ನೂ ಉಚ್ಚರಿಸಲಾರೆ. ॥೫೧೭॥

ಶಿವಲಿಂಗವನ್ನೇ ನಿರಂತರವೂ ಧ್ಯಾನಿಸುವೆನಲ್ಲದೇ ಇನ್ನಾವುದನ್ನೂ ಧ್ಯಾನಿಸಲಾರೆ. ಶಿವಲಿಂಗವನ್ನಲ್ಲದೇ ಇನ್ನಾವುದನ್ನೂ ಪ್ರೀತಿಯಿಂದ ನಾನು ನೋಡಲಾರೆ. ॥೫೧೮॥

ಓ ಶಂಕರನೇ, ನನ್ನಿಂದುಂಟಾದ ಅಪರಾಧಗಳನ್ನು ಕ್ಷಮಿಸು. ನಿನ್ನ ಸ್ವರೂಪವನ್ನು ತಿಳಿಯುವುದು ಅಶಕ್ಯವೇ ಸರಿ. ॥೫೧೯॥

ಓ, ಪ್ರಭುವೇ, ವೇದಗಳೂ ಸಹ ನಿನ್ನ ರೂಪವನ್ನು ತಿಳಿಯಲಾರದೆ ಹೋದುವು. ಹೀಗಿರುವಲ್ಲಿ ನಿನ್ನ ಭವ್ಯವಾದ ರೂಪವನ್ನು ನನ್ನಿಂದ ತಿಳಿಯಲು ಸಾಧ್ಯವೇ ? ॥೫೨೦॥

**ಲಿಂಗಸ್ಯಾಗ್ರಂ ಮಯಾ ಜ್ಞಾತುಮಜ್ಞಾತ್ವಾಗತಮೀಶ್ವರ ।**
**ಅಪರಾಧಂ ಕ್ಷಮಸ್ವಾದ್ಯ ತ್ವಂ ಮಮಾಂಬಿಕಾಪತೇ ॥೫೨೧॥**

**ಅನ್ಯೇಽಪಿ ಮತ್ಕೃತಾಃ ಸರ್ವೇ ಕ್ಷಂತವ್ಯಾಃ ಪರಮೇಶ್ವರ ।**
**ಅಪರಾಧಂ ಕ್ಷಮಸ್ವಾದ್ಯ ದೀನವತ್ಸಲಶಂಕರ ॥೫೨೨॥**

**ಪ್ರಣತಂ ಪಾಹಿ ಮಾಂ ಶಂಭೋ ಕರುಣಾರಸವಾರಿಧೇ ।**
**ಮಾಂ ನ ಮುಂಚ ಮಹಾದೇವ ಪಾಹಿ ಪಾಹಿ ಸದಾ ಶಿವಂ ॥೫೨೩॥**

**ಇತಿ ಸ್ತುತ್ವಾ ಮಹಾದೇವಂ ಪ್ರಣಮ್ಯ ಬಹುಧಾ ವಿಧಿಃ ।**
**ಕೃತಾಂಜಲಿಪುಟೋ ಭೂತ್ವಾನಿವಸನ್ನತಕಂಧರಃ ॥೫೨೪॥**

**ಮಹೇಶಾನಂತಾದ್ಯ ತ್ರಿಗುಣರಹಿತಾಮೇಯ ವಿಮಲ ।**
**ಸ್ವರಾಕಾರಾಪಾರಾಮಿತಗುಣಗಣಾಕಾರ ನಿವೃತೇ ॥**
**ನಿರಾಧಾರಾಧಾರಾಮರವರ ನಿರಾಕಾರಪರಮ ।**
**ಪ್ರಭಾಪೂರಾಕಾರಾವರಪರ ನಮೋ ವೇದ್ಯಶಿವತೇ ॥೫೨೫॥**

---

ಓ, ಗಿರಿಜಾರಮಣನೇ, ಅಜ್ಞನಾದ ನಾನು, ನಿನ್ನ ಲಿಂಗದ, ಅಗ್ರಭಾಗವನ್ನು ತಿಳಿಯುವುದಕ್ಕೆಂದು ಊರ್ಧ್ವಲೋಕಗಳಿಗೆ ಹೋಗಿ, ಅಲ್ಲೆಲ್ಲೂ ತಿಳಿದುಬರದಿರಲು ಪುನಃ ಅಲ್ಲಿಂದ ಹಿಂತಿರುಗಿದೆನು. ನನ್ನ ಆ ಅಪರಾಧವನ್ನು ಕ್ಷಮಿಸು. ||೫೨೧||

ಓ, ದೀನಬಂಧುವೇ! ನನ್ನಿಂದುಂಟಾದ ಇನ್ನಿತರ ಅಪರಾಧಗಳನ್ನೂ ಸಹ ಕ್ಷಮಿಸು. ||೫೨೨||

ಓ, ಶಂಭುವೇ, ಸದಾಶಿವನೇ, ಸದಾ ನಮಸ್ಕರಿಸಿರುವ ನನ್ನನ್ನು ರಕ್ಷಿಸು. ಓ ದಯಾಸಾಗರನೇ, ನಿನ್ನ ಏಕಾಂತ ಭಕ್ತನಾದ ನನ್ನನ್ನು ಕೈಬಿಡದಿರು. ||೫೨೩||

ಬ್ರಹ್ಮನು ಈರೀತಿಯಲ್ಲಿ, ಶಿವನನ್ನು ಸ್ತುತಿಸಿ, ಬಾರಿಬಾರಿಗೂ ನಮಸ್ಕರಿಸಿ ಅಂಜಲಿಬದ್ಧನಾಗಿ ಶಿರಸ್ಸನ್ನು ತಗ್ಗಿಸಿ ಅವನ ಮುಂದೆ ನಿಂತನು. ||೫೨೪||

ಬಳಿಕ ವಿಷ್ಣುವು ಹೀಗೆಂದು ಸ್ತುತಿಸಿದನು. ಓ, ಮಹೇಶನೇ! ಅನಂತನೇ! ಗುಣಾತೀತನೇ! ಅಪ್ರಮೇಯನೇ! ಶುದ್ಧನೇ! ಸ್ವರಾಕಾರನೇ! ಅನ್ಯಂತ ಕಲ್ಯಾಣ ಗುಣಗಳಿಂದ ಶೋಭಿಸುವವನೇ, ನಿತ್ಯಸುಖಸ್ವರೂಪನೇ! ನಿರಾಧಾರನೇ! ಜಗದಾ

ನಮೋ ವೇದಾವೇದ್ಯಾಖಿಲಜಗದುಪಾದಾನನಿಯತ
ಸ್ವತಂತ್ರಾ ಸಾಮಂತಾನವಧೃತನಿಜಾಕಾರವಿರತೇ ।
ನಿವರ್ತಂತೇ ಶಿವಮಜರಮಪ್ರಾಪ್ಯ ಮನಸಾ
ಯತೋಽಶಕ್ತಾಃ ಸ್ತೋತುಂ ಸಕೃದಪಿ ಗುಣಾತೀತಶಿವ ತೇ ॥೫೨೬॥

ತ್ವದನ್ಯದ್ವಸ್ತ್ವೇಕಂ ನ ಹಿ ಭುವಿ ಸಮಸ್ತಂ ನ ಭವತೇ
ವಿಭಿನ್ನಂ ವಿಶ್ವಾತ್ಮನ್ನ ಚ ಪರಮಸ್ತೀಶ ಭವತಃ ।
ಧ್ರುವಂ ಮಾಯಾತೀತಸ್ತ್ವಮಸಿ ಸತತಂ ನಾತ್ರ ವಿಷಯಃ
ನ ತೇ ಕಿಂಚಿತ್ಕೃತ್ಯಂ ಕ್ವಚಿದಪಿ ನಮೋಽವಾರ್ಯ ಶಿವತೇ ॥೫೨೭॥

ತ್ವಯ್ಯೈವೇಮಂ ಲೋಕಂ ನಿಖಿಲಮಮಲಂ ವ್ಯಾಪ್ಯ ಸತತಂ
ತಥೈವಾನ್ಯಂ ಲೋಕಂ ಸ್ಥಿತಮನಘ ದೇವೋತ್ತಮ ವಿಭೋ ।

---

ಧಾರನೇ! ಸುರಶ್ರೇಷ್ಠನೇ! ನಿರಾಕಾರನೇ! ನಿತ್ಯನೇ! ಜ್ಯೋತಿಃಸ್ವರೂಪನೇ! ವೇದಾಂತವೇದ್ಯನೇ, ನಿನ್ನನ್ನು ವಂದಿಸುವೆನು. ||೫೨೫||

ವೇದಾಂತವೇದ್ಯನೂ, ಜಗತ್ಕಾರಣನೂ, ಸ್ವತಂತ್ರನೂ ಆದ ನಿನಗೆ ನಮಸ್ಕಾರವು. ನಿನ್ನ ಅಖಂಡಾನಂದಾಕಾರದ ಅವಸ್ಥೆಯು ಅನ್ಯಾಧೀನವಾದುದಲ್ಲ. ಜರಾಮರಣಾದಿಗಳಿಲ್ಲದಿರುವ, ನಿನ್ನ ಸ್ವರೂಪವನ್ನು ತಿಳಿಸಲು ಪ್ರವೃತ್ತವಾದ ವಾಗಿಂದ್ರಿಯವು ಅದನ್ನು ತಿಳಿಸಲು ಸಾಧ್ಯವಾಗದೇ ಮನಸ್ಸಿನೊಂದಿಗೆ ಹಿಂದಿರುಗುವುದು. ಆದುದರಿಂದಲೇ ಗುಣಾತೀತನಾದ ನಿನ್ನನ್ನು ಒಂದು ಬಾರಿಯಾದರೂ ಸರಿಯಾಗಿ ಸ್ತುತಿಸಲು ಅಸಾಧ್ಯವಾಗಿರುವುದು. ||೫೨೬||

ಈ ಲೋಕದಲ್ಲಿ, ನಿನಗಿಂತಲೂ, ಇತರವಾದ ಇನ್ನೊಂದು ವಸ್ತುವಿರುವುದಿಲ್ಲ. ಯಾವ ವಸ್ತುವೂ ನಿನ್ನಿಂದ ಬೇರ್ಪಟ್ಟಿರುವುದಿಲ್ಲ. ನೀನೇ ಈ ಜಗದ್ರೂಪದಿಂದ ವ್ಯವಸ್ಥಿತನಾಗಿರುವೆ. ನೀನು, ಅಜ್ಞಾನದಿಂದ ಆವೃತನಾಗಿರುವುದಿಲ್ಲ. ಆದುದರಿಂದಲೇ ನೀನು, ಪ್ರಪಂಚದಲ್ಲಿರುವ ಇಂದ್ರಿಯಗೋಚರವಾಗುವ ವಸ್ತುಗಳಂತೆ, ಇಂದ್ರಿಯಗೋಚರನಲ್ಲ. ಆಪ್ತಕಾಮನಾದ ನಿನಗೆ, ಯಾವ ಕಾರ್ಯವೂ ಸಾಧಿಸಬೇಕಾಗಿರುವುದಿಲ್ಲ. ಓ, ಶಿವನೇ ನಿನಗೆ ನಮಸ್ಕಾರವು. ||೫೨೭||

ಓ ಪ್ರಭುವೇ, ನೀನು ಸ್ವರ್ಗಮರ್ತ್ಯ ಪಾತಾಲವೇ ಮೊದಲಾದ ಲೋಕಗಳಲ್ಲೆಲ್ಲಾ ವ್ಯಾಪಿಸಿರುವೆ. ಚರಾಚರವಸ್ತುಗಳಿಂದ ಕೂಡಿರುವ ಈ ಜಗತ್ತನ್ನು ನೀನೇ

ತ್ವಯೈವೇತತ್ಸೃಷ್ಟಂ ಜಗದಖಿಲಮೀಶಾನ ಭಗವ
ನ್ವಿಲಾಸೋಽಯಂ ಕಶ್ಚಿತ್ತವ ಶಿವ ನಮೋ ನೇಧ್ಯ ಶಿವ ತೇ ॥೫೨೮॥

ಜಗತ್ಸೃಷ್ಟಂ ಪೂರ್ವಂ ಯದಭವದುಮಾಕಾಂತ ಸತತಂ
ತ್ವಯಾ ಲೀಲಾಮಾತ್ರಾತ್ತದಪಿ ಸಕಲಂ ರಕ್ಷಿತಮಭೂತ್ ।
ತದೈವಾಗ್ರೇ ಫಾಲಪ್ರಕಟನಯನಾಗ್ನ್ಯದ್ಭುತಕಣೈಃ
ಜಗದ್ದಗ್ಧ್ವಾ ಸ್ವಾಸ್ಥ್ಯಸ್ಯ ಜಹರ ನಮೋ ವೇದ್ಯ ಶಿವತೇ ॥೫೨೯॥

ವಿಭೂತೀನಾಮಂತೋ ಭವ ನ ಭವತೋ ಭೂತಿವಿಲಸ
ನ್ನಿಜಾಕಾರಶ್ರೀಮನ್ನ ತವ ಗುಣಸೀಮಾಪ್ಯವಗತಾ ।
ಅತದ್ವ್ಯಾವೃತ್ತ್ಯಾದ್ಧಾ ತ್ವಯಿ ಸಕಲವೇದಾಶ್ಚ ಚಕಿತಾಃ
ಭವಂತ್ಯೇವಾಸಾಮಪ್ರಕೃತಿಕ ನಮೋ ವರ್ಷ್ಮ ಶಿವ ತೇ ॥೫೩೦॥

ವಿರಾಡ್ರೂಪಂ ಯತ್ತೇ ಸಕಲನಿಗಮಾಗೋಚರಮಭೂ
ತ್ತದೇವೇದಂ ರೂಪಂ ಭವತಿ ಕಿಮಿದಂ ಭಿನ್ನಮಥವಾ ।

---

ಸೃಷ್ಟಿಸಿರುವೆ. ಇದು ನಿನ್ನ ವಿಲಾಸ. ಮಹಾಮಹಿಮನಾದ ನಿನ್ನನ್ನು ವಂದಿಸುವೆನು. ॥೫೨೮॥

ಓ ಗಿರಿಜಾರಮಣನೇ, ಭವ್ಯಮೂರ್ತಿಯಾದ ನೀನು ನಿರಂತರವೂ ಜಗತ್ತನ್ನು ಸೃಷ್ಟಿಸಿ ಆದೇ ಜಗತ್ತನ್ನು ಸ್ಥಿತಿಕಾಲದಲ್ಲಿ ನಿನ್ನ ಲೀಲೆಯಿಂದ ರಕ್ಷಿಸುವೆ. ಬಳಿಕ ಪ್ರಲಯಕಾಲದಲ್ಲಿ ನಿನ್ನ ಫಾಲಪ್ರದೇಶದಲ್ಲಿರುವ ಕಣ್ಣಿನಿಂದುಂಟಾಗಿ ಪ್ರಜ್ವಲಿಸುವ ಅಗ್ನಿಕಣಗಳಿಂದ ಜಗತ್ತನ್ನು ದಹಿಸಿ ನಿನ್ನ ಮಹಿಮೆಯನ್ನು ವ್ಯಕ್ತಪಡಿಸಿ ನಿತ್ಯ ಸುಖವನ್ನನುಭವಿಸುತ್ತಿರುವೆ. ॥೫೨೯॥

ನಿನ್ನ ಮಹಿಮೆಗಳಿಗೆ ಅಂತ್ಯವೇ ಇರುವುದಿಲ್ಲ. ನಿನ್ನ ಅನಂತಕಲ್ಯಾಣಗುಣಗಳನ್ನು ಲೆಕ್ಕಿಸಲು ಸಾಧ್ಯವಿಲ್ಲ. ಸಕಲ ವೇದಗಳೂ, ಅಜ್ಞಾನದಿಂದ ನಿನ್ನ ಕಲ್ಪಿತವಾದ ರೂಪಾದಿಗಳನ್ನು ನಿಷೇಧಮುಖದಿಂದ ಹೋಗಲಾಡಿಸುತ್ತಾ, ನೀನು, ಕಲ್ಪಿತವಾದ ಈ ಸಕಲ ಪ್ರಪಂಚಕ್ಕೂ ಆಧಾರನಾಗಿರುವೆಯೆಂಬುದನ್ನು ತಿಳಿಯಪಡಿಸುತ್ತವೆ. ವೃಷ್ಟಿರೂಪಿಯಾದ ಮಹಾದೇವನೇ ನಿನಗೆ ನಮಸ್ಕಾರ. ॥೫೩೦॥

ಓ, ದೇವೇಶನೇ! ನಿನ್ನ ವಿರಾಡ್ರೂಪವು, ಸಕಲ ವೇದಗಳಿಗೂ ಅಗೋಚರವಾಗಿರುವುದು. ಲಿಂಗರೂಪದಿಂದಿರುವ ಈ ನಿನ್ನ ಆಕಾರವೂ ಸಹ, ವಿರಾಡ್ರೂಪವೇ

ನ ಜಾನೇ ದೇವೇಶ ತ್ರಿನಯನಸುರಾರಾಧ್ಯಚರಣ
ತ್ವಮೋಂಕಾರೋ ವೇದಸ್ತ್ವಮಸಿ ಹಿ ನಮೋಽಘೋರ ಶಿವ ತೇ ॥೫೩೧॥

ದಯಂತಸ್ತತ್ತ್ವಜ್ಞಾ ಮುನಿವರಗಣಾ ರೂಪಮನಘಂ
ತವೇದಂ ಸಂಚಿಂತ್ಯ ಸ್ವಮನಸಿ ಸದಾ ಸಂಗವಿಹಿತಾಃ ।
ಯಯುರ್ದಿವ್ಯಾನಂದಂ ತದಿದಮಧುನಾ ಕಿಂ ನು ನ ತಥಾ
ಕಿಮೇತಜ್ಜಾನೇಽಹಂ ಶರಣದ ನಮಃ ಶರ್ವ ಶಿವತೇ ॥೫೩೨॥

ಯಯಾ ಶಕ್ತ್ಯಾ ಸೃಷ್ಟ್ವಾ ಜಗದಥ ಚ ಸಂರಕ್ಷ್ಯ ಬಹುಧಾ
ತತಃ ಸಂಹೃತ್ಯೈತನ್ನಿವಸಸಿ ತದಾಧಾರಮಥ ವಾ ।
ಇದಂ ತೇ ಕಿಂ ರೂಪಂ ನಿರುಪಮ ನ ಜಾನೇ ಹರ ವಿಭೋ
ನಿಸರ್ಗಃ ಕೋ ವಾ ತೇ ತಮಪಿ ಹಿ ನಮೋ ಭವ್ಯ ಶಿವತೇ ॥೫೩೩॥

---

ಆಗಿರುವುದೇ ಅಥವಾ ಅದಕ್ಕಿಂತ ಬೇರೆಯಾಗಿರುವುದೇ? ಅದನ್ನು ನಾನು ತಿಳಿಯಲಾರೆ. ಓ, ಸುರವಂದ್ಯನೇ! ತ್ರಿನೇತ್ರನೇ! ನೀನೇ ಓಂಕಾರಸ್ವರೂಪನು. ವೇದರೂಪಿಯೂ ನೀನೇ ಆಗಿರುವೆ. ಶಾಂತಮೂರ್ತಿಯೂ ನೀನೇ. ನಿನಗೆ ವಂದನೆ. ॥೫೩೧॥

ಹಾರ್ದಾಕಾಶದಲ್ಲಿ ಅಭಿವ್ಯಕ್ತನಾಗಿರುವ ನಿನ್ನ ತತ್ತ್ವವನ್ನು ತಮ್ಮ ಮನಸ್ಸಿನಲ್ಲಿ ನಿರಂತರವೂ ಧ್ಯಾನಿಸಿ ಮುನಿಪುಂಗವರು ಬಾಹ್ಯವಿಷಯಗಳಿಂದ ವಿಮುಖರಾಗಿ ನಿರತಿಶಯವಾದ ಅಖಂಡಾನಂದವನ್ನು ಸವಿಯುವರು. ನಿನ್ನ ಈ ರೂಪವು ಮುನಿಗಳಿಂದ ಧ್ಯೇಯವಾಗಿರುವ ಆ ತತ್ತ್ವವೇ ಆಗಿರುವುದೋ ಅಥವಾ, ಅದಕ್ಕಿಂತಲೂ ಬೇರೆಯಾಗಿರುವುದೋ ಎಂಬುದನ್ನು ನಾನರಿಯೆ. ಶರಣಾಗತರಕ್ಷಕನೇ! ನಿನಗೆ ನಮಸ್ಕಾರವು. ॥೫೩೨॥

ಯಾವ ಅನಾದಿಮಾಯೆಯೆಂಬ ಶಕ್ತಿಯ ಮೂಲಕ, ನಾನಾ ವಿಧವಾದ ಈ ಜಗತ್ತನ್ನು ಸೃಷ್ಟಿಸಿ, ಸ್ಥಿತಿಕಾಲದಲ್ಲಿ ಸಂರಕ್ಷಿಸಿ, ಪ್ರಲಯಕಾಲದಲ್ಲಿ ಸಂಹರಿಸಿ, ಅಖಂಡಾನಂದದ ಅನುಭವದಲ್ಲಿ ಮಗ್ನನಾಗುವೆಯೋ, ಆ ಆದಿಶಕ್ತಿಗೆ ನೀನೇ ಆಧಾರನಾಗಿರುವೆ. ಈಗ ನಮ್ಮ ಮುಂದೆ ಕಾಣಿಸಿಕೊಳ್ಳುತ್ತಿರುವ ನಿನ್ನ ಈ ರೂಪವು, ಮಾಯೆಗೆ ಆಧಾರವಾದರೂಪವೇ ಆಗಿರುವುದೋ ಅಥವಾ ಅದಕ್ಕಿಂತಲೂ ಭಿನ್ನವಾಗಿರುವುದೋ ಎಂಬುದನ್ನೂ ನಾನರಿಯೆ? ಓ, ಪ್ರಭುವೇ! ನಿನ್ನ ನಿಜವಾದ ರೂಪವಾವುದೆಂಬುದನ್ನು ನನಗೆ ತೋರ್ಪಡಿಸು. ॥೫೩೩॥

**ತವಾನಂತಾನ್ಯಾಹುಃ ಶುಚಿಪರಮರೂಪಾಣಿ ನಿಗಮಾ**
**ಸ್ತದಂತರ್ಭೂತಂ ಸತ್ಸದಸದನಿರುಕ್ತಂ ತ್ವಿದಮಪಿ ।**
**ನಿರುಕ್ತಂ ಛಂದೋಭಿರ್ನಿಲಯನಮಿದಂ ಚಾನಿಲಯನಂ**
**ನ ವಿಜ್ಞಾತಂ ಜ್ಞಾನಂ ಸಕೃದಪಿ ನಮೋ ಜ್ಯೇಷ್ಠ ಶಿವತೇ ॥೫೩೪॥**

**ತವಾಭೂತ್ಸತ್ಯಂ ಚಾನೃತಮಪಿ ಚ ಸತ್ಯಂ ಚಲಮಭೂ**
**ದೃತಂ ಸತ್ಯಂ ಸತ್ಯಂ ದೃತಮುಭಯಥಾರೂಪಮಖಿಲಂ ।**
**ಯತಃ ಸತ್ಯಂ ಸತ್ಯಂ ಸಮಮಪಿ ಸಮಸ್ತಂ ತವ ವಿಭೋ**
**ದೃತಂ ಸತ್ಯಂ ಸತ್ಯಂ ದೃತಮಪಿ ನಮೋ ರುದ್ರ ಶಿವ ತೇ ॥೫೩೫॥**

---

ಓ ಶಿವನೇ, ನಿನಗೆ ಔಪಾಧಿಕವಾಗಿ ಬಂದಿರುವ ಪವಿತ್ರವೂ ನಿರತಿಶಯವೂ ಆದ ಅನೇಕ ಆಕಾರಗಳಿರುವುವೆಂದು ವೇದಾಂತಗಳು ಸಾರಿ ಸಾರಿ ಹೇಳುತ್ತಲಿವೆ. ಸದ್ರೂಪವೆಂದಾಗಲಿ ಅಸದ್ರೂಪವೆಂದಾಗಲಿ ನಿಶ್ಚಯಿಸಿ ಹೇಳಲು ಅಸಾಧ್ಯವಾಗಿರುವ ಈ ನಿನ್ನ ರೂಪವೂ ಸಹ ವೇದಾಂತಬೋಧಿತವಾದ ಸಾಕಾರವಾದ ರೂಪಗಳಲ್ಲೇ ಸೇರಿರಬಹುದು. ಈರೀತಿಯಲ್ಲಿ ನಿನಗೆ ಸಗುಣವೂ ಸಾಕಾರವೂ ಆದ ಮೂರ್ತರೂಪಗಳೂ ಮತ್ತು ನಿರ್ಗುಣವೂ ನಿರಾಕಾರವೂ ಆದ ಅಮೂರ್ತರೂಪವೂ ಇರುವುವೆಂದು ವೇದಗಳು ಹೇಳುವುವು. ಆದರೆ ಆ ರೂಪಗಳ ಮಹಿಮೆಯನ್ನು ನಾನು ತಿಳಿಯಲು ಅಸಮರ್ಥನಾಗಿರುವೆನು. ಭೂತನಾಥನಾದ ನೀನು ಸಕಲ ಚರಾಚರ ಪ್ರಾಣಿಗಳಿಗೂ ಅಗ್ರೇಸರನಾಗಿರುವೆ. ಅಂತಹ ನಿನ್ನನ್ನು ವಂದಿಸುವೆನು. ॥೫೩೪॥

ಪರಮೇಶ್ವರನೇ, ಪರಮಾರ್ಥಸತ್ಯನಾದ ನಿನಗೆ ವ್ಯಾವಹಾರಿಕ, ಪ್ರಾತಿಭಾಸಿಕಗಳೆಂಬ ಎರಡು ಕಾರ್ಯ (ವಿವರ್ತ) ಗಳಾದವು. ಹೀಗೆ ಸತ್ಯಸ್ವರೂಪಕ್ಕೆ ಕಾರ್ಯರೂಪೇಣ ಕಲ್ಪಿತವಾದ ಚಲನೆಯಿಂದ ಸಮಸ್ತ ವಸ್ತುವೂ ಅನೃತ, ಸತ್ಯ, ಸತ್ಯಾನೃತ ಅಂಶಗಳಿಂದ ಕಲೆತು (ಮಿಶ್ರವಾಗಿ) ಎರಡು ರೂಪಗಳಾದುವು. ಏತಕ್ಕೆಂದರೆ ಸಮಸ್ತ ವಸ್ತುಗಳಲ್ಲೂ "ಸನ್ ಘಟಃ" "ಸನ್ ಪಟಃ" "ಅಸ್ತಿಘಟಃ" "ಅಸ್ತಿಪಟಃ" ಎಂದು ವಿವರ್ತೋಪಾದಾನನಾದ ಪರಮಾತ್ಮನ ಸದಂಶ (ಸತ್ಯಾಂಶ) ಸಮವಾಗಿದ್ದರೂ, ಕಾರ್ಯದಸ್ವರೂಪವಾದ ದೃತಾಂಶ ಅಂದರೆ ಕರಗಿ ಲಯವಾಗುವ, ಅನೃತ ಘಟಾದ್ಯಂಶ ಇದೂ ಭಾಸವಾಗುವುದು, ಹೀಗೆ ಸತ್ಯಾನೃತ, ಮಿಥುನಾತ್ಮಕ ಮಿಥ್ಯಾ ಪ್ರಪಂಚಕ್ಕೆ ಕಾರಣನಾದ ನಿನಗೆ ನಮಸ್ಕಾರವು (ವಿ. ಸೂ.

ತವಾಮೇಯಾಮೇಯಂ ಯದಪಿ ತವ ಮೇಯಂ ವಿರಚಿತಂ
ನ ವಾಮೇಯಂ ಮೇಯಂ ರಚಿತಮಪಿ ಮೇಯಂ ವಿರಚಿತಂ ।
ನ ಮೇಯಂ ಮೇಯಂ ಚೇನ್ನ ಖಲು ಪರಮೇಯಂ ಪರಮಯಂ
ನ ಮೇಯಂ ನಾಮೇಯಂ ಪರಮಪಿ ನಮೋ ದೇವ ಶಿವ ತೇ॥೫೩೬॥

ತವಾಹಾರಂ ಹಾರಂ ವಿದಿತಮಪಿ ಹಾರಂ ವಿಹರಸೇ
ನವಾಹಾರಂ ಹಾರೀಹರಸಿ ಹರ ಹಾರಂ ನ ಹರಸಿ ।
ನ ವಾ ಹಾರಾಹಾರಂ ಪರತರವಿಹಾರಂ ಪರತರಂ
ಪರಂ ಪಾರಂ ಜಾನೇ ನ ಹಿ ಖಲು ನಮೋ ವಿಶ್ವ ಶಿವ ತೇ ॥೫೩೭॥

---

"ಸತ್ಯಂ ಚಾನೃತಂ ಚ ಸತ್ಯಮ ಭವತ್" ತೈತ್ತಿರೀಯ. ಈ ವಾಕ್ಯಾರ್ಥದ ಛಾಯೆ ಇಲ್ಲಿ ಕಾಣುತ್ತದೆ.) ॥೫೩೫॥

ಅಪ್ರಮೇಯನಾದ ಸ್ವಾಮಿಯೇ! ಯಾವುದು ಇತರರಿಗೆ ಅಮೇಯವೋ (ಅಳತೆಗೆ ಸಿಕ್ಕದಿರುವುದೊ) ಅಂತಹ ಪರಮಾರ್ಥತತ್ವವು ನಿನಗೆ ಮೇಯವು. (ಸರ್ವಜ್ಞನಾದ ನಿನಗೆ ಪರಮಾರ್ಥತತ್ವದ ವಿಷಯದಲ್ಲಿ ಅಜ್ಞಾನವಿಲ್ಲ.) ಇತರರಿಗೆ ಯಾವ ಪ್ರಪಂಚವು ಪ್ರಮೇಯ (ವೇದ್ಯವಾಗಿರುವುದೋ) ಅದು ಅವಿದ್ಯಾಕವಾದುದರಿಂದ ನಿನಗೆ ಮೇಯವಲ್ಲದ್ದಾಗಿದೆ. ಲೋಕಪ್ರಸಿದ್ಧವಾದ ಮೇಯವು (ಲೋಕದಲ್ಲಿ ಮೇಯವೆಂದು ಪ್ರಸಿದ್ಧವಾದ ವಸ್ತುವು) ಮೇಯವಲ್ಲವಾದರೆ ಅದು ಇತರರಿಗೂ(ಜೀವರಿಗೂ) ಮೇಯವಲ್ಲ. ಮತ್ತೆ ಕಾರ್ಯದಸ್ವರೂಪವೇನೆಂದರೆ, ಅದು ಮೇಯವೂ ಅಲ್ಲ ಅಮೇಯವೂ ಅಲ್ಲ. ಅದು ಅನಿರ್ವಚನೀಯ. ಇಂತಹ ಪ್ರಪಂಚ ಕಾರಣನಾದ ನಿನಗೆ ನಮಸ್ಕಾರವು. ॥೫೩೬॥

ಮಹೇಶ್ವರನೇ, ನಿನಗೆ ನಿನ್ನ ಭಕ್ತನ ಭಕ್ತಿಯೇ ಒಂದು ಆಹಾರ. ಅದರಿಂದಲೇ ನೀನು ತೃಪ್ತನೆನಿಸುವೆ. ಒಂದೊಂದು ವೇಳೆ ಶಾಂಭವನ ಮನೋಭಿಪ್ರಾಯವನ್ನು ತಿಳಿದಿದ್ದರೂ, ಅವನ ಪರೀಕ್ಷೆಗಾಗಿ ಅನೇಕ ಲೀಲೆಗಳನ್ನು ಹೂಡುವೆ. ನಿನ್ನನ್ನೇ ನಂಬಿದವನ ಯಾವ ವಸ್ತುವನ್ನೂ ನೀನೂ ಎಂದೂ ಅಪಹರಿಸಲಾರೆ. ಸಮಸ್ತ ಪಾಪನಾಶಕನಾದ ನೀನು ಭಕ್ತರ ಪಾಪವನ್ನೆಲ್ಲಾ ನಾಶಗೊಳಿಸುವೆ. ನಿನಗೆ ವಾಯ್ವಾಹಾರಿಯಾದ ಆದಿಶೇಷನೇ ಹಾರರೂಪದಲ್ಲಿರುವನು. ನೀನು ಪರಾತ್ಪರ ಸ್ವರೂಪಿಯು. ಸಂಸಾರಸಾಗರದ ಪಾರವನ್ನು ಕಂಡಿರುವ ನೀನು ಮಹಾಮಹಿಮನು.

ಯದೇತತ್ತತ್ತ್ವಂ ತೇ ಸಕಲಮಪಿ ತತ್ತ್ವೇನ ವಿದಿತಂ
ನ ತತ್ತತ್ತ್ವಂ ತತ್ತ್ವಂ ವಿದಿತಮಪಿ ತತ್ತ್ವೇನ ವಿದಿತಂ ।
ನ ಚೈತತ್ತತ್ತ್ವಂ ಚೇನ್ನಿಯತಮಪಿ ತತ್ತ್ವಂ ಕಿಮು ಭವೇತ್
ನ ತೇ ತತ್ತ್ವಂ ತತ್ತ್ವಂ ತದಪಿ ಚ ನಮೋ ವೇಷ್ಟ್ಯ ಶಿವ ತೇ ॥೫೩೮॥

ಇದಂ ರೂಪಂ ರೂಪಂ ಸದಸದಮಲಂ ರೂಪಮಿತಿ ಚೇತ್
ನ ಜಾನೇ ರೂಪಂ ತತ್ತರತಮವಿಭಿನ್ನಂ ಪರತರಂ ।
ಯತೋ ನಾನ್ಯದ್ರೂಪಂ ನಿಯತಮಪಿ ವೇದೈರ್ನಿಗದಿತಂ
ನ ಜಾನೇ ಸರ್ವಾತ್ಮನ್ ಕ್ವಚಿದಪಿ ನಮೋಽನಂತಶಿವ ತೇ ॥೫೩೯॥

---

ನಿನ್ನ ನೆಲೆಯನ್ನು ಮಾತ್ರ ಯಾರೂ ಕಾಣರು. ಪ್ರಪಂಚಸ್ವರೂಪನೇ ನೀನು. ಇಂತಹ ನಿನಗೆ ನಮಸ್ಕಾರ. ॥೫೩೭॥

ಪರಮಶಿವನೇ, ನಿನ್ನ ಯಾವ ಈ (ಶಾಸ್ತ್ರಪ್ರಸಿದ್ಧಸಗುಣರೂಪ) ಸಕಲ ತತ್ತ್ವವಿದೆಯೋ ಅದು (ವಿದ್ವಾಂಸರಿಂದ) ತತ್ತ್ವತಃ ತಿಳಿಯಲ್ಪಟ್ಟರೂ, ತತ್ತ್ವತಃ ತಿಳಿಯಲ್ಪಟ್ಟಿತು ಎಂದು ವ್ಯವಹರಿಸಲ್ಪಡುವ ಆ ತತ್ತ್ವ ನಿನ್ನ ತತ್ತ್ವವಲ್ಲ. (ಅಂದರೆ ವೇದ್ಯವಾದದ್ದು ತತ್ತ್ವವಲ್ಲ.) (ಶಾಸ್ತ್ರಾಧ್ಯಯನಮಾಡಿ ಭಗವತ್ತತ್ತ್ವವು ತಿಳಿಯಿತು ಎಂದು ಪರೋಕ್ಷಜ್ಞಾನಮಾತ್ರದಿಂದ ವ್ಯವಹರಿಸಲ್ಪಡುವುದು ವಿದ್ವದ್ವೇದ್ಯವಾದದ್ದು.) ಇದು ತತ್ತ್ವವಲ್ಲದಿದ್ದರೆ ಭಗವಂತನಿಗೆ ನಿಯತವಾದ ತತ್ತ್ವವಾದರೂ ಯಾವುದಿರಬಹುದು? ಏಕೆಂದರೆ ವಿದ್ವದ್ವೇದ್ಯವಾದ ಆ ಸಗುಣಸ್ವರೂಪವು ನಿನಗೆ ತತ್ತ್ವವಲ್ಲ. ಇಂತಹ ಅನಿರ್ಧಾರಿತ ತತ್ತ್ವನಾದ ನಿನಗೆ ನಮಸ್ಕಾರವು. ॥೫೩೮॥

ಸರ್ವಾತ್ಮಕನಾದ ಅನಂತನೇ, ಶಿವನೇ, ನಿನ್ನ ಕಾರ್ಯವರ್ಗವಾದ ಪ್ರಪಂಚದಲ್ಲಿ ಕಾಣುವ ಈ ಸದಸದ್ರೂಪವು ನಿರ್ದೋಷ ರೂಪವೆಂದು ಹೇಳುವುದು ಹೇಗೆ ಸಾಧ್ಯ? ಏತಕ್ಕೆಂದರೆ ಕಾರ್ಯದ ರೂಪವು ತರತಮಭಾವಾಪನ್ನವಾದದ್ದು. ಆದ್ದರಿಂದ ಇದು ಪರತರರೂಪವೆಂದು ನಾನು ತಿಳಿಯಲಾರೆ. ಆದರೆ (ಈ ಕಾರ್ಯರೂಪವನ್ನು ಬಿಟ್ಟು) ಇನ್ನೊಂದು ರೂಪವನ್ನು ನಿನಗೆ ಯಾವ ವೇದವಾಕ್ಯಗಳೂ ಎಲ್ಲೆಲ್ಲೂ ಹೇಳಿಲ್ಲ. ಆದ್ದರಿಂದ ನೀನು ಅರೂಪಿ ಎಂದು ಸಿದ್ಧಿಸುವುದರಿಂದ ನಿನ್ನಲ್ಲಿ ಯಾವ ರೂಪವನ್ನೂ ನಾನು ತಿಳಿಯಲಾರೆ. ಅಂತಹ ನಿನಗೆ ನಮಸ್ಕಾರವು. ॥೫೩೯॥

ಮಹದ್ಭೂತಂ ಭೂತಂ ಯದಪಿ ಚ ನ ಭೂತಂ ತವ ವಿಭೋ
ಸದಾ ಭೂತಂ ಭೂತಂ ಕಿಮು ಚ ಭವತೋ ಭೂತವಿಷಯೈಃ ।
ಯದಾ ಭೂತಂ ಭೂತಂ ಭವತಿ ಚ ನ ಭೂತಂ ಚ ಭವತಃ
ಪ್ರಭಾಭೂತಂ ಭೂತಂ ಭವತಿ ಹಿ ನಮೋ ಯಷ್ಟ ಶಿವ ತೇ ॥೫೪೦॥

ವಶೀಭೂತಾ ಭೂತಾಃ ಸತತಮಪಿ ಭೂತಾತ್ಮಕತಯಾ
ನ ತೇ ಭೂತಾಭೂತಾಸ್ತವ ಯದಪಿ ಭೂತಾವಿಭುತಯಾ ।
ಯತೋ ಭೂತಾ ಭೂತಾಸ್ತವ ತು ನ ಹಿ ಭೂತಾತ್ಮಕತಯಾ
ನ ವಾ ಭೂತಾಭೂತಾಃ ಕ್ವಚಿದಪಿ ನಮೋ ಭೂತಶಿವ ತೇ ॥೫೪೧॥

---

ಮಹಾದೇವನೇ, ಪ್ರತಿ ಮಹಾಭೂತೋತ್ಪತ್ತಿಯಲ್ಲೂ ನಿನಗೆ ಭೂತಸ್ವರೂಪದಿಂದ ಉತ್ಪತ್ತಿಯು ಏನೊಂದು (‘ಸಚ್ಚತ್ಯಚ್ಚಾಭವತ್’ ತೈತ್ತಿರೀಯ ಇತ್ಯಾದಿ ಶ್ರುತಿಯಲ್ಲಿ) ಹೇಳಲ್ಪಟ್ಟದೆಯೋ, ಅದು ನಿನಗೆ ಉತ್ಪತ್ತಿಯಲ್ಲ. ಯಾವಾಗಲೂ ಭೂತಗಳಿಗೇ ಉತ್ಪತ್ತಿ ಇರುವುದು. ಭೂತರೂಪ ಕಾರ್ಯಗಳಿಂದ ನಿನಗೆ ಯಾವ ಪಾರಮಾರ್ಥಿಕ ಸಂಬಂಧವು ಬರುವುದು? ಯಾವಾಗ ಪ್ರತಿ ಭೂತಕ್ಕೇ ಉತ್ಪತ್ತಿ ನಿನಗೆ ಉತ್ಪತ್ತಿ ಇಲ್ಲ ಎಂದು ಆಯಿತೋ ಆಗ ನೀನು ಉತ್ಪತ್ತಿರಹಿತನು ಎಂದು ಸಿದ್ಧಿಸಿತು. ಪ್ರತಿ ಭೂತದಲ್ಲೂ ನಿನ್ನ ಪ್ರಭೆ, ಅಂದರೆ ಭಾನಾಂಶ, ಇದು ಮಾತ್ರ ಇರುವುದು. ಘಟೋಭಾತಿ ಇತ್ಯಾದಿ ವ್ಯವಹಾರವು ಆತ್ಮಭಾನಮೂಲಕವೆಂದು “ತಮೇವಭಾಂತಮನುಭಾತಿಸರ್ವಂ ತಸ್ಯ ಭಾಸಾ ಸರ್ವಮಿದಂ ವಿಭಾತಿ” ಇತ್ಯಾದಿ ಶ್ರುತಿಯಲ್ಲಿ ಹೇಳಿದೆ. (ಆ ಶ್ರುತಿಪ್ರಸಿದ್ಧಿಯನ್ನು ಪದ್ಯದಲ್ಲಿರುವ “ಹಿ” ಶಬ್ದವು ಸೂಚಿಸುವುದು.) ಇಂತಹ ನಿನಗೆ ವಂದನೆಯು. ॥೫೪೦॥

ಪರಶಿವನೇ! ನೀನು ಸರ್ವಭೂತಾತ್ಮಕನಾದುದರಿಂದ ಯಾವಾಗಲೂ ನಿನಗೆ ಸರ್ವಭೂತಗಳೂ ವಶವರ್ತಿಗಳಾಗಿರುವುವು. ಆ ಭೂತಗಳು ನಿನ್ನಿಂದ ಹುಟ್ಟಿದವುಗಳು ಎಂದು ಪ್ರಸಿದ್ಧಿ ಇದ್ದರೂ ಅವು ವಸ್ತುತಃ ನಿನ್ನಿಂದ ಹುಟ್ಟಿ ಪರಮಾರ್ಥ ಸತ್ತಾಕಗಳಾಗಿವೆ ಎಂದು ಹೇಳಲಾಗುವುದಿಲ್ಲ. ಏತಕ್ಕೆಂದರೆ, ನೀನು ವಿಭು. ಭೂತಗಳು ನಿನ್ನಿಂದ ಹುಟ್ಟಿ ಪರಮಾರ್ಥಸತ್ತೆ ಉಳ್ಳವುಗಳಾದರೆ ನಿನಗೆ ವಿಭುತ್ವವು ಸಂಭವಿಸುವುದಿಲ್ಲ. ನೀನು ಭೂತಾತ್ಮಕನೆಂಬ ಯಾವ ಈ ಕಾರಣದಿಂದ ಭೂತಗಳು ನಿನ್ನಿಂದ ಹುಟ್ಟಿದವು. ಹಾಗೂ ವಿಭುವಾದುದರಿಂದ ಭೂತಗಳು ಪೃಥಕ್ಕಾಗಿ ಹುಟ್ಟಿಲ್ಲ ಎಂದೂ

ನ ತೇ ಮಾಯಾ ಮಾಯಾ ಸತತಮಪಿ ಮಾಯಾಮಯತಯಾ
ಧ್ರುವಂ ಮಾಯಾ ಮಾಯಾ ತ್ವಯಿ ಪರ ನ ಮಾಯಾಮಯಮಪಿ ।
ಯದಾ ಮಾಯಾ ಮಾಯೀ ತ್ವಯಿ ನ ಖಲು ಮಾಯಾಮಯತಯಾ
ನ ಮಾಯಾ ಮಾಯಾ ವಾ ಪರಮಿಯಮತಸ್ತೇ ಶಿವ ನಮಃ ॥೪೪೨॥

ಯದಂತಃ ಸಂವೇದ್ಯಂ ವಿದಿತಮಪಿ ವೇದೈರ್ನ ವಿದಿತಂ
ನ ವೇದ್ಯಂ ವೇದ್ಯಂ ಚೇನ್ನಿಯತಮಪಿ ವೇದ್ಯಂ ನ ವಿದಿತಂ ।
ತದೇವೇದಂ ವೇದ್ಯಂ ವಿದಿತಮಪಿ ವೇದಾಂತನಿಕರೈಃ
ಕರಾವೇದ್ಯಂ ವೇದ್ಯಂ ಜಿತಮಿತ ನಮೋಽತರ್ಕ್ಯ ಶಿವ ತೇ ॥೫೪೩॥

---

ಹೇಳಿದ್ದರಿಂದ, ಭೂತಗಳು ಪಾರಮಾರ್ಥಿಕವಾಗಿ ಎಲ್ಲೂ ಇಲ್ಲವೆಂದು ಸಿದ್ಧಿಸುವುದು. ಇಂತಹ ಮಿಥ್ಯಾಭೂತಸ್ರಷ್ಟ್ರುವಾದ ನಿನಗೆ ನಮಸ್ಕಾರಗಳು. ||೫೪೧||

ಸದಾಶಿವನೇ, ನೀನು ಮಾಯಾವಿಯಾದುದರಿಂದ ( ಲೋಕಪ್ರಸಿದ್ಧ ಮಾಯಾವಿ ಎಂಬಂತೆ) ಯಾವಾಗಲೂ ಮಾಯೆಯು ನಿನಗೆ ವ್ಯಾಮೋಹಕವಾಗುವುದಿಲ್ಲ. ಓ ಪರಮಪೂಜ್ಯನೇ, ನಿನ್ನಲ್ಲಿ ಮಾಯೆ ಇದೆ ಎಂಬುವುದೇ ನಿಜವಾದ ಮಾಯೆ, ಅಂದರೆ ನಿನಗೆ ಮಾಯೆಯ ಸಂಬಂಧ ಪಾರಮಾರ್ಥಿಕವಲ್ಲ ಎಂದು ಭಾವ. ಹೀಗೆ ಮಾಯಿಕವಾದ ಮಾಯಾಮಯ ಪ್ರಪಂಚವೂ ನಿನ್ನಲ್ಲಿಲ್ಲ. ಮಾಯಾಮಯನಾದುದರಿಂದ ಯಾವಾಗ ನಿನ್ನಲ್ಲಿ ಮಾಯೆಯು ವ್ಯಾಮೋಹಕವಲ್ಲವೋ ಹಾಗೆ ಮಾಯಿಕವೂ ನಿನ್ನಲ್ಲಿ ಪರಮಾರ್ಥತಃ ಇಲ್ಲದೆ, ಮತ್ತು ಕಾರ್ಯವರ್ಗದಿಂದ ಪರವಾದ ಈ ಮಾಯೆಯೂ ನಿನ್ನಲ್ಲಿ ಕಾಣುವುದಿಲ್ಲ. ಅಂತಹ ಮಾಯಾತೀತನಾಗಿ ಉತ್ಕೃಷ್ಟನಾದ ನಿನಗೆ ನಮಸ್ಕಾರವು. ||೫೪೨||

ತರ್ಕಾಗಮ್ಯನಾದ ಪರಶಿವನೇ! ಯಾವ ನಿನ್ನ ಸ್ವರೂಪವು (ಸಮಾಧಿಸ್ಥನಾದ ಯೋಗಿಗೆ) ಅಂತಃಸಂವೇದ್ಯವೆಂದು ವಿದಿತವಾದುದೋ ಆ ಸ್ವರೂಪವು ವೇದವಾಕ್ಯಗಳಿಂದ ವಿದಿತವಾಗುವುದಿಲ್ಲ. (ಯೋಗಿಗೆ ಸಮಾಧಿಕಾಲದಲ್ಲಿ ಸ್ಫುರಿತವಾಗುವ ಸ್ವರೂಪವನ್ನು ವೇದಗಳು ಸಾಕ್ಷಾದ್ಬೋಧಿಸಲಾರವು.) ಆ ಸಮಾಧಿಸ್ಥಯೋಗಿಯ ಸ್ವಾನುಭವೈಕವೇದ್ಯವಾದದ್ದು ವೇದವೇದ್ಯವಲ್ಲವಾದರೆ ಪಾರಮಾರ್ಥಿಕತತ್ವವೇದ್ಯವಲ್ಲ; ಅದು ವಿದಿತಕೋಟಿಗೆ ಸೇರುವುದಲ್ಲವೆಂದು ಸಿದ್ಧವಾಯಿತು. ("ಅನ್ಯದೇವಾತದ್ವಿದಿತಾತ್" ಎಂದು ಕೇನೋಪನಿಷದ್ವಾಕ್ಯ) ಜ್ಞೇಯವಸ್ತುವು ಅದೇ ಈ ವೇದ

ಶಿವಂ ಶೈವಂ ಭಾವಂ ಶಿವಮಪಿ ಶಿವಾಕಾರಮಶಿವಂ
ನ ಸತ್ಯಂ ಶೈವೇ ತತ್ ಶಿವಮಿತಿ ಶಿವಂ ಶೈವಮನಿಶಂ ।
ಶಿವಂ ಶಾಂತಂ ಮತ್ವಾ ಶಿವಪರಮತತ್ವಂ ಶಿವಮಯಂ
ನ ಜಾನೇ ತತ್ತತ್ವಂ ಶಿವಮಿತಿ ನಮೋಽಭೇದ್ಯ ಶಿವ ತೇ ॥೫೪೪॥

ಯದಜ್ಞಾತ್ವಾ ತತ್ವಂ ಸಕಲಮಪಿ ಸಂಸಾರಪತಿತಂ
ಜಗಜ್ಜನ್ಮಾವೃತ್ತಿಂ ವಹತಿ ಸತತಂ ದುಃಖನಿಲಯಂ ।
ತದೇತತ್‌ಜ್ಞಾತ್ವೈವಾವಹತಿ ಚ ನಿವೃತ್ತಿಂ ಪರತರಾಂ
ನ ಜಾನೇ ತತ್ತತ್ವಂ ಪರಮಿತಿ ನಮೋ ರೇಷ್ಮ್ಯ ಶಿವ ತೇ ॥೫೪೫॥

---

ವೆಂದು ವೇದಾಂತವಾಕ್ಯ ಸಮುದಾಯಗಳಿಂದ (ಹೇಳಿದರೂ) ತಿಳಿದರೂ (ಅದು ಪರೋಕ್ಷಜ್ಞಾನವಾದುದರಿಂದ) ಕರಸ್ಥವಸ್ತುವಿನ ಅರಿವಿನಂತೇ ಸ್ಪಷ್ಟವಾದಅಪರೋಕ್ಷ ಜ್ಞಾನವಲ್ಲ. ಕರಾವೇದ್ಯವಸ್ತುವಿನ ಹಾಗೆ ಈ ಪರಮಾತ್ಮನೂ ಅಪರೋಕ್ಷನಾದರೇ ಜಿತನಾಗುವನು. ಅಂದರೆ ಮೋಕ್ಷಸ್ವರೂಪನಾದ ಪರಮಾತ್ಮನ ಲಾಭವಾಗುವುದು, ಎಂದು ಭಾವ. ಹೀಗೆ ತರ್ಕಾಗಮ್ಯನೂ, ಯೋಗಿಗಳಿಗೆ ಸ್ವಾನುಭವಗಮ್ಯನೂ ಆದ ನಿನಗೆ ನಮಸ್ಕಾರವು. ॥೫೪೩॥

ಪರಶಿವನೇ, ನಿನಗೂ ನಿನ್ನ ಭಕ್ತನೆನಿಸಿದ ಶಾಂಭವನಿಗೂ ಯಾವ ವ್ಯತ್ಯಾಸವೂ ಇಲ್ಲ. ಆದರೆ ನಿನ್ನ ಆಕಾರಗಳೆನಿಸಿದ ಪ್ರಪಂಚದ ಯಾವ ವಸ್ತುವೂ ಸ್ಥಿರವಾದುದಲ್ಲ. ಸತ್ಯವಾದುದಲ್ಲ. ಆದರೆ ಔಪಾಧಿಕವಾಗಿ ಶಾಂತರೀತಿಯಿಂದ ತೋರಿಬರುವ ಶಿವಾಕಾರದಿಂದಲೇ ಶಿವತತ್ತ್ವವನ್ನು ಊಹಿಸಬೇಕು. ಸರ್ವವೂ ಶಿವಮಯವು ಎಂಬುದೇ ಪರಮಾರ್ಥವಾದುದು. ಆದರೆ ಅದಕ್ಕೆ ಉಪಷ್ಟಂಭಕವಾಗಿರುವ ಸಕಲ ವಸ್ತುವಿವೇಚನೆಯೂ ಮಿಥ್ಯಾಭೂತವಾದದ್ದೇ. ಯಾವ ವಿಧವಾದ ಭೇದಗಳಿಗೂ ದೊರಕದ, ಅಂದರೆ ಸಜಾತೀಯ ವಸ್ತ್ವಂತರ ಭೇದವಿಲ್ಲದ ಪರಮೇಶ್ವರನೇ, ನಿನ್ನ ನಿಜವಾದ ತತ್ತ್ವವನ್ನು ನಾನು ಸರಿಯಾಗಿ ತಿಳಿಯಲಾರೆನು.॥೫೪೪॥

ಶಂಕರನೇ, ಸಕಲ ಪ್ರಾಣಿಗಳೂ ನಿಜವಾದ ಪರಮಾತ್ಮತತ್ವವನ್ನು ಅರಿಯದೇ ಯಾವಾಗಲೂ ದುಃಖನಿಲಯವಾದ ಸಂಸಾರದಲ್ಲಿ ಬಿದ್ದು ಜನನಮರಣಪ್ರವಾಹಕ್ಕೆ ಸಿಲುಕಿ ಹೋಗುತ್ತಿರುವುವು. ಪ್ರಾಣಿವರ್ಗವು ಆ ಹರತತ್ವಾನುಭವವನ್ನು ಪಡೆದ ಹೊರತು ಅತ್ಯುತ್ತಮವಾದ ನಿವೃತ್ತಿ ಅಂದರೆ ಮೋಕ್ಷವನ್ನು ಹೊಂದಲಾರದು.

ತದೇವಂ ಯದ್ರೂಪಂ ನಿಗಮವಿಷಯಂ ಮಂಗಳಕರಂ
ನ ದೃಷ್ಟಂ ಕೇನಾಪಿ ಧ್ರುವಮಿತಿ ವಿಜಾನೇ ಶಿವ ವಿಭೋ ।
ತತಶ್ಚಿತ್ತೇ ಶಂಭೋ ನ ಹಿ ಮಮ ವಿಷಾದೋದ್ಯ ವಿಕೃತಿಃ
ಪ್ರಯತ್ನಾಲಭ್ಯೇಽಸ್ಮಿನ್ ನ ಕಿಮಪಿ ನಮಃ ಪೂರ್ಣ ಶಿವ ತೇ ॥೫೪೬॥

ತನಾಕರ್ಣಂ ಗೂಢಂ ಯದಪರಮಚಕ್ಷುಃ ಶ್ರುತಿಪರಂ
ತದೇವಾಪಾದಂ ಸನ್ನಯನಪದವೀಂ ನಾತ್ರ ತನುತೇ ।
ಕದಾಚಿತ್ ಕಿಂಚಿದ್ವಾ ಸ್ಫುರತು ಕೃಪಯಾ ಚೇತಸಿ ತವ
ಸ್ಫುರದ್ರೂಪಂ ಭವ್ಯಂ ಭವಹರ ನಮೋಽನಾದ್ಯ ಶಿವ ತೇ ॥೫೪೭॥

---

ಅಂತಹ ಪರತತ್ವವನ್ನು ಹೀಗೆಂದು ಯಾರೂ ಸ್ಪಷ್ಟವಾದ ಅನುಭವಕ್ಕೆ ತಂದುಕೊಂಡಿರುವುದಿಲ್ಲ. ಪರತತ್ತ್ವಸ್ವರೂಪಿಯಾದ ಓ ಶಿವನೇ, ನಿನಗೆ ನಮಸ್ಕಾರವು. ("ರೇಷ್ಮ" ಇತ್ಯಾದಿ ಶಬ್ದಗಳು ರುದ್ರಾಧ್ಯಾಯದಲ್ಲಿ ಶಿವವಾಚಕಗಳಾಗಿ ಹೇಳಲ್ಪಟ್ಟಿವೆ.) ||೫೪೫||

ಸ್ವಾಮಿಯಾದ ಶಿವನೇ, ವೇದೈಕವೇದ್ಯವಾಗಿಯೂ ಮಂಗಳಕರವಾಗಿಯೂ ಇರುವ ಯಾವ ಆ ಪರಮಾತ್ಮಸ್ವರೂಪವಿದೆಯೋ ಅದನ್ನು ನಿಜವಾಗಿ ಯಾರೂ ಅರಿತಿಲ್ಲವೆಂದೇ ನನ್ನ ಭಾವನೆ. ಶಂಭುವೇ, ಆದ್ದರಿಂದಲೇ (ಇದು ವರೆಗೂ ಯಾರಿಗೂ ಪರಮಾತ್ಮಸ್ವರೂಪ ಜ್ಞಾನವಿಲ್ಲದ್ದರಿಂದಲೇ) ಈಗ ನನ್ನ ಮನಸ್ಸಿನಲ್ಲಿ ತನ್ನಿಮಿತ್ತಕವಾದ ವಿಷಾದವೆಂಬ ಅಂತಃಕರಣವೃತ್ತಿರೂಪವಿಕಾರವೂ ಇಲ್ಲ. (ಅಂದರೆ ಪರಮಾತ್ಮದರ್ಶನವಾಗಿಲ್ಲವೆಂದು ನನಗೆ ವ್ಯಸನವಿಲ್ಲ ಎಂದು ಭಾವ.) ಏತಕ್ಕೆಂದರೆ ಪರಮಾತ್ಮ ದರ್ಶನವು ಕೇವಲ ಪುರುಷಪ್ರಯತ್ನ ಮಾತ್ರ ಲಭ್ಯವಲ್ಲ. ಆದರಿಂದ ನನಗೆ ಯಾವ ವಿಷಾದವೂ ಇಲ್ಲ. ಓ ಪೂರ್ಣರೂಪನಾದ ಶಿವನೇ, ನಿನಗೆ ನಮಸ್ಕಾರವು. ||೫೪೬||

ಸಂಸಾರನಿವರ್ತಕನಾದ ಶಂಕರನೇ, ನಿನಗೆ ಕರ್ಣಪರ್ಯಂತವ್ಯಾಪಿಯಾದ ಚಕ್ಷುಸ್ಸಿದ್ದರೂ ಅದು ಗುಪ್ತವಾಗಿರುವುದರಿಂದ "ಅಚಕ್ಷುಃ ಶ್ರೋತ್ರಂ" ಇತ್ಯಾದಿ ಶ್ರುತಿಯು ಚಕ್ಷುರಾದಿರಹಿತ ಎಂದು ಹೇಳುತ್ತದೆ. ಅದೇ ಶ್ರುತಿ ಈ ನಿನ್ನ ವಿಷಯದಲ್ಲಿ ಪಾದಪರ್ಯಂತನಾದ ನಿನ್ನ ಸ್ವರೂಪವು ಚಕ್ಷುರ್ಗೋಚರವಲ್ಲವೆಂದೂ ಹೇಳುತ್ತದೆ.

ತ್ವಮಿಂದುರ್ಭಾಸ್ವಾಂಸ್ತ್ವಂ ಹುತಭುಗಸಿ ವಾಯುಶ್ಚ ಸಲಿಲಂ
ತ್ವಮೇವಾಕಾಶೋಽಸಿ ಕ್ಷಿತಿರಸಿ ತಥಾಶ್ಮಾಸಿ ಭಗವನ್ ।
ತತಃ ಸರ್ವಾಕಾರಸ್ತ್ವಮಸಿ ಭವತೋ ಭಿನ್ನಮಣು ಚ
ನ ತತ್ಸತ್ಯಂ ಸತ್ಯಂ ತ್ರಿನಯನ ನಮೋಽನಂತ ಶಿವ ತೇ ॥೫೪೮॥

ವಿಧುಂ ಧತ್ಸೇ ನಿತ್ಯಂ ಶಿರಸಿ ಮೃದುಕಂಠೇಽಪಿ ಗರಳಂ
ನವಂ ನಾಗಾಹಾರಂ ಭಸಿತಮಮಲಂ ಭಾಸುರತನೌ ।
ಕರೇ ಶೂಲಂ ಫಾಲೇ ಜ್ವಲನಮನಿಶಂ ತತ್ಕಿಮಿತಿ ತೇ
ನ ತತ್ವಂ ಜಾನೇಽಹಂ ಭವಹರ ನಮಃ ಕೂಪ್ಯ ಶಿವ ತೇ ॥೫೪೯॥

---

ನಿನ್ನ ಕೃಪೆಯಿಂದ ಸಾಧಕನಾದ ನನ್ನ ಮನಸ್ಸಿನಲ್ಲಿ ಕದಾಚಿತ್ ಕಿಂಚಿತ್ ಭವ್ಯವಾದ ನಿನ್ನ ಸ್ಫುರದ್ರೂಪವು ಹೊಳೆಯಲಿ. ಓ ಶಿವನೇ, ಚಕ್ಷುರ್ಗೋಚರವಲ್ಲದ ನಿನ್ನ ಸ್ವರೂಪವನ್ನು ಅನುಸಂಧಾನಮಾಡುವಂತೆ ನನಗೆ ಶಕ್ತಿಯನ್ನು ಕೊಡು. ||೫೪೭||

ಅನಂತರೂಪಿಯಾದ ಶಿವನೇ, ಚಂದ್ರನು ನೀನು, ನೀನೇ ಸೂರ್ಯನು. ಮತ್ತು ತೇಜಸ್ಸು ವಾಯುವೂ ನೀನಾಗಿರುವೆ. ಜಲವೂ ನೀನೇ, ಹಾಗೆ ಆಕಾಶಸ್ವರೂಪನೂ ನೀನೇ ಆಗಿರುವೆ, ಪೃಥಿವೀಸ್ವರೂಪನೂ ನೀನೇ ಅಲ್ಲವೆ; ಓ ಭಗವನ್ ! ಹಾಗೆ ಪಾಷಾಣಸ್ವರೂಪನೂ ನೀನೇ ಅಲ್ಲವೆ. ಆದ್ದರಿಂದ ನೀನು ಸರ್ವಪ್ರಪಂಚಾಕಾರನಾಗಿರುವೆ. ಓ ತ್ರಿನೇತ್ರನೇ, ನಿಜವಾಗಿಯೂ ನಿನ್ನ ಹೊರತು ಒಂದು ಅಣುಮಾತ್ರವೂ ಸತ್ಯವಲ್ಲ. ಇಂತಹ ನಿನಗೆ ನಮಸ್ಕಾರ. ||೫೪೮||

ಸಂಸಾರತಾರಕನೇ, ನೀನು ಶಿರಸ್ಸಿನಲ್ಲಿ ಯಾವಾಗಲೂ ಚಂದ್ರನನ್ನು ಧರಿಸಿರುವೆ. ಮೃದುಕಂಠದಲ್ಲೂ (ಕ್ರೂರ) ವಿಷವನ್ನು ಧರಿಸಿರುವೆ. ಹಾಗೆ ಹೊಸದಾದ ಸರ್ಪವೇ ನಿನಗೆ ಹಾರವಾಗಿದೆ. ಉಜ್ವಲವಾದ ನಿನ್ನ ಶರೀರದಲ್ಲಿ ನಿರ್ಮಲವಾದ ಭಸ್ಮವನ್ನು ಧರಿಸಿರುವೆ. ಮತ್ತು ಕೈಯ್ಯಲ್ಲಿ ತ್ರಿಶೂಲ, ಹಣೆಯಲ್ಲಿ ಅಗ್ನಿ, ಯಾವಾಗಲೂ ಪ್ರಕಾಶಿಸುತ್ತಿರುವುವು. ಆದ್ದರಿಂದ ನಿನ್ನ ತತ್ವವೇನೆಂದು ನಾನರಿಯೆ, "ನಮಃ ಕೂಪ್ಯಾಯಚಾವಟ್ಯಾಯಚ" ಇತ್ಯಾದಿ ಶ್ರುತಿಯಲ್ಲಿ ಕೂಪ್ಯನೆಂದು ಹೇಳಲ್ಪಟ್ಟಿರುವ ಶಿವನೇ, ನಿನಗೆ ನಮಸ್ಕಾರ. (ಕೂಪ್ಯ-ಕೂಪಗತಜಲರೂಪಿ) ||೫೪೯||

ತವಾಪಾಂಗಸ್ಪಂದೋ ಯದಿ ಭವತಿ ಭವ್ಯಃ ಶುಭಕರಃ
ಕದಾಚಿತ್ ಕಸ್ಮಿಂಶ್ಚಿತ್ ಲಘುತರನರೇಽಪಿ ಪ್ರಭವತಿ ।
ಸ ಏವೈತಲ್ಲೋಕಾನ್ನಿರಚಯಿತುಮಲ್ಪೋಽಪಿ ಸ ಮಹಾನ್
ಕೃಪಾಧಾರಾಯತ್ತೋ ಸುರವರ ನಮೋಽನಂತಶಿವ ತೇ ॥೫೫೦॥

ಭವಂತಂ ದೇವೇಶಂ ಶಿವಮಿತರಗೀರ್ವಾಣಸದೃಶಂ
ಪ್ರಮಾದಾದ್ಯಃ ಕಶ್ಚಿದ್ಯದಿ ವದತಿ ಚಿತ್ತೇಽಪಿ ಮನುತೇ ।
ಸ ದುಃಖಂ ಲಬ್ಧ್ವಾಂತೇ ನರಕಮಪಿ ಯಾತಿ ಧ್ರುವಮಿದಂ
ಧ್ರುವಂ ದೇವಾರಾಧ್ಯಾಮಿತಗುಣ ನಮೋಽನಂತ ಶಿವ ತೇ ॥೫೫೧॥

ಪ್ರದೋಷೇ ರತ್ನಾಢ್ಯೇ ಮೃದುಲತರಸಿಂಹಾಸನವರೇ
ಭವಾನೀಮಾರೂಢಾಮಸಕೃದಪಿ ಸಂವೀಕ್ಷ್ಯ ಭವತಾ ।

---

ದೇವೋತ್ತಮನೇ ಶಿವನೇ, ಸರ್ವ ಕಾರ್ಯನಿರ್ವಾಹಕವಾಗಿಯೂ ಮಂಗಳಕರವಾಗಿಯೂ, ಇರುವ ನಿನ್ನ ಕಡೆಗಣ್ಣಿನ ನೋಟವು (ಕೃಪಾವಲೋಕನ) ಕದಾಚಿತ್ ಯಾವನೋ ಒಬ್ಬ ಅತ್ಯಲ್ಪ ಮನುಷ್ಯನಲ್ಲಿ ಬಿದ್ದರೂ ಅದು ಅವನಿಗೆ ಪ್ರಭುತ್ವವನ್ನು ತಂದುಕೊಡುವುದು. ಹೇಗೆಂದರೆ, ಅವನು ಅಲ್ಪನಾಗಿದ್ದರೂ ಅವನೇ ಈ ಭೂರಾದಿಲೋಕಗಳನ್ನು ಸೃಷ್ಟಿಸಲು ಸಮರ್ಥನಾಗುತ್ತಾನೆ. ನಿನ್ನ ಕೃಪಾಪರಂಪರಾಧೀನನಾಗಿ ಅವನು ಮಹಾತ್ಮನೆನಿಸಿಕೊಳ್ಳುವನು. ಪರಮಾತ್ಮನೇ, ಅಂತಹ ನಿನಗೆ ನಮಸ್ಕಾರವು. ॥೫೫೦॥

ನಿತ್ಯವಾಗಿ ದೇವತೆಗಳಿಗೂ ಆರಾಧ್ಯನಾಗಿರುವ ಅಪರಿಮಿತಗುಣ ಪರಿಪೂರ್ಣನಾದ ಶಿವನೇ ! ಇತರ ದೇವತೆಗಳಿಗೆ ಒಡೆಯನಾಗಿಯೂ, ಮಂಗಳಸ್ವರೂಪನಾಗಿಯೂ, ಪರಮಪೂಜ್ಯನಾಗಿಯೂ ಇರುವ ನಿನ್ನನ್ನು ಯಾವನಾದರೂ ಅನವಧಾನತೆಯಿಂದ ಇತರ ದೇವತೆಗಳಿಗೆ ಸದೃಶನೆಂದು ಹೇಳಿದರೂ, ಅಥವಾ ಹಾಗೆ ಪ್ರಮಾದದಿಂದ ಮನಸ್ಸಿನಲ್ಲಿ ಅನ್ಯಥಾ ಎಣಿಸಿದರೂ, ಅವನು ಈ ಲೋಕದಲ್ಲಿ ದುಃಖಿಯಾಗುವನು, ಮೃತನಾದಮೇಲೂ ನರಕಕ್ಕೆ ಹೋಗುತ್ತಾನೆ. ಇದು ಸತ್ಯ, ಓ ಅನಂತ ಶಿವನೇ! ನಿನಗೆ ನಮಸ್ಕಾರವು. ॥೫೫೧॥

ಪರಮೇಶ್ವರನೇ! ಪ್ರದೋಷಕಾಲದಲ್ಲಿ ಶ್ರೀಭವಾನಿಯು ರತ್ನಖಚಿತವಾಗಿಯೂ ಅತಿ ಮೃದುವಾಗಿಯೂ ಇರುವ ಉತ್ತಮಸಿಂಹಾಸನದಲ್ಲಿ ಆರೂಢಳಾಗಿರು

ಕೃತಂ ಸಮ್ಯಜ್ಞಾಟ್ಯಂ ಪ್ರಥಿತಮಿತಿ ವೇದೋಽಪಿ ವದತಿ
ಪ್ರಭಾವಃ ಕೋವಾಯಂ ತವ ಹರ ನಮೋಽವಾಙ್ಮ ಶಿವ ತೇ ॥೫೫೨॥

ಶ್ಮಶಾನೇ ಸಂಚಾರಸ್ತವ ಕಿಲ ನ ತೇ ಕ್ವಾಪಿ ಗಮನಂ
ಯತೋ ವಿಶ್ವಂ ವ್ಯಾಪ್ಯಾಖಿಲಮಪಿ ಸದಾ ತಿಷ್ಠತಿ ಭವಾನ್ ।
ವಿಭುಂ ನಿತ್ಯಂ ಶುದ್ಧಂ ಶಿವಮಯಮತೋಽವ್ಯಾಪಕಮಿತಿ
ಶ್ರುತಿಃ ಸಾಕ್ಷಾದ್ವಕ್ತಿ ಸ್ವಯಮಪಿ ನಮಃ ಸೂದ್ಯ ಶಿವ ತೇ ॥೫೫೩॥

ಧನುರ್ಮೇರುಃ ಶೇಷೋಧನುವರಗುಣೋ ಯಾನಮವನಿ
ಸ್ತವೇನೇಂದೂ ಚಕ್ರೇ ನಿಗಮನಿಕರಾ ವಾಜಿನಿಕರಾಃ ।
ಪುರೋ ಲಕ್ಷ್ಯಂ ಯಂತಾ ವಿಧಿರಿಷುರಹಂ ಚೇತಿನಿಗಮಃ
ಕಿಮೇವಂ ತ್ವಯ್ಯೇಷೋ ನಿಗದತಿ ನಮಃ ಪರ್ಣ್ಯ ಶಿವ ತೇ ॥೫೫೪॥

---

ವುದನ್ನು ನೀನು ಪುನಃ ಪುನಃ ನೋಡಿ, ಆನಂದಪಡುವೆ. ಮತ್ತು ಆಗ ನೀನು ದೇವಿಯ ಮುಂದೆ ನರ್ತನವನ್ನು ಮಾಡುವೆ ಎಂದು ಪ್ರಥಿತವಾಗಿದೆ. ಈ ವಿಷಯ ವನ್ನು ವೇದವೂ ಹೇಳುತ್ತಿದೆ. ಪ್ರಕಾಶಮಾನನಾದ ಶಂಕರನೇ, ಇದೆಂತಹ ವರ್ಣನಾ ತೀತವಾದ ನಿನ್ನ ಪ್ರಭಾವ, ಅಂತಹ ನಿನಗೆ ನಮಸ್ಕಾರವು. ॥೫೫೨॥

ಶಂಕರನೇ! ನಿನಗೆ ಸ್ಮಶಾನದಲ್ಲಿಯೇ ಸಂಚಾರ, ಇನ್ನಾವ ಕಡೆಯಲ್ಲೂ ನಿನಗೆ ಗಮನವಿಲ್ಲ ಎಂಬುದು ಕೇವಲ ಪ್ರಸಿದ್ಧಿ ಮಾತ್ರ. (ಇದು ವಾಸ್ತವಿಕವಲ್ಲ ಎಂದು ಭಾವ) ಏತಕ್ಕೆಂದರೆ, ನೀನು ಯಾವಾಗಲೂ ಪ್ರಪಂಚವನ್ನು ವ್ಯಾಪಿಸಿ, ಪ್ರತಿ ಯೊಂದು ವಸ್ತುವನ್ನು ಆವರಿಸಿಕೊಂಡಿರುವೆ. (ಶ್ಮಶಾನ ಮಾತ್ರ ಸಂಚಾರಿಗೆ ವಿಶ್ವ ವ್ಯಾಪಕತ್ವವು ಬಾಧಿತವು ಎಂದು ಭಾವ) ಅದೂ ಅಲ್ಲದೆ ಸಾಕ್ಷಾಚ್ಛ್ರುತಿಯೇ ತಾನಾಗಿ ನಿನ್ನನ್ನು ವಿಭು, ನಿತ್ಯ, ಶುದ್ಧ, ಮಂಗಳಕರ, ವ್ಯಾಪಕ ಎಂದೂ ಹೇಳು ತ್ತದೆ. ಇಂತಹ ಸೂದ್ಯನೆನಿಸಿದ (ಕೆಸರಿನಲ್ಲಿ ಅಡಗಿರುವ ಜಲರೂಪಿಯು) ಶಿವನಿಗೆ ನಮಸ್ಕಾರವು. ॥೫೫೩॥

ಮಹಾದೇವನೇ, ತ್ರಿಪುರಸಂಹಾರಕಾಲದಲ್ಲಿ ನಿನಗೆ ಮೇರುಪರ್ವತವು ಧನುಸ್ಸಾಗಿತ್ತು. ಆದಿಶೇಷನು ಧನುಸ್ಸಿನ ಹೆದೆಯಾಗಿದ್ದನು. ಪೃಥಿವಿಯು ರಥವಾಗಿತ್ತು ಸೂರ್ಯಚಂದ್ರರು ರಥಚಕ್ರಗಳಾಗಿದ್ದರು. ವೇದಸಮೂಹಗಳು ರಥಾಶ್ವವೃಂದಗಳೆನಿ ಸಿದುವು. ತ್ರಿಪುರವೇ ಲಕ್ಷ್ಯವಾಯಿತು. ಬ್ರಹ್ಮನು ರಥಸಾರಥಿಯಾಗಿದ್ದನು. ನಾನು

ಮೃಡಂ ಸತ್ವೋಪೇತಂ ಭವಮುನತಿರಿಕ್ತಂ ಚ ರಜಸಾ
ತಮೋಯುಕ್ತಂ ಶುದ್ಧಂ ಹರಮಪಿ ಶಿವಂ ನಿಷ್ಕಲಮಿತಿ ।
ವದತ್ಯೇಷೋ ವೇದಸ್ತ್ವಮಸಿ ತದುಪಾಸ್ಯಂ ಧ್ರುವಮಿದಂ
ತ್ವಮೋಂಕಾರಾಕಾರೋ ಧ್ರುವಮಿತಿ ನಮೋಽನಂತಶಿವ ತೇ ॥೫೫॥

ಜಗತ್ಸುಪ್ತಿಂ ಬೋಧಂ ವ್ರಜತಿ ಭವತೋ ನಿರ್ಗತಮಪಿ
ಪ್ರವೃತ್ತಿಂ ವ್ಯಾಪಾರಂ ಪುನರಪಿ ಸುಷುಪ್ತಿಂ ಚ ಸಕಲಂ ।
ತ್ವದನ್ಯಂ ತ್ವತ್ಪ್ರೇರ್ಯಂ ವ್ರಜತಿ ಶರಣಂ ನೇತಿ ನಿಗಮೋ
ವದತ್ಯದ್ಧಾ ಸರ್ವಂ ಶಿವಮಿತಿ ನಮಸ್ತುತ್ಯ ಶಿವ ತೇ ॥೫೬॥

---

(ವಿಷ್ಣು) ಬಾಣವಾಗಿದ್ದೆನು. ಸಮಸ್ತ ವೇದವಾಕ್ಯಗಳು ನಿನ್ನ ವಿಷಯದಲ್ಲಿ ಇಂತಹ ಅನೇಕ ಆಶ್ಚರ್ಯ ವಿಷಯಗಳನ್ನು ತಿಳಿಸುವುವು. ಪತ್ರಗಳಲ್ಲಿಯೂ ಬಿಡದೆ ಅಡಗಿರುವ ಮಹೇಶ್ವರನೇ, ನಿನಗೆ ನಮಸ್ಕಾರವು. ॥೫೪॥

ಪರಬ್ರಹ್ಮರೂಪಿಯೇ ! ನೀನು ಸತ್ವಗುಣೋಪೇತನಾದಾಗ ಮೃಡನೆಂದೂ ರಜಸ್ಸಂಬದ್ಧನಾದಾಗ ಭವನೆಂದೂ, ತಮೋಗುಣಯುಕ್ತನಾದಾಗ ಹರನೆಂದೂ, ಸ್ವಯಂ ಶಿವನು ಪರಿಶುದ್ಧನು, ನಿರವಯವನು ಎಂದೂ, ವೇದವು ಪ್ರತಿಪಾದಿಸುತ್ತಿರುವುದು. ಮತ್ತು ನೀನು ಸಾಧಕರಿಗೆ ಸದಾ ಉಪಾಸ್ಯನೆಂಬುವುದೂ ನಿಜ. ನಿನ್ನನ್ನು ಓಂಕಾರಾಕಾರನನ್ನಾಗಿಯೂ ಕೂಟಸ್ಥನನ್ನಾಗಿಯೂ ಉಪಾಸನೆಮಾಡಬೇಕೆಂದು ವೇದವು ಸಾರುತ್ತಿದೆ. ಅಂತಹ ಉಪಾಸ್ಯ ದೇವನಾದ ನಿನಗೆ ನಮಸ್ಕಾರವು. ॥೫೫॥

ಓ ಸ್ತುತ್ಯನಾದ ಶಿವನೇ, ಸಕಲ ಪ್ರಾಣಿಗಳು ನಿನ್ನಿಂದ ಜನಿಸಿದರೂ ನಿಯತವಾಗಿ ಸುಷುಪ್ತಿ ಜಾಗ್ರದವಸ್ಥೆಯನ್ನು ಹೊಂದುವುವು. ಜಾಗ್ರದವಸ್ಥೆಯಲ್ಲಿ ಪ್ರವೃತ್ತಿ ವ್ಯಾಪಾರವನ್ನು ಮುಂದುವರಿಸಿ ಶ್ರಮಪಟ್ಟು ಆ ಶ್ರಮ ಪರಿಹಾರಕ್ಕಾಗಿ ಪುನಃ ಸುಷುಪ್ತಿಗೆ ಹೋಗುತ್ತದೆ. (ವ್ಯವಹಾರಾವಸ್ಥೆಯಲ್ಲಿ) ನಿನ್ನಿಂದ ಬೇರೆಯಾಗಿ ನಿನ್ನ ಪ್ರೇರಣೆಗೆ ಒಳಗಾದ ಸಮಸ್ತ ಪ್ರಾಣಿಯು ನಿನ್ನನ್ನು ಶರಣುಹೊಂದುತ್ತದೆ (ಪಾರಮಾರ್ಥಿಕ ದಶೆಯಲ್ಲಿ) "ನೇತಿನೇತಿ" ಎಂಬ ಬೃಹದಾರಣ್ಯಕ ಶ್ರುತಿಯು ಪರಮಾರ್ಥತಃ ಸರ್ವ ಪ್ರಪಂಚವು ಶಿವ (ಪರಮಾತ್ಮ)ಸ್ವರೂಪವು, ಶಿವವ್ಯತಿರಿಕ್ತವಸ್ತ್ವಂತರಕ್ಕೆ ಸ್ಥಿರತ್ವವಿಲ್ಲ. ಎಂದು ಹೇಳುತ್ತದೆ. ಇಂತಹ ಸ್ಥಿರರೂಪಿಯಾದ ನಿನಗೆ ನಮಸ್ಕಾರವು. ॥೫೬॥

ತ್ವಮೇಕೋ ಲೋಕಾನಾಮಧಿಪತಿರುಮಾನಾಥ ಜಗತಾಂ
ಶರಣ್ಯಃ ಪ್ರಾಪ್ಯಸ್ತ್ವಂ ಜಲನಿಧಿರಿವಾನಂತಪಯಸಾ ।
ತ್ವದನ್ಯೋ ನಿರ್ವಾಣಂ ನ ವಿತರತಿ ನಿರ್ವಾಣಪತಿರ
ಪ್ಯತಃ ಸರ್ವೋತ್ಕೃಷ್ಟಸ್ತ್ವಮಸಿ ಹಿ ನಮೋ ನೀಪ್ಯ ಶಿವ ತೇ ॥೫೫೭॥

ತವೈವಾಂಶೋ ಭಾನುಸ್ತಪತಿ ವಿಧುರಪ್ಯೇತಿ ಪವನಃ
ಪವತ್ಯೇಷೋ ವಹ್ನಿಃ ಜ್ವಲತಿ ಸಲಿಲಂ ಚಾಪಿ ವಹತಿ ।
ತ್ವದಾಜ್ಞಾಕಾರಿತ್ವಂ ಸಕಲಸುರವರ್ಗಸ್ಯ ಸತತಂ
ತ್ವಮೇಕಃ ಸ್ವಾತಂತ್ರ್ಯಂ ವಹಸಿ ಹಿ ನಮೋಽನಂತಶಿವ ತೇ ॥೫೫೮॥

ಸ್ವತಂತ್ರೋಽಯಂ ಸೋಮಃ ಸಕಲಭುವನೈಕಪ್ರಭುರಯಂ
ನಿಯಂತಾ ದೇವಾನಾಮಯಮಿಹ ನಿಯಂತಾಸ್ಯ ನ ಪರಃ ।

---

ಉಮಾಪತಿಯೇ, ನೀನೊಬ್ಬನೇ ಲೋಕಗಳಿಗೆ ಅಧಿಪತಿಯಾದವನು. ಅಪರಿಮಿತ ನದ್ಯಾದಿ ಜಲಗಳಿಗೆ ಸಮುದ್ರದಂತೆ ನೀನೇ ಪ್ರಾಣಿ ಸಾಮಾನ್ಯಕ್ಕೂ ಶರಣನು. ಮತ್ತು ಪ್ರಾಪ್ಯನೂ ಆಗಿರುವೆ. ನಿನ್ನನ್ನು ಬಿಟ್ಟರೆ ಇತರರು ನಿರ್ವಾಣಪತಿಯಾದರೂ ನಿರ್ವಾಣ (ಮೋಕ್ಷ) ದಾತೃವಲ್ಲ. ಆದ್ದರಿಂದ ನೀನೇ ಸರ್ವೋತ್ಕೃಷ್ಟನೆನಿಸಿರುವೆ. ಹಳ್ಳದಲ್ಲಿ ನಿಂತಿರುವ ಜಲರೂಪದಿಂದಿರುವ ನಿನಗೆ ನಮಸ್ಕಾರವು.॥೫೫೭॥

ಪರಮಶಿವನೇ, ನಿನ್ನ ಅಂಶಭೂತನಾಗಿ ಸೂರ್ಯನು ಲೋಕಕ್ಕೆ ಶಾಖ ಕೊಡುವನು. ಹಾಗೆಯೇ ಚಂದ್ರನು ಆಹ್ಲಾದಕರನಾಗಿ ಉದಯಿಸುತ್ತಾನೆ. ವಾಯುವು ವೇಗವಾಗಿ ಸದಾ ಸಂಚರಿಸುತ್ತದೆ. ಪ್ರತ್ಯಕ್ಷವಾದ ಅಗ್ನಿಯು ಬೇಕಾದಾಗ ಜ್ವಲಿಸುತ್ತದೆ. ನೀರೂ ಉಪಕಾರಬುದ್ಧಿಯಿಂದ ಹರಿಯುತ್ತದೆ. ಹೀಗೆ ಸಕಲ ದೇವವೃಂದವೂ ನಿನ್ನ ಆಜ್ಞಾಕಾರಿಗಳಾಗಿ, ಪ್ರಪಂಚವನ್ನು ಭಯದಿಂದ ನಡೆಸುವರು. ಆದರೆ ನೀನೊಬ್ಬನೇ ಸ್ವಾತಂತ್ರ್ಯವನ್ನು ಹೊಂದಿರುವೆ. ಮಹೇಶ್ವರನೇ, ಇಂತಹ ಸರ್ವಶಕ್ತನಾದ ನಿನಗೆ ನಮಸ್ಕಾರವು. ॥೫೫೮॥

ಭಯಾಪಹಾರಕನೇ, ವೇದವೂ ಕೂಡ ಉಮಾಸಹಿತನಾದ ಈ ಪರಮೇಶ್ವರನು ಸ್ವತಂತ್ರನು; ಮತ್ತು ಇವನು ಸಕಲ ಭುವನಕ್ಕೂ ಅಸಾಧಾರಣನಾದ ಪ್ರಭುವು; ಎಂದು ಹೇಳುತ್ತಿರುವುದು. ಹಾಗೆ ನೀನು ಸಕಲ ದೇವತೆಗಳಿಗೂ ನಿಯಾಮಕನು.

**ಶಿವಃ ಶುದ್ಧೋ ಮಾಯಾರಹಿತ ಇತಿ ವೇದೋಽಪಿ ವಹತಿ**
**ಸ್ವಯಂ ತ್ವಾಮಾಶಾಸ್ಯಂ ಭಯಹರ ನಮೋ ರಥ್ಯ ಶಿವ ತೇ ॥೫೯॥**

**ನಮೋ ರುದ್ರಾನಂತ ಮಖಹರ ನಮಃ ಶ್ರೀಕರವಿಭೋ**
**ನಮೋ ಗೌರೀನಾಥ ತ್ರಿನಯನಶರಣ್ಯಾಂಘ್ರಿಕಮಲ ।**
**ನಮಃ ಶರ್ವ ಶ್ರೀಮನ್ನನಘಮಹದೈಶ್ವರ್ಯನಿಲಯ**
**ಸ್ಮರಾರೇ ಪಾಪಾರೇ ಜಯ ಜಯ ನಮಃ ಶೋಚ್ಯ ಶಿವ ತೇ ॥೬೦॥**

**ಮಹಾದೇವಾಮೇಯಾನಘ ಗುಣಗ್ರಾಮಸತತಂ**
**ನಮೋ ಭೂಯೋ ಭೂಯಃ ಪುನರಪಿ ನಮಸ್ತೇ ಪುನರಪಿ ।**
**ಪುರಾರಾತಿನ್ ಶಂಭೋ ಪುನರಪಿ ನಮಸ್ತೇ ಶಿವ ವಿಭೋ**
**ನಮೋ ಭೂಯೋ ಭೂಯಃ ಶಿವಶಿವ ನಮೋಽನಂತಶಿವ ತೇ ॥೬೧॥**

---

ಈ ಲೋಕದಲ್ಲಿ ನಿನಗೆ ಇನ್ನೊಬ್ಬ ನಿಯಾಮಕನಿಲ್ಲ. ಇಂತಹ ನೀನು ಪರಿಶುದ್ಧನು ಮತ್ತು ಮಾಯಾರಹಿತನು. ಎಂದು ನಿನ್ನ ವಿಷಯದಲ್ಲಿ ತಾನಾಗಿ ಎಲ್ಲ ವೇದವೂ ಆಶಾಸ್ಯವಾದ ಐಶ್ವರ್ಯವನ್ನು ಹೇಳುತ್ತಿದೆ. ಮಹಾರಥಿಕನಾದ ಶಿವನೇ, ಮಹಾ ಮಹಿಮನಾದ ನಿನಗೆ ಸರ್ವದಾ ನಮಸ್ಕಾರವು. ॥೫೯॥

ರುದ್ರನೇ, ಅನಂತನೇ, ದಕ್ಷಮಖನಾಶಕನೇ, ನಿನಗೆ ನಮಸ್ಕಾರ. ಓ ಸಂಪದ್ದಾತೃಸ್ವಾಮಿಯೇ! ನಿನಗೆ ನಮಸ್ಕಾರವು. ಗೌರೀಪತಿಯೇ! ತ್ರಿಣೇತ್ರನೇ, ಸಕಲ ಪ್ರಾಣಿಶರಣ್ಯವಾದ ಪಾದಪದ್ಮವುಳ್ಳವನೇ! ನಿನಗೆ ನಮಸ್ಕಾರ. ನಿರ್ದುಷ್ಟವಾದ ಮಹದೈಶ್ವರ್ಯಗಳಿಗೆ ಆವಾಸಭೂತನೇ! ನಿನಗೆ ನಮಃ. ಮನ್ಮಥಾರಿಯೇ! ಪಾಪಾಪಹಾರಿಯೇ! ಜಯಜಯ, ಶಂಕರನೇ ನಿನಗೆ ನಮಸ್ಕಾರವು. ॥೬೦॥

ಮಹಾದೇವನೇ, ಅಪರಿಮಿತ ನಿರ್ದುಷ್ಟ ಗುಣಸಮುದಾಯಾನ್ವಿತನೇ, ನಿನಗೆ ಯಾವಾಗಲೂ ನಮಸ್ಕಾರ ಮಾಡುವೆನು. ನಿನಗೆ ಪುನಃ ಪುನಃ ವಂದನೆಗೈಯ್ಯುವೆನು. ಓ ತ್ರಿಪುರಾಂತಕನೇ, ಶಂಭುವೇ, ಪುನರಪಿ ನಿನಗೆ ನಮಸ್ಕಾರ, ಓ ಸ್ವಾಮಿನ್! ಶಿವ! ಶಂಕರನೇ, ಭೂಯೋಭೂಯಃ ನಿನಗೆ ವಂದಿಸುತ್ತೇನೆ. ಓ ಅನಂತ ಶಿವನೇ ನಿನಗೆ ನಮಸ್ಕಾರವು. ॥೬೧॥

ಕದಾಚಿದ್ಗಣ್ಯಂತೇ ನಿಬಿಡನಿಪತದ್ವೃಷ್ಟಿಕಣಿಕಾಃ
ಕದಾಚಿನ್ನಕ್ಷತ್ರಾಣ್ಯಪಿ ಸಿಕತಲೇಶಾಃ ಕುಶಲಿನಃ ।
ಅನಂತೈರಾಕಲ್ಪಂ ಶಿವಗುಣಗಣಾಶ್ಚಾರುರಸನೈ
ರ್ನ ಶಕ್ಯಂ ತೇ ನೂನಂ ಗಣಯಿತುಮುಷಿತ್ವಾಪಿ ಸತತಂ ॥೫೬೨॥

ಮಯಾ ವಿಜ್ಞೈಯೇಶಾನಿಶಮಪಿ ಕೃತಾ ಯೇತು ಮನಸಾ
ಸಕಾಮೇನಾಮೇಯಾಃ ಸತತಮಪರಾಧಾ ಬಹುವಿಧಾಃ ।
ತ ಏವ ಕ್ಷಂತವ್ಯಾಃ ಕ್ವಚಿದಪಿ ಶರೀರೇಣ ವಚಸಾ
ಕೃತಾನ್ಯೈತೇ ನೂನಂ ಶಿವಶಿವಕೃಪಾಸಾಗರ ವಿಭೋ ॥೫೬೩॥

ಪ್ರಮಾದಾದ್ಯೇ ಕೇಚಿನ್ನಿತತಮಪರಾಧಾ ವಿಧಿಹತಾಃ
ಕೃತಾಃ ಸರ್ವೇ ತೇಽಪಿ ಪ್ರಶಮಮುಪಯಾಯು ಸ್ಫುಟತರಂ ।

---

ಭೂಮಿಯ ಮೇಲೆ ನಿಬಿಡವಾಗಿ ಬೀಳುವ ಮಳೆಯ ಹನಿಗಳನ್ನು ಕದಾಚಿತ್ ಎಣಿಸಬಹುದು. ಹಾಗೆಯೇ ಆಕಾಶದಲ್ಲಿರುವ ನಕ್ಷತ್ರಗಳನ್ನು ಒಂದುವೇಳೆ ಲೆಕ್ಕಮಾಡಬಹುದು. ಬುದ್ಧಿಶಾಲಿಗಳಾದವರು ಮರಳು ಕಣಗಳನ್ನೂ ಎಣಿಸಿಯಾರು. ಆದರೆ ಶಿವಗುಣಸಮುದಾಯಗಳನ್ನು ಸೌಷ್ಠವವಿರುವ ಅನಂತ ಜಿಹ್ವೆಗಳಿಂದಲೂ ಒಂದು ಕಲ್ಪದ ಕೊನೆಯವರಿಗೆ ಹೇಳಿದರೂ ಮುಗಿಯುವಂತಿಲ್ಲ. ಅನಂತಗುಣ ಪರಿಪೂರ್ಣನಾದ ಸ್ವಾಮಿಯೇ, ನಿನಗೆ ವಂದನೆಯು. ॥೫೬೨॥

ಈಶ್ವರನೇ, ನಾನು ತಿಳಿಯದೇ ಸಕಾಮನಾಗಿ ಯಾವಾಗಲೂ ಅಪರಿಮಿತವಾದ ಮತ್ತು ಬಹು ತರಹದ ಮಾನಸಿಕ ಅಪರಾಧಗಳನ್ನು ಮಾಡಿರುವೆನು. ಅವುಗಳನ್ನು ನೀನು ಕ್ಷಮಿಸಬೇಕು. ಓ ಕೃಪಾಸಮುದ್ರನೇ, ಸ್ವಾಮಿ ಶಿವನೇ, ಈ ಮಾನಸಿಕ ಅಪರಾಧಗಳನ್ನು ಯಾವ ಕಾಲದಲ್ಲೂ ಯಾವ ದೇಶದಲ್ಲೂ ಕಾಯಿಕವಾಗಿಯೂ ವಾಚಿಕವಾಗಿಯೂ ಮಾಡಲಿಲ್ಲ. (ಅಂದರೆ ಮನಸ್ಸಿನಲ್ಲಿರುವ ಸಂಕಲ್ಪ ತಲೆದೋರಿದರೂ ಅದನ್ನು ಬಾಹ್ಯವಾಗಿ ಕಾರ್ಯರೂಪಕ್ಕೆ ನಾನು ತಂದವನಲ್ಲ ಎಂದು ತಾತ್ಪರ್ಯ.) ಒಂದು ವೇಳೆ ಅಂತಹ ಯಾವ ಅಪರಾಧಗಳಿದ್ದರೂ ಕ್ಷಮಿಸಿ ನಮ್ಮನ್ನುದ್ಧರಿಸು. ॥೫೬೩॥

ಓ ಶಿವನೇ! ಶಾಸ್ತ್ರದಲ್ಲಿ ನಿಷೇಧಿಸಿರುವ ಯಾವುದಾದರೂ ದೊಡ್ಡ ಅಪರಾಧಗಳನ್ನು ಪ್ರಮಾದವಶದಿಂದ ಮಾಡಿದ್ದರೆ ಅವೆಲ್ಲವೂ ಸ್ಫುಟವಾಗಿ ನಿನ್ನ ಅನುಗ್ರಹ

ಶಿವ ಶ್ರೀಮನ್ ಶಂಭೋ ಶಿವ ಶಿವ ಮಹೇಶೇತಿ ಚ ಜಪನ್
ಕ್ವಚಿಲ್ಲಿಂಗಾಗಾರೇ ಶಿವಹರ ವಸಾಮಿ ಸ್ಥಿರತರಂ ॥೫೬೪॥

ಇತಿ ಸ್ತುತ್ವಾ ಶಿವಂ ವಿಷ್ಣುಂ ಪ್ರಣಮ್ಯ ಚ ಮುಹುರ್ಮುಹುಃ ।
ನಿರ್ವಿಣ್ಣೋ ನ್ಯವಸತ್ತತ್ರ ಕೃತಾಂಜಲಿಪುಟಶ್ಚಿರಂ ॥೫೬೫॥

ಸದಾಶಿವಃ ಶಿವಂ ರೂಪಮಾದಾಯೋವಾಚ ಸರ್ವಗಃ ।
ಭೀಷಯನ್ನಖಿಲಾನ್ಭೂತಾನ್ಘನಗಂಭೀರಯಾ ಗಿರಾ ॥೫೬೬॥

ಮದೀಯಂ ರೂಪಮನಘಂ ಕಥಂ ಜ್ಞೇಯಂ ಭವಾದೃಶೈಃ ।
ಯನ್ನ ವೇದೈರಪಿ ಜ್ಞಾತಮಿತ್ಯುಕ್ತ್ವಾಂತರ್ದಧೇ ಶಿವಃ ॥೫೬೭॥

ತತಃ ಪುನರ್ವಿಧಿಸ್ತತ್ರ ತಪಸ್ತಪ್ತುಂ ಸಮಾರಭೇ ।
ವಿಷ್ಣುಶ್ಚ ಶಿವತತ್ತ್ವಾರ್ಥಜ್ಞಾನಾರ್ಥಮತಿಯತ್ನತಃ ॥೫೬೮॥

---

ದಿಂದ ನಾಶವಾಗಬೇಕು. ಓ ಭಗವನ್ ! ಶಿವ! ಇನ್ನುಮೇಲೆ ನಾನು " ಶಿವ ಶಿವ ಮಹೇಶ" ಎಂದು ಜಪಿಸುತ್ತಾ ಎಲ್ಲಾದರೂ ಶಿವಲಿಂಗ ಪ್ರತಿಷ್ಠೆಮಾಡಿರುವ ಶಿವದೇವಾಲಯದಲ್ಲಿ ಸ್ಥಿರವಾಗಿ ವಾಸಿಸುವೆನು. ಪವಿತ್ರವಾದ ನಿನ್ನ ನಾಮಸ್ಮರಣೆಯು ನನಗೆ ಸದಾ ಇರುವಂತೆ ಅನುಗ್ರಹಿಸು. ಇದೇ ನಾನು ಪ್ರಾರ್ಥಿಸುವವರ." ॥೫೬೪॥

ಈ ರೀತಿಯಲ್ಲಿ ಶಿವನನ್ನು ಸ್ತುತಿಸಿ ವಿಷ್ಣುವು ಬಾರಿಬಾರಿಗೂ ವಂದಿಸಿ, ಅಂಜಲಿಬದ್ಧನಾಗಿ ಚಿಂತಾಕ್ರಾಂತವಾದ ಮುಖಮುದ್ರೆಯಿಂದ ಶಿವನ ಮುಂದೆ ಮೌನವಾಗಿ ನಿಂತನು. ॥೫೬೫॥

ಆಗ ಸರ್ವಾಂತರ್ಯಾಮಿಯಾದ ಈಶ್ವರನು ಶಾಂತವಾದ ರೂಪವನ್ನು ಧರಿಸಿ, ಮೇಘದಂತೆ ಗಂಭೀರವಾದ ತನ್ನ ವಾಣಿಯಿಂದ ಸಕಲ ಪ್ರಾಣಿಗಳನ್ನೂ ಭಯಭ್ರಾಂತರನ್ನಾಗಿ ಮಾಡುತ್ತಾ ಹೀಗೆಂದನು. ॥೫೬೬॥

"ಪವಿತ್ರವಾದ ನನ್ನ ರೂಪವನ್ನು ವೇದಗಳೂ ಸಹ ತಿಳಿದಿರುವುದಿಲ್ಲ. ಹೀಗಿರಲು ನಿಮ್ಮಂತಹ ಅಲ್ಪಜ್ಞರು ಅದನ್ನು ತಿಳಿಯುವ ಬಗೆ ಹೇಗೆ?" ಹೀಗೆಂದು ಹೇಳಿ ಶಿವನು ಅಂತರ್ಹಿತನಾದನು. ॥೫೬೭॥

ಬಳಿಕ ಬ್ರಹ್ಮನು ಪುನಃ ತಪಸ್ಸನ್ನಾಚರಿಸಲು ಪ್ರಾರಂಭಿಸಿದನು. ಅದರಂತೆಯೇ ವಿಷ್ಣುವೂ ಸಹ ಶಿವನ ನಿಜರೂಪವನ್ನು ತಿಳಿಯುವುದಕ್ಕೋಸ್ಕರ ಶ್ರದ್ಧೆಯಿಂದ ತಪಸ್ಸಿನಲ್ಲಿ ನಿರತನಾದನು. ॥೫೬೮॥

ತಾದೃಶಂ ಶಿವಮೇವಾರ್ಚ್ಯಂ ಪೂಜಯಿತ್ವಾ ವಸಾಮ್ಯಹಂ ।
ನಾನ್ಯೋ ಮಮಾರ್ಚ್ಯೋ ದೇವೇಷು ವಿನಾ ಶಂಭುಂ ಸನಾತನಂ॥೫೬೯

ತ್ವಯಾಪಿ ಶಾಂಕರಂ ಲಿಂಗಂ ಪೂಜನೀಯಂ ಪ್ರಯತ್ನತಃ ।
ವಿಹಾಯ್ಯೈವಾನ್ಯದೇವಾನಾಂ ಪೂಜನಂ ಶೇಷ ಸರ್ವಥಾ ॥೫೭೦॥

ಇತ್ಯುಕ್ತಂ ಶೈವವರ್ಯಂ ತಂ ಸಂಪೂಜ್ಯ ಭುಜಗಾಧಿಪಃ ।
ಕಾಶೀಂ ಪ್ರಾಪ ಸ ತೇನೈವ ಸಹ ಪೂಜಾ ಪುರಃಸರಂ ॥೫೭೧॥

ಶೈವಪಾಶುಪತಾಚಾರಃ ಪುನಃ ಪಶುಪತೀಶ್ವರಂ ।
ದೃಷ್ಟ್ವಾ ಸಂತೋಷಮಾಪನ್ನಸ್ತತ್ರೈವೋವಾಸ ಸಾದರಂ ॥೫೭೨॥

ಏತನ್ಮಯಾ ಪಶುಪತೀಶ್ವರಸಂನಿಧಾನ
ವಾಸಸ್ಯ ಸಮ್ಯಗಮಲಂ ಫಲಮುಕ್ತಮದ್ಯ ।

---

ಎಲೈ ನಾಗರಾಜನೇ, ಯಾವ ದೇವನ ಸ್ವರೂಪವನ್ನು ಬ್ರಹ್ಮ, ವಿಷ್ಣು ಮೊದಲಾದ ದೇವತೆಗಳೂ ಸಹ ತಿಳಿಯಲಸಮರ್ಥರಾದರೋ, ಅಂತಹ ಶಿವನನ್ನೇ ಪೂಜಿಸುತ್ತಾ ಜೀವನವನ್ನು ಸಾಗಿಸುತ್ತಿರುವೆನು. ಶಿವನನ್ನಲ್ಲದೆ ಇನ್ನಾವ ದೇವತೆಯನ್ನೂ ನಾನು ಪೂಜಿಸಲಾರೆ. ॥೫೭೦॥

ಎಲೈ ಆದಿಶೇಷನೇ, ನೀನೂ ಸಹ ಇತರ ದೇವತೆಗಳ ಆರಾಧನೆಯನ್ನು ಬಿಟ್ಟು ಶಿವಲಿಂಗವನ್ನೇ ಭಕ್ತಿಯಿಂದ ಪೂಜಿಸು. ॥೫೭೦॥

ಹೀಗೆಂದು ಹೇಳಿದ ಈಶ್ವರಭಕ್ತನಾದ ಆ ಯುವಕನನ್ನು ಅರ್ಘ್ಯಪಾದ್ಯಾದಿಗಳಿಂದ ವಿಧಿವತ್ತಾಗಿ ಪೂಜಿಸಿ, ಆದಿಶೇಷನು ಅವನೊಂದಿಗೆ ಶಿವನನ್ನು ಅರ್ಚಿಸಿ ಕಾಶೀಕ್ಷೇತ್ರವನ್ನು ಸೇರಿದನು. ॥೫೭೧॥

ಪಾಶುಪತರ ದೀಕ್ಷೆಯನ್ನು ವಹಿಸಿದ ಶಿವಭಕ್ತನಾದ ಆ ಯುವಕನೂ ಸಹ ಕಾಶೀಕ್ಷೇತ್ರದಲ್ಲಿ ಪಶುಪತಿಯನ್ನು ನೋಡಿ ಸಂತೋಷಭರಿತನಾಗಿ ಅಲ್ಲಿಯೇ ಆನಂದದಿಂದ ವಾಸವಾಗಿದ್ದನು. ॥೫೭೨॥

ಎಲೌ ಸುಮುಖಿಯೇ, ಈಗ ಪವಿತ್ರವಾದ ಕಾಶೀಕ್ಷೇತ್ರದಲ್ಲಿರುವ ಪಶುಪತೀಶ್ವರನ ಸನ್ನಿಧಾನದಲ್ಲಿ ವಾಸವಾಗಿರುವುದರಿಂದ ಉಂಟಾಗುವ ಫಲವನ್ನು ನಾನು

ಸೇಯಂ ಕಥಾ ಸಕಲಪಾಪವನಾಗ್ನಿಭೂತಾ
ಶ್ರಾವ್ಯಾ ಸುಧಾರಸಮಯೀ ಶಿವಭಕ್ತಿವರ್ಯೈಃ ॥೫೭೩॥

ಇತಿ ಶ್ರೀಶಿವರಹಸ್ಯೇ ಸಪ್ತಮಾಂಶೇ ಪಶುಪತೀಶ್ವರಮಾಹಾತ್ಮ್ಯವರ್ಣನೇ
ದಶಮೋಽಧ್ಯಾಯಃ

---

ಹೇಳಿರುವೆನು. ಪವಿತ್ರವಾದ ಈ ಕಥೆಯು ಪಾಪರಾಶಿಗಳೆಂಬ ಅರಣ್ಯಕ್ಕೆ ಕಾಡುಕಿಚ್ಚಿನಂತಿರುವುದು. ಈಶ್ವರ ಭಕ್ತಾಗ್ರೇಸರರಾದವರು ಸುಧೆಯಂತೆ ಸವಿಯಾದ ಈ ಕಥೆಯನ್ನು ಕೇಳಬೇಕು. ಅದರಿಂದ ಅವರು ಮುಕ್ತರೆನಿಸುವರು. ॥೫೭೩॥

ಇಲ್ಲಿಗೆ ಶ್ರೀಶಿವರಹಸ್ಯದ ಏಳನೆಯ ಅಂಶದಲ್ಲಿ ಶಿವಗೌರಿಯರ ಸಂವಾದರೂಪವಾಗಿ
ಪಶುಪತೀಶ್ವರನ ಮಾಹಾತ್ಮ್ಯವರ್ಣನೆಯಿಂದೊಳಗೊಂಡ
ಹತ್ತನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

|| ಶ್ರೀಶಿವಾಯ ನಮಃ ||

# ಅಥ ಶ್ರೀಶಿವರಹಸ್ಯೇ

## ಉಗ್ರಾಖ್ಯೇ

### ಸಪ್ತಮಾಂಶೇ ಪೂರ್ವಾರ್ಧೇ

## ಏಕಾದಶೋಽಧ್ಯಾಯಃ

ಶ್ರೀಶಿವ ಉವಾಚ

**ಓಂಕಾರನಾಮ ವಿಮಲಂ ಕ್ಷೇತ್ರಂ ಕಾಶ್ಯಾಂ ವರಾನನೇ ।**
**ಸರ್ವಪಾಪಕ್ಷಯಕರಂ ತಿಷ್ಠತ್ಯೇಕಂ ಶುಭಪ್ರದಂ ॥೧॥**

**ತತ್ರ ಬಿಲ್ವವನಂ ರಮ್ಯಂ ನಿತ್ಯಂ ನವದಲಾನ್ವಿತಂ ।**
**ನಕ್ಷತ್ರಲೇಢಿಶಾಖಾಗ್ರಂ ಘನಚ್ಛಾಯಮಭೂಚ್ಛಿವೇ ॥೨॥**

---

## ಹನ್ನೊಂದನೆಯ ಅಧ್ಯಾಯ

ಎಲೌ ಸುಮುಖಿಯೇ! ಕಾಶೀಕ್ಷೇತ್ರದಲ್ಲಿ, ಸಕಲ ಪಾಪಗಳನ್ನು ಹೋಗಲಾಡಿಸುವುದೂ, ಕಲ್ಯಾಣಪ್ರದವೂ, ಆದ ಓಂಕಾರವೆಂಬ ಹೆಸರುಳ್ಳ ಇನ್ನೊಂದು ಕ್ಷೇತ್ರವಿರುವುದು. ||೧||

ಆ ಕ್ಷೇತ್ರದಲ್ಲಿ, ಒಂದು ಬಿಲ್ವವನವಿರುವುದು. ಅದು, ಯಾವಾಗಲೂ ಹೊಸಹೊಸದಾದ ಬಿಲ್ವದಲಗಳಿಂದ ಕೂಡಿರುವ ವೃಕ್ಷಗಳಿಂದ ಮನೋಹರವಾಗಿ ಕಾಣಿಸುತ್ತಿರುವುದು. ಅದರ ಕೊಂಬೆಗಳು ನಕ್ಷತ್ರಮಂಡಲವನ್ನೇ ಚುಂಬಿಸುವಂತಿರುವುವು. ಆ ವನದ ಸುತ್ತುಮುತ್ತಲೂ, ಬಿಲ್ವವೃಕ್ಷಗಳ ನಿಬಿಡವಾದ ನೆರಳು ಪ್ರಸರಿಸಿರುವುದು. ||೨||

ತಸ್ಮಿನ್ಬಿಲ್ವವನೇ ರಮ್ಯೇ ಕ್ರೀಡಾರ್ಥಂ ಗಮ್ಯತೇ ಮಯಾ ।
ಕಿಂಚಿತ್ಕಾಲಂ ವಿಹೃತ್ಯಾಹಂ ವಸಾಮಿ ಪ್ರತ್ಯಹಂ ಶುಭೇ ॥೩॥

ವಿದ್ಯಮಾನೇ ಮಯಿ ಪ್ರೀತ್ಯಾ ಕದಾಚಿತ್ಪವನೋ ಮಹಾನ್ ।
ಸಮಾಗತಾಸ್ತತಸ್ತೇನ ಕಂಪಿತಾಸ್ತರವೋ ಭೃಶಂ ॥೪॥

ಕಂಪಿತಂ ನ್ಯಪತದ್ಭೂಮೌ ಬಿಲ್ವಶಾಖಾಗ್ರಮುತ್ತಮಂ ।
ನವಾರುಣದಲಾಕ್ರಾಂತಂ ವಿತಸ್ತಿಮಿತಮಂಬಿಕೇ ॥೫॥

ತದ್ಗೃಹೀತಂ ಮಯಾ ರಮ್ಯಂ ತದಾ ಪ್ರಭೃತಿ ಸರ್ವದಾ ।
ತದ್ಬಿಲ್ವವನರಕ್ಷಾರ್ಥಂ ಯಕ್ಷಾಃ ಸಂಸ್ಥಾಪಿತಾ ಮಯಾ ॥೬॥

ವೇದಮೂರ್ತಿಧರಾಸ್ತತ್ರ ನವಬಿಲ್ವದಲೈಃ ಶುಭೈಃ ।
ಓಂಕಾರರೂಪಿಣಂ ನಿತ್ಯಂ ಮಾಮೇವಾಭ್ಯರ್ಚಯಂತಿ ಹಿ ॥೭॥

---

ನಾನು ಪ್ರತಿದಿನವೂ ವಿಹರಿಸಲು, ಆ ವನಕ್ಕೆ ಹೋಗುವೆನು. ಕೊಂಚಕಾಲದ ವರೆಗೆ ಅಲ್ಲಿ ತಿರುಗಾಡಿ ಬಳಿಕ, ಸ್ವಸ್ಥಾನದಲ್ಲಿ ವಾಸಿಸುವೆನು. ॥೩॥

ಇದೇರೀತಿಯಾಗಿ ನಾನು ಅಲ್ಲಿ ಪ್ರೀತಿಯಿಂದ ವಾಸವಾಗಿರಲು, ಒಂದಾನೊಂದು ಸಮಯದಲ್ಲಿ ಗಾಳಿಯು ಬಲವಾಗಿ ಬೀಸಿತು. ಅದರಿಂದ ಅಲ್ಲಿದ್ದ ಮರಗಳೆಲ್ಲಾ ಚೆನ್ನಾಗಿ ಅಲ್ಲಾಡಿದುವು. ॥೪॥

ದೇವಿ! ಆಗ, ನೂತನವಾದ ತಳಿರಿನಿಂದ ಕೂಡಿದ ಒಂದಾನೊಂದು ಬಿಲ್ವ ವೃಕ್ಷದ ಕೊಂಬೆಯ ಅಗ್ರಭಾಗವು ಗಾಳಿಯ ಹೊಡೆತದಿಂದ ಕೆಳಕ್ಕೆ ಬಿದ್ದಿತು. ಅದು ಹನ್ನೆರಡು ಅಂಗುಲಗಳಷ್ಟು ಉದ್ದವಾಗಿದ್ದಿತು. ॥೫॥

ನಾನು ಆ ರೆಂಬೆಯನ್ನು ಪ್ರೀತಿಯಿಂದ ಕೈಯ್ಯಲ್ಲಿ ಹಿಡಿದುಕೊಂಡೆನು. ಅಂದಿನಿಂದ ಮೊದಲುಗೊಂಡು, ನಾನು ಆ ಬಿಲ್ವವನವನ್ನು ಸಂರಕ್ಷಿಸುವುದಕ್ಕೋಸ್ಕರ ಯಕ್ಷರನ್ನು ಕಾವಲಿರಿಸಿದೆನು. ॥೬॥

ಅಲ್ಲಿ ವೇದಪುರುಷರು, ನೂತನವಾದ ಬಿಲ್ವದಲಗಳಿಂದ, ಓಂಕಾರರೂಪಿಯಾದ ನನ್ನನ್ನೇ ಪ್ರತಿದಿನವೂ ಆರಾಧಿಸುತ್ತಿರುವರು. ॥೭॥

ಶಿವತತ್ತ್ವಮವಿಜ್ಞಾಯ ತಜ್ಜ್ಞಾನಾರ್ಥಂ ಮುನೀಶ್ವರಾಃ ।
ವೇದಾಶ್ಚ ಸತತಂ ತತ್ರ ತಪಃ ಕುರ್ವಂತಿ ಸಾದರಂ ॥೮॥

ತತ್ರ ಪಂಚಾಗ್ನಿನಿರತಾಃ ನಿರಾಹಾರಾ ಜಿತೇಂದ್ರಿಯಾಃ ।
ತಪೋ ಘೋರತರಂ ಕೃತ್ವಾ ತಿಷ್ಠಂತಿ ವಿಮಲಾಶಯಾಃ ॥೯॥

ಏಕಪಾದೇನ ಸಂಸ್ಥಾಯ ಪ್ರಜ್ವಲದ್ವಹ್ನಿಮಧ್ಯಗಃ ।
ಚಕಾರ ವಿಷ್ಣುರತ್ರೈವ ತಪೋ ಘೋರತರಂ ಪುರಾ ॥೧೦॥

ಬ್ರಹ್ಮಣಾಪಿ ತಪಸ್ತಪ್ತಂ ಮಹದ್ಘೋರತರಂ ಮುದಾ ।
ಇಂದ್ರಾದಿಭಿರ್ಲೋಕಪಾಲೈಸ್ತಪಸ್ತಪ್ತಮಿಹೈವ ಹಿ ॥೧೧॥

ಅನ್ಯೈಶ್ಚ ಋಷಿಭಿಃ ಸಿದ್ಧೈರ್ಮುನಿಭಿರ್ಬ್ರಹ್ಮವಾದಿಭಿಃ ।
ತಪಸ್ತಪ್ತಂ ಪುರಾ ನಿತ್ಯಂ ಅತ್ರೈವೋಂಕಾರಸನ್ನಿಧೌ ॥೧೨॥

---

ಅಲ್ಲಿ, ವೇದಗಳು ಮತ್ತು ಮುನಿಶ್ರೇಷ್ಠರು, ಈಶ್ವರನ ತತ್ತ್ವವನ್ನರಿಯದೇ ಅದನ್ನು ತಿಳಿದುಕೊಳ್ಳಬೇಕೆಂಬ ಕುತೂಹಲದಿಂದ, ನಿರಂತರವೂ, ಭಕ್ತಿಯಿಂದ ತಪಸ್ಸನ್ನಾಚರಿಸುತ್ತಿರುವರು. ||೮||

ನಿರ್ಮಲಚಿತ್ತರಾದ ಅವರು, ಜಿತೇಂದ್ರಿಯರಾಗಿ, ನಿರಾಹಾರವ್ರತವನ್ನು ಕೈಗೊಂಡು ಪಂಚಾಗ್ನಿ ಮಧ್ಯದಲ್ಲಿ ನಿಂತು ಕಠಿಣವಾದ ತಪಸ್ಸನ್ನಾಚರಿಸಿ, ವಾಸವಾಗಿರುವರು. ||೯||

ಹಿಂದೆ ಇದೇ ಸ್ಥಳದಲ್ಲಿ ವಿಷ್ಣುವು ಧಗಧಗಿಸುವ ಅಗ್ನಿಯ ನಡುವೆ ಒಂದೇ ಕಾಲಿನಿಂದ ನಿಂತು ಉಗ್ರವಾದ ತಪಸ್ಸನ್ನಾಚರಿಸಿದನು. ||೧೦||

ಬ್ರಹ್ಮನೂ ಸಹ ಇಲ್ಲಿಯೇಅತ್ಯಂತ ಭಯಂಕರವಾದ ತಪಸ್ಸನ್ನಾಚರಿಸಿದನು. ಅಲ್ಲದೇ ಇದೇ ಸ್ಥಳದಲ್ಲಿ ಇಂದ್ರಾದಿ ಲೋಕಪಾಲಕರೂ ಸಹ ತಪಸ್ಸನ್ನಾಚರಿಸಿರುವರು. ||೧೧||

ಇತರ ಋಷಿಗಳೂ, ಸಿದ್ಧರೂ ಮತ್ತು ಬ್ರಹ್ಮನಿಷ್ಠರಾದ ಮುನಿಗಳೂ ಸಹ ಈ ಓಂಕಾರೇಶ್ವರನ ಸನ್ನಿಧಿಯಲ್ಲಿಯೇ ತಪಸ್ಸನ್ನಾಚರಿಸಿರುವರು. ||೧೨||

ಸಾಯನೋಂಕಾರನಾಥಸ್ಯ ದರ್ಶನಂ ಪಾಪನಾಶನಂ ।
ಕರ್ತವ್ಯಂ ನಿಯತಂ ಯತ್ನಾತ್ಪೂಜಾ ಕಾರ್ಯಾ ನಿರಂತರಂ ॥೧೩॥

ಪ್ರತಿಶುಕ್ಲಚತುರ್ದಶ್ಯಾಂ ಪೂಜಾ ಕಾರ್ಯಾ ವಿಶೇಷತಃ ।
ತತ್ಪ್ರೀತ್ಯರ್ಥಂ ಮಹಾಶೈವಾಃ ಭೋಜನೀಯಾಃ ಪ್ರಯತ್ನತಃ॥೧೪॥

ಓಂಕಾರಕುಂಡಮಮಲಂ ತತ್ರ ತಿಷ್ಠತಿ ನಿರ್ಮಲಂ ।
ತತ್ರ ಪ್ರತಿದಿನಂ ಸ್ನಾನಂ ಕರ್ತವ್ಯಂ ಜ್ಞಾನವೃದ್ಧಯೇ ॥೧೫॥

ತತ್ರ ಶ್ರಾದ್ಧಂ ಚ ಕರ್ತವ್ಯಂ ಪಿತೄನುದ್ದಿಶ್ಯಸಾದರಂ ।
ಕರ್ತವ್ಯಂ ತತ್ರ ಯತ್ನೇನ ಪ್ರತ್ಯಹಂ ತಿಲತರ್ಪಣಂ ॥೧೬॥

ತತ್ರ ಶ್ರಾದ್ಧೇ ಕೃತೇ ಸರ್ವೇ ಪಿತರೋ ನರಕಸ್ಥಿತಾಃ ।
ಪ್ರಯಾಂತಿ ಬ್ರಹ್ಮಸದನಂ ಮೋದಮಾನಾ ವಸಂತಿ ಚ ॥೧೭॥

---

ಸಾಯಂಕಾಲದಲ್ಲಿ ಓಂಕಾರೇಶ್ವರನ ದರ್ಶನವು ಪಾಪಗಳನ್ನು ಹೋಗಲಾಡಿಸುವುದಾದುದರಿಂದ, ಆ ಕಾಲದಲ್ಲಿ ಓಂಕಾರೇಶ್ವರನನ್ನು ತಪ್ಪದೇ ಸಂದರ್ಶಿಸಬೇಕು. ಅಲ್ಲದೇ, ನಿರಂತರವೂ ಅವನನ್ನು ಭಕ್ತಿಯಿಂದ ಪೂಜಿಸಬೇಕು. ॥೧೩॥

ಪ್ರತಿಯೊಂದು ತಿಂಗಳಿನ ಪ್ರತಿಯೊಂದು ಶುಕ್ಲಪಕ್ಷದ ಚತುರ್ದಶಿಯುಲ್ಲಿಯೂ, ವಿಶೇಷವಾಗಿ ಓಂಕಾರೇಶ್ವರನನ್ನು ಪೂಜಿಸಬೇಕು. ಅವನು ಸುಪ್ರೀತನಾಗುವುದಕ್ಕೋಸ್ಕರ ಈಶ್ವರಭಕ್ತರಿಗೆ ಉಣಬಡಿಸಬೇಕು. ॥೧೪॥

ಅಲ್ಲಿ, ಓಂಕಾರವೆಂಬ ನಿರ್ಮಲವಾದ ಒಂದಾನೊಂದು ಕೊಳವಿರುವುದು. ಅದರಲ್ಲಿ ಪ್ರತಿದಿನವೂ ಸ್ನಾನವನ್ನಾಚರಿಸಬೇಕು. ಅದರಿಂದ ಜ್ಞಾನಾಭಿವೃದ್ಧಿಯಾಗುವುದು. ॥೧೫॥

ಅದಲ್ಲದೇ ಆ ಕ್ಷೇತ್ರದಲ್ಲಿ, ಪಿತೃಶ್ರಾದ್ಧವನ್ನಾಚರಿಸಿ, ಪ್ರತಿದಿನವೂ, ಪಿತೃಗಳಿಗೆ ತಿಲತರ್ಪಣವನ್ನು ಕೊಡಬೇಕು. ॥೧೬॥

ಅಲ್ಲಿ ಶ್ರಾದ್ಧವನ್ನಾಚರಿಸುವುದರಿಂದ, ನರಕಲೋಕದಲ್ಲಿರುವ ಪಿತೃಗಳೆಲ್ಲರೂ, ಬ್ರಹ್ಮಲೋಕವನ್ನು ಪಡೆದು ಅಲ್ಲಿ ಸಂತೋಷದಿಂದ ವಾಸಿಸುವರು. ॥೧೭॥

ಪುರಾ ಕೇನಚಿದತ್ರೈವ ಕೃತಂ ಶ್ರಾದ್ಧಂ ಯಥಾವಿಧಿ ।
ತೇನ ತತ್ಪಿತರಃ ಸರ್ವೇ ನರಕಾದ್ಗಂತುಮುದ್ಯತಾಃ ॥೧೮॥

ತದಾ ಯಮಭಟಾಃ ಸರ್ವೇ ಯಮಶಾಸನಕಾರಿಣಃ ।
ಪ್ರಗೃಹ್ಯೈವ ಪಿತೄನ್ಸರ್ವಾನ್ಯಯುರ್ಯಮನಿಕೇತನಂ ॥೧೯॥

॥ ಯಮಭಟಾ ಊಚುಃ ॥

ಪ್ರಯಾಂತಿ ನರಕಾದೇತೇ ಯಮ ಭೀಮಪರಾಕ್ರಮ ।
ವಿಚಾರಯೈತಾನಿತಿ ತೇ ಯಮಮೂಚುರ್ಯಮಸ್ತತಃ ॥೨೦॥

ಉವಾಚ ಚಿತ್ರಗುಪ್ತಾಖ್ಯಂ ಧರ್ಮಾಧರ್ಮವಿಚಾರಕಂ ।
ಕಿಮೇತೈಃ ಕೃತಮಸ್ತೀತಿ ಬಭಾಷೇ ವಚನಂ ಮುದಾ ॥೨೧॥

॥ ಚಿತ್ರಗುಪ್ತ ಉವಾಚ ॥

ಕಾಶ್ಯಾಮೋಂಕಾರನಾಥಸ್ಯ ಕುಂಡೇ ಪಾಪೌಘನಾಶಕೇ ।
ಶೈವೇನ ತದ್ವಂಶಜೇನ ಕೃತಂ ಶ್ರಾದ್ಧಂ ಯಥಾವಿಧಿ ॥೨೨॥

---

ಪೂರ್ವಕಾಲದಲ್ಲಿ ಒಬ್ಬನು, ಇದೇ ಕ್ಷೇತ್ರದಲ್ಲಿ, ವಿಧಿವತ್ತಾಗಿ ಪಿತೃಶ್ರಾದ್ಧವನ್ನಾಚರಿಸಿದನು. ಆದರಿಂದ ನರಕಲೋಕದಲ್ಲಿದ್ದ ಅವನ ಪಿತೃಗಳೆಲ್ಲರೂ ಅಲ್ಲಿಂದ ಹೊರಹೊರಡುತ್ತಿರಲು, ಆಗ ಯಮನ ಸೇವಕರು ಅವರನ್ನು ಬಲಾತ್ಕಾರದಿಂದ ಹಿಡಿದೆಳೆದು ಯಮನ ಸದನಕ್ಕೆ ಕರೆದೊಯ್ದರು. ಮತ್ತು ಅವನ ಬಳಿಯಲ್ಲಿ ಹೀಗೆಂದರು. ॥೧೮-೧೯॥

“ ಓ, ಪ್ರರಾಕ್ರಮಿಯಾದ ಯಮನೇ ! ಇವರು, ನರಕದಿಂದ ಹೊರಗೆ ಹೋಗುತ್ತಿರುವರು. ಇವರನ್ನು ವಿಚಾರಣೆಗೆ ಗುರಿಪಡಿಸು.” ಎನ್ನಲು, ಆಗ ಯಮನು ಪ್ರಾಣಿಗಳ ಧರ್ಮಾಧರ್ಮಗಳನ್ನು ವಿಮರ್ಶಿಸುವ, ಚಿತ್ರಗುಪ್ತನನ್ನು ನೋಡಿ, ಎಲೈ, ಚಿತ್ರಗುಪ್ತನೇ ! ಇವರು ಯಾವ ಪುಣ್ಯಕಾರ್ಯವನ್ನಾಚರಿಸಿರುವರೆಂಬುದನ್ನು ಪರಿಶೀಲಿಸು, ಎಂದು ಆಜ್ಞಾಪಿಸಿದನು. ॥೨೦-೨೧॥

“ ಇವರ ವಂಶದಲ್ಲಿ ಜನಿಸಿದ ಓರ್ವ ಈಶ್ವರಭಕ್ತನು, ಕಾಶೀಕ್ಷೇತ್ರದಲ್ಲಿರುವ, ಸಕಲ ಪಾಪಗಳನ್ನೂ ನಾಶಗೊಳಿಸುವ, ಓಂಕಾರೇಶ್ವರ ಕುಂಡದಲ್ಲಿ, ವಿಧಿವತ್ತಾಗಿ

ಕೃತಂ ಪಿಂಡಪ್ರದಾನಂ ಚ ತರ್ಪಣಂ ಚ ತಿಲೈಃ ಕೃತಂ ।
ತೇನೈವ ಘೋರನಿರಯಾದುದ್ಧೃತಾಃ ಪಿತರೋಽಖಿಲಾಃ ॥೨೩॥

ಆಬ್ರಹ್ಮಕಲ್ಪಮನಿಶಂ ಬ್ರಹ್ಮಣಾ ಪೂಜಿತಾ ಮುದಾ ।
ಬ್ರಹ್ಮಲೋಕೇ ನಿವಾಸಂ ಚ ಕರಿಷ್ಯಂತಿ ನ ಸಂಶಯಃ ॥೨೪॥

ಇತಿ ತದ್ವಚನಂ ಶ್ರುತ್ವಾ ಯಮಃ ಶೀಘ್ರಂ ಸಮುತ್ಥಿತಃ ।
ಪ್ರತ್ಯೇಕಮಾಸನಂ ದತ್ವಾ ಪೂಜಾಂ ಚಕ್ರೇ ಯಥಾವಿಧಿ ॥೨೫॥

ತತೋ ವಿಮಾನಮಾರುಹ್ಯ ಬ್ರಹ್ಮಲೋಕಂ ಯಯುರ್ಮುದಾ ।
ಇಂದ್ರೇಣ ಪೂಜಿತಾಃ ಸಮ್ಯಕ್ತಥಾ ದಿಕ್ಪಾಲಪೂಜಿತಾಃ ॥೨೬॥

ಅಭ್ಯಾಗತಾನ್ನಿತ್ಯಾನ್ದೃಷ್ಟ್ವಾ ಸಂಪೂಜ್ಯ ವಿಧಿವದ್ವಿಧಿಃ ।
ಸ್ವಲೋಕೇ ವಿಮಲಾನ್ಸರ್ವಾನ್ಸ್ಥಾಪಯಾಮಾಸ ಸಾದರಂ ॥೨೭॥

---

ಪಿತೃಶ್ರಾದ್ಧವನ್ನಾಚರಿಸಿ, ಪಿಂಡಪ್ರದಾನವನ್ನು ಮಾಡಿ, ತಿಲತರ್ಪಣದಿಂದ ಪಿತೃಗಳನ್ನು ಸಂತೃಪ್ತಿಗೊಳಿಸಿದನು. ಅವನು ತನ್ನ ಪಿತೃಗಳಾದ ಇವರೆಲ್ಲರನ್ನೂ ಘೋರವಾದ ಈ ನರಕದಿಂದ ಉದ್ಧರಿಸಿರುವನು. ||೨೨-೨೩||

ಇವರು, ಬ್ರಹ್ಮಕಲ್ಪವು ಮುಗಿಯುವವರೆಗೆ, ಬ್ರಹ್ಮನಿಗೆ ಪೂಜ್ಯರಾಗಿ, ಸಂತೋಷದಿಂದ ವಾಸಿಸುವರು. ಇದರಲ್ಲಿ ಸಂಶಯವಿರುವುದಿಲ್ಲ." ||೨೪||

ಚಿತ್ರಗುಪ್ತನ ಈ ಮಾತನ್ನು ಕೇಳಿದೊಡನೆಯೇ ಯಮನು ತನ್ನ ಪೀಠದಿಂದ ಮೇಲಕ್ಕೆದ್ದು ಅವರೆಲ್ಲರಿಗೂ ಬೇರೆಬೇರೆಯಾಗಿ ಆಸನವನ್ನು ಕೊಟ್ಟು, ಶಾಸ್ತ್ರೋಕ್ತ ವಿಧಾನದಿಂದ ಪೂಜಿಸಿದನು. ||೨೫||

ಬಳಿಕ ಅವರೆಲ್ಲರೂ, ವಿಮಾನವನ್ನೇರಿ ಸಂತೋಷದಿಂದ ಬ್ರಹ್ಮಲೋಕಕ್ಕೆ ತೆರಳಿದರು. ಆಗ, ಇಂದ್ರನೂ ಮತ್ತು ಇತರ ದಿಕ್ಪಾಲಕರೂ ಸಹ ಅವರನ್ನು ವಿಶೇಷವಾಗಿ ಪೂಜಿಸಿದರು. ||೨೬||

ತನ್ನ ಲೋಕಕ್ಕೆ ಬಂದ ಆ ಪಿತೃಗಳನ್ನು ನೋಡಿ ಬ್ರಹ್ಮನು, ಅವರನ್ನು ವಿಧಿವತ್ತಾಗಿ ಪೂಜಿಸಿ, ತನ್ನ ಲೋಕದಲ್ಲಿರಿಸಿಕೊಂಡನು. ||೨೭||

ಅತೋಽತ್ರ ವಿಧಿವಚ್ಛ್ರಾದ್ಧಂ ಕರ್ತವ್ಯಂ ಪಿತೃಮುಕ್ತಯೇ ।
ಓಂಕಾರೇಶಾರ್ಚನಂ ಚಾತ್ರ ಕರ್ತವ್ಯಂ ಪ್ರತಿವಾಸರಂ ॥೨೮॥

ತ್ರಿಲೋಚನಾಖ್ಯಮಮಲಂ ಕ್ಷೇತ್ರಂ ಕಾಶ್ಯಾಂ ವರಾನನೇ ।
ತಿಷ್ಠತ್ಯೇಕಂ ಮಮಾತ್ಯಂತವಿಲಾಸಾತ್ಮಕಮುತ್ತಮಂ ॥೨೯॥

ಹೇಮಪ್ರಾಕಾರಶೃಂಗಾಗ್ರರಾಜಮಾನಮಹರ್ನಿಶಂ ।
ಕಿನ್ನರಾಮರಗಂಧರ್ವಸೇವಿತಂ ಪ್ರತಿವಾಸರಂ ॥೩೦॥

ಪಿಲಿಪ್ಪಿಲಾಖ್ಯಂ ತತ್ರಾಸ್ತಿ ಕುಂಡಮೇಕಂ ವರಾನನೇ ।
ತತ್ರ ಸ್ನಾತ್ವಾ ಯಥಾಶಾಸ್ತ್ರಂ ಶ್ರಾದ್ಧಂ ಕೃತ್ವಾ ಯಥಾವಿಧಿ ॥೩೧॥

ತ್ರಿಲೋಚನಾಖ್ಯಲಿಂಗಸ್ಯ ಪೂಜಾ ಕಾರ್ಯಾ ಯಥಾವಿಧಿ ।
ಪುಷ್ಪೈರ್ನಾನಾವಿಧೈರ್ದ್ರವ್ಯೈರ್ಬಿಲ್ವಪತ್ರೈಸ್ತಿಲಾಕ್ಷತೈಃ ॥೩೨॥

---

ಆದುದರಿಂದ ಪಿತೃಗಳನ್ನು ನರಕದಿಂದ ಉದ್ಧರಿಸುವುದಕ್ಕೋಸ್ಕರ, ಈ ಕ್ಷೇತ್ರದಲ್ಲಿ, ವಿಧಿವತ್ತಾಗಿ ಶ್ರಾದ್ಧವನ್ನಾಚರಿಸಿ, ಓಂಕಾರೇಶ್ವರನನ್ನು ಅರ್ಚಿಸಬೇಕು. ||೨೮||

ಎಲೌ, ಸುಮುಖಿಯೇ! ಪಾರ್ವತಿಯೇ! ಕಾಶಿಯಲ್ಲಿ, ತ್ರಿಲೋಚನವೆಂಬ ಹೆಸರುಳ್ಳ ಇನ್ನೊಂದು ಕ್ಷೇತ್ರವಿರುವುದು. ಅದು ನನ್ನ ವಿಹಾರಭೂಮಿಯಾಗಿರುವುದು. ||೨೯||

ಅದರ ಕೋಟೆಗಳು, ಮತ್ತು ಗೋಪುರಗಳ ಅಗ್ರಭಾಗಗಳು, ಸುವರ್ಣದಿಂದ ನಿರ್ಮಿಸಲ್ಪಟ್ಟಿರುವುವು. ಆ ಕ್ಷೇತ್ರದಲ್ಲಿ ಕಿನ್ನರರೂ, ದೇವತೆಗಳೂ ಮತ್ತು ಗಂಧರ್ವರೂ, ನಿರಂತರವೂ ವಾಸವಾಗಿರುವರು. ||೩೦||

ಅಲ್ಲಿ ಪಿಲಿಪ್ಪಿಲವೆಂಬ ಹೆಸರುಳ್ಳ ಒಂದು ಕೊಳವಿರುವುದು. ಅದರೊಳಗೆ ಸ್ನಾನವನ್ನಾಚರಿಸಿ, ವಿಧಿವತ್ತಾಗಿ ಶ್ರಾದ್ಧಕರ್ಮವನ್ನು ನೆರವೇರಿಸಬೇಕು—||೩೧||

ಹೂವು, ಬಿಲ್ವಪತ್ರೆ, ತಿಲಾಕ್ಷತೆ, ಮುಂತಾದ ಸಾಮಗ್ರಿಗಳಿಂದ ತ್ರಿಲೋಚನೇಶ್ವರನನ್ನು ಅಲ್ಲಿ ಪೂಜಿಸಬೇಕು. ||೩೨||

ಶನಿತ್ರಯೋದಶೀ ದೇವಿ ಭವಿಷ್ಯತಿ ಯದಾ ತದಾ ।
ತಸ್ಮಿನ್ಪಿಲಿಪ್ಪಿಲೇ ಕುಂಡೇ ಸ್ನಾನಂ ಕಾರ್ಯಂ ಪ್ರಯತ್ನತಃ ॥೩೩॥

ತರ್ಪಯಿತ್ವಾ ಪಿತೄನ್ಸರ್ವಾನ್ಪ್ರದೋಷೇ ಸಮುಪಸ್ಥಿತೇ ।
ತ್ರಿಲೋಚನೇಶ್ವರಂ ಸಮ್ಯಗಭಿಷಿಚ್ಯ ಶುಭೋದಕೈಃ ॥೩೪॥

ಗಂಧೈಸ್ತಿಲಾಕ್ಷತೈಃ ಪುಷ್ಪೈರ್ಬಿಲ್ವಪತ್ರೈಶ್ಚ ಕೋಮಲೈಃ ।
ಪೂಜಯಿತ್ವಾ ವಿಧಾನೇನ ಧೂಪದೀಪಾದಿಭಿಃ ಕ್ರಮಾತ್ ॥೩೫॥

ಸವ್ಯಾಪಸವ್ಯವಿಧಾನೇನ ತತಃ ಕಾರ್ಯಂ ಪ್ರದಕ್ಷಿಣಂ ।
ಪ್ರಣಮ್ಯ ಬಹುಧಾ ಸಮ್ಯಕ್ಸ್ತುತ್ವಾ ಸ್ತೋತ್ರೈರನೇಕಧಾ ॥೩೬॥

ಸ್ವಗೃಹ್ಯೋಕ್ತಪ್ರಕಾರೇಣ ಪ್ರತಿಷ್ಠಾಪ್ಯ ಹುತಾಶನಂ ।
ಪರಮಾನ್ನಂ ಗೋಘೃತಂ ಚ ಸಂಪಾದ್ಯ ನವಮಾದರಾತ್ ॥೩೭॥

ತಥಾ ಬಿಲ್ವಸಮಿದ್ಬಿಲ್ವದಲಾನ್ಯಾನೀಯ ಸಾದರಂ ।
ಹೋಮಃ ಕಾರ್ಯಃ ಪ್ರಯತ್ನೇನ ಋತ್ವಿಗ್ಭಿಃ ಸಹ ವೈದಿಕೈಃ ॥೩೮॥

---

ದೇವಿ! ಶನಿತ್ರಯೋದಶಿಯ ದಿವಸ, ಆ ಪಿಲಿಪ್ಪಿಲ ಕುಂಡದಲ್ಲಿ ತಪ್ಪದೇ, ಸ್ನಾನವನ್ನಾಚರಿಸಬೇಕು. ॥೩೩॥

ಸ್ನಾನವಾದ ಬಳಿಕ, ಪಿತೃತರ್ಪಣವನ್ನಾಚರಿಸಿ, ಪ್ರದೋಷಕಾಲವು ಪ್ರಾಪ್ತವಾದ ತರುವಾಯ, ನಿರ್ಮಲವಾದ ಜಲದಿಂದ ತ್ರಿಲೋಚನೇಶ್ವರನಿಗೆ ಅಭಿಷೇಕ ಮಾಡಬೇಕು. ॥೩೪॥

ಗಂಧ, ತಿಲ, ಅಕ್ಷತೆ, ಪುಷ್ಪ, ಬಿಲ್ವಪತ್ರೆ, ಧೂಪದೀಪ ಇವುಗಳಿಂದ ಕ್ರಮವಾಗಿ ಪೂಜಿಸಿ ತೃಪ್ತಿಪಡಿಸಬೇಕು. ॥೩೫॥

ಅಪಸವ್ಯರೀತಿಯಿಂದಲೂ ಮತ್ತು ಸವ್ಯರೀತಿಯಿಂದಲೂ, ಪಿತೃದೇವತಾಪ್ರೀತ್ಯರ್ಥವಾಗಿ ಪ್ರದಕ್ಷಿಣೆಯನ್ನು ಮಾಡಿ, ಅನೇಕ ಬಾರಿ ಶಿವನಿಗೆ ನಮಸ್ಕರಿಸಿ, ನಾನಾಬಗೆಯ ಸ್ತೋತ್ರಗಳಿಂದ ಸ್ತುತಿಸಿ, ಸ್ವಶಾಖೋಕ್ತವಾದ ವಿಧಾನದಿಂದ ಗೃಹ್ಯಾಗ್ನಿಯನ್ನು ಸ್ಥಾಪಿಸಬೇಕು. ವೇದಾಧ್ಯಯನಸಂಪನ್ನರಾದ ಬ್ರಾಹ್ಮಣರನ್ನು ಬರಮಾಡಿ

ಮೋಕ್ಷಾರ್ಥಿಭಿಃ ಸಾರ್ಧಕೋಟಿಹೋಮಃ ಕಾರ್ಯೋ ಯಥಾವಿಧಿ
ಪುತ್ರಾರ್ಥಿಭಿಃ ಸಾರ್ಧಲಕ್ಷಹೋಮಃ ಕಾರ್ಯೋ ಯಥಾವಿಧಿ ॥೩೯॥

ವಿದ್ಯಾರ್ಥಿಭಿಸ್ತ್ರಿಲಕ್ಷಂ ತು ಹೋಮಃ ಕಾರ್ಯೋ ಯಥಾವಿಧಿ ।
ಸ್ವರ್ಗಾರ್ಥಿಭಿಸ್ತು ಕಾರ್ಯಂ ಸ್ಯಾದ್ಧೋಮೋ ಲಕ್ಷಚತುಷ್ಟಯಂ॥೪೦॥

ಏವಂ ಹುತ್ವಾ ಹವಿಃ ಸಮ್ಯಗ್ದತ್ವಾ ಚೈವಾಥದಕ್ಷಿಣಾಂ ।
ಕೃತಂ ಹೋಮಾದಿಕಂ ಸರ್ವಂ ಶಿವಾಯ ವಿನಿವೇದಯೇತ್ ॥೪೧॥

ಭೋಜನೀಯಾಸ್ತತೋ ವಿಪ್ರಾಃ ಯಥೇಚ್ಛಂ ಸ್ವಾದುಭೋಜನೈಃ ।
ಸುವಾಸಿನ್ಯೋ ಭೋಜನೀಯಾ ದೇವೀಪ್ರೀತ್ಯರ್ಥಮಾದರಾತ್॥೪೨॥

---

ಕೊಂಡು ಅವರನ್ನು ಋತ್ವಿಜರನ್ನಾಗಿ ನೇಮಿಸಿ, ಪಾಯಸ, ಹಸುವಿನ ತುಪ್ಪ, ಬಿಲ್ವ ವೃಕ್ಷದ ಸಮಿತ್ತು, ಬಿಲ್ವದಲಇವುಗಳಿಂದ ಹೋಮವನ್ನಾಚರಿಸಬೇಕು.॥೩೬-೩೭-೩೮॥

ಮೋಕ್ಷವನ್ನು ಬಯಸುವವರು. ಒಂದೂವರೆಕೋಟಿ ಹೋಮಗಳನ್ನು ಅಲ್ಲಿ ನೆರವೇರಿಸಬೇಕು. ಪುತ್ರಸಂತತಿಯನ್ನು ಬಯಸುವವರು ಒಂದೂವರೆಲಕ್ಷ ಹೋಮಗಳನ್ನಾಚರಿಸಬೇಕು. ॥೩೯॥

ವಿದ್ಯೆಯನ್ನಪೇಕ್ಷಿಸುವವರು, ಮೂರು ಲಕ್ಷ ಹೋಮಗಳನ್ನೂ, ಸ್ವರ್ಗಲೋಕವನ್ನು ಬಯಸುವವರು, ನಾಲ್ಕು ಲಕ್ಷ ಹೋಮಗಳನ್ನು ನಡೆಸಬೇಕು. ॥೪೦॥

ಈರೀತಿಯಲ್ಲಿ ಆಯಾ ಫಲಗಳನ್ನಪೇಕ್ಷಿಸುವವರು, ಆಯಾ ಫಲಗಳನ್ನುದ್ದೇಶಿಸಿ ಸಂಕಲ್ಪವನ್ನು ಮಾಡಿ, ಹಿಂದೆ ಹೇಳಿದ ಹೋಮದ್ರವ್ಯಗಳಿಂದ ಹೋಮವನ್ನು ನೆರವೇರಿಸಿ, ಋತ್ವಿಜರಿಗೆ ದಕ್ಷಿಣೆಯನ್ನು ಕೊಟ್ಟು, ತಾನು ನೆರವೇರಿಸಿದ ಹೋಮವನ್ನು ಶಿವನಿಗೆ ಅರ್ಪಿಸಬೇಕು. ॥೪೧॥

ಬಳಿಕ, ಬ್ರಾಹ್ಮಣರಿಗೆ, ರುಚಿಕರವಾದ ಪಕ್ವಾನ್ನಗಳನ್ನು ಉಣಬಡಿಸಿ, ತೃಪ್ತಿಪಡಿಸಬೇಕು. ದೇವಿಯು ಸುಪ್ರೀತಳಾಗುವುದಕ್ಕೋಸ್ಕರ ಸುವಾಸಿನಿಯರಿಗೆ ಭೋಜನವನ್ನು ಮಾಡಿಸಬೇಕು. ॥೪೨॥

---

ಟಿ.—ದೇವರ ಬಲಪಾರ್ಶ್ವದಿಂದ ಬಳಸಿಕೊಂಡು ಬರುವುದಕ್ಕೆ ಸವ್ಯಪ್ರದಕ್ಷಿಣೆಯೆಂತಲೂ, ಎಡಪಾರ್ಶ್ವದಿಂದ ಮಾಡುವ ಪ್ರದಕ್ಷಿಣೆಗೆ ಅಪಸವ್ಯಪ್ರದಕ್ಷಿಣೆಯೆಂದೂ ಹೆಸರು.

ವಿಧ್ಯುಕ್ತೇನ ಪ್ರಕಾರೇಣ ಕೃತಹೋಮಾದಿನಾ ಶಿವಃ ।
ಪ್ರೀತೋಽಭೀಷ್ಟಂ ಯಥಾಯೋಗಂ ಪ್ರಯಚ್ಛತಿ ನ ಸಂಶಯಃ॥೪೩॥

ಶನಿತ್ರಯೋದಶೀಂ ಪ್ರಾಪ್ಯ ಕಾಶೀಂ ಸ್ಥಿತ್ವಾ ತ್ರಿಲೋಚನಂ ।
ಯೋ ನಾರ್ಚಯತಿ ಮೂಢಾತ್ಮಾ ಸ ಭವತ್ಯಘಸಂಶ್ರಯಃ ॥೪೪॥

ಉಪೋಷ್ಯ ಸಾಯಮನಘೈಃ ಸ್ನಾತ್ವಾ ತತ್ರ ತ್ರಿಲೋಚನಃ ।
ಶನಿಯುಕ್ತತ್ರಯೋದಶ್ಯಾಂ ಪೂಜನೀಯಃ ಪ್ರಯತ್ನತಃ ॥೪೫॥

ಪುರಾ ಕಶ್ಚಿದ್ದ್ವಿಜಶಿಶುರ್ದರಿದ್ರೋ ವ್ಯಾಧಿಪೀಡಿತಃ ।
ಶನಿತ್ರಯೋದಶೀಂ ಪ್ರಾಪ್ಯ ಚಕಾರೋಪೋಷಣಂ ಮುದಾ ॥೪೬॥

ತತಃ ಪಿಲಿಪ್ಪಿಲಾಕುಂಡೇ ಸ್ನಾತ್ವಾ ಬಿಲ್ವದಲೈರ್ಜಲೈಃ ।
ಪೂಜಾಂ ಕೃತ್ವಾ ಪ್ರಣಮ್ಯಾಥ ನನರ್ತ ಚ ಪುನಃ ಪುನಃ ॥೪೭॥

---

ಶಾಸ್ತ್ರೋಕ್ತವಾದ ರೀತಿಯಿಂದ ನೆರವೇರಿಸಿದ ಹೋಮದಿಂದ, ಶಿವನು ಸುಪ್ರೀತನಾಗಿ ಅವರವರ ಅಭೀಷ್ಟವನ್ನು ಪೂರಯಿಸುವನು. ಇದರಲ್ಲಿ ಸಂಶಯ ಪಡಬೇಕಾದುದಿಲ್ಲ. ||೪೩||

ಯಾವ ಮನುಷ್ಯನು ಕಾಶೀಕ್ಷೇತ್ರದಲ್ಲಿದ್ದು, ದೈವಯೋಗದಿಂದ, ಶನಿತ್ರಯೋದಶಿಯು ಬರಲು ಆ ದಿನ ತ್ರಿಲೋಚನೇಶ್ವರನನ್ನು ಆರಾಧಿಸುವುದಿಲ್ಲವೋ, ಅಜ್ಞಾನಿಯಾದ ಅವನು ಮಹಾಪಾಪಿಯಾಗುವನು. ||೪೪||

ಶನಿತ್ರಯೋದಶಿಯ ದಿವಸ ಸಾಯಂಕಾಲದವರೆಗೂ ಉಪವಾಸ ವ್ರತವನ್ನು ಕೈಗೊಂಡು ಸಾಯಂಕಾಲದಲ್ಲಿ ಸ್ನಾನವನ್ನಾಚರಿಸಿ ತಪ್ಪದೇ ತ್ರಿಲೋಚನೇಶ್ವರನನ್ನು ಪೂಜಿಸಬೇಕು. ||೪೫||

ಹಿಂದೆ ದರಿದ್ರನಾದ ಒಬ್ಬಾನೊಬ್ಬ ಬ್ರಾಹ್ಮಣಕುಮಾರನಿದ್ದನು. ಅವನು ರೋಗದಿಂದ ಪೀಡಿತನಾಗಿದ್ದನು. ಒಂದುದಿನ, ಅವನು ಶನಿತ್ರಯೋದಶೀತಿಥಿಯು ಬರಲು ಆ ದಿನ ಸಾಯಂಕಾಲದವರೆಗೂ ಉಪವಾಸದಿಂದಿದ್ದನು. ||೪೬||

ಬಳಿಕ, ಪಿಲಿಪ್ಪಿಲಾ ಕುಂಡದಲ್ಲಿ ಸ್ನಾನವನ್ನಾಚರಿಸಿ, ಬಿಲ್ವದಲ, ನೀರು, ಇವುಗಳಿಂದ ತ್ರಿಲೋಚನೇಶ್ವರನನ್ನು ಪೂಜಿಸಿ ಭಕ್ತಿಯಿಂದ ನಮಸ್ಕರಿಸಿ ಪುನಃಪುನಃ ನೃತ್ಯವನ್ನಭಿನಯಿಸಿದನು. ||೪೭||

ತತಃ ಪರ್ಣಕುಟೀಂ ಪ್ರಾಪ್ಯ ನಿದ್ರಾಂ ಚಕ್ರೇ ಸ ಬಾಲಕಃ ।
ತ್ರಿಲೋಚನೋಽಪಿ ಸಂತುಷ್ಟಸ್ತದ್ಬಾಲಕೃತಪೂಜನಾತ್ ॥೪೮॥

ಸರ್ವಾಭರಣಸಂಪನ್ನೋ ದಿವ್ಯಮಂಗಲವಿಗ್ರಹಃ ।
ಪ್ರತ್ಯಕ್ಷೋಽಭೂತ್ಕೃಪಾಸಿಂಧುಸ್ತಮುವಾಚ ದ್ವಿಜಾರ್ಭಕಂ ॥೪೯॥

ಪ್ರೀತೋಽಸ್ಮಿ ಪೂಜನಾದತ್ರ ವರಂ ವೃಣು ತವೇಪ್ಸಿತಂ ।
ವರದೋಽಹಂ ವರಂ ದಾಸ್ಯೇ ಮಾಭೈಷೀರ್ಧೈರ್ಯಮಾವಹ ॥೫೦॥

ಇತ್ಯುಕ್ತೋ ಬಾಲಕಃ ಶೀಘ್ರಂ ಯಯಾಚೇ ವರಮುತ್ತಮಂ ।
ದೇವ ದೇಹಿ ಮಮಾನಂದಮವಿಚ್ಛಿನ್ನಮನಾಮಯಂ ॥೫೧॥

ಜನ್ಮಾದಿದುಃಖಂ ಶಮಯ ಗರ್ಭವಾಸಂ ವಿನಾಶಯ ।
ದೇಹಿ ಮುಕ್ತಿಂ ಕೃಪಾಸಿಂಧೋ ತ್ರಿಲೋಚನ ಜಗತ್ಪ್ರಭೋ ॥೫೨॥

---

ಆದಾದ ಬಳಿಕ, ಆ ಬಾಲಕನು ತನ್ನ ಪರ್ಣಶಾಲೆಗೆ ಹೋಗಿ ನಿದ್ರಿಸಿದನು. ತ್ರಿಲೋಚನೇಶ್ವರನೂ ಸಹ ಆ ಬಾಲಕನಾಚರಿಸಿದ ಪೂಜೆಯಿಂದ ಸಂತೋಷ ಹೊಂದಿದನು. ತರುವಾಯ ದಯಾಸಾಗರನಾದ ಅವನು ಸಕಲ ಆಭರಣಗಳನ್ನೂ ಧರಿಸಿ, ದಿವ್ಯವಾದ ಶರೀರದಿಂದ ಬಾಲಕನಿಗೆ ಕಾಣಿಸಿಕೊಂಡು ಬಾಲಕನನ್ನು ಕುರಿತು ಹೀಗೆಂದನು. ||೪೮-೪೯||

ಎಲೈ ಬಾಲಕನೇ ! ನಿನ್ನ ಪೂಜೆಯಿಂದ ನಾನು ಸುಪ್ರೀತನಾಗಿರುವೆನು. ನಿನ್ನ ಇಷ್ಟಾರ್ಥವನ್ನು ಕೇಳಿಕೋ. ನಾನು ಭಕ್ತರಿಗೆ ವರವನ್ನು ಕೊಡುವವನಾದುದರಿಂದ ನಿನಗೂ ವರವನ್ನು ಕೊಡುವೆನು, ಹೆದರಬೇಡ. ಧೀರನಾಗು ! ||೫೦||

ಶಿವನು ಹೀಗೆನ್ನಲು, ಆ ಬಾಲಕನು ಆ ಕೂಡಲೇ ಹೀಗೆ ಶ್ರೇಷ್ಠವಾದ ವರವನ್ನು ಬೇಡಿದನು. ಓ, ದೇವನೇ ! ನನಗೆ ನಿರತಿಶಯವೂ, ಶಾಶ್ವತವೂ ಆದ ಆನಂದವನ್ನು ದಯಪಾಲಿಸು. ||೫೧||

ಓ ! ದಯಾಸಾಗರನೇ ! ಜಗದೊಡೆಯನೇ ! ಜನ್ಮಜರಾಮರಣಗಳಿಂದುಂಟಾಗುವ ದುಃಖವನ್ನು ಹೋಗಲಾಡಿಸು. ಗರ್ಭವಾಸವು ಮತ್ತೆ ಸಂಭವಿಸದಂತೆ ಮಾಡು. ಮುಕ್ತಿಯನ್ನು ದಯಪಾಲಿಸು ! ||೫೨||

**ಇತ್ಯುಕ್ತ್ವಾ ಪ್ರಣಿಪತ್ಯೇಶಂ ದೇವದೇವಂ ಮುಹುರ್ಮುಹುಃ ।**
**ಕೃತಾಂಜಲಿಪುಟೋ ಭೂತ್ವಾ ನಿವಸನ್ನತಕಂಧರಃ ॥೫೩॥**

**ತತಸ್ತಸ್ಮೈ ಮಹಾದೇವಃ ಕೃಪಾಬ್ಧಿರ್ಭಕ್ತವತ್ಸಲಃ ।**
**ಗಾಣಾಪತ್ಯಂ ದದೌ ಪ್ರೀತ್ಯಾ ಸ ಏವಾಹಂ ತ್ರಿಲೋಚನಃ ॥೫೪॥**

**ಕೃತ್ತಿವಾಸೇಶ್ವರಂ ನಾಮ ಕ್ಷೇತ್ರಮಸ್ತ್ಯೇಕಮುತ್ತಮಂ ।**
**ತತ್ರಾಪಿ ಬಿಲ್ವತರವಸ್ತಿಷ್ಠಂತಿ ನವಪಲ್ಲವಾಃ ॥೫೫॥**

**ತತ್ರಾಪಿ ಮುನಯಃ ಶಾಂತಾ ನಿರಾಹಾರಾ ಜಿತೇಂದ್ರಿಯಾಃ ।**
**ತಿಷ್ಠಂತ್ಯತ್ಯಂತಸಂತುಷ್ಟಾಃ ಶಿವಧ್ಯಾನಪರಾಯಣಾಃ ॥೫೬॥**

**ಅಧೋಮುಖಾ ಧೂಮಪಾನಂ ಕೇಚಿತ್ಕುರ್ವಂತಿ ಸಾದರಂ ।**
**ಕೇಚಿದೇಕಾಂಘ್ರಿಣಾ ಸ್ಥಿತ್ವಾ ತಪಃ ಕುರ್ವಂತ್ಯನಾಕುಲಾಃ ॥೫೭॥**

---

ಹೀಗೆಂದು ಹೇಳಿ, ಆ ಬಾಲಕನು ಶಿವನಿಗೆ ನಮಸ್ಕರಿಸಿ ಅಂಜಲಿಬದ್ಧನಾಗಿ ಶಿರಸ್ಸನ್ನು ತಗ್ಗಿಸಿ ಶಿವನ ಮುಂದೆ ನಿಂತನು. ॥೫೩॥

ಬಳಿಕ, ಭಕ್ತವತ್ಸಲನೂ ದಯಾಸಾಗರನೂ ಆದ ಶಿವನು ಆ ಬಾಲಕನನ್ನು ಪ್ರಮಥಗಣಗಳಿಗೆ ಒಡೆಯನಾಗೆಂದು ಅನುಗ್ರಹಿಸಿದನು. ಎಲೌ ದೇವಿಯೇ, ಆ ತ್ರಿಲೋಚನನೇ ನಾನಾಗಿರುವೆನು. ॥೫೪॥

ದೇವಿ, ಕೃತ್ತಿವಾಸೇಶ್ವರನೆಂಬ ಹೆಸರಿನಿಂದ ಪ್ರಸಿದ್ಧವಾದ ಇನ್ನೊಂದು ಕ್ಷೇತ್ರವಿರುವುದು. ಅಲ್ಲಿಯೂ ಹೊಸದಾದ ಚಿಗುರುಗಳಿಂದ ಶೋಭಿಸುತ್ತಿರುವ ಅನೇಕ ಬಿಲ್ವವೃಕ್ಷಗಳಿರುವುವು. ॥೫೫॥

ಆ ಕ್ಷೇತ್ರದಲ್ಲಿಯೂ ಸಹ ಶಾಂತರೂ, ನಿರಾಹಾರಿಗಳೂ, ಜಿತೇಂದ್ರಿಯರೂ ಆದ ಅನೇಕ ಮುನಿಗಳು ಶಿವಧ್ಯಾನದಲ್ಲಿಯೇ ಆಸಕ್ತರಾಗಿ ಸಂತೋಷದಿಂದಿರುವರು. ॥೫೬॥

ಕೆಲವರು ಅಧೋಮುಖರಾಗಿ ನಿಂತು, ಧೂಮಪಾನವನ್ನು ಮಾಡುತ್ತಿರುವರು. ಇನ್ನು ಕೆಲವರು ಒಂದೇ ಹೆಜ್ಜೆಯನ್ನು ಭೂಮಿಯ ಮೇಲೂರಿ ತಪಸ್ಸನ್ನಾಚರಿಸುತ್ತಿರುವರು. ॥೫೭॥

ಕೇಚಿದಭ್ಯರ್ಚ್ಯ ಮಾಮೀಶಂ ನೃತ್ಯಂ ಕುರ್ವಂತಿ ಯತ್ನತಃ ।
ಕೇಚಿಲ್ಲಿಂಗಾರ್ಚನಂ ಕೃತ್ವಾ ಪ್ರಣಮಂತಿ ಪುನಃ ಪುನಃ ॥೫೮॥

ಕೇಚಿನ್ಮಾಂ ಹೃದಿ ಸಂಸ್ಥಾಪ್ಯ ಧ್ಯಾನಂ ಕುರ್ವಂತಿ ಸಾದರಂ ।
ಕೇಚಿದ್ಗಾಯಂತಿ ಸತತಂ ಶಿವನಾಮಾನಿ ಪಾವನಾಃ ॥೫೯॥

ತತ್ರಾಪಿ ಕುಂಡಮಸ್ತ್ಯೇಕಂ ಕೃತ್ತಿವಾಸೇಶಸನ್ನಿಧೌ ।
ಸ್ನಾನಂ ಪ್ರಯತ್ನತಃ ಕಾರ್ಯಂ ತಸ್ಮಿನ್ಕುಂಡೇ ಶುಭಾವಹೇ ॥೬೦॥

ತತ್ರ ಸ್ನಾತ್ವಾ ವಿಧಾನೇನ ಕೃತ್ತಿವಾಸಂ ಸಮರ್ಚಯೇತ್ ।
ತತ್ತು ಮೋಕ್ಷಪ್ರದಂ ಲಿಂಗಂ ದರ್ಶನಾದಘನಾಶನಂ ॥೬೧॥

ಮುಕ್ತಿಕಾಮೈರ್ಮುನೀಂದ್ರೈಸ್ತು ಸರ್ವದಾ ಸೇವಿತಂ ಮುದಾ ।
ಮುನಿಭಿಃ ಸಂಸ್ತುತಂ ನಿತ್ಯಂ ಸ್ತುತಂ ದೇವೈಶ್ಚ ಸರ್ವದಾ ॥೬೨॥

---

ಕೆಲವರು ಜಗತ್ಪ್ರಭುವಾದ ನನ್ನನ್ನು ಪೂಜಿಸಿ ನರ್ತಿಸುವರು. ಮತ್ತೆ ಕೆಲವರು ಶಿವಲಿಂಗವನ್ನು ಆರಾಧಿಸಿ ಬಾರಿಬಾರಿಗೂ ನನಗೆ ನಮಸ್ಕರಿಸುವರು.॥೫೮॥

ಕೆಲವರು ನನ್ನನ್ನು ತಮ್ಮ ಹೃದಯದಲ್ಲಿರಿಸಿ ಧ್ಯಾನಿಸುವರು. ಇನ್ನು ಕೆಲವರು ಪರಿಶುದ್ಧರಾಗಿ ನಿರಂತರವೂ ಶಿವನಾಮಗಳನ್ನೇ ಹಾಡುತ್ತಿರುವರು. ॥೫೯॥

ಆ ಕೃತ್ತಿವಾಸೇಶ್ವರನ ಸನ್ನಿಧಿಯಲ್ಲಿಯೂ ಒಂದು ಕುಂಡವಿರುವುದು ಆ ಕುಂಡದಲ್ಲಿ ತಪ್ಪದೇ ಸ್ನಾನವನ್ನಾಚರಿಸಬೇಕು. ॥೬೦॥

ಅಲ್ಲಿ ವಿಧಿವತ್ತಾಗಿ ಸ್ನಾನಮಾಡಿ, ಕೃತ್ತಿವಾಸೇಶ್ವರಲಿಂಗವನ್ನು ಅರ್ಚಿಸಬೇಕು. ಆ ಲಿಂಗವು ಮೋಕ್ಷವನ್ನು ದಯಪಾಲಿಸುವುದಾಗಿರುತ್ತದೆ. ಅದರ ದರ್ಶನಮಾತ್ರದಿಂದಲೇ ಪಾಪಗಳು ಕ್ಷಯಿಸುವುವು. ॥೬೧॥

ಮೋಕ್ಷವನ್ನು ಬಯಸುವ ಅನೇಕ ಮುನಿಶ್ರೇಷ್ಠರು, ಆ ಲಿಂಗವನ್ನು ನಿರಂತರವೂ, ಅರ್ಚಿಸುತ್ತಿರುವರು. ದೇವತೆಗಳು, ಅದನ್ನು ಅನವರತವೂ ಸ್ತುತಿಸುತ್ತಿರುವರು. ॥೬೨॥

ಮಾಘಕೃಷ್ಣಚತುರ್ದಶ್ಯಾಮುಪೋಷ್ಯ ನಿಯತೇಂದ್ರಿಯಃ ।
ತತ್ರ ಜಾಗರಣಂ ಕಾರ್ಯಂ ಕೃತ್ತಿವಾಸೇಶಸನ್ನಿಧೌ ॥೬೩॥

ಪ್ರತಿಯಾಮೇ ಯಥಾಯೋಗಂ ಪೂಜಾ ಕಾರ್ಯಾ ಪ್ರಯತ್ನತಃ ।
ದೀಪಪ್ರದಾನಂ ಕರ್ತವ್ಯಂ ಗೋಘೃತೇನ ಮನೋಹರಂ ॥೬೪॥

ನವಬಿಲ್ವದಲೈಃ ಶುದ್ಧೈಃ ಪೂಜಾ ಕಾರ್ಯಾ ವಿಶೇಷತಃ ।
ಉಪೋಷ್ಯಾತ್ರಾಪ್ರಮಾದೇನ ಲಿಂಗಪೂಜಾಪರಾಯಣೈಃ ॥೬೫॥

ಸರ್ವಘೋರಾಘಶಾಂತ್ಯರ್ಥಂ ಕೋಟಿಜನ್ಮತಪೋಽಧಿಕಂ ।
ಸಮ್ಯಗ್ಜಾಗರಣಂ ಕಾರ್ಯಂ ತದ್ದಿನೇ ಸಮುಪಸ್ಥಿತೇ ॥೬೬॥

ಶಿವರಾತ್ರಿವ್ರತಂ ಯಸ್ತು ಮೋಹೇನ ನ ಕರಿಷ್ಯತಿ ।
ಸ ಧರ್ಮಪ್ರಚ್ಯುತೋ ನಿತ್ಯಂ ನರಕೇ ನಿವಸಿಷ್ಯತಿ ॥೬೭॥

---

ಮಾಘ ಬಹುಳ ಚತುರ್ದಶಿಯ ದಿವಸ, ಜಿತೇಂದ್ರಿಯನಾಗಿ, ಉಪವಾಸದಿಂದಿದ್ದು, ಕೃತ್ತಿವಾಸೇಶ್ವರನ ಸನ್ನಿಧಿಯಲ್ಲಿ ಜಾಗರಣವನ್ನು ಮಾಡಬೇಕು. ||೬೩||

ಪ್ರತಿಯೊಂದು ಯಾಮದಲ್ಲಿಯೂ, ಯಥಾವಿಧಿ ಶ್ರದ್ಧೆಯಿಂದ, ಶಿವಲಿಂಗವನ್ನು ಪೂಜಿಸಬೇಕು. ಹಸುವಿನ ತುಪ್ಪದಿಂದುರಿಸಿದ ದೀಪವನ್ನು ಶಿವನಿಗೆ ಅರ್ಪಿಸಬೇಕು. ||೬೪||

ಮುಖ್ಯವಾಗಿ, ಈಶ್ವರಲಿಂಗಪೂಜೆಯಲ್ಲಿ ಶ್ರದ್ಧೆಯಿರುವವರು, ಆದಿದ ತಪ್ಪದೇ ಉಪವಾಸದಿಂದಿದ್ದು ಹೊಸದಾದ ಮತ್ತು ನಿರ್ಮಲವಾದ ಬಿಲ್ವಪತ್ರೆಗಳಿಂದ ಪೂಜೆಯನ್ನಾಚರಿಸಬೇಕು. ||೬೫||

ಮಾಘ ಬಹುಳ ಚತುರ್ದಶಿಯು ಪ್ರಾಪ್ತವಾಗಲು, ಧ್ಯಾನಾದಿಗಳಿಂದ ಜಾಗರಣವನ್ನು ಮಾಡಬೇಕು. ಆದರಿಂದ, ಭಯಂಕರವಾದ ಸಕಲ ಪಾಪಗಳೂ ಕ್ಷಯಿಸುವುವಲ್ಲದೇ, ಕೋಟಿ ಜನ್ಮಗಳಲ್ಲಿ ಆಚರಿಸಿದ ತಪಸ್ಸಿಗಿಂತಲೂ ಹೆಚ್ಚಾದ ಫಲವು ದೊರಕುವುದು. ||೬೬||

ಯಾವನು, ಅಜ್ಞಾನದಿಂದ ಶಿವರಾತ್ರಿ ವ್ರತವನ್ನಾಚರಿಸುವುದಿಲ್ಲವೋ, ಅವನು ಧರ್ಮಬಾಹಿರನಾಗಿ, ಯಾವಾಗಲೂ ನರಕದಲ್ಲಿಯೇ ವಾಸಮಾಡುವನು. ||೬೭||

ಪುರಾ ಹಿಮಾಲಯಪ್ರಾಂತೇ ಕಶ್ಚಿದಾಸೀನ್ನರಾಧಿಪಃ ।
ತೇನ ರಮ್ಯಾಃ ಶಿವಕಥಾಃ ಶ್ರುತಾಃ ಸರ್ವಾ ಮನೋಹರಾಃ ॥೬೮॥

ಶಿವರಾತ್ರಿವ್ರತಸ್ಯಾಸ್ಯ ಮಾಹಾತ್ಮ್ಯಂ ಶ್ರುತಮೇಕದಾ ।
ತತ್ರೈವ ಕೃತ್ತಿವಾಸೇಶಮಾಹಾತ್ಮ್ಯಮಪಿ ಸಂಶ್ರುತಂ ॥೬೯॥

ತತಃ ಕಾಶೀಪ್ರಯಾಣಾರ್ಥಮುದ್ಯುಕ್ತೋಽಭೂನ್ನರಾಧಿಪಃ ।
ತತೋ ವಿಘ್ನೋ ಮಹಾನಾಸೀತ್ತದ್ಯಾತ್ರಾ ಪ್ರತಿಬಂಧಕಃ ॥೭೦॥

ತತೋ ವಿಘ್ನವಿನಾಶಾರ್ಥಂ ಸ ರಾಜಾ ದೃಢನಿಶ್ಚಯಃ ।
ತಪಃ ಕರ್ತುಂ ಸಮಾರೇಭೇ ತತ್ರೈವ ಗಿರಿಶಾಲಯೇ ॥೭೧॥

ಜ್ವಲತ್ಪಂಚಾಗ್ನಿಮಧ್ಯಸ್ಥೋ ನಿರಾಹಾರೋ ಜಿತೇಂದ್ರಿಯಃ ।
ಶಿವಲಿಂಗಾರ್ಚನಂ ಕುರ್ವನ್ನಕಾರೋಗ್ರಂ ತಪೋ ನೃಪಃ ॥೭೨॥

---

ಹಿಂದೆ, ಹಿಮವತ್ಪರ್ವತದ ಸಮೀಪದಲ್ಲಿ ಒಬ್ಬ ರಾಜನಿದ್ದನು. ಅವನು, ಶಿವನ ಸಂಬಂಧವಾದ ಕಥೆಗಳನ್ನೆಲ್ಲಾ ಸಂಪೂರ್ಣವಾಗಿ ಕೇಳಿದ್ದನು. ॥೬೮॥

ಒಂದಾನೊಂದು ದಿನ, ಅವನು ಶಿವರಾತ್ರಿವ್ರತದ ಮಹಿಮೆಯನ್ನು ಕೇಳುವಾಗ, ಆ ಕಥೆಯಲ್ಲಿಯೇ ಕೃತ್ತಿವಾಸೇಶ್ವರನ ಮಹಿಮೆಯನ್ನೂ ಸಹ ತಿಳಿದನು. ॥೬೯॥

ಬಳಿಕ, ಆ ರಾಜನು ಕಾಶೀಕ್ಷೇತ್ರಕ್ಕೆ ಹೋಗಲು ಸಿದ್ಧನಾದನು. ಆದರೆ, ಯಾತ್ರೆಯನ್ನು ತಡೆಗಟ್ಟುವಂತಹ ಒಂದು ವಿಘ್ನವು ಸಂಭವಿಸಿತು. ॥೭೦॥

ತರುವಾಯ, ಆ ರಾಜನು ತನಗೆ ಸಂಭವಿಸಿದ, ಪ್ರಬಲವಾದ ಆ ವಿಘ್ನವನ್ನು ಹೋಗಲಾಡಿಸುವುದಕ್ಕೋಸ್ಕರ ಬದ್ಧಕಂಕಣನಾಗಿ ಅಲ್ಲಿಯೇ ಇದ್ದ ಈಶ್ವರದೇವಾಲಯದಲ್ಲಿ, ತಪಸ್ಸನ್ನಾಚರಿಸಲಾರಂಭಿಸಿದನು. ॥೭೧॥

ಅವನು, ಇಂದ್ರಿಯಗಳನ್ನು ನಿಗ್ರಹಿಸಿ, ನಿರಾಹಾರವ್ರತವನ್ನು ಕೈಗೊಂಡು, ಪಂಚಾಗ್ನಿಗಳ ನಡುವೆ ನಿಂತು, ಘೋರವಾದ ತಪಸ್ಸನ್ನಾಚರಿಸಿದನು. ॥೭೨॥

ಸ ಲಕ್ಷಯುಗಪರ್ಯಂತಂ ಕೃತ್ವಾ ಘೋರತರಂ ತಪಃ ।
ತತೋ ದುಃಖೇನ ಸಂತಪ್ತಸ್ತ್ಯಕ್ತ್ವಾ ನಿರ್ವಿಣ್ಣಮಾನಸಃ ॥೭೩॥

ರುರೋದೋಚ್ಚೈರಿತಿ ಕ್ಲಿನ್ನಃ ಶಿರಃ ಸಂತಾಡ್ಯ ಪಾಣಿನಾ ।
ಪಾಷಾಣಮಪಿ ಸಂಗೃಹ್ಯ ತಾಡಯನ್ನುರಸಃಸ್ಥಲಂ ॥೭೪॥

ಕಥಂ ಕಾಶೀ ಮಯಾ ಪ್ರಾಪ್ಯಾ ದ್ರಕ್ಷ್ಯೇ ವಿಶ್ವೇಶ್ವರಂ ಕಥಂ ।
ಕೃತ್ತಿವಾಸೇಶಲಿಂಗಂ ಚ ಕಥಂ ದ್ರಕ್ಷ್ಯಮತಃ ಪರಂ ॥೭೫॥

ಪ್ರಾಯಃ ಪರ್ವತಸಂಕಾಶಾನ್ಯಪಿ ಘೋರಾಣಿ ಸಂತಿ ಮೇ ।
ಪಾತಕಾನಿ ಬಹೂನ್ಯೇವ ಕಿಂ ಕರ್ತವ್ಯಮತಃ ಪರಂ ॥೭೬॥

ಇತಿ ಕೃತ್ವಾ ಮಹದ್ದುಃಖಂ ತಪಶ್ಚಕ್ರೇ ಪುನರ್ನೃಪಃ ।
ಸಹಸ್ರಯುಗಪರ್ಯಂತಂ ಜಲಮಧ್ಯಗತಸ್ತದಾ ॥೭೭॥

ತತಃ ಕದಾಚಿತ್ತದ್ಧೈರ್ಯಂ ದ್ರಷ್ಟುಕಾಮಶ್ಚತುರ್ಮುಖಃ ।
ವೃದ್ಧಬ್ರಾಹ್ಮಣರೂಪೇಣ ಗತಸ್ತನ್ನಿಕಟೇ ಶುಭೇ ॥೭೮॥

---

ಈರೀತಿಯಲ್ಲಿ ಅವನು, ಲಕ್ಷಯುಗಗಳು ಕಳೆಯುವವರೆಗೆ ಭಯಂಕರವಾದ ತಪಸ್ಸನ್ನಾಚರಿಸಿ ಅದು ಫಲಿಸದಿರಲು, ಅತ್ಯಂತ ದುಃಖಿತನಾಗಿ, ಕೈಗಳಿಂದ ತಲೆಯನ್ನು ಚಚ್ಚಿಕೊಳ್ಳುತ್ತಾ, ಕಲ್ಲಿನಿಂದ ಎದೆಯನ್ನು ಹೊಡೆದುಕೊಳ್ಳುತ್ತಾ ಗಟ್ಟಿಯಾಗಿ ಅತ್ತನು. ಮತ್ತು ದುಃಖದಿಂದ ಹೀಗೆಂದನು. ॥೭೩-೭೪॥

"ನಾನು ಕಾಶೀಕ್ಷೇತ್ರಕ್ಕೆ ಹೇಗೆ ಹೋಗಲಿ? ವಿಶ್ವೇಶ್ವರನನ್ನು ನೋಡುವ ಬಗೆ ಹೇಗೆ? ಹೀಗಾದರೆ ಇನ್ನು ಮುಂದೆ ಕೃತ್ತಿವಾಸೇಶಲಿಂಗವನ್ನು ತಾನೆ ಹೇಗೆ ದರ್ಶನಮಾಡುವುದು? ॥೭೫॥

ನನ್ನಲ್ಲಿ ಪ್ರಾಯಶಃ ಪರ್ವತದಂತೆ, ರಾಶಿರಾಶಿಯಾಗಿರುವ, ಭಯಂಕರವಾದ ಅನೇಕ ಪಾಪಗಳಿರಬಹುದು. ಮುಂದೇನು ಮಾಡಲಿ." ॥೭೬॥

ಈ ಪ್ರಕಾರವಾಗಿ ದುಃಖಿಸಿ ಆ ರಾಜನು, ಮತ್ತೆ ಸಹಸ್ರ ಯುಗಗಳು ಕಳೆಯುವವರೆಗೆ ನೀರಿನ ನಡುವೆ ನಿಂತು ತಪಸ್ಸನ್ನಾಚರಿಸಿದನು. ॥೭೭॥

ಪ್ರಿಯೇ! ಬಳಿಕ ಒಂದಾನೊಂದು ದಿನ, ಬ್ರಹ್ಮನು ಆ ರಾಜನ ಧೈರ್ಯವನ್ನು ಪರೀಕ್ಷಿಸಬೇಕೆಂದು ಯೋಚಿಸಿ, ವೃದ್ಧಬ್ರಾಹ್ಮಣನ ವೇಷದಿಂದ, ರಾಜನ ಸಮಿಪಕ್ಕೆ ಬಂದನು. ॥೭೮॥

ತಮಾಗತಂ ದ್ವಿಜಂ ದೃಷ್ಟ್ವಾ ಪ್ರಣಮ್ಯ ದ್ವಿಜಸತ್ತಮಂ ।
ಚಕಾರ ವಿಧಿವತ್ಪೂಜಾಮುವಾಚ ಚ ವಚಸ್ತದಾ ॥೭೯॥

ವೇದಶಾಸ್ತ್ರಾಶ್ರಯ ಶ್ರೀಮದ್ದ್ವಿಜವರ್ಯಾಘನಾಶಕ ।
ಕಾಶೀಪ್ರಾಪ್ತಿಕರಂ ಪುಣ್ಯಂ ಕಿಮಸ್ತಿ ವದ ತತ್ತ್ವತಃ ॥೮೦॥

ನೃಪೋತ್ತಮ ಶಿವಾಕಾರಾಂ ಕಾಶೀಂ ಪ್ರಾಪ್ತುಂ ನ ಶಕ್ಯತೇ ।
ಮನುಜೈಸ್ಸಾ ಕಥಂ ಪ್ರಾಪ್ಯಾ ದೇವಾನಾಮಪಿ ದುರ್ಲಭಂ ॥೮೧॥

ನಾಲ್ಪೇನ ತಪಸಾ ಪ್ರಾಪ್ಯಾ ಕಾಶೀ ವಿಶ್ವೇಶ್ವರಾಶ್ರಯಾ ।
ಬಹುಕಾಲಂ ತಪಃ ಕೇನ ಕರ್ತವ್ಯಂ ಘೋರಮುತ್ಕಟಂ ॥೮೨॥

ಕಿಂ ಚ ರಾಜ್ಞಾಮಯಂ ಧರ್ಮೋ ನ ಭವಿಷ್ಯತಿ ಸರ್ವಥಾ ।
ಕಿಂ ತು ಕರ್ತವ್ಯಮನಿಶಂ ಪ್ರಜಾನಾಂ ಪರಿಪಾಲನಂ ॥೮೩॥

---

ತನ್ನ ಬಳಿಗೆ ಬಂದ ಆ ಬ್ರಾಹ್ಮಣನನ್ನು ನೋಡಿ, ರಾಜನು ಅವನಿಗೆ ನಮಸ್ಕರಿಸಿ ವಿಧಿವತ್ತಾಗಿ ಪೂಜಿಸಿ ಅವನನ್ನು ಕುರಿತು, ॥೭೯॥

“ ಓ, ವೇದವೇದಾಂಗ ಪಾರಂಗತನಾದ ಬ್ರಾಹ್ಮಣೋತ್ತಮನೇ ! ಕಾಶೀಕ್ಷೇತ್ರವನ್ನು ಪಡೆಯಲು, ಕಾರಣವಾದ ಪುಣ್ಯಕರ್ಮವು ನಿನ್ನಲ್ಲಿ ಆದಾವುದಿರುವುದೆಂಬುದನ್ನು ನನಗೆ ಹೇಳು ! ” ಎಂದನು. ಆಗ ದ್ವಿಜನು, ॥೮೦॥

“ಎಲೈ ರಾಜೇಂದ್ರನೇ ! ಈಶ್ವರಸ್ವರೂಪವಾದ ಕಾಶೀಕ್ಷೇತ್ರವನ್ನು ಹೊಂದುವುದು ಅಸಾಧ್ಯವೇ ಸರಿ. ಅದು ದೇವತೆಗಳಿಗೂ ದುರ್ಲಭವಾಗಿರಲು ಮನುಷ್ಯರು ಅದನ್ನು ಪಡೆಯುವ ಬಗೆ ಹೇಗೆ? ॥೮೧॥

ಅಲ್ಪವಾದ ತಪಸ್ಸಿನಿಂದ, ವಿಶ್ವೇಶ್ವರನು ನೆಲಸಿರುವ ಕಾಶೀಕ್ಷೇತ್ರವನ್ನು ಸೇರಲು ಅಸಾಧ್ಯವೇ ನಿಜ. ದೀರ್ಘಕಾಲದವರೆಗೆ ಭಯಂಕರವಾದ ತಪಸ್ಸನ್ನಾದರೂ ಆಚರಿಸುವುದು ಯಾರಿಂದ ಸಾಧ್ಯ ? ॥೮೨॥

ಅಲ್ಲದೇ, ತಪೋಽನುಷ್ಠಾನವು, ರಾಜರಿಗೆ ಉಚಿತವಾದ ಧರ್ಮವಾಗಿರುವುದಿಲ್ಲ. ಹಗಲಿರುಳೂ, ಪ್ರಜಾಪರಿಪಾಲನೆಯೇ, ಅವರ ಧರ್ಮವೆನಿಸುವುದು. ॥೮೩॥

ನಿಷ್ಕಂಟಕಮಿದಂ ರಾಜ್ಯಂ ತ್ಯಕ್ತ್ವಾ ಕಿಂ ತಪ್ಯತೇ ತಪಃ ।
ಇದಾನೀಮಖಿಲಂ ರಾಜ್ಯಂ ನಷ್ಟಮೇವ ಭವಿಷ್ಯತಿ ॥೮೪॥

ಶರೀರಂ ಚಾಭವತ್ ಕ್ಷೀಣಂ ನೃಪವರ್ಯ ಮನೋಹರಂ ।
ಕಾಶೀಪ್ರಾಪ್ತಿಕರಂ ಘೋರಂ ತಪಃ ಕರ್ತುಂ ನ ಶಕ್ಯತೇ ॥೮೫॥

ಅನೇಕಜನ್ಮನಾಮಂತೇ ಕೃತ್ವಾ ಕೃತ್ವಾ ತಪೋ ಮುಹುಃ ।
ಅಂತೇ ಶಿವಪ್ರಸಾದೇನ ಸಾ ಕಾಶೀ ದೃಶ್ಯತೇ ಜನೈಃ ॥೮೬॥

ಕ್ವ ಭವಾನ್ ಕ್ವ ತಪೋ ಘೋರಂ ತಾದೃಶಂ ಶಿವತುಷ್ಟಿದಂ ।
ಕ್ವ ಮಾನುಷಮಿದಂ ರೂಪಂ ಕ್ವ ಕಾಶೀಪ್ರಾಪ್ತಿಸಾಧನಂ ॥೮೭॥

ಮೌರ್ಖ್ಯಂ ಮಾಕುರು ರಾಜೇಂದ್ರ ತ್ಯಜ ವ್ರತಮತಃ ಪರಂ ।
ಪಾಲಯಸ್ವ ಪ್ರಜಾಃ ಸರ್ವಾಃ ಧರ್ಮೇಣೈವ ಪರಂತಪ ॥೮೮॥

---

ಈಗ ನಿನ್ನ ರಾಜ್ಯವು, ನಿರುಪದ್ರವವಾಗಿರುವುದು. ಅದನ್ನು ಬಿಟ್ಟು ನೀನು, ತಪಸ್ಸನ್ನೇಕೆ ಮಾಡುವೆ? ರಾಜ್ಯಪರಿಪಾಲನೆಯನ್ನು ಬಿಟ್ಟು, ತಪೋಽನುಷ್ಠಾನದಲ್ಲಿ ನಿರತನಾಗಿದ್ದರೆ, ಈಗಲೇ ಆ ರಾಜ್ಯವು ಅರಾಜಕವಾಗುವುದಲ್ಲವೆ? ॥೮೪॥

ಈಗಲೇ, ನಿನ್ನ ಸುಂದರವಾದ ಶರೀರವು ಕೃಶವಾಗಿರುವುದು. ಹೀಗಿರುವಲ್ಲಿ, ನೀನು ಕಾಶೀಪ್ರಾಪ್ತಿಗೆ ಸಾಧನವಾದ ಉಗ್ರವಾದ ತಪಸ್ಸನ್ನು ಆಚರಿಸುವುದು ಅಸಾಧ್ಯವಲ್ಲವೆ. ॥೮೫॥

ಕಾಶೀಕ್ಷೇತ್ರವನ್ನು ನೋಡಬೇಕೆಂದು ಬಯಸುವ ಜನರು ಅನೇಕ ಜನ್ಮಗಳಲ್ಲಿ, ಪುನಃ ಪುನಃ ತಪಸ್ಸನ್ನಾಚರಿಸಿ, ಬಳಿಕ, ಶಿವನ ಅನುಗ್ರಹದಿಂದ ಕಾಶಿಯನ್ನು ನೋಡುವರು. ॥೮೬॥

ಅಲ್ಪನಾದ ನೀನೆಲ್ಲಿ! ಶಿವನನ್ನು ತೃಪ್ತಿಗೊಳಿಸುವ ಉಗ್ರವಾದ ಆ ತಪಸ್ಸೆಲ್ಲಿ? ಈ ಮನುಷ್ಯಶರೀರವೆಲ್ಲಿ! ಕಾಶೀಪ್ರಾಪ್ತಿಯ ಕಾರ್ಯವೆಲ್ಲಿ! ॥೮೭॥

ಎಲೈ, ರಾಜೇಂದ್ರನೇ! ನಿನ್ನ ಈ ಮೂರ್ಖತನವನ್ನು ಹೋಗಲಾಡಿಸು. ಕಠಿಣವಾದ ಈ ವ್ರತವನ್ನು ಬಿಡು. ಧರ್ಮಪರಾಯಣನಾಗಿ ರಾಜ್ಯವನ್ನು ಪರಿಪಾಲಿಸು."—ಎಂದು ನುಡಿದನು. ॥೮೮॥

ಇತಿ ತದ್ವಚನಂ ಶ್ರುತ್ವಾ ಧೈರ್ಯವಾನಮಿತಪ್ರಭಃ ।
ವಿಪ್ರಂ ವಿಸೃಜ್ಯ ಭೂಯೋಽಪಿ ತಪಸ್ತೇಪೇ ದುರಾಸದಂ ॥೮೯॥

ಸ ಲಕ್ಷಯುಗಪರ್ಯಂತಂ ಏಕಪಾದೇನ ಸಂಸ್ಥಿತಃ ।
ಚಕಾರ ದುಃಸಹಂ ಘೋರಂ ತಪೋ ಮತ್ಪ್ರೀತಿಸಾಧನಂ ॥೯೦॥

ತತಶ್ಚ ಮತ್ಪ್ರಸಾದೇನ ನಿವೃತ್ತಾ ವಿಘ್ನರಾಶಯಃ ।
ತತಃ ಕಾಶೀಂ ಯಯೌ ರಾಜಾ ಹೃಷ್ಟಾಂತಃಕರಣಃ ಶುಭೇ ॥೯೧॥

ತೇನ ಘೋರಂ ತಪಸ್ತಪ್ತಂ ಪೂರ್ವಪೂರ್ವಭವೇಷ್ವಪಿ ।
ಬಹುಕಾಲಂ ಪ್ರಯತ್ನೇನ ಕಾಶೀಪ್ರಾಪ್ತ್ಯರ್ಥಮಾದರಾತ್ ॥೯೨॥

ಕಾಶ್ಯಾಂ ವಿಶೇಷತೀರ್ಥೇಷು ಸ್ನಾತ್ವಾ ಪ್ರತ್ಯಹಮಾದರಾತ್ ।
ನಿತ್ಯಯಾತ್ರಾದಿಕಂ ಕೃತ್ವಾ ನ್ಯವಸನ್ನಿರ್ಜಿತೇಂದ್ರಿಯಃ ॥೯೩॥

---

ಬ್ರಾಹ್ಮಣನ ಆ ಮಾತನ್ನು ಕೇಳಿ, ಧೀರನೂ, ಅತ್ಯಂತ ಪರಾಕ್ರಮಿಯೂ ಆದ ಆ ರಾಜನು ಬ್ರಾಹ್ಮಣನನ್ನು ಅಲ್ಲಿಂದ ಹೋಗಹೇಳಿ, ಏನೂ ಹೇಳದೆ ಮತ್ತೆ ಉಗ್ರವಾದ ತಪಸ್ಸಿಗಾರಂಭಿಸಿದನು. ||೮೯||

ಅವನು ಲಕ್ಷ ಯುಗಗಳು ಕಳೆಯುವವರೆಗೆ ಒಂದೇ ಕಾಲಿನಿಂದ ನಿಂತು, ಪ್ರಾಣಿಗಳಿಗೆ ಸಹಿಸಲಸಾಧ್ಯವೂ, ಉಗ್ರವೂ, ನನಗೆ ಪ್ರೀತಿಕರವೂ ಆದ ತಪಸ್ಸನ್ನಾಚರಿಸಿದನು. ||೯೦||

ಬಳಿಕ, ನನ್ನ ಅನುಗ್ರಹದಿಂದ, ಅವನ ಸಕಲ ವಿಘ್ನಗಳೂ ದೂರವಾದುವು. ತರುವಾಯ ರಾಜನು, ಸಂತೋಷಭರಿತನಾಗಿ ಕಾಶೀಕ್ಷೇತ್ರಕ್ಕೆ ಹೋದನು. ||೯೧||

ಅವನು ಕಳೆದ ಅನೇಕ ಜನ್ಮಗಳಲ್ಲಿ ಬಹುಕಾಲದವರೆಗೆ, ಕಾಶಿಯನ್ನು ಪಡೆಯುವುದಕ್ಕೋಸ್ಕರವೇ ಕಷ್ಟಪಟ್ಟು ತಪಸ್ಸನ್ನಾಚರಿಸಿದ್ದನು. ||೯೨||

ಕಾಶೀಕ್ಷೇತ್ರದಲ್ಲಿರುವ ವಿಶೇಷ ತೀರ್ಥಗಳಲ್ಲಿ, ಸ್ನಾನವನ್ನಾಚರಿಸಿ ಜಿತೇಂದ್ರಿಯನಾಗಿ ಪ್ರತಿದಿನವೂ, ತನ್ನ ನಿತ್ಯಕರ್ಮಗಳನ್ನು ನೆರವೇರಿಸುತ್ತಾ ಸುಖದಿಂದ ವಾಸವಾಗಿದ್ದನು. ||೯೩||

ತತಸ್ತತ್ರೈವ ನಿವಸನ್ಮಾಘಕೃಷ್ಣ ಚತುರ್ದಶೀಂ ।
ಸಂಪ್ರಾಪ್ಯ ಪರಮಾಂ ಲೇಭೇ ಸಂತೋಷಂ ನೃಪತಿಸ್ತದಾ ॥೯೪॥

ತತಃ ಸ ನೃಪತಿಸ್ತಸ್ಮಿನ್ ಶಿವರಾತ್ರಿದಿನೇ ಶುಚಿಃ ।
ಕೃತ್ವಾ ಯಾತ್ರಾದಿಕಂ ಸರ್ವಮುಪೋಷ್ಯ ನಿಯತೋ ವ್ರತೀ ॥೯೫॥

ಪೂಜೋಪಕರಣಂ ಸರ್ವಂ ಸಂಪಾದ್ಯ ದೃಢಮಾನಸಃ ।
ಕೃತ್ತಿವಾಸೇಶ್ವರಂ ಸಮ್ಯಕ್ಸಂಪೂಜ್ಯ ವಿಧಿಪೂರ್ವಕಂ ॥೯೬॥

ಕೃಷ್ಣಗೋಘೃತದೀಪಾಂಶ್ಚ ಚಕಾರ ಸ ಮನೋಹರಾನ್ ।
ತದ್ದೀಪಪ್ರಭಯಾ ಲೋಕಾ ದೀಪಿತಾಃ ಸರ್ವ ಏವ ಹಿ ॥೯೭॥

ಸ್ತೋತ್ರಪಾಠೈಶ್ಚ ನೃತ್ಯೈಶ್ಚ ಪುರಾಣಶ್ರವಣಾದಿಭಿಃ ।
ಚಕ್ರೇ ಜಾಗರಣಂ ರಾಜಾ ಕೃತ್ತಿವಾಸೇಶಮರ್ಚಯನ್ ॥೯೮॥

ತತಸ್ತತ್ರೈವ ಪೂತಾತ್ಮಾ ಶಿವಲಿಂಗಾರ್ಚನೇ ರತಃ ।
ಪಂಚಾಗ್ನಿಮಧ್ಯದೇಶಸ್ಥಶ್ಚಕಾರೋಗ್ರಂ ತಪೋ ನೃಪಃ ॥೯೯॥

---

ಈ ಪ್ರಕಾರವಾಗಿ ರಾಜನು ಅಲ್ಲಿಯೇ ವಾಸವಾಗಿರುತ್ತಿರಲು, ಮಾಘ ಬಹುಳ ಚತುರ್ದಶಿಯು ಬಂದಿತು. ಅದರಿಂದ ರಾಜನು ಅತ್ಯಂತಸಂತೋಷಗೊಂಡನು.॥೯೪॥

ಆ ರಾಜನು ಶಿವರಾತ್ರಿಯ ದಿನದಲ್ಲಿ, ಶುಚಿರ್ಭೂತನಾಗಿ, ನಿತ್ಯಕರ್ಮಗಳನ್ನು ನೆರವೇರಿಸಿ, ಉಪವಾಸದಿಂದಿದ್ದು, ಜಿತೇಂದ್ರಿಯನಾಗಿ ಸಕಲಪೂಜಾಸಾಮಗ್ರಿಗಳನ್ನೂ ಸಂಗ್ರಹಿಸಿ, ಕೃತ್ತಿವಾಸೇಶ್ವರಲಿಂಗವನ್ನು ಭಕ್ತಿಯಿಂದ ಪೂಜಿಸಿದನು. ಕೃಷ್ಣಗೋವಿನ, ತುಪ್ಪದಿಂದ ದೀಪಗಳನ್ನುರಿಸಿದನು. ಆ ದೀಪದ ಕಾಂತಿಯಿಂದ ಸಮಸ್ತ ಲೋಕಗಳೂ ಪ್ರಕಾಶಿಸಿದುವು. ॥೯೫-೯೬-೯೭॥

ಅವನು, ರಾತ್ರಿಯೆಲ್ಲಾ ಕೃತ್ತಿವಾಸೇಶ್ವರನನ್ನು ಪೂಜಿಸುತ್ತಾ, ಸ್ತೋತ್ರಪಾಠಗಳಿಂದಲೂ, ನೃತ್ಯಗಳಿಂದಲೂ, ಪುರಾಣಶ್ರವಣಗಳಿಂದಲೂ, ಜಾಗರಣವನ್ನಾಚರಿಸಿದನು. ॥೯೮॥

ಬಳಿಕ, ಅವನು ಅಲ್ಲಿಯೇ ಪರಿಶುದ್ಧನಾಗಿ ಶಿವಲಿಂಗಾರ್ಚನೆಯಲ್ಲಿ ಆಸಕ್ತನಾಗಿ, ಪಂಚಾಗ್ನಿಗಳ ನಡುವೆ ನಿಂತು ಘೋರವಾದ ತಪಸ್ಸನ್ನಾಚರಿಸಿದನು. ॥೯೯॥

ಕಾಲೇನ ಸ ಮೃತಃ ಸೋಽಪಿ ಮಮಾಂಕೇ ಸಂನಿವೇಶಿತಃ ।
ಮಯಾ ಪಂಚಾಕ್ಷರೋ ದತ್ತೋ ಮುಕ್ತಿಮಾಪ ನೃಪೋತ್ತಮಃ ॥೧೦೦॥

ಈದೃಶಂ ಕೃತ್ತಿವಾಸಸ್ಯ ಕ್ಷೇತ್ರಂ ಸರ್ವಾರ್ಥಸಾಧಕಂ ।
ತತ್ರಾನ್ವಹಂ ಪೂಜನೀಯಃ ಕೃತ್ತಿವಾಸೇಶ್ವರೋ ಜನೈಃ ॥೧೦೧॥

ತತ್ಪ್ರಾಂತೇ ಸಂತಿ ಲಿಂಗಾನಿ ಕೋಟಿಶಃ ಕಮಲಾನನೇ ।
ತಾನ್ಯಪ್ಯೇತಾನೀದೃಶಾನಿ ಸರ್ವೇ ಮುಕ್ತಿಕರಾಣಿ ಚ ॥೧೦೨॥

ತೀರ್ಥಮಸ್ತ್ಯೇಕಮಮಲೇ ಋಣಮೋಚನನಾಮಕಂ ।
ತತ್ತೀರ್ಥಸ್ನಾನಮಾತ್ರೇಣ ಋಣೇಭ್ಯೋ ಮುಚ್ಯತೇ ಜನಃ ॥೧೦೩॥

ತತ್ರ ಶ್ರಾದ್ಧಂ ವಿಧಾನೇನ ಕರ್ತವ್ಯಂ ಯತ್ನತಃ ಶುಭೇ ।
ತೇನ ಮುಕ್ತಾ ಭವಂತ್ಯೇವ ಪಿತೄಣಾಂ ಋಣಬಂಧನಾತ್ ॥೧೦೪॥

---

ಈ ಪ್ರಕಾರವಾಗಿ, ಸ್ವಲ್ಪ ಕಾಲವು ಕಳೆಯಲು, ಆ ರಾಜನು ಅಲ್ಲಿಯೇ ಮೃತನಾದನು. ನಾನು ಅವನನ್ನು ನನ್ನ ತೊಡೆಯ ಮೇಲೆ ಕುಳ್ಳಿರಿಸಿ ಶಿವಪಂಚಾಕ್ಷರೀ ಮಂತ್ರವನ್ನುಪದೇಶಿಸಿದೆನು. ಆದರಿಂದ ಅವನು ಮುಕ್ತಿಯನ್ನು ಪಡೆದನು. ॥೧೦೦॥

ಈರೀತಿ ಕೃತ್ತಿವಾಸೇಶ್ವರನು ನೆಲಸಿರುವ ಕ್ಷೇತ್ರವು ಸಕಲ ಇಷ್ಟಾರ್ಥಗಳನ್ನೂ ನೆರವೇರಿಸುವುದಾಗಿರುತ್ತದೆ. ಜನರು ಅಲ್ಲಿ ಪ್ರತಿದಿನವೂ ಕೃತ್ತಿವಾಸೇಶ್ವರನನ್ನು ಪೂಜಿಸಬೇಕು. ॥೧೦೧॥

ಎಲೌ, ಪದ್ಮಮುಖಿಯೇ! ಆ ಕೃತ್ತಿವಾಸೇಶ್ವರ ಕ್ಷೇತ್ರದ ಸಮೀಪದಲ್ಲಿ, ಇನ್ನೂ ಅಸಂಖ್ಯಾಕವಾದ ಲಿಂಗಗಳಿರುವುವು. ಅವುಗಳೂ, ಕೃತ್ತಿವಾಸೇಶ್ವರನಂತೆಯೇ ಮಹಾಮಹಿಮೆಯಿಂದ ಕೂಡಿರುವುವು. ಮತ್ತು ಅವುಗಳ ಪೂಜೆಯಿಂದ ಮುಕ್ತಿಯು ಲಭಿಸುವುದು. ॥೧೦೨॥

ಋಣಮೋಚನವೆಂಬ ಹೆಸರುಳ್ಳ ಇನ್ನೊಂದು ಶಿವತೀರ್ಥವಿರುವುದು. ಆ ತೀರ್ಥದಲ್ಲಿ, ಸ್ನಾನವನ್ನಾಚರಿಸಿದ ಮಾತ್ರದಿಂದಲೇ ಜನರು, ದೇವಋಣ, ಪಿತೃಋಣ, ಋಷಿಋಣಗಳೆಂಬ ಋಣತ್ರಯಗಳಿಂದ ಬಿಡುಗಡೆ ಹೊಂದುವರು. ॥೧೦೩॥

ಅಲ್ಲಿ, ಶಾಸ್ತ್ರೋಕ್ತರೀತಿಯಿಂದ ಶ್ರಾದ್ಧವನ್ನು ನೆರವೇರಿಸಿದರೆ, ಎಲ್ಲರೂ ಪಿತೃಋಣದಿಂದ ಮುಕ್ತರಾಗುವರು. ॥೧೦೪॥

ಪಿಶಾಚಮೋಚನಂ ನಾಮ ತೀರ್ಥಮಸ್ತ್ಯೇಕಮುತ್ತಮಂ ।
ತತ್ರ ಸ್ನಾತ್ವಾ ಪಿಶಾಚೋಽಪಿ ಮುಚ್ಯತೇ ಸರ್ವಪಾತಕೈಃ ॥೧೦೫॥

ಶ್ರಾದ್ಧಂ ಚ ವಿಧಿವತ್ತತ್ರ ಕರ್ತವ್ಯಮತಿಯತ್ನತಃ ।
ಪಿಶಾಚಭೂತಾಃ ಸರ್ವೇಽಪಿ ಮುಚ್ಯಂತೇ ಪಿತರಸ್ತತಃ ॥೧೦೬॥

ತತ್ರಾಪಿ ಸಂತಿ ಲಿಂಗಾನಿ ಭಕ್ತಾಭೀಷ್ಟಪ್ರದಾನಿ ಚ ।
ಪೂಜನೀಯಾನಿ ಯತ್ನೇನ ಕಾಶೀಕ್ಷೇತ್ರನಿವಾಸಿಭಿಃ ॥೧೦೭॥

ತದಗ್ರೇ ಯಾತನಾಸ್ತಂಭೋ ಯೋಜನಾರ್ಬುದಮುನ್ನತಃ ।
ಜಾಜ್ವಲ್ಯಮಾನಃ ಸತತಂ ತಿಷ್ಠತ್ಯನಲಸನ್ನಿಭಃ ॥೧೦೮॥

ಕಾಶ್ಯಾಂ ತಿಷ್ಠಂತಿ ಯೇ ಮರ್ತ್ಯಾಃ ಪಾತಕಾದಪರಾಙ್ಮುಖಾಃ ।
ತಾನಗ್ನಿಶೃಂಖಲೈರ್ಬದ್ಧ್ವಾ ಪಾಚಯತ್ಯತ್ರ ಭೈರವಃ ॥೧೦೯॥

---

ಪಿಶಾಚಮೋಚನವೆಂಬ ಹೆಸರುಳ್ಳ, ಶ್ರೇಷ್ಠವಾದ ಮತ್ತೊಂದು ತೀರ್ಥವಿರುವುದು. ಅಲ್ಲಿ ಸ್ನಾನಮಾಡುವುದರಿಂದ ಪಿಶಾಚಿಯೂ ಸಹ ಸಕಲ ಪಾಪಗಳಿಂದಲೂ ಬಿಡುಗಡೆಯನ್ನು ಹೊಂದುವುದು. ॥೧೦೫॥

ಆ ತೀರ್ಥದಲ್ಲಿ, ವಿಧಿವತ್ತಾಗಿ ಪಿತೃಶ್ರಾದ್ಧವನ್ನಾಚರಿಸಬೇಕು. ಅದರಿಂದ, ಪಿಶಾಚ ಜನ್ಮವನ್ನು ಹೊಂದಿದ ಸಕಲ ಪಿತೃಗಳೂ, ಆ ಜನ್ಮದಿಂದ ಮುಕ್ತರಾಗುವರು. ॥೧೦೬॥

ಆ ತೀರ್ಥದ ಸಮೀಪದಲ್ಲಿಯೂ ಸಹ, ಅನೇಕ ಶಿವಲಿಂಗಗಳಿರುವುವು. ಅವು ಭಕ್ತರ ಇಷ್ಟಾರ್ಥಗಳನ್ನು ಪೂರಯಿಸುವುವು. ಕಾಶೀಕ್ಷೇತ್ರದಲ್ಲಿ ವಾಸವಾಗಿರುವವರು ತಪ್ಪದೇ ಆ ಲಿಂಗಗಳನ್ನು ಪೂಜಿಸಬೇಕು. ॥೧೦೭॥

ಆ ಶಿವಲಿಂಗಗಳ ಮುಂಭಾಗದಲ್ಲಿ, ಒಂದು ಅರ್ಬುದ ಯೋಜನದಷ್ಟು ಉನ್ನತವಾಗಿರುವ, ಯಾತನಾಸ್ತಂಭವೆಂಬ ಹೆಸರುಳ್ಳ ಒಂದು ಕಂಬವಿರುವುದು. ಅದು ಧಗಧಗಿಸುತ್ತಿರುವ ಅಗ್ನಿಯಂತೆ, ನಿರಂತರವೂ ಕಾಂತಿರಾಶಿಗಳಿಂದ ಪ್ರಜ್ವಲಿಸುತ್ತಿರುವುದು. ॥೧೦೮॥

ಪಾಪಕರ್ಮಾಚರಣೆಯಲ್ಲಿಯೇ ನಿರತರಾಗಿ ಕಾಶೀಕ್ಷೇತ್ರದಲ್ಲಿ, ವಾಸವಾಗಿರುವ ಜನವನ್ನು ಭೈರವನು, ಕೆಂಡದಂತೆ ಕೆಂಪಾಗಿ ಕಾದಿರುವ ಸರಪಣಿಗಳಿಂದ, ಈ ಯಾತನಾಸ್ತಂಭಕ್ಕೆ ಕಟ್ಟಿ ಅಗ್ನಿಯಿಂದ ಬೇಯಿಸುವನು. ॥೧೦೯॥

ನಿತ್ಯಾಂತರ್ಗೃಹಯಾತ್ರಾದಿವಿಮುಖಾಂಛಿವನಿಂದಕಾನ್ ।
ದಂದಹ್ಯಮಾನಾನ್ ಸ್ತಂಭೇಷ್ಮಿನ್ಪಾಚಯತ್ಯತ್ರ ಭೈರವಃ ॥೧೧೦॥

ಅಂತರ್ಗೃಹೇ ಮಲಾದೀನಿ ವಿಸೃಜನ್ಯೋ ವಸೇನ್ನರಃ ।
ತಮಾನೀಯಾತ್ರ ಬದ್ಧ್ವೈವ ಪಾಚಯತ್ಯತ್ರ ಭೈರವಃ ॥೧೧೧॥

ಜಾಜ್ವಲ್ಯಮಾನಾನ್ಯನಿಶಂ ವಹ್ನಿಕುಂಡಾನಿ ಸಂತಿ ಚ ।
ತೇಷು ಪಾತಯತಿ ಕ್ರೂರಸ್ತಾನೇವಾನೀಯ ಭೈರವಃ ॥೧೧೨॥

ತಪ್ತತೀಕ್ಷ್ಣಾಸಿಕುಂಡಾನಿ ಘೋರಾಣಿ ವಿವಿಧಾನಿ ಚ ।
ತಿಷ್ಠಂತಿ ತೇಷು ತಾನೇವ ಪಾಚಯಿಷ್ಯತಿ ಭೈರವಃ ॥೧೧೩॥

ಮಾಮನಭ್ಯರ್ಚ್ಯ ಯೋ ಭುಂಕ್ತೇ ಕಾಶ್ಯಾಂ ಸ್ಥಿತ್ವಾಪಿ ಮಾನವಃ ।
ತಮಾನೀಯಾತ್ರ ತೀವ್ರೇಣ ಪಾತಯಿಷ್ಯತಿ ಭೈರವಃ ॥೧೧೪॥

---

ಮತ್ತು, ನಿತ್ಯಕರ್ಮಗಳನ್ನಾಚರಿಸದೇ, ಶಿವದೇವಾಲಯದಲ್ಲಿ ಪ್ರವೇಶಿಸದೇ ಈಶ್ವರನನ್ನು ನಿಂದಿಸುವ ಜನರನ್ನು ಭೈರವನು, ಕಾದ ಸರಪಣಿಗಳಿಂದ ಆ ಯಾತನಾಸ್ತಂಭಕ್ಕೆ ಕಟ್ಟಿ ಬೇಯಿಸುವನು. ॥೧೧೦॥

ಯಾವ ಮನುಷ್ಯನು ಶಿವಾಲಯದ ಒಳಗಡೆಯಲ್ಲಿಯೇ, ಮಲಮೂತ್ರಗಳನ್ನು ವಿಸರ್ಜಿಸಿ, ಅಲ್ಲಿ ವಾಸವಾಗಿರುವನೋ, ಅವನನ್ನು ಭೈರವನು ಆ ಕಂಬಕ್ಕೆ ಕಟ್ಟಿ ಸುಡುವನು. ॥೧೧೧॥

ಅಲ್ಲಿ ನಿರಂತರವೂ, ಪ್ರಜ್ವಲಿಸುತ್ತಿರುವ ಅನೇಕ ಅಗ್ನಿಕುಂಡಗಳಿರುವುವು. ಭೈರವನು ಪಾಪಿಗಳನ್ನು ತಂದು ಆ ಕುಂಡಗಳಲ್ಲಿ ಹಾಕುವನು. ॥೧೧೨॥

ಮತ್ತು, ಅಲ್ಲಿ ಚೆನ್ನಾಗಿ ಕಾದು ಕೆಂಪಾಗಿರುವ ಹರಿತವಾದ ಆಯುಧಗಳ ಕುಂಡಗಳಿರುವುವು. ಅವು, ಅತ್ಯಂತ ಭಯವನ್ನುಂಟುಮಾಡುವುವು. ಭೈರವನು, ಪಾಪಿಗಳಾದ ಅವರನ್ನು ಆ ಕುಂಡಗಳಲ್ಲಿರಿಸಿ ಬೇಯಿಸುವನು. ॥೧೧೩॥

ಯಾವ ಮನುಷ್ಯನು, ಕಾಶೀಕ್ಷೇತ್ರದಲ್ಲಿ ವಾಸವಾಗಿದ್ದರೂ ಸಹ, ನನ್ನನ್ನು ಅರ್ಚಿಸದೇ ಊಟಮಾಡುವನೋ, ಭೈರವನು ಅವನನ್ನು ಅಲ್ಲಿಗೆ ತಂದು ಆ ಕುಂಡಗಳಲ್ಲಿರಿಸಿ ಸುಡಿಸುವನು. ॥೧೧೪॥

ಕಾಶ್ಯಾಂ ಕೃತಾನಿ ಪಾಪಾನಿ ವೃದ್ಧಿಂ ಯಾತಿ ಕ್ಷಣೇ ಕ್ಷಣೇ ।
ತನ್ನಾಶೋ ನ ಭವತ್ಯೇವ ವಿನೈತಾದೃಶಯಾತನಾಂ ॥೧೧೫॥

ವಿವಿಧಾ ಯಾತನಾಃ ಸೃಷ್ಟಾಃ ಭೈರವೇಣ ಯದೃಚ್ಛಯಾ ।
ತಾಸು ತಾನ್ಕ್ರೋಧಸಂವಿಷ್ಟಃ ಪಾತಯತ್ಯೇವ ಭೈರವಃ ॥೧೧೬॥

ದ್ವಿತ್ರಿಂಶದ್ಯುಗಪರ್ಯಂತಮೇಕೈಕಾಘಫಲಂ ಜನೈಃ ।
ಕಾಶ್ಯಾಮವಶ್ಯಂ ಭೋಕ್ತವ್ಯಂ ಕಾಶ್ಯಾಂ ತು ಕೃತಪಾತಕೈಃ ॥೧೧೭॥

ಭ್ರಮೇಣಾಪ್ಯೇಕದಾ ತ್ಯಕ್ತ್ವಾ ಮೂತ್ರಮಂತರ್ಗೃಹೇ ನರಃ ।
ತ್ರಿಕೋಟಿಯುಗಪರ್ಯಂತಮಗ್ನಿಕುಂಡೇ ಪತಿಷ್ಯತಿ ॥೧೧೮॥

ಪುರೀಷೋತ್ಸರ್ಗಕಸ್ಯೈತತ್ತ್ರಿಗುಣಂ ವಿಧಿಚೋದಿತಂ ।
ಇತೋಽಪ್ಯಧಿಕಮೇವಾತ್ರ ಭೈರವಸ್ತು ಕರಿಷ್ಯತಿ ॥೧೧೯॥

---

ಕಾಶೀಕ್ಷೇತ್ರದಲ್ಲಿ ಆಚರಿಸಿದ ಪಾಪಕರ್ಮಗಳು ಪ್ರತಿಕ್ಷಣದಲ್ಲಿಯೂ ವೃದ್ಧಿ ಹೊಂದುವುವು. ಅವು, ಭೈರವನ ಯಾತನೆಯನ್ನು ಅನುಭವಿಸದೇ ನಾಶವನ್ನು ಪಡೆಯುವುದಿಲ್ಲ. ॥೧೧೫॥

ಭೈರವನು, ತನ್ನ ಇಷ್ಟಾನುಸಾರವಾಗಿ, ನಾನಾಬಗೆಯ ಯಾತನೆಗಳನ್ನು ಸೃಷ್ಟಿಸಿರುವನು. ಅವನು ಪಾಪಿಗಳಲ್ಲಿ ಕೋಪಗೊಂಡು, ಅವರಿಗೆ ನಾನಾ ವಿಧವಾದ ಯಾತನೆಗಳನ್ನು ಕೊಡುವನು. ॥೧೧೬॥

ಕಾಶೀಕ್ಷೇತ್ರದಲ್ಲಿ ವಾಸವಾಗಿದ್ದು, ಪಾಪಕರ್ಮಗಳನ್ನಾಚರಿಸಿದ ಜನರು ತಾವು ಆಚರಿಸಿದ ಒಂದೊಂದು ಪಾಪಕರ್ಮದ ಫಲವನ್ನು ಇಪ್ಪತ್ತು ಮೂವತ್ತು ಯುಗಗಳವರೆಗೆ ಅನುಭವಿಸಬೇಕಾಗುವುದು. ॥೧೧೭॥

ಕಾಶಿಯಲ್ಲಿ ವಾಸವಾಗಿದ್ದ ಮನುಷ್ಯನು ತಿಳಿವಳಿಕೆಯಿಲ್ಲದೇ, ಒಂದೇ ಒಂದು ಬಾರಿ ಶಿವಾಲಯದ ಒಳಗಡೆಯಲ್ಲಿ ಮೂತ್ರವಿಸರ್ಜನೆಯನ್ನು ಮಾಡಿದರೂ ಸಹ, ಮೂರುಕೋಟಿ ಯುಗಗಳು ಕಳೆಯುವವರೆಗೆ ಅಗ್ನಿಕುಂಡದಲ್ಲಿಯೇ ಬೀಳುವನು. ॥೧೧೮॥

ಪುರೀಷವಿಸರ್ಜನೆಯನ್ನು ಮಾಡಿದವನು, ಒಂಬತ್ತು ಕೋಟಿ ಯುಗಗಳವರೆಗೆ, ಅಗ್ನಿಕುಂಡದಲ್ಲಿ ಬಿದ್ದಿರುವನೆಂದು, ಶಾಸ್ತ್ರವು ಹೇಳುವುದು. ಇದಕ್ಕಿಂತಲೂ, ಭಯಂಕರವಾದ ಕೃತ್ಯಗಳನ್ನಾಚರಿಸಿದವರನ್ನು ಭೈರವನೇ ಶಿಕ್ಷಿಸುವನು. ॥೧೧೯॥

ಪ್ರಮಾದೇನ ಕದಾಚಿಚ್ಚೇದೇವಂ ಸ್ಯಾದ್ಯಾತನಾ ಶುಭೇ ।
ನೋ ಚೇನ್ನಿತ್ಯಂ ವಿಸೃಜತೋ ಮಲಾದೀನಿ ನ ನಿಷ್ಕೃತಿಃ ॥೧೨೦॥

ಘೋರಾಣಿ ಯಾತನಾಸ್ಥಾನಾನ್ಯನೇಕಾನಿ ವರಾನನೇ ।
ತದ್ಯಾತನಾಸ್ತಂಭಪಾರ್ಶ್ವೇ ತಿಷ್ಠಂತಿ ಕಠಿಣಾನಿ ಹಿ ॥೧೨೧॥

ದ್ರಷ್ಟುಂ ನ ಶಕ್ಯತೇ ಘೋರಂ ಯಾತನಾಸ್ಥಲಮೀದೃಶಂ ।
ಸಾ ಯಾತನಾ ಕಥಂ ಸಹ್ಯಾ ಬಹುದುಃಖಪ್ರದಾಯಿನೀ ॥೧೨೨॥

ಪ್ರಜ್ವಲದ್ಯಾತನಾಸ್ತಂಭಂ ದೂರೇ ದೃಷ್ಟ್ವೈವ ಕೇಚನ ।
ಬದ್ಧಾಃ ಪಲಾಯನಾಶಕ್ತಾಃ ಹಾಹಾಹೇತಿ ರುದಂತಿ ಹಿ ॥೧೨೩॥

ಸಹಸ್ರಬಾಹವಃ ಕೇಚಿತ್ಕೇಚಿತ್ಕರಶತಾನ್ವಿತಾಃ ।
ಕೇಚಿಲ್ಲಕ್ಷಕರಾಃ ಕ್ರೂರಾಃ ಕಾಲಭೈರವಕಿಂಕರಾಃ ॥೧೨೪॥

---

ದೇವಿ! ಅಜ್ಞಾನದ ದೆಸೆಯಿಂದ ಒಂದೇ ಒಂದು ಬಾರಿ ಹಿಂದೆ ಹೇಳಿದ ಪಾಪಕರ್ಮಗಳನ್ನಾಚರಿಸಿದರೂ ಇಷ್ಟು ಯಾತನೆಯನ್ನು ಅನುಭವಿಸಬೇಕಾಗಿರುವಾಗ ಪ್ರತಿದಿನವೂ, ಮಲಮೂತ್ರಾದಿಗಳನ್ನು ಅಲ್ಲಿ ವಿಸರ್ಜಿಸುವವನಿಗೆ, ಪ್ರಾಯಶ್ಚಿತ್ತವೇ ಇರುವುದಿಲ್ಲ. ॥೧೨೦॥

ಎಲೌ, ಸುಮುಖಿಯೇ! ಆ ಯಾತನಾಸ್ತಂಭದ ಬಳಿಯಲ್ಲಿ, ಯಾತನೆಯನ್ನುಂಟುಮಾಡುವ ಭಯಂಕರವಾದ ಅನೇಕ ಸ್ಥಳಗಳಿರುವುವು. ಅವು ಅತ್ಯಂತ ದಾರುಣಗಳಾಗಿರುವುವು. ॥೧೨೧॥

ಇಂತಹ ಭಯಂಕರವಾದ ಯಾತನಾಸ್ಥಳವನ್ನು, ಇನ್ನೆಲ್ಲಿಯೂ ನೋಡುವ ಹಾಗಿಲ್ಲ. ಅನೇಕ ದುಃಖಗಳನ್ನುಂಟುಮಾಡುವ ಆ ಹಿಂಸೆಯನ್ನು ಸಹಿಸಲು ಸಾಧ್ಯವೇ? ॥೧೨೨॥

ಕೆಲವರು ಪ್ರಜ್ವಲಿಸುತ್ತಿರುವ ಆ ಯಾತನಾಸ್ತಂಭವನ್ನು ದೂರದಿಂದ ನೋಡಿಯೇ, ಭಯಭ್ರಾಂತರಾಗುವರು. ಆದರೆ ಕಾದ ಸರಪಳಿಗಳಿಂದ ಕಟ್ಟಲ್ಪಟ್ಟ ಅವರು ಅಲ್ಲಿಂದ ಓಡಿಹೋಗಲಸಮರ್ಥರಾಗಿ, ಹಾ, ಹಾ, ಎಂದು ಆರ್ತಧ್ವನಿಯಿಂದ ಅಳುವರು. ॥೧೨೩॥

ಆ ಭೈರವನಿಗೆ ಅಸಂಖ್ಯಾಕರಾದ ಸೇವಕರಿರುವರು. ಅವರಲ್ಲಿ ಕೆಲವರಿಗೆ ಸಹಸ್ರ ತೋಳುಗಳೂ, ಕೆಲವರಿಗೆ ನೂರು ಕೈಗಳೂ, ಇನ್ನು ಕೆಲವರಿಗೆ, ಒಂದು

ಹಸ್ತಾಯುತಾನ್ವಿತಾಃ ಕೇಚಿತ್ಕೇಚಿತ್ಪ್ರಯುತಬಾಹವಃ ।
ಕೇಚಿತ್ಕೋಟಿಕರಾಃ ಕ್ರೂರಾಃ ಕೇಚಿನ್ನಿಯುತಬಾಹವಃ ॥೧೨೫॥

ಕೇಚಿತ್ಸರ್ವಾಯುತಕರಾಃ ಕೇಚಿದರ್ಬುದಬಾಹವಃ ।
ಕೇಚಿನ್ಮಹಾಖರ್ವಹಸ್ತಾಃ ಕೇಚಿಚ್ಚಾಮಿತಬಾಹವಃ ॥೧೨೬॥

ಸರ್ವೇಽಪಿ ಪರ್ವತಾಕಾರಾ ವೀರ್ಯಮಾನಮದೋನ್ನತಾಃ ।
ಘನೋನ್ನತೋರುವಿಷಮತೀಕ್ಷ್ಣದಗ್ಧಾಸ್ತ್ರಬಾಹವಃ ॥೧೨೭॥

ಸನ್ನದ್ಧಾಃ ಸರ್ವದಾ ಭೀಮಾಃ ಶೂರಾ ಭೈರವಕಿಂಕರಾಃ ।
ಈದೃಶೋದ್ಧತದೂತಾನಾಂ ಸಂಖ್ಯಾ ಕರ್ತುಂ ನ ಶಕ್ಯತೇ ॥೧೨೮॥

ಯಾವಂತೋ ಬಾಹವೋ ಯಸ್ಯ ನಾನಾಶಸ್ತ್ರಾನ್ವಿತಾಸ್ತದಾ ।
ತಾವದ್ಭಿರ್ಬಹವೋ ದೂತಾ ನಿಘ್ನಂತ್ಯೇಕೈಕಮುದ್ಧತಾಃ ॥೧೨೯॥

---

ಲಕ್ಷ ಕೈಗಳೂ ಇರುವುವು. ಕೆಲವರಿಗೆ ಹತ್ತು ಲಕ್ಷ ಕೈಗಳೂ, ಇನ್ನು ಕೆಲವರಿಗೆ, ಪ್ರಯುತ ತೋಳುಗಳೂ, ಮತ್ತೆ ಕೆಲವರಿಗೆ, ಕೋಟಿ ತೋಳುಗಳೂ, ಕೆಲವರಿಗೆ, ಕೋಟ್ಯಧಿಕ ತೋಳುಗಳೂ ಇರುವುವು. ॥೧೨೪-೧೨೫॥

ಕೆಲವರು, ಖರ್ವಅಯುತಕರಗಳನ್ನೂ, ಕೆಲವರು ಅರ್ಬುದ ಕೈಗಳನ್ನೂ, ಇನ್ನು ಕೆಲವರು, ಮಹಾಖರ್ವಸಂಖ್ಯೆಯ ಹಸ್ತಗಳನ್ನೂ, ಮತ್ತೆ ಕೆಲವರು, ಅಗಣಿತವಾದ ಕೈಗಳನ್ನೂ ಹೊಂದಿರುವರು. ॥೧೨೬॥

ಅವರೆಲ್ಲರೂ, ಪರ್ವತಗಳಂತೆ, ಬೃಹದಾಕಾರವುಳ್ಳವರೂ, ಬಲಾಢ್ಯರೂ, ಅಭಿಮಾನಶಾಲಿಗಳೂ, ಮದೋನ್ಮತ್ತರೂ, ಆಗಿರುವರು. ಅವರು ದಪ್ಪನಾಗಿಯೂ, ಉನ್ನತವಾಗಿಯೂ, ವಿಶಾಲವಾಗಿಯೂ, ಹರಿತವಾಗಿಯೂ ಇರುವ ಕಾದ ಆಯುಧಗಳನ್ನು ಸದಾ ಧರಿಸಿರುವರು. ॥೧೨೭॥

ಶೂರರೂ, ಪರಾಕ್ರಮಿಗಳೂ ಆದ ಭೈರವನ ಆ ಸೇವಕರು, ಯಾವಾಗಲೂ, ಭೈರವನ ಆಜ್ಞೆಯನ್ನು ಪರಿಪಾಲಿಸುವುದರಲ್ಲಿ ಸಿದ್ಧರಾಗಿಯೇ ಇರುವರು. ಇಂತಹ, ಉದ್ಧತರಾದ ಸೇವಕರನ್ನು ಲೆಕ್ಕಿಸಲು ಸಾಧ್ಯವೇ ಇಲ್ಲ. ॥೧೨೮॥

ಪ್ರತಿಯೊಬ್ಬ ಸೇವಕನೂ, ತನಗೆ ಎಷ್ಟೆಷ್ಟು ಬಾಹುಗಳಿರುವುವೋ, ಅವುಗಳಲ್ಲೆಲ್ಲಾ ಶಸ್ತ್ರಗಳನ್ನು ಧರಿಸಿ, ಆ ಶಸ್ತ್ರಗಳಿಂದ ಒಬ್ಬೊಬ್ಬನನ್ನು ಬೇರೆ ಬೇರೆ ಹೊಡೆಯುವರು. ॥೧೨೯॥

ತದ್ಯಾತನಾಸ್ಥಲಂ ದೃಷ್ಟ್ವಾ ಬ್ರಹ್ಮವಿಷ್ಣ್ವಾದಯಃ ಸುರಾಃ ।
ರುದಂತಃ ಕಂಪಮಾನಾಶ್ಚ ತಿಷ್ಠಂತಿ ಸ್ವಸ್ವಧರ್ಮತಃ ॥೧೩೦॥

ಕಾಶ್ಯಾಂ ಯೇನ ಕೃತಂ ಪಾಪಂ ತೇನೇಯಂ ಘೋರಯಾತನಾ ।
ಭೋಕ್ತವ್ಯಾ ನಾತ್ರ ಸಂದೇಹಃ ಸತ್ಯಮೇವೋಚ್ಯತೇ ಮಯಾ ॥೧೩೧॥

ಅಂತರ್ಗೃಹೇ ಮಲಾದೀನಿ ಯೇ ಕುರ್ವಂತಿ ನರಾಧಮಾಃ ।
ತೇ ಯಾತನಾಮಿಮಾಂ ಕ್ರೂರಾಂ ಪ್ರಾಪ್ನುವಂತಿ ನ ಸಂಶಯಃ ॥೧೩೨॥

ಬ್ರಹ್ಮಹತ್ಯಾದಿಕಾಂ ಕಾಶ್ಯಾಂ ಯೇ ಕುರ್ವಂತಿ ನರಾಧಮಾಃ ।
ತೇ ಯಾತನಾಮಿಮಾಂ ಕ್ರೂರಾಂ ಪ್ರಾಪ್ನುವಂತಿ ನಸಂಶಯಃ ॥೧೩೩॥

ಶೈವಂ ಶಿವತರಂ ಕಾಶ್ಯಾಂ ಯೇ ದ್ವಿಷಂತಿ ನರಾಧಮಾಃ ।
ತೇ ಯಾತನಾಮಿಮಾಂ ಕ್ರೂರಾಂ ಪ್ರಾಪ್ನುವಂತಿ ನಸಂಶಯಃ ॥೧೩೪॥

---

ಆ ಯಾತನಾಸ್ಥಲವನ್ನು, ನೋಡಿ, ಬ್ರಹ್ಮ, ವಿಷ್ಣು, ಮೊದಲಾದ ದೇವತೆಗಳೆಲ್ಲರೂ, ಭಯದಿಂದ ಗಡಗಡನೆ ನಡುಗಿ ಅಳುತ್ತಾ, ತಮ್ಮ ತಮ್ಮ ಕಾರ್ಯಗಳಲ್ಲಿ ನಿರತರಾಗುವರು. ||೧೩೦||

ಯಾವ ನರನು, ಕಾಶಿಯಲ್ಲಿ ವಾಸವಾಗಿದ್ದು, ಪಾಪಕರ್ಮವನ್ನಾಚರಿಸುವನೋ, ಅವನು ಅವಶ್ಯವಾಗಿ ಈ ಯಾತನೆಯನ್ನು ಅನುಭವಿಸಲೇಬೇಕಾಗುವುದು. ಇದರಲ್ಲಿ ಸಂಶಯವಿರುವುದಿಲ್ಲ. ನಾನು ಸತ್ಯವನ್ನೇ ನುಡಿಯುತ್ತಿರುವೆನೆಂದು ನಂಬು. ||೧೩೧||

ಯಾವ ನೀಚರು, ಆಲಯದ ಒಳಗಡೆಯಲ್ಲಿ, ಮಲಮೂತ್ರಗಳನ್ನು ವಿಸರ್ಜಿಸುವರೋ, ಅವರು ಈ ಯಾತನೆಯನ್ನು ಅನುಭವಿಸುವರು. ಇದರಲ್ಲಿ ಸಂಶಯವಿಲ್ಲ. ||೧೩೨||

ಯಾವ ನರಾಧಮರು, ಕಾಶೀಕ್ಷೇತ್ರದಲ್ಲಿ ಬ್ರಹ್ಮಹತ್ಯೆಯೇ ಮೊದಲಾದ ಮಹಾಪಾತಕಗಳನ್ನೆಸಗುವರೋ, ಅವರು, ಅಸಹ್ಯವಾದ ಈ ಯಾತನೆಯನ್ನು ಅನುಭವಿಸುವರು. ಇದರಲ್ಲಿ ಸಂಶಯಪಡಬೇಕಾದುದಿಲ್ಲ. ||೧೩೩||

ಈಶ್ವರಾರಾಧನೆಯಲ್ಲಿಯೇ ಆಸಕ್ತರಾದ ಭಕ್ತರನ್ನು ಯಾವ ನೀಚರು ದ್ವೇಷಿಸುವರೋ, ಅವರು ಈ ಯಾತನೆಯನ್ನನುಭವಿಸಬೇಕಾಗುವುದು. ಇದು ಸತ್ಯ. ||೧೩೪||

ಯೇ ವೈ ವಿಪ್ರಸ್ಯ ಧಿಕ್ಕಾರಂ ಕಾಶ್ಯಾಂ ಕುರ್ವಂತಿ ದುರ್ಜನಾಃ ।
ತೇ ಯಾತನಾಮಿಮಾಂ ಕ್ರೂರಾಂ ಪ್ರಾಪ್ನುವಂತಿ ನ ಸಂಶಯಃ ॥೧೩೫॥

ಯೇ ಶೈವಂ ಮಾನ್ಯಮುನಘಂ ನಾರ್ಚಯಂತಿ ನರಾಧಮಾಃ ।
ತೇ ಯಾತನಾಮಿಮಾಂ ಕ್ರೂರಾಂ ಪ್ರಾಪ್ನುವಂತಿ ನ ಸಂಶಯಃ ॥೧೩೬॥

ಕಾಶ್ಯಾಂ ವಸಂತಿ ಯೇ ದುಷ್ಟಾಃ ಶೈವವಿತ್ತಾಪಹಾರಕಾಃ ।
ತೇ ಯಾತನಾಮಿಮಾಂ ಕ್ರೂರಾಂ ಪ್ರಾಪ್ನುವಂತಿ ನ ಸಂಶಯಃ ॥೧೩೭॥

ಯೇ ಮಾಮನ್ಯಸಮಂ ಮತ್ವಾ ಕಾಶ್ಯಾಂ ತಿಷ್ಠಂತಿ ಶಂಕರಂ ।
ತೇ ಯಾತನಾಮಿಮಾಂ ಕ್ರೂರಾಂ ಪ್ರಾಪ್ನುವಂತಿ ನಸಂಶಯಃ ॥೧೩೮॥

ಶಿವ ಏವ ಸದಾ ಪೂಜ್ಯ ಇತಿ ಮಾಂ ನಾರ್ಚಯಂತಿ ಯೇ ।
ತೇ ಯಾತನಾಮಿಮಾಂ ಕ್ರೂರಾಂ ಪ್ರಾಪ್ನುವಂತಿ ನ ಸಂಶಯಃ ॥೧೩೯॥

---

ಕಾಶೀಕ್ಷೇತ್ರದಲ್ಲಿದ್ದು ಜ್ಞಾನಿಯಾಗಿರುವ ವಿಪ್ರನನ್ನು ಧಿಕ್ಕರಿಸುವ ನೀಚರೂ, ಶಿವಧರ್ಮಪರಾಯಣರಾಗಿ, ಸರ್ವರಿಂದಲೂ ಪೂಜ್ಯತೆಯನ್ನು ಗಳಿಸಿರುವ ಶೈವ ಶ್ರೇಷ್ಠರನ್ನು ಪೂಜಿಸದಿರುವ ನೀಚಮಾನವವರ್ಗದವರೂ, ಈರೀತಿಯಿಂದ ಕ್ರೂರ ಯಾತನೆಯನ್ನು ಅನುಭವಿಸಲು ಸಿದ್ಧರಾಗಿರುವರು. ॥೧೩೫-೧೩೬॥

ಯಾವ ದುಷ್ಟರು, ಈಶ್ವರಭಕ್ತರ ಧನವನ್ನು ಅಪಹರಿಸಿ, ಕಾಶೀಕ್ಷೇತ್ರದಲ್ಲಿ ಜೀವಿಸುತ್ತಿರುವರೋ, ಅವರು ಭೈರವನ ಭಯಂಕರವಾದ ಯಾತನೆಯನ್ನನುಭವಿಸುವರು. ಇದು ನಿಜ. ॥೧೩೭॥

ಯಾರು, ನನ್ನನ್ನು ಇತರ ಕ್ಷುದ್ರದೇವತೆಗಳಿಗೆ ಸಮಾನನಾದವನನ್ನಾಗಿ ಭಾವಿಸಿ, ಕಾಶಿಯಲ್ಲಿರುವರೋ, ಅವರು ಈ ಯಾತನೆಯನ್ನನುಭವಿಸಲೇಬೇಕು. ಇದರಲ್ಲಿ ಸಂಶಯಪಡಬೇಕಾದುದಿಲ್ಲ. ॥೧೩೮॥

ಶಿವನನ್ನು ಪೂಜಿಸುವುದೇ ಅನುಚಿತವೆಂದು ತಿಳಿದು ಯಾರು ನನ್ನನ್ನು ಪೂಜಿಸುವುದಿಲ್ಲವೋ ಅವರೇ ಈ ಯಾತನೆಯನ್ನನುಭವಿಸುವರು. ಇದು ನಿಜ. ॥೧೩೯॥

ನ ಶಿನಾದಧಿಕೋ ದೇವ ಇತಿ ಮಾಂ ನಾರ್ಚಯಂತಿ ಯೇ ।
ತೇ ಯಾತನಾಮಿಮಾಂ ಕ್ರೂರಾಂ ಪ್ರಾಪ್ನುವಂತಿ ನ ಸಂಶಯಃ ॥೧೪೦॥

ಶಿವ ಏವ ಸುರಾರಾಧ್ಯ ಇತಿ ಮಾಂ ನ ವದಂತಿ ಯೇ ।
ತೇ ಯಾತನಾಮಿಮಾಂ ಕ್ರೂರಾಂ ಪ್ರಾಪ್ನುವಂತಿ ನ ಸಂಶಯಃ ॥೧೪೧॥

ಶಿವಾತ್ಪರತರಂ ವಸ್ತು ನೇತಿ ಮಾಂ ನಾರ್ಚಯಂತಿ ಯೇ ।
ತೇ ಯಾತನಾಮಿಮಾಂ ಕ್ರೂರಾಂ ಪ್ರಾಪ್ನುವಂತಿ ನ ಸಂಶಯಃ ॥೧೪೨॥

ಯೇ ಮಾಮುಜಮನಭ್ಯರ್ಚ್ಯ ಕಾಶ್ಯಾಂ ತಿಷ್ಠಂತಿ ಮಾನವಾಃ ।
ತೇ ಯಾತನಾಮಿಮಾಂ ಕ್ರೂರಾಂ ಪ್ರಾಪ್ನುವಂತಿ ನ ಸಂಶಯಃ ॥೧೪೩॥

ತ್ಯಕ್ತ್ವಾ ತಿಷ್ಠಂತಿ ಯೇ ಕಾಶ್ಯಾಂ ಭಸ್ಮರುದ್ರಾಕ್ಷಧಾರಣಂ ।
ತೇ ಯಾತನಾಮಿಮಾಂ ಕ್ರೂರಾಂ ಪ್ರಾಪ್ನುವಂತಿ ನ ಸಂಶಯಃ॥೧೪೪॥

---

ಶಿವನಿಗಿಂತಲೂ, ಶ್ರೇಷ್ಠನಾದ ದೇವರು ಇನ್ನೊಬ್ಬನಿರುವುದಿಲ್ಲವೆಂದು ನನ್ನನ್ನು ತಿಳಿದೂ ಸಹ ನನ್ನನ್ನು ಯಾರು ಅರ್ಚಿಸುವುದಿಲ್ಲವೋ, ಅವರು ಈ ಯಾತನೆಯನ್ನು ಅನುಭವಿಸುವರು. ಇದು ಸತ್ಯ. ||೧೪೦||

ದೇವತೆಗಳಿಗೂ ಸಹ ಶಿವನೇ ಪೂಜ್ಯನಾಗಿರುವನು ಎಂದು ಯಾರು ಹೇಳುವುದಿಲ್ಲವೋ ಅವರು ಕ್ರೂರವಾದ ಈ ಯಾತನೆಯನ್ನನುಭವಿಸುವರು. ಇದು ನಿಜ. ||೧೪೧||

ಯಾರು, ಶಿವನಿಗಿಂತಲೂ ಇತರವಾದ ವಸ್ತುವಿರುವುದಿಲ್ಲವೆಂದು ಭಾವಿಸಿ ನನ್ನನ್ನು ಪೂಜಿಸುವುದಿಲ್ಲವೋ, ಅವರು ಕ್ರೂರವಾದ ಈ ಯಾತನೆಯನ್ನನುಭವಿಸಬೇಕಾಗುವುದು. ||೧೪೨||

ಯಾರು, ನನ್ನನ್ನು ಪೂಜಿಸದೆ, ಕಾಶಿಯಲ್ಲಿ ವಾಸಮಾಡುವರೋ, ಮತ್ತು ಯಾರು, ಭಸ್ಮ, ರುದ್ರಾಕ್ಷ, ಇವುಗಳನ್ನು ಧರಿಸದೇ ಕಾಶೀಕ್ಷೇತ್ರದಲ್ಲಿ ಜೀವಿಸುವರೋ ಅವರು, ಕ್ರೂರವಾದ ಈ ಹಿಂಸೆಗೆ ಗುರಿಯಾಗುವರು. ಇದು ದಿಟವು. ||೧೪೩-೧೪೪||

ಯೇ ವಿಹಾಯ ವಸಂತ್ಯತ್ರ ಶಿವಲಿಂಗಸ್ಯ ಪೂಜನಂ ।
ತೇ ಯಾತನಾಮಿಮಾಂ ಕ್ರೂರಾಂ ಪ್ರಾಪ್ನುವಂತಿ ನ ಸಂಶಯಃ ॥೧೪೫॥

ಯೇ ನಿತ್ಯಾಂತರ್ಗೃಹಯಾತ್ರಾಂ ತ್ಯಕ್ತ್ವಾ ತಿಷ್ಠಂತಿ ಮಾನವಾಃ ।
ತೇ ಯಾತನಾಮಿಮಾಂ ಕ್ರೂರಾಂ ಪ್ರಾಪ್ನುವಂತಿ ನ ಸಂಶಯಃ ॥೧೪೬॥

ಯೇ ಕಾಶೀಕ್ಷೇತ್ರಮನಘಮನ್ಯಕ್ಷೇತ್ರಸಮಂ ವಿದುಃ ।
ತೇ ಯಾತನಾಮಿಮಾಂ ಕ್ರೂರಾಂ ಪ್ರಾಪ್ನುವಂತಿ ನ ಸಂಶಯಃ ॥೧೪೭॥

ಯೇ ರುದ್ರಜಪಮನ್ಯಾರ್ಥಂ ಕುರ್ವಂತಿ ಧನಲೋಭತಃ ।
ತೇ ಯಾತನಾಮಿಮಾಂ ಕ್ರೂರಾಂ ಪ್ರಾಪ್ನುವಂತಿ ನ ಸಂಶಯಃ ॥೧೪೮॥

ಶೈವದೀಕ್ಷಾಂ ವಿಹಾಯಾಸ್ಯಾಂ ಕಾಶ್ಯಾಂ ತಿಷ್ಠಂತಿ ಯೇ ಜನಾಃ ।
ತೇ ಯಾತನಾಮಿಮಾಂ ಕ್ರೂರಾಂ ಪ್ರಾಪ್ನುವಂತಿ ನ ಸಂಶಯಃ ॥೧೪೯॥

ರುದ್ರಾಧ್ಯಾಯಜಪಂ ತ್ಯಕ್ತ್ವಾ ಕಾಶ್ಯಾಂ ತಿಷ್ಠಂತಿ ಯೇ ಜನಾಃ ।
ತೇ ಯಾತನಾಮಿಮಾಂ ಕ್ರೂರಾಂ ಪ್ರಾಪ್ನುವಂತಿ ನ ಸಂಶಯಃ ॥೧೫೦॥

---

ಯಾರು ಶಿವಲಿಂಗವನ್ನು ಪೂಜಿಸದೇ, ಈ ಕಾಶೀಕ್ಷೇತ್ರದಲ್ಲಿ ವಾಸಮಾಡುವರೋ ಮತ್ತು ಯಾವ ಮನುಷ್ಯರು, ತಮ್ಮ ನಿತ್ಯನೈಮಿತ್ತಿಕ ಕರ್ಮಗಳನ್ನೂ ಮತ್ತು ಕಾಶೀವಿಶ್ವೇಶ್ವರದೇವಾಲಯದ ಪ್ರದಕ್ಷಿಣೆಯನ್ನೂ ಮಾಡದಿರುವರೋ ಅವರು, ಭಯಂಕರವಾದ ಈ ಯಾತನೆಗೆ ಗುರಿಯಾಗುವರು. ||೧೪೫-೧೪೬||

ಯಾರು, ಪವಿತ್ರವಾದ ಕಾಶೀಕ್ಷೇತ್ರವನ್ನು, ಇತರ ಕ್ಷೇತ್ರಗಳಿಗೆ ಸಮಾನವಾದುದೆಂದು ತಿಳಿಯುವರೋ ಮತ್ತು ಯಾರು ದ್ರವ್ಯದ ಆಸೆಯಿಂದ ಇತರರಿಗೋಸ್ಕರ ರುದ್ರಾಧ್ಯಾಯವನ್ನು ಅಲ್ಲಿ ಜಪಿಸುವರೋ, ಅವರು ಕ್ರೂರವಾದ ಈ ಹಿಂಸೆಗೆ ಗುರಿಯಾಗುವರು. ಇದರಲ್ಲಿ ಸಂಶಯಪಡಬೇಕಾದುದಿಲ್ಲ. ||೧೪೭-೧೪೮||

ಯಾರು ಶೈವದೀಕ್ಷೆಯನ್ನು ವಹಿಸದೇ ಈ ಕಾಶೀಕ್ಷೇತ್ರದಲ್ಲಿ ವಾಸಿಸುವರೋ ಮತ್ತು ಯಾರು, ರುದ್ರಾಧ್ಯಾಯವನ್ನು ಜಪಿಸದೇ ಕಾಶಿಯಲ್ಲಿರುವರೋ ಅವರು ಭೈರವನ, ಅಸಹ್ಯವಾದ ಈ ಯಾತನೆಗೆ ಒಳಪಡುವರು. ಇದು ನಿಜ.||೧೪೯-೧೫೦||

ಶೈವಂ ಪಂಚಾಕ್ಷರಜಪಂ ತ್ಯಕ್ತ್ವಾ ತಿಷ್ಠಂತಿ ಯೇ ಜನಾಃ ।
ತೇ ಯಾತನಾಮಿಮಾಂ ಕ್ರೂರಾಂ ಪ್ರಾಪ್ನುವಂತಿ ನ ಸಂಶಯಃ ॥೧೫೧॥

ಯೇ ಮಲ್ಲಿಂಗಾರ್ಚನಂ ತ್ಯಕ್ತ್ವಾ ತಿಷ್ಠಂತಿ ಶಿವನಿಂದಕಾಃ ।
ತೇ ಯಾತನಾಮಿಮಾಂ ಕ್ರೂರಾಂ ಪ್ರಾಪ್ನುವಂತಿ ನ ಸಂಶಯಃ ॥೧೫೨॥

ಕಾಲಭೈರವಮಾರಾಧ್ಯಮನಾರಾಧ್ಯ ವಸಂತಿ ಯೇ ।
ತೇ ಯಾತನಾಮಿಮಾಂ ಕ್ರೂರಾಂ ಪ್ರಾಪ್ನುವಂತಿ ನ ಸಂಶಯಃ ॥೧೫೩॥

ಯೇ [1] ಪಂಚಕ್ರೋಶಯಾತ್ರಾಂ ಚ ತ್ಯಕ್ತ್ವಾ ತಿಷ್ಠಂತಿ ಮಾನವಾಃ ।
ತೇ ಯಾತನಾಮಿಮಾಂ ಕ್ರೂರಾಂ ಪ್ರಾಪ್ನುವಂತಿ ನ ಸಂಶಯಃ ॥೧೫೪॥

---

ಯಾವ ಜನರು ಶಿವಪಂಚಾಕ್ಷರಮಂತ್ರವನ್ನು ಜಪಿಸದೇ ಇರುವರೋ, ಮತ್ತು ಯಾರು ನನ್ನ ಶಿವಲಿಂಗವನ್ನು ಆರಾಧಿಸದೇ ಶಿವನನ್ನು ನಿಂದಿಸುವರೋ ಅವರು ದಾರುಣವಾದ ಈ ಯಾತನೆಯನ್ನನುಭವಿಸುವರು. ಇದು ಸತ್ಯ. ॥೧೫೧-೧೫೨॥

ಕಾಶೀಕ್ಷೇತ್ರದಲ್ಲಿ ಪೂಜ್ಯನಾದ ಕಾಲಭೈರವನನ್ನು ಪೂಜಿಸದೇ ವಾಸವಾಗಿರುವವರೂ, ಮತ್ತು ಪಂಚಕ್ರೋಶಯಾತ್ರೆಯನ್ನು ಆಚರಿಸದೇ ಇರುವವರೂ ಕ್ರೂರವಾದ ಈ ಯಾತನೆಗೆ ಒಳಪಡುವರು. ॥೧೫೩-೧೫೪॥

---

1. **ಪಂಚಕ್ರೋಶ**—ಕಾಶೀಕ್ಷೇತ್ರವು ಶಿವಲಿಂಗಾಕಾರವಾಗಿರುವುದೆಂದು ಹೇಳಿರುವರು. ಅಲ್ಲಿ ವಿಶ್ವನಾಥ, ತ್ರಿಲೋಚನೇಶ್ವರ, ದಂಡಪಾಣಿ ಮುಂತಾದ ಅನೇಕ ಶಿವಲಿಂಗಗಳಿರುವುವು. ಕಾಶೀ ಯಾತ್ರೆಗೆ ಹೋದ ಜನರು ಪಂಚಕ್ರೋಶ ಯಾತ್ರೆಯನ್ನು ನೆರವೇರಿಸಲೇ ಬೇಕು. ಅದಿಲ್ಲದಿದ್ದರೆ ಪಾಪವು ಸಂಘಟಿಸುವುದು. ಏಕೆಂದರೆ ಶಿವಲಿಂಗಾಕಾರವಾಗಿರುವ ಕಾಶೀಕ್ಷೇತ್ರವನ್ನು ಪ್ರವೇಶಿಸಿದರೆ ಶಿವಲಿಂಗವನ್ನೇ ತುಳಿದಂತಾಗುವುದು. ಆ ಪಾಪವನ್ನು ಪರಿಹರಿಸಿಕೊಳ್ಳುವುದಕ್ಕೋಸ್ಕರ ಈ ಪಂಚಕ್ರೋಶಯಾತ್ರೆಯು ಹೇಳಲ್ಪಟ್ಟಿರುವುದು. ಪಂಚಕ್ರೋಶವೆಂದರೆ ಐದು ಕ್ರೋಶಗಳು ಅಥವಾ ಹದಿನೈದು ಮೈಲಿಗಳು ಎಂದರ್ಥವು. ಕಾಶೀಕ್ಷೇತ್ರಕ್ಕೆ ಹೋದ ಬಳಿಕ ಅಲ್ಲಿಂದ ಹೊರಗೆ ಹೊರಟು ಬರುವಾಗ, ಕ್ಷೇತ್ರದ ಒಳಭಾಗದ ಸುತ್ತಳತೆಯ ಪ್ರದಕ್ಷಿಣೆ ಮಾಡಿ ಬರಬೇಕೆಂದು ವಿಧಿಯಿರುವುದು ಆ ಸುತ್ತಳತೆಯು ಐದು ಕ್ರೋಶಗಳು ಅಥವಾ ಹದಿನೈದು ಮೈಲಿಗಳಷ್ಟು ಆಗುವುದು. ಆದುದರಿಂದಲೇ ಈ ಯಾತ್ರೆಗೆ ಪಂಚಕ್ರೋಶಯಾತ್ರೆ ಎಂಬ ಅನ್ವರ್ಥಸಂಜ್ಞೆಯು. ಈ ಪಂಚಕ್ರೋಶಯಾತ್ರೆಯನ್ನು ನೆರವೇರಿಸಿ ಕಾಶಿಯಿಂದ ಹೊರಗೆ ಬಂದ ಬಳಿಕ ಪುನಃ ಕಾಶೀಕ್ಷೇತ್ರಕ್ಕೆ ಹೋಗಬಾರದೆಂದು ಹಿರಿಯರು ಹೇಳುವರು.

ಯೇ ಕಾಶ್ಯಾಂ ಶಿವಶಾಸ್ತ್ರಸ್ಯ ನಿಂದಾಂ ಕುರ್ವಂತಿ ದುರ್ಜನಾಃ ।
ತೇ ಯಾತನಾಮಿಮಾಂ ಕ್ರೂರಾಂ ಪ್ರಾಪ್ನುವಂತಿ ನ ಸಂಶಯಃ ॥೧೫೫॥

ಅನ್ಯತುಲ್ಯತಯಾ ಯೇ ತು ಶೈವಂ ಜಾನಂತಿ ದುರ್ಜನಾಃ ।
ತೇ ಯಾತನಾಮಿಮಾಂ ಕ್ರೂರಾಂ ಪ್ರಾಪ್ನುವಂತಿ ನ ಸಂಶಯಃ ॥೧೫೬॥

ಶಿವರಾತ್ರಿವ್ರತಂ ಕಾಶ್ಯಾಂ ಯೇ ನ ಕುರ್ವಂತಿ ದುರ್ಜನಾಃ ।
ತೇ ಯಾತನಾಮಿಮಾಂ ಕ್ರೂರಾಂ ಪ್ರಾಪ್ನುವಂತಿ ನ ಸಂಶಯಃ ॥೧೫೭॥

ದುಷ್ಟಪ್ರತಿಗ್ರಹಾಸಕ್ತಾಃ ನಿತ್ಯಂ ಕಾಶ್ಯಾಂ ವಸಂತಿ ಯೇ ।
ತೇ ಯಾತನಾಮಿಮಾಂ ಕ್ರೂರಾಂ ಪ್ರಾಪ್ನುವಂತಿ ನ ಸಂಶಯಃ ॥೧೫೮॥

ಯೇ ಶೂದ್ರಪತಿತವ್ರಾತ್ಯವಿತ್ತಪೋಷಿತವಿಗ್ರಹಾಃ ।
ತೇ ಯಾತನಾಮಿಮಾಂ ಕ್ರೂರಾಂ ಪ್ರಾಪ್ನುವಂತಿ ನ ಸಂಶಯಃ ॥೧೫೯॥

ಯದ್ಯತ್ಪಾಪಕರಂ ಕರ್ಮ ಕುರ್ವಂತ್ಯತ್ರ ಹಿ ಯೇ ಜನಾಃ ।
ತೇ ಯಾತನಾಮಿಮಾಂ ಕ್ರೂರಾಂ ಪ್ರಾಪ್ನುವಂತಿ ನ ಸಂಶಯಃ ॥೧೬೦॥

---

ಯಾವ ದುಷ್ಟರು, ಕಾಶೀಕ್ಷೇತ್ರದಲ್ಲಿ ಶಿವಮಹಿಮೆಯನ್ನು ಪ್ರಕಟಿಸುವ ಶಾಸ್ತ್ರವನ್ನು ನಿಂದಿಸುವರೋ ಮತ್ತು ಯಾರು ಈಶ್ವರಭಕ್ತನನ್ನು ಸಾಧಾರಣ ಜನರೊಂದಿಗೆ ಹೋಲಿಸುವರೋ ಅವರು ಭೈರವನ ಈ ಯಾತನೆಗೆ ಗುರಿಯಾಗುವರು. ಇದು ನಿಜ. ||೧೫೫-೧೫೬||

ಕಾಶೀಕ್ಷೇತ್ರದಲ್ಲಿ ವಾಸವಾಗಿದ್ದು, ಶಿವರಾತ್ರಿವ್ರತವನ್ನು ಯಾರು ನೆರವೇರಿಸುವುದಿಲ್ಲವೋ ಮತ್ತು ಯಾರು ಕಾಶೀಕ್ಷೇತ್ರದಲ್ಲಿ ದುರ್ದಾನಗಳನ್ನು ಪ್ರತಿಗ್ರಹಿಸುವರೋ ಅವರು ಭೈರವ ಯಾತನೆಗೆ ಗುರಿಯಾಗುವರು. ಇದು ನಿಜ.||೧೫೭-೧೫೮||

ಶೂದ್ರರು, ಪತಿತರು, ಆಚಾರಹೀನರು ಇವರ ಧನದಿಂದ ಜೀವಿಸುವವರು ಈ ಯಾತನೆಯನ್ನನುಭವಿಸುವರು. ಮತ್ತು ಕಾಶಿಯಲ್ಲಿ ಪಾಪಕರವಾದ ಯಾವ ಯಾವ ಕರ್ಮಗಳನ್ನಾಚರಿಸಿದರೂ ಅವರು ಆಯಾ ಪಾಪಕರ್ಮಗಳಿಗೆ ಅನುಗುಣವಾಗಿ ಭೈರವನ ಅಸಹ್ಯವಾದ ಯಾತನೆಯನ್ನು ಅನುಭವಿಸುವರು. ಇದರಲ್ಲಿ ಸಂಶಯಪಡಬೇಕಾದುದಿಲ್ಲ. ||೧೫೯-೧೬೦||

ಇದಂ ಮತ್ವಾ ಸದಾ ಕಾಶ್ಯಾಂ ಸ್ವಸ್ವಧರ್ಮೇಣ ಸರ್ವದಾ ।
ಸ್ಥಾತವ್ಯಂ ಯತ್ನತಃ ಸರ್ವೇ ಯಾತನಾಭೀರುಭಿರ್ಜನೈಃ ॥೧೬೧॥

ಅಂತರ್ಗೃಹೇ ಕೃತಂ ಪಾಪಂ ಯನ್ಮಲೋತ್ಸರ್ಜನಾರ್ಜಿತಂ ।
ಮೂತ್ರೋತ್ಸರ್ಗಾರ್ಜಿತಂ ಚಾತ್ರ ನ ನಶ್ಯತಿ ಚ ದುಃಖದಂ ॥೧೬೨॥

ದ್ವಿತ್ರೈರಂತರ್ಗೃಹೇ ಪೂರ್ವಂ ಮೂತ್ರಾದ್ಯುತ್ಸರ್ಜನಂ ಕೃತಂ ।
ತೈರಿದಾನೀಮಪಿ ಕ್ರೂರಾ ಯಾತನಾ ಭುಜ್ಯತೇ ಶುಭೇ ॥೧೬೩॥

ಶೈವೋಽಪ್ಯಂ[1]ತರ್ಗೃಹೇ ಕುರ್ಯಾನ್ಮೂತ್ರಾದ್ಯುತ್ಸರ್ಜನಂ ಯದಿ ।
ಭೈರವಸ್ತಮಪಿ ಕ್ರೂರಃ ಪಾತಯತ್ಯಸ್ತ್ರಮಂಡಲೇ ॥೧೬೪॥

---

ಇದನ್ನು ತಿಳಿದುಕೊಂಡು ಕಾಶೀಕ್ಷೇತ್ರದಲ್ಲಿ ವಾಸವಾಗಿದ್ದು ಕಾಲಭೈರವನು ವಿಧಿಸುವ ಯಾತನೆಗಳಿಗೆ ಅಂಜುವ ಜನರು ತ್ರಿಕಾಲಗಳಲ್ಲಿಯೂ ತಮ್ಮ ತಮ್ಮ ವರ್ಣಾಶ್ರಮಧರ್ಮಗಳನ್ನು ಪರಿಪಾಲಿಸುತ್ತಾ ಜೀವಿಸಬೇಕು. ॥೧೬೧॥

ಕಾಶೀಕ್ಷೇತ್ರದ ಒಳಗಡೆಯಲ್ಲಿ ಮಲಮೂತ್ರಾದಿ ವಿಸರ್ಜನೆಗಳಿಂದ ಪಾಪವು ಸಂಘಟಿಸುವುದು. ಅದು ಅಂತ್ಯದಲ್ಲಿ ಅಸಹ್ಯವಾದ ದುಃಖವನ್ನುಂಟುಮಾಡುವುದು. ಅದಕ್ಕೆ ತಕ್ಕ ಫಲವನ್ನನುಭವಿಸದೇ ಆ ಪಾಪವು ನಷ್ಟವಾಗುವುದಿಲ್ಲ. ॥೧೬೨॥

ದೇವಿ! ಈ ಹಿಂದೆ ಇಬ್ಬರು ಮೂವರು ಕಾಶೀಕ್ಷೇತ್ರದೊಳಗೆ ಮಲಮೂತ್ರಗಳನ್ನು ವಿಸರ್ಜಿಸಿದರು. ಅವರು ಈಗಲೂ ಭೈರವನಿಂದ ಅಸಹ್ಯವಾದ ಯಾತನೆಯನ್ನನುಭವಿಸುತ್ತಿರುವರು. ॥೧೬೩॥

ಎಂತಹ ಶಿವಭಕ್ತನಾದರೂ ಸಹ ಅಂತರ್ಗೃಹದಲ್ಲಿ ಮಲಮೂತ್ರಾದಿಗಳನ್ನು ವಿಸರ್ಜಿಸಿದರೆ, ಅವನನ್ನೂ ಭೈರವನು, ಕಾದ ಆಯುಧಗಳ ಕುಂಡದಲ್ಲಿರಿಸುವನು. ॥೧೬೪॥

---

1. ಅಂತರ್ಗೃಹವೆಂದರೆ ಕಾಶೀವಿಶ್ವನಾಥೇಶ್ವರನ ದೇವಾಲಯದ ಸಮೀಪದಲ್ಲಿರುವ ಒಂದಾನೊಂದು—ನೆಲಮಾಳಿಗೆ. ಅಥವಾ ಗುಹೆ. ಯಾತ್ರಿಕರು ಈ ಗುಹೆಯ ಒಳಭಾಗದಲ್ಲಿ ಹೋಗಿ ಅಲ್ಲಿರುವ ಶಿವಲಿಂಗವನ್ನು ಸಂದರ್ಶಿಸಬೇಕು. ಅದನ್ನು ಮಲಮೂತ್ರಾದಿಗಳಿಂದ ಕಲ್ಮಶ ಯುಕ್ತವಾದುದನ್ನಾಗಿ ಮಾಡಬಾರದು. ಹಾಗೆ ಮಾಡಿದರೆ ಮಹತ್ತರವಾದ ಪಾಪವು ಸಂಘಟಿಸುವುದು.

ಯಸ್ತ್ವಂತರ್ಗೃಹಮಾರಾಧ್ಯಂ ಮೂತ್ರಾದ್ಯೈರ್ದೂಷಯಿಷ್ಯತಿ ।
ಸ ಯಾತನಾಮವಾಪ್ನೋತಿ ಪುನರಾವೃತ್ತಿವರ್ಜಿತಂ ॥೧೬೫॥

ಇದಂ ಮತ್ವೈವ ಮುನಯಸ್ತಿಷ್ಠಂತ್ಯಂತರ್ಗೃಹಾದ್ಬಹಿಃ ।
ಪಂಚಕ್ರೋಶಾದ್ಬಹಿರ್ಯಾಂತಿ ಮೂತ್ರಾದ್ಯುತ್ಸರ್ಜನಾಯ ತೇ ॥೧೬೬॥

ಪ್ರಾಣಿದುಃಖಕರಂ ಕರ್ಮ ನ ಕಾರ್ಯಂ ಸರ್ವಥಾ ಜನೈಃ ।
ಕಾಶ್ಯಾಂ ಸ್ಥಿತ್ವಾ ವಿಶೇಷೇಣ ನ ಕಾರ್ಯಂ ಸತ್ಯಮುಚ್ಯತೇ ॥೧೬೭॥

ಅಂತರ್ಗೃಹಾದ್ಬಹಿಃ ಕಾಶ್ಯಾಮಂತರ್ಗೇಹೇಽಪಿ ವಾ ಜನೈಃ ।
ನ ಕಾರ್ಯಂ ಸರ್ವಥಾ ಯಸ್ಮಾನ್ಮೂತ್ರಾದ್ಯುತ್ಸರ್ಜನಂ ಶುಭೇ ॥೧೬೮॥

ಅಂತರ್ಗೇಹಾದ್ಬಹಿಃ ಕುರ್ಯಾದ್ಯದಿ ಮೂತ್ರವಿಸರ್ಜನಂ ।
ಪುರೀಷೋತ್ಸರ್ಜನಂ ವಾಪಿ ತತ್ಪ್ರಾಯಶ್ಚಿತ್ತಮುಚ್ಯತೇ ॥೧೬೯॥

---

ಯಾವ ಮನುಷ್ಯನು ಪೂಜ್ಯವಾದ ಅಂತರ್ಗೃಹವನ್ನು ಮಲಮೂತ್ರಾದಿಗಳಿಂದ, ಕೊಳಗಾಗಿ ಮಾಡುವನೋ, ಅವನು ನಿರಂತರವೂ ಕ್ರೂರವಾದ ಭೈರವನ ಯಾತನೆಯನ್ನು ಅನುಭವಿಸುವನು. ॥೧೬೫॥

ಇದನ್ನು ತಿಳಿದೇ ಮುನಿಗಳು ಅಂತರ್ಗೃಹದ ಹೊರಗಡೆಯಲ್ಲಿಯೇ ವಾಸವಾಗಿದ್ದು, ಪಂಚಕ್ರೋಶದ ಹೊರಗಡೆಯಲ್ಲಿಯೇ, ಮಲಮೂತ್ರಾದಿಗಳನ್ನು ವಿಸರ್ಜಿಸುವುದಕ್ಕೆ ಹೋಗುವರು. ॥೧೬೬॥

ಸಾಮಾನ್ಯವಾಗಿ, ಪ್ರಾಣಿಗಳಿಗೆ ದುಃಖವನ್ನುಂಟುಮಾಡುವ ಕಾರ್ಯವನ್ನು ಕೈಗೊಳ್ಳಬಾರದು. ಅದರಲ್ಲಿಯೂ, ವಿಶೇಷವಾಗಿ ಕಾಶೀಕ್ಷೇತ್ರದಲ್ಲಿ ವಾಸವಾಗಿದ್ದು, ಪ್ರಾಣಿಗಳ ಮನಸ್ಸನ್ನು ನೋಯಿಸಲೇಬಾರದು. ಇದು ಸತ್ಯ. ॥೧೬೭॥

ದೇವಿ! ಕಾಶೀಕ್ಷೇತ್ರದ ಒಳಗಡೆಯಲ್ಲಾಗಲಿ, ಅದರ ಸುತ್ತುಮುತ್ತಲೂ ಇರುವ ಪ್ರದೇಶದಲ್ಲಾಗಲಿ ಎಂದಿಗೂ ಮಲಮೂತ್ರಗಳನ್ನು ವಿಸರ್ಜಿಸಬಾರದು. ॥೧೬೮॥

ಅಂತರ್ಗೃಹದ ಹೊರಗಡೆಯಿರುವ ಪ್ರದೇಶದಲ್ಲಿಯೂ, ಮೂತ್ರವನ್ನಾಗಲಿ, ಮಲವನ್ನಾಗಲಿ ವಿಸರ್ಜಿಸಬಾರದು. ಇದನ್ನು ತಿಳಿಯದೇ ಯಾವನಾದರೂ ಆಕಸ್ಮಿಕ

ಪಂಚಗವ್ಯಂ ಯಥಾಶಾಸ್ತ್ರಂ ಗ್ರಾಹ್ಯಂ ಮುಂಡನಪೂರ್ವಕಂ ।
ತತೋಽಂತರ್ಗೃಹಯಾತ್ರೈಕಾ ಕರ್ತವ್ಯಾ ವಿಧಿಪೂರ್ವಕಂ ॥೧೭೦॥

ತತಃ ಪಂಚಕ್ರೋಶಯಾತ್ರಾ ನಿರಾಹಾರೇಣ ಸಾದರಂ ।
ಕರ್ತವ್ಯಾ ವಿಧಿವದ್ವಿಪ್ರಾ ಭೋಜನೀಯಾಶ್ಚ ಯತ್ನತಃ ॥೧೭೧॥

ಇದಂ ಮೂತ್ರೋತ್ಸರ್ಜನಸ್ಯ ಪ್ರಾಯಶ್ಚಿತ್ತಮುದಾಹೃತಂ ।
ಪುರೀಷೋತ್ಸರ್ಜನೇ ಕಾರ್ಯಂ ಏತದ್ದಶಗುಣಂ ಕ್ರಮಾತ್ ॥೧೭೨॥

ಏಕಮೇವ ಹಿ ವಿಜ್ಞೇಯಮುಭಯತ್ರಾಪಿ ಮುಂಡನಂ ।
ಬ್ರಾಹ್ಮಣಾಶ್ಚ ಯಥಾಶಕ್ತಿ ಭೋಜನೀಯಾಃ ಪ್ರಯತ್ನತಃ ॥೧೭೩॥

---

ವಾಗಿ ಮಲಮೂತ್ರಗಳನ್ನು ವಿಸರ್ಜಿಸಿದರೆ, ಅದರಿಂದುಂಟಾಗುವ ಪಾಪವನ್ನು ಹೋಗಲಾಡಿಸುವ ಪ್ರಾಯಶ್ಚಿತ್ತದ ಕ್ರಮವನ್ನು ಹೇಳುವೆನು ಕೇಳು. ||೧೬೯||

ಮೊದಲು, ವಿಧಿಪೂರ್ವಕವಾಗಿ ಮುಂಡನವನ್ನು ಮಾಡಿಸಿಕೊಂಡು ಪಂಚಗವ್ಯ ಪ್ರಾಶನವನ್ನು ಮಾಡಿ, ಬಳಿಕ ಅಂತರ್ಗೃಹಯಾತ್ರೆಯನ್ನಾಚರಿಸಬೇಕು. ||೧೭೦||

ಆದಾದ ಬಳಿಕ, ನಿರಾಹಾರವ್ರತವನ್ನು ಕೈಗೊಂಡು, ಪಂಚಕ್ರೋಶಯಾತ್ರೆಯನ್ನೂ ನೆರವೇರಿಸಿ, ಬ್ರಾಹ್ಮಣರನ್ನು ಯಥಾಶಕ್ತಿ ಭೋಜನದಿಂದ ತೃಪ್ತಿಪಡಿಸಬೇಕು. ||೧೭೧||

ಮೇಲೆ ಹೇಳಿದ ಪ್ರಾಯಶ್ಚಿತ್ತವು ಮೂತ್ರೋತ್ಸರ್ಜನೆಯನ್ನು ಮಾಡಿದವರಿಗೆ ವಿಧಿಸಲ್ಪಟ್ಟಿರುವುದು. ಪುರೀಷೋತ್ಸರ್ಜನವನ್ನು ಮಾಡಿದರೆ, ಹಿಂದೆ ಹೇಳಿದ, ಪಂಚಗವ್ಯಪ್ರಾಶನ, ಅಂತರ್ಗೃಹಯಾತ್ರೆ, ಪಂಚಕ್ರೋಶಯಾತ್ರೆ, ಬ್ರಾಹ್ಮಣ ಭೋಜನ ಇವುಗಳಲ್ಲಿ ಒಂದೊಂದನ್ನೂ ಹತ್ತು ಹತ್ತು ಬಾರಿ ಆಚರಿಸಬೇಕು. ಆದರೆ ಮಲವಿಸರ್ಜನೆಯಲ್ಲಾಗಲಿ ಅಥವಾ ಮೂತ್ರವಿಸರ್ಜನೆಯನ್ನು ಮಾಡಿದರಾಗಲಿ, ಮುಂಡನವು ಮಾತ್ರ ಒಂದೇ ಒಂದು ಬಾರಿ ನಡೆಸಿದರೆ ಸಾಕೆಂಬುದನ್ನು ತಿಳಿಯಬೇಕು. ತಮ್ಮ ತಮ್ಮ ಶಕ್ತಿಯನ್ನು ಮೀರದೆ ಬ್ರಾಹ್ಮಣರಿಗೆ ಭೋಜನವನ್ನು ನಡೆಸಬೇಕು. ||೧೭೨-೧೭೩||

ತ್ಯಕ್ತ್ವೈಕದಾ ಮಲಂ ಮರ್ತ್ಯೈರೇಕದಾ ಮೂತ್ರಮೇವ ವಾ ।
ಏವಂ ಕಾರ್ಯಂ ಪ್ರಯತ್ನೇನ ಪ್ರಾಯಶ್ಚಿತ್ತಂ ವರಾಂಗನೇ ॥೧೭೪॥

ಮಲಮೂತ್ರಾದಿಕಂ ಕಾಶ್ಯಾಂ ತ್ಯಕ್ತ್ವಾಪಿ ಬಹುಧಾ ಜನೈಃ ।
ಬಹುಧೈವ ತಥಾ ಕಾರ್ಯಂ ಪ್ರಾಯಶ್ಚಿತ್ತಂ ಯಥಾವಿಧಿ ॥೧೭೫॥

ತಾದೃಶೈರ್ಯತ್ನತಃ ಕಾರ್ಯಂ ಪ್ರಾಯಶ್ಚಿತ್ತಂ ಮಯೋದಿತಂ ।
ಅನ್ಯಥಾ ಯಾತನಾಂ ಘೋರಾಂ ಪ್ರಾಪ್ನುವಂತಿ ನ ಸಂಶಯಃ ॥೧೭೬॥

ಶ್ರೀಕಾಲಭೈರವಪ್ರಾಂತೇ ಕುಂಡಮಸ್ತ್ಯೇಕಮುತ್ತಮಂ ।
ಕಾಲಾಷ್ಟಮೀ ದಿನೇ ತತ್ರಸ್ನಾನಂ ಕಾರ್ಯಂ ವಿಧಾನತಃ ॥೧೭೭॥

ತತ್ಕುಂಡನಿಕಟೇ ರಮ್ಯಂ ಲಿಂಗಂ ಕಾಲೇಶ್ವರಾಭಿಧಂ ।
ಭೈರವಸ್ಥಾಪಿತಂ ತಿಷ್ಠತ್ಯೇಕಂ ಪಾಪೌಘನಾಶನಂ ॥೧೭೮॥

---

ಎಲೌ, ಸುಮುಖಿಯೇ! ಒಂದೇ ಒಂದು ಬಾರಿ, ಮಲವನ್ನಾಗಲಿ, ಮೂತ್ರವನ್ನಾಗಲಿ ವಿಸರ್ಜಿಸಿದರೆ ಆಗ ಈರೀತಿಯಲ್ಲಿ ಪ್ರಾಯಶ್ಚಿತ್ತವನ್ನು ಆಚರಿಸಬೇಕು. ॥೧೭೪॥

ಅನೇಕ ಬಾರಿ ಮಲಮೂತ್ರಾದಿಗಳನ್ನು ವಿಸರ್ಜಿಸಿದರೆ, ಅನೇಕ ಬಾರಿ ವಿಧಿಪೂರ್ವಕವಾಗಿ ಪ್ರಾಯಶ್ಚಿತ್ತವನ್ನು ನೆರವೇರಿಸಿಕೊಳ್ಳಬೇಕು. ॥೧೭೪-೧೭೫॥

ಕ್ಷೇತ್ರಮಾಹಾತ್ಮ್ಯವನ್ನರಿಯದೇ ಆಕಸ್ಮಿಕ ಮಲಮೂತ್ರಗಳನ್ನು ವಿಸರ್ಜಿಸಿದವರು ತಪ್ಪದೇ, ನಾನು ಹೇಳಿರುವ ಈ ಪ್ರಾಯಶ್ಚಿತ್ತವನ್ನಾಚರಿಸಬೇಕು. ಆದಿಲ್ಲದಿದ್ದರೆ, ಭಯಂಕರವಾದ ದುಃಖವನ್ನನುಭವಿಸುವರು. ಇದರಲ್ಲಿ ಸಂಶಯಪಡಬೇಕಾದುದಿಲ್ಲ. ॥೧೭೬॥

ಕಾಲಭೈರವನ ಸಮೀಪದಲ್ಲಿ, ಶ್ರೇಷ್ಠವಾದ ಒಂದಾನೊಂದು ಕುಂಡವಿರುವುದು. ಅಲ್ಲಿ ಕಾಲಾಷ್ಟಮಿಯ ದಿನ ತಪ್ಪದೇ ಸ್ನಾನವನ್ನಾಚರಿಸಬೇಕು. ॥೧೭೭॥

ಆ ಕುಂಡದ ಸಮೀಪದಲ್ಲಿ, ಕಾಲೇಶ್ವರವೆಂಬ ಹೆಸರುಳ್ಳ ಒಂದು ಶಿವಲಿಂಗವಿರುವುದು. ಅದನ್ನು ಭೈರವನು ಸ್ಥಾಪಿಸಿರುವನು. ಅದರ ದರ್ಶನದಿಂದ ಸಕಲ ಪಾಪಗಳೂ ಕ್ಷಯಿಸುವುವು. ॥೨೭೮॥

ತತ್ಪೂಜನಂ ಯಥಾಶಾಸ್ತ್ರಂ ಕಾರ್ಯಂ ಬಿಲ್ವದಲಾದಿಭಿಃ ।
ತತಃ ಪೂಜಾ ಯಥಾಶಾಸ್ತ್ರಂ ಕರ್ತವ್ಯಾ ಭೈರವಸ್ಯ ಚ ॥೧೭೯॥

ಪ್ರದಕ್ಷಿಣನಮಸ್ಕಾರಾಃ ಕಾರ್ಯಾಶ್ಚಾಷ್ಟೋತ್ತರಂ ಶತಂ ।
ಜಾಗರೇಣೋಪವಾಸೇನ ಪ್ರೀಣನೀಯೋ ಹಿ ಭೈರವಃ ॥೧೮೦॥

ಶುಚಿಭಿಸ್ತೈಲಪಕ್ವಾನ್ನೈಃ ಶೈವಾ ಬ್ರಾಹ್ಮಣಪುಂಗವಾಃ ।
ಭೋಜನೀಯಾಃ ಪ್ರಯತ್ನೇನ ಭೈರವಪ್ರೀತಿಕಾಮುಕೈಃ ॥೧೮೧॥

॥ ಪಾರ್ವತ್ಯುವಾಚ ॥

ಕಾ ವಾ ಕಾಲಾಷ್ಟಮೀ ಶಂಭೋಃ ಸಾ ಕಾಲಸ್ಯ ಪ್ರಿಯಾ ಕಥಂ ।
ಜಾಗರೇಣೋಪವಾಸೇನ ಕಥಂ ತೃಪ್ಯತಿ ಭೈರವಃ ॥೧೮೨॥

॥ ಶಿವ ಉವಾಚ ॥

ಕಾಲಾಷ್ಟಮೀತಿ ವಿಜ್ಞೇಯಾ ಕಾರ್ತಿಕಾಯಾಸಿತಾಷ್ಟಮೀ ।
ತಸ್ಯಾಮುಪೋಷಣಂ ಕಾರ್ಯಂ ತಥಾಜಾಗರಣಂ ನಿಶಿ ॥೧೮೩॥

---

ಬಿಲ್ವ ಪತ್ರೆಗಳಿಂದ ಆ ಲಿಂಗವನ್ನು ವಿಧಿಪೂರ್ವಕವಾಗಿ ಅರ್ಚಿಸಿ, ಬಳಿಕ, ಭೈರವನನ್ನು ಕ್ರಮವರಿತು ಪೂಜಿಸಬೇಕು. ॥೧೭೯॥

ಭೈರವನ ಸನ್ನಿಧಿಯಲ್ಲಿ ನೂರೆಂಟು ಬಾರಿ ಪ್ರದಕ್ಷಿಣೆಯನ್ನು ಮಾಡಿ ನೂರೆಂಟು ಬಾರಿ ಅವನಿಗೆ ನಮಸ್ಕರಿಸಬೇಕು. ಜಾಗರಣ ನಿರಾಹಾರ ವ್ರತಗಳಿಂದ ಅವನನ್ನು ಸಂತೋಷಪಡಿಸಬೇಕು. ॥೧೮೦॥

ಭೈರವನನ್ನು ಪ್ರೀತಿಪಡಿಸಬೇಕೆಂದು ಬಯಸುವವರು, ತೈಲದಿಂದ ಸಿದ್ಧ ಪಡಿಸಿದ ಶುಚಿಯಾದ ಭಕ್ಷ್ಯಭೋಜ್ಯದಿಂದ ಈಶ್ವರಭಕ್ತರಾದ ಬ್ರಾಹ್ಮಣಶ್ರೇಷ್ಠರನ್ನು ತೃಪ್ತಿಗೊಳಿಸಬೇಕು. ಎಂದು ಶಂಕರನು ಹೇಳಲು, ಅನಂತರ ಪಾರ್ವತಿಯು, ॥೧೮೧॥

ಓ ಶಂಭುವೇ, ಕಾಲಾಷ್ಟಮಿಯ ದಿನವಾವುದು? ಅದು ಕಾಲಭೈರವನಿಗೇಕೆ ಪ್ರಿಯವಾಗಿರುವುದು ಮತ್ತು ಜಾಗರಣೋಪವಾಸಗಳಿಂದ ಭೈರವನು ತೃಪ್ತನಾಗು ವುದು ಹೇಗೆ ಎಂಬುದನ್ನು ನನಗೆ ಹೇಳು, ಹೀಗೆಂದು ಕೇಳಲು, ಆಗ ಶಂಕರನು ಹೀಗೆ ನುಡಿದನು. ॥೧೮೨॥

ಎಲೌ ವಲ್ಲಭೆಯೇ, ಕಾರ್ತಿಕ ಬಹುಳ ಅಷ್ಟಮಿಯನ್ನೇ ಆ ದಿನವೆಂದು ತಿಳಿಯು

ಪುರಾ ರಾಥಂತರೇ ಕಲ್ಪೇ ವಸಿಷ್ಠಾದ್ಯಾ ಮುನೀಶ್ವರಾಃ ।
ದೇವಾಶ್ಚೇಂದ್ರಾದಯಃ ಸರ್ವೇ ಕಾಶ್ಯಾಂ ಸಂಪೂಜ್ಯ ಮಾಂ ವಿಭುಂ ॥೧೮೪॥

ನಿತ್ಯಯಾತ್ರಾದಿಕಂ ಕೃತ್ವಾ ಮಧ್ಯಾಹ್ನೇ ಸಂಸ್ಥಿತೇ ರವೌ ।
ಕೃತ್ತಿವಾಸೇಶ್ವರಂ ಪ್ರಾಪುರ್ಬಿಲ್ವಪತ್ರಾದಿಸಾಧನಾಃ ॥೧೮೫॥

ಕೃತ್ತಿವಾಸೇಶ್ವರಂ ಸಮ್ಯಕ್ಪೂಜಯಿತ್ವಾ ತತಃ ಪರಂ ।
ಧ್ಯಾಯಂತಃ ಶಂಕರಂ ನಿತ್ಯಮುಪವಿಷ್ಟಾಃ ಸ್ಥಿರಾಸನಾಃ ॥೧೮೬॥

ತದಾನೀಮಾಗತೋ ಬ್ರಹ್ಮಾ ಕೃತ್ತಿವಾಸೇಶ್ವರಾಲಯಂ ।
ರಿಕ್ತಪಾಣಿರನಭ್ಯರ್ಚ್ಯ ಶಿವಂ ಮಾಂ ಸ ತು ಸಂಸ್ಥಿತಃ ॥೧೮೭॥

ತದಾನೀಂ ವಿಸ್ಮಿತಾಃ ಸರ್ವೇ ವಸಿಷ್ಠಾದ್ಯಾ ಮುನೀಶ್ವರಾಃ ।
ತಮೂಚುಃ ಶ್ರಾಂತಮನಸಃ ಸ್ಮಯಾವಿಷ್ಟಮುದಙ್ಮುಖಂ ॥೧೮೮॥

---

ಬೇಕು. ಆ ಕಾಲಾಷ್ಟಮಿಯ ದಿನ ಉಪವಾಸದಿಂದಿದ್ದು ರಾತ್ರಿಯಲ್ಲಿ ಜಾಗರಣವನ್ನಾಚರಿಸಬೇಕು. ||೧೮೩||

ಹಿಂದೆ ರಥಂತರವೆಂಬ ಕಲ್ಪದಲ್ಲಿ ವಸಿಷ್ಠರೇ ಮೊದಲಾದ ಮುನಿಗಳೂ, ದೇವೇಂದ್ರನೇ ಮುಂತಾದ ದೇವತೆಗಳೂ ಕಾಶೀಕ್ಷೇತ್ರದಲ್ಲಿ ಜಗದೊಡೆಯನಾದ ನನ್ನನ್ನು ಪೂಜಿಸಿ ನಿತ್ಯಕರ್ಮಗಳನ್ನು ನೆರವೇರಿಸಿ ಮಧ್ಯಾಹ್ನ ಕಾಲವು ಬರಲು, ಬಿಲ್ವಪತ್ರೆಯೇ ಮೊದಲಾದ ಪೂಜಾಸಾಮಗ್ರಿಗಳನ್ನು ತೆಗೆದುಕೊಂಡು ಕೃತ್ತಿವಾಸೇಶ್ವರಲಿಂಗದ ಬಳಿಗೆ ಬಂದರು. ||೧೮೪-೧೮೫||

ಅಲ್ಲಿ ಕೃತ್ತಿವಾಸೇಶ್ವರನನ್ನು ಪೂಜಿಸಿ ಶಿವನನ್ನೇ ಧ್ಯಾನಿಸುತ್ತಾ ಸ್ಥಿರವಾದ ಆಸನದಲ್ಲಿ ಕುಳಿತರು. ||೧೮೬||

ಆಗ ಬ್ರಹ್ಮನು ಕೃತ್ತಿವಾಸೇಶ್ವರನ ನಿಲಯಕ್ಕೆ ಬಂದನು. ಅವನು ಬರುವಾಗ ಯಾವ ಪೂಜಾಸಾಮಗ್ರಿಯನ್ನೂ ತಂದಿರಲಿಲ್ಲ. ಆದರಿಂದ ಅವನು ಪೂಜ್ಯನಾದ ನನ್ನನ್ನು ಪೂಜಿಸದೆ ಹಾಗೆಯೇ ನಿಂತನು. ||೧೮೭||

ಆಗ ವಸಿಷ್ಠನೇ ಮೊದಲಾದವರು ಅತ್ಯಂತ ಆಶ್ಚರ್ಯಭರಿತರಾಗಿ ಮೌನದಿಂದ ಉತ್ತರಾಭಿಮುಖವಾಗಿ ಕುಳಿತ ಆ ಬ್ರಹ್ಮನನ್ನು ಕುರಿತು ವ್ಯಥೆಯಿಂದ ಹೀಗೆಂದರು. ||೧೮೮||

|| ಋಷಯ ಊಚುಃ ||

ಕಿಂ ಬ್ರಹ್ಮನ್ದೇವದೇವೇಶಂ ಶಂಕರಂ ಸಾಂಬಮವ್ಯಯಂ ।
ಅಭ್ಯರ್ಚ್ಯಂ ತಮನಭ್ಯರ್ಚ್ಯ ರಿಕ್ತಪಾಣಿರುಪಸ್ಥಿತಃ ॥೧೮೯॥

ಬಿಲ್ವವೃಕ್ಷಾಃ ಕರಪ್ರಾಪ್ಯಾಃ ಸಂತಿ ಕಾಶ್ಯಾಂ ತು ಭೂರಿಶಃ ।
ತಥಾಪಿ ಬಿಲ್ವಪತ್ರಾಣಿ ನಾನೀತಾನಿ ಕಥಂ ತ್ವಯಾ ॥೧೯೦॥

ಬಿಲ್ವಕಂಟಕಭೀತ್ಯಾ ಕಿಂ ಪತ್ರಂ ಕಿಂ ನಾರ್ಜಿತಂ ತ್ವಯಾ ।
ಕಿಮೇವಂ ರಕ್ಷಿತೇನಾಥ ಶರೀರೇಣ ತವಾಧುನಾ ॥೧೯೧॥

ಬಿಲ್ವಕಂಟಕಸಂವಿದ್ಧಕರಾ ಬಿಲ್ವಾರ್ಚನಪ್ರಿಯಾಃ ।
ಭುಕ್ತ್ವಾ ಭೋಗಾಂಶ್ಚ ವಿಪುಲಾಂಛಿವಲೋಕಂ ಪ್ರಯಾಂತಿ ಹಿ ॥೧೯೨॥

---

ಎಲೈ ಬ್ರಹ್ಮನೇ, ದೇವತೆಗಳಿಗೆ ಒಡೆಯನೂ ಕಲ್ಯಾಣಪ್ರದನೂ, ಅರ್ಧನಾರೀಶ್ವರನೂ, ಜರಾಮರಣರಹಿತನೂ, ಪೂಜ್ಯನೂ ಆದ ಶಿವನನ್ನು ಅರ್ಚಿಸದೇ ಅದೇಕೆ ಸುಮ್ಮನಿರುವೆ? ದೇವಾಲಯಕ್ಕೆ ಬರುವಾಗ ಕೈಯ್ಯಲ್ಲಿ ಪೂಜಾಸಾಮಗ್ರಿಯನ್ನೂ ತರದೇ ಬಂದಿರುವೆಯಲ್ಲ, ಅದೇಕೆ ? ||೧೮೯||

ಈ ಕಾಶೀಕ್ಷೇತ್ರದಲ್ಲಿ ಅಗಣಿತವಾದ ಬಿಲ್ವವೃಕ್ಷಗಳಿರುವುವು. ಅವುಗಳ ಕೊಂಬೆಗಳು ಕೈಗಳಿಗೆ ನಿಲುಕುವಂತಿರುವುವು. ಹಾಗಿದ್ದರೂ ನೀನು ಬಿಲ್ವಪತ್ರೆಗಳನ್ನೇಕೆ ತರಲಿಲ್ಲ? ||೧೯೦||

ಬಿಲ್ವವೃಕ್ಷದ ಮುಳ್ಳುಗಳೆಲ್ಲಿ ತನ್ನ ಶರೀರವನ್ನು ಘಾಯಗೊಳಿಸುವವೋ ಎಂಬ ಹೆದರಿಕೆಯಿಂದ ನೀನು ಬಿಲ್ವಪತ್ರೆಯನ್ನು ತರಲಿಲ್ಲವೇ? ಈ ರೀತಿಯಲ್ಲಿ ನಡೆದರೆ ಯಾವ ಪ್ರಯೋಜನವು ತಾನೇ ಲಭಿಸುವುದು ? ||೧೯೧||

ಬಿಲ್ವಪತ್ರೆಗಳನ್ನು ಸಂಗ್ರಹಿಸುವುದರಲ್ಲಿ ಶ್ರದ್ಧೆಯುಳ್ಳವರು ಮುಳ್ಳುಗಳಿಂದ ಕೈಗಳಿಗೆ ಘಾಯಗಳಾದರೂ ಅದನ್ನು ಲೆಕ್ಕಿಸದೆ ಪತ್ರೆಗಳನ್ನು ಸಂಪಾದಿಸಿ ಈ ಲೋಕದಲ್ಲಿ ನಾನಾಬಗೆಯ ದಿವ್ಯಭೋಗಗಳನ್ನನುಭವಿಸಿ ಅಂತ್ಯದಲ್ಲಿ ಶಿವಲೋಕವನ್ನು ಪಡೆಯುವರು. ||೧೯೨||

ಧರ್ಮಸಿದ್ಧಿರ್ವಿನಾ ಕ್ಲೇಶಂ ಧರ್ಮಸ್ತತ್ಕ್ಲೇಶಸಾಧಿತಃ ।
ಕ್ಲೇಶಾಧಿಕ್ಯಾತ್ಫಲಾಧಿಕ್ಯಮಿತಿ ನ ಜ್ಞಾಯತೇ ತ್ವಯಾ ॥೧೯೩॥

ಹಂಸತೀರ್ಥಮಿದಂ ಪುಣ್ಯಂ ಕೃತ್ತಿವಾಸೇಶಸನ್ನಿಧೌ ।
ತತೋ ಜಲಂ ವಾ ನಾನೀತಂ ಕಿಂ ದೇವಾರ್ಥಂ ತ್ವಯಾಧುನಾ ॥೧೯೪॥

ಅಪಾಮಾರ್ಗಸ್ಯ ಪತ್ರಾಣಿ ಸುಲಭಾನಿ ಬಹೂನಿ ಚ ।
ಸಂತ್ಯತ್ರ ತಾನಿ ವಾ ಬ್ರಹ್ಮನ್ನಾನೀತಾನಿ ಕಥಂ ತ್ವಯಾ ॥೧೯೫॥

ರಿಕ್ತಹಸ್ತೋ ಮಹಾದೇವಂ ಯೋ ಯಾತಿ ಸುಮಹಾನಪಿ ।
ವಿನಶ್ಯತಿ ನ ಸಂದೇಹೋ ನರಕಂ ಚಾಧಿಗಚ್ಛತಿ ॥೧೯೬॥

ಪೂಜ್ಯಸ್ಯ ದೇವದೇವಸ್ಯ ಶಂಕರಸ್ಯ ಮಹಾತ್ಮನಃ ।
ನ ಕರೋತಿ ಚ ಯಃ ಪೂಜಾಂ ಸ ಯಾತಿ ನರಕಂ ಧ್ರುವಂ ॥೧೯೭॥

---

ಕ್ಲೇಶವಿಲ್ಲದೇ ಧರ್ಮವು ಸಿದ್ಧಿಸಲಾರದು. ಧರ್ಮಸಾಧನೆಯು ಕ್ಲೇಶದಿಂದಲೇ ಆಗಬೇಕು. ಅಧಿಕವಾದ ಕ್ಲೇಶಗಳಿಂದ ಫಲವೂ ಅಧಿಕವಾಗಿ ದೊರಕುವುದೆಂಬುದನ್ನು ನೀನು ಅರಿತಿರುವುದಿಲ್ಲ. ॥೧೯೩॥

ಕೃತ್ತಿವಾಸೇಶ್ವರಸನ್ನಿಧಿಯಲ್ಲಿ ಪುಣ್ಯಕರವಾದ ಹಂಸತೀರ್ಥವೆಂಬ ಹೆಸರಿನ ಕುಂಡವಿರುವುದು. ನೀನು ಅಲ್ಲಿಂದ ಶಿವನಿಗೋಸ್ಕರ ನೀರನ್ನೇಕೆ ತರಲಿಲ್ಲ? ॥೧೯೪॥

ಇಲ್ಲಿ ಅಪಾಮಾರ್ಗದ (ಉತ್ತರಣೆ) ಪತ್ರೆಗಳು ಹೇರಳವಾಗಿರುವುವು. ಅವು ಇತರವಸ್ತುಗಳಂತೆ ದುರ್ಲಭವಾಗಿರದೆ ಸುಲಭವಾಗಿರುವುವು. ಹೀಗಿರುವಲ್ಲಿ ನೀನು ಅವುಗಳನ್ನಾದರೂ ಏಕೆ ತರಲಿಲ್ಲ. ॥೧೯೫॥

ಯಾವನು ಬರಿಯ ಕೈಗಳಿಂದ ಶಿವನ ಬಳಿಗೆ ಬರುವನೋ ಅವನು ನಾಶವನ್ನು ಹೊಂದುವನಲ್ಲದೇ ನರಕಕ್ಕೆ ತೆರಳುವನು. ಇದರಲ್ಲಿ ಸಂಶಯವಿಲ್ಲ. ॥೧೯೬॥

ಪೂಜ್ಯನೂ, ದೇವತೆಗಳಿಗೆ ಪ್ರಭುವೂ ಮಹಾತ್ಮನೂ ಆದ ಶಂಕರನನ್ನು ಪೂಜಿಸದೇ ಇರುವವನು ನಿಜವಾಗಿಯೂ ನರಕವನ್ನೈದುವನು. ॥೧೯೭॥

ಪ್ರಮಾದೇನಾಭಿಮಾನೇನ ತಥಾ ಗರ್ವೇಣ ವಾ ಭ್ರಮಾತ್ ।
ಪ್ರಾಪ್ಯ ಶಂಭುಂ ರಿಕ್ತಹಸ್ತೋ ನಷ್ಟಧರ್ಮೋ ಭವಿಷ್ಯತಿ ॥೧೯೮॥

ನಷ್ಟಧರ್ಮಸ್ತತೋ ಯಾತಿ ಯಾವದಾಚಂದ್ರತಾರಕಂ ।
ನರಕಂ ತಸ್ಯ ನರಕಾನ್ನಿರ್ಗಮೋ ನಾಸ್ತಿ ಸರ್ವಥಾ ॥೧೯೯॥

ಪ್ರಣಾಮಾಶ್ಚ ತ್ವಯಾ ಬ್ರಹ್ಮನ್ನ ಕೃತಾಃ ಪಾಪನಾಶಕಾಃ ।
ಮಹಾದೇವಸ್ಯ ತೈರೀಶಃ ಪ್ರೀಣಾತಿ ಭಗವಾಂಛಿವಃ ॥೨೦೦॥

ಶುಭಂ ನ ದೃಶ್ಯತೇ ಬ್ರಹ್ಮಂಸ್ತವಾದ್ಯಾತ್ರ ನ ಸಂಶಯಃ ।
ಅನರ್ಚನಾನ್ಮಹೇಶಸ್ಯ ತ್ವಶುಭಂ ಭವತಿ ಧ್ರುವಂ ॥೨೦೧॥

ಇತ್ಯುಕ್ತ್ವಾ ಸಂಸ್ಥಿತಾನ್ದೇವಿ ಬ್ರಹ್ಮಾ ತಾನೃಷಿಸತ್ತಮಾನ್ ।
ಉವಾಚಾತೀವ ಸಂಕೃದ್ಧಃ ಪಾಪಾಶ್ರಯ ಇವಾನಿಶಂ ॥೨೦೨॥

---

ಯಾವನು ಅಜಾಗರೂಕತೆಯಿಂದಲಾಗಲಿ, ತಾನೇ ದೊಡ್ಡವನೆಂಬ ಅಭಿನಿವೇಶದಿಂದಾಗಲಿ, ಅಹಂಕಾರದಿಂದಾಗಲಿ ಅಥವಾ ಅಜ್ಞಾನದಿಂದಾಗಲಿ, ಬರಿಯ ಕೈಗಳಿಂದ ಶಿವನ ಸನ್ನಿಧಿಗೆ ಬರುವನೋ ಅವನು ಧರ್ಮದಿಂದ ಚ್ಯುತನಾಗುವನು. ॥೧೯೮॥

ಧರ್ಮಚ್ಯುತನಾಗಿ ಬಳಿಕ ಅವನು ಆಚಂದ್ರತಾರಕವೂ ನರಕದಲ್ಲಿ ವಾಸವಾಗಿದ್ದು ಅಲ್ಲಿಂದ ಎಂದಿಗೂ ಹಿಂದಿರುಗಲಾರನು. ॥೧೯೯॥

ಎಲೈ ಬ್ರಹ್ಮನೇ, ನೀನು ಶಿವನಿಗೆ ನಮಸ್ಕಾರಗಳನ್ನಾದರೂ ಆಚರಿಸಲಿಲ್ಲ. ಶಿವನಮಸ್ಕಾರಗಳಿಂದಲೇ ಸಕಲ ಪಾಪಗಳೂ ಕ್ಷಯಿಸುವುವು. ಅವುಗಳಿಂದಲೇ ಶಿವನು ಸಂತುಷ್ಟನಾಗುವನು. ॥೨೦೦॥

ಎಲೈ ಬ್ರಹ್ಮನೇ, ಇದು ನಿನಗೆ ಶೋಭಿಸಲಾರದು. ಇದರಲ್ಲಿ ಸಂಶಯವಿರುವುದಿಲ್ಲ. ಈಶ್ವರನನ್ನು ಪೂಜಿಸದಿದ್ದರೆ ಅಮಂಗಳವುಂಟಾಗುವುದು. ಇದು ನಿಜ. ॥೨೦೧॥

ಎಲೌ ದೇವಿಯೇ, ಹೀಗೆಂದು ಹೇಳಿ ಸುಮ್ಮನಾದ ಆ ಮುನಿಶ್ರೇಷ್ಠರನ್ನು ಕುರಿತು ಪಾಪಿಯಾದ ಆ ಬ್ರಹ್ಮನು ಕ್ರೋಧಾವಿಷ್ಟನಾಗಿ ಹೀಗೆಂದನು. ॥೨೦೨॥

॥ ಬ್ರಹ್ಮೋವಾಚ ॥

**ಅಹಮೇವಾಖಿಲೈಃ ಪೂಜ್ಯಃ ಪೂಜ್ಯೋ ಮಮ ನ ಸರ್ವಥಾ ।**
**ಕಿಂ ಶೂಲೀ ಮಮ ಸಂಪೂಜ್ಯಃ ಪೂಜ್ಯೋಽಹಂ ಶೂಲಿನೋ ಧ್ರುವಂ॥೨೦೩॥**

**ವೇದಾಃ ಸೃಷ್ಟಾ ಮಯಾ ಸರ್ವೇ ಸೃಷ್ಟಾ ಲೋಕಾ ಮಯಾ ಪುರಾ ।**
**ಮದನ್ಯಃ ಸರ್ಜಕೋ ಲೋಕೇ ನಾಸ್ತಿ ಪೂಜ್ಯೋಽಪಿ ಸರ್ವಥಾ ॥೨೦೪॥**

**ಭ್ರಾಂತಾ ಯೂಯಂ ನ ಸಂದೇಹಃ ಶೂಲಿಪೂಜಾಪರಾಯಣಾಃ ।**
**ಪೂಜಾ ಮಮೈವ ವಿಹಿತಾ ವೇದಾಸ್ತತ್ರ ತು ಸಾಕ್ಷಿಣಃ ॥೨೦೫॥**

**ಪ್ರಲಪನ್ನೇವಮೇವಾನ್ಯದಪಿ ಭ್ರಾಂತಸ್ತಥಾವಿಧಿಃ ।**
**ತಸ್ಥೌ ತತೋ ಮಹಾವಿಷ್ಣುರರ್ಘ್ಯಪಾಣಿರುಪಾಗತಃ ॥೨೦೬॥**

---

ಎಲೈ ಮುನಿಪುಂಗವರೇ, ನಾನೇ ಸರ್ವರಿಗೂ ಪೂಜ್ಯನಾಗಿರುವೆನು. ನನಗೆ ಪೂಜ್ಯನಾದ ಇನ್ನೊಬ್ಬನಿರುವುದಿಲ್ಲ. ಈಶ್ವರನು ನನಗೆ ಪೂಜ್ಯನೇ ? ನಾನೇ ಶಿವನಿಗೂ ಪೂಜ್ಯನಾಗಿರುವೆನು. ॥೨೦೩॥

ಕಲ್ಪದ ಆದಿಯಲ್ಲಿ ವೇದಗಳನ್ನು ಸೃಷ್ಟಿಸಿರುವವನು ನಾನೇ. ಚತುರ್ದಶ ಭುವನಗಳನ್ನೂ ನಾನೇ ಸೃಷ್ಟಿಸಿದವನು. ಲೋಕದಲ್ಲಿ ನನಗಿಂತಲೂ ಇನ್ನೊಬ್ಬ ಸೃಷ್ಟಿಕರ್ತನಿರುವುದಿಲ್ಲ. ನನಗೆ ಪೂಜ್ಯನಾದ ಇನ್ನೊಬ್ಬನು ಎಂದಿಗೂ ಇರುವುದಿಲ್ಲ. ॥೨೦೪॥

ಶಿವನ ಪೂಜೆಯಲ್ಲಿಯೇ ಆಸಕ್ತರಾದ ನೀವು ಇದನ್ನರಿಯದೇ ಶಿವನೇ ಸರ್ವರಿಗೂ ಪೂಜ್ಯನೆಂದು ಭ್ರಾಂತರಾಗಿರುವಿರಿ. ಇದರಲ್ಲಿ ಸಂಶಯವಿರುವುದಿಲ್ಲ. ಎಲ್ಲರೂ ನನ್ನನ್ನೇ ಪೂಜಿಸಬೇಕೆಂದು ವಿಧಿಯಿರುವುದು. ಇದಕ್ಕೆ ವೇದಗಳೇ ಸಾಕ್ಷಿಭೂತವಾಗಿರುವುವು. ॥೨೦೫॥

ಅಜ್ಞಾನಿಯಾದ ಬ್ರಹ್ಮನು ಇದರಂತೆ ಇನ್ನೂ ಬಗೆಬಗೆಯ ಮಾತುಗಳನ್ನಾಡಿ ಸುಮ್ಮನಾಗಲು ವಿಷ್ಣುವು ಕೈಯ್ಯಲ್ಲಿ ಅರ್ಘ್ಯಜಲವನ್ನು ತೆಗೆದುಕೊಂಡು ಆ ಸ್ಥಳಕ್ಕೆ ಬಂದನು. ॥೨೦೬॥

ತತೋಽಭಿಷಿಚ್ಯ ಮಾಂ ವಿಷ್ಣುಃ ಕ್ಷೀರಾದ್ಯಾದಿಭಿರಾದರಾತ್ ।
ಚಕಾರ ಪೂಜಾಂ ವಿವಿಧಾಂ ಬಿಲ್ವಪತ್ರಾದಿಭಿರ್ಮುದಾ ॥೨೦೭॥

ಧೂಪದೀಪಾಂಶ್ಚ ನೈವೇದ್ಯಂ ಕ್ಷೀರಾಜ್ಯದಧಿಮಿಶ್ರಿತಂ ।
ದತ್ವಾ ಪುನರ್ದದೌ ದೀಪಾನ್ಪುನಃ ಪುಷ್ಪಾಂಜಲಿಂ ದದೌ ॥೨೦೮॥

ಪ್ರದಕ್ಷಿಣನಮಸ್ಕಾರಂ ಚಕಾರ ತದನಂತರಂ ।
ತತಃ ಪಂಚಾಕ್ಷರಂ ಶೈವಂ ಜಜಾಪ ಸ ಜನಾರ್ದನಃ ॥೨೦೯॥

ತತಸ್ತಂ ಧ್ಯಾನನಿರತಂ ವಿಧಿರ್ದೃಷ್ಟ್ವಾ ಹರಿಂ ತದಾ ।
ಉವಾಚ ವಚನಂ ಭ್ರಾಂತಃ ಕ್ರೋಧಮುತ್ಪಾದಯನ್ಹರೇಃ ॥೨೧೦॥

ಅಸಂಪೂಜ್ಯೈವ ಪೂಜಾರ್ಹಂ ಮಾಮಯಂ ವಿಷ್ಣುರುದ್ಧತಃ ।
ಶೂಲಿಪೂಜಾಂ ಕರೋತ್ಯತ್ರ ಭ್ರಾಂತೋಽಯಂ ನಾತ್ರ ಸಂಶಯಃ ॥೨೧೧॥

---

ಅನಂತರ ವಿಷ್ಣುವು ಹಾಲು, ಮೊಸರು, ತುಪ್ಪ, ಜೇನುತುಪ್ಪ ಮುಂತಾದುವುಗಳಿಂದ ನನ್ನನ್ನು ಅಭಿಷೇಕಿಸಿ ಬಿಲ್ವಪತ್ರೆ ಮೊದಲಾದ ಪೂಜಾಸಾಮಗ್ರಿಗಳಿಂದ ಕ್ರಮವರಿತು ಪೂಜಿಸಿದನು. ॥೨೦೭॥

ಬಳಿಕ ಧೂಪದೀಪಗಳನ್ನೂ ಹಾಲುಮೊಸರುಗಳಿಂದ ಮಿಶ್ರಿತವಾದ ನೈವೇದ್ಯವನ್ನೂ ನಿವೇದಿಸಿದನು. ಮತ್ತು ಪುನಃ ದೀಪಗಳನ್ನು ಸಮರ್ಪಿಸಿ ಪುಷ್ಪಾಂಜಲಿಯನ್ನು ಸಮರ್ಪಿಸಿದರು. ॥೨೦೮॥

ಬಳಿಕ ಪ್ರದಕ್ಷಿಣೆಯನ್ನು ಮಾಡಿ ಶಿವನಿಗೆ ನಮಸ್ಕರಿಸಿ ಶಿವಪಂಚಾಕ್ಷರ ಮಂತ್ರವನ್ನು ಜಪಿಸಿದನು. ॥೨೦೯॥

ತರುವಾಯ ವಿಷ್ಣುವು ಧ್ಯಾನಾಸಕ್ತನಾಗಲು, ಆಗ ಬ್ರಹ್ಮನು ಅವನನ್ನು ನೋಡಿ, ಅವನಿಗೆ ಕೋಪವುಂಟಾಗುವಂತೆ ಹೀಗೆಂದನು. ॥೨೧೦॥

"ಈ ವಿಷ್ಣುವು ಪೂಜಿಸಲು ಯೋಗ್ಯನಾದ ನನ್ನನ್ನು ಪೂಜಿಸದೇ ಅಜ್ಞಾನದಿಂದ ಶಿವನನ್ನು ಪೂಜಿಸುತ್ತಿರುವನು. ಇವನು ಭ್ರಾಂತನಾಗಿರುವನು. ಇದರಲ್ಲಿ ಸಂಶಯವಿಲ್ಲ." ॥೨೧೧॥

ಇತ್ಯುದೀರಿತಮಾಕರ್ಣ್ಯ ವಚನಂ ತದ್ವಿಧೇರ್ಹರಿಃ ।
ಪೂಜಾಂ ಸಮಾಪ್ಯ ತದನು ಜಗಾದ ವಚನಂ ತದಾ ॥೨೧೨॥

ಹಾಹಾ ದುರ್ಭಗ ದುರ್ಬುದ್ಧೇ ಕಿಮೇವಂ ವಕ್ತುಮರ್ಹಸಿ ।
ಕಥಂ ಭ್ರಾಂತೋಽದ್ಯ ಜಾತೋಽಸಿ ಶುಭಂ ನಾದ್ಯ ತು ದೃಶ್ಯತೇ ॥೨೧೩॥

ಸರ್ವದೇವೋತ್ತಮಃ ಸಾಂಬಃ ಶಂಕರೋ ಭಕ್ತವತ್ಸಲಃ ।
ಸರ್ವೇಷಾಮಪಿ ಸಂಪೂಜ್ಯಸ್ತಸ್ಯ ಪೂಜ್ಯೋ ನ ವಿದ್ಯತೇ ॥೨೧೪॥

ತಸ್ಯೈವ ಪೂಜಾ ವಿಹಿತಾ ಸರ್ವವೇದೇಷು ಸರ್ವಥಾ ।
ತತ್ಪೂಜಯೈವ ಸಂಪ್ರಾಪ್ಯೋ ಮೋಕ್ಷೋ ಮೋಕ್ಷಪ್ರದಃ ಶಿವಃ ॥೨೧೫॥

ಶಿವಪೂಜಾ ಮಯಾ ಪೂರ್ವಂ ಬಹುಧೈವ ಕೃತಾ ಮುಹುಃ ।
ಅಹಂ ಶಿವಪ್ರಸಾದೇನ ಪಾಲಯಾಮ್ಯಖಿಲಂ ಜಗತ್ ॥೨೧೬॥

---

ಹೀಗೆಂದ ಬ್ರಹ್ಮನ ಆ ಮಾತನ್ನು ಕೇಳಿ ವಿಷ್ಣುವು ಪೂಜೆಯನ್ನು ಮುಗಿಸಿ ಬ್ರಹ್ಮನನ್ನು ಕುರಿತು ಹೀಗೆಂದನು. ॥೨೧೨॥

"ಎಲೈ ದುಷ್ಟನೇ, ಕೆಟ್ಟಬುದ್ಧಿಯುಳ್ಳವನೇ, ನೀನೇಕೆ ಈ ರೀತಿಯಲ್ಲಿ ಮಾತನಾಡುವೆ? ಇದೇಕೆ ಭ್ರಾಂತನಾಗಿರುವೆ? ಇದು ನಿನಗೆ ಶೋಭಿಸಲಾರದು. ॥೨೧೩॥

ಭಕ್ತವತ್ಸಲನೂ, ಉಮಾಸಹಿತನೂ ಆದ ಶಿವನೇ ಸಕಲ ದೇವತೆಗಳಲ್ಲಿಯೂ ಶ್ರೇಷ್ಠನಾಗಿರುವವನು. ಆದುದರಿಂದ ಅವನು ಸರ್ವರಿಗೂ ಪೂಜ್ಯನಾಗಿರುವನು. ಅವನಿಗೆ ಪೂಜ್ಯನಾದ ಇನ್ನೊಬ್ಬ ದೇವತೆಯಿರುವುದಿಲ್ಲ. ॥೨೧೪॥

ಸಕಲ ವೇದಗಳಲ್ಲಿಯೂ ಅವನ ಪೂಜೆಯೇ ವಿಧಿಸಲ್ಪಟ್ಟಿರುವುದು. ಅವನ ಪೂಜೆಯಿಂದಲೇ ಮೋಕ್ಷವು ಲಭಿಸುವುದು. ಆ ಶಿವನೇ ಮೋಕ್ಷವನ್ನು ದಯಪಾಲಿಸುವನು. ॥೨೧೫॥

ನಾನು ಈ ಹಿಂದೆ ಅನೇಕವೇಳೆ ಶಿವನನ್ನು ಪೂಜಿಸಿರುವೆನು. ಶಿವನ ಅನುಗ್ರಹದಿಂದಲೇ ನಾನು ಸಕಲ ಭುವನಗಳನ್ನೂ ರಕ್ಷಿಸುತ್ತಿರುವೆನು." ॥೨೧೬॥

ಇತ್ಯುಕ್ತವಂತಂ ತಂ ವಿಷ್ಣುಂ ಭ್ರಾಂತೋಽಸೀತಿ ಜಗಾದ ಸಃ ।
ಮತ್ತೋಽನ್ಯೋ ನ ಹಿ ಸಂಪೂಜ್ಯಃ ಪೂಜ್ಯೋಽನ್ಯೋ ನಾತ್ರಸಂಶಯಃ ॥೨೧೭॥

ಭ್ರಾಂತಾಃ ಸರ್ವೇ ಕಥಂ ಜಾತಾಃ ಪೂಜ್ಯಂ ಮಾಂ ಸರ್ವಸಾಧನೈಃ ।
ನ ಪೂಜಯಂತಿ ದುರ್ವೃತ್ತಾಃ ಮಾಮಿತ್ಯೇವಂ ವದನ್ ಸ್ಥಿತಃ ॥೨೧೮॥

ತದಾ ಕ್ಲೇಶಾನ್ವಿತೋ ವಿಷ್ಣುಃ ಶಂಕರಂ ಲೋಕಶಂಕರಂ ।
ತುಷ್ಟಾವ ವಿವಿಧೈಃಸ್ತೋತ್ರೈರುವಾಚೇದಂ ವಚಸ್ತದಾ ॥೨೧೯॥

ಶಂಭೋ ಪ್ರಸೀದ ದೇವೇಶ ಕ್ಲೇಶಾನ್ದೂರೀಕುರುಷ್ವ ನಃ ।
ಅಸ್ಯೈವಂ ಸಂಹರಸ್ವೈನಮಧರ್ಮಸ್ಯ ಪ್ರವರ್ತಕಂ ॥೨೨೦॥

ಅಧರ್ಮವೃದ್ಧ್ಯಾ ಸರ್ವೇಽಪಿ ಯಾಸ್ಯಂತಿ ನರಕಂ ಧ್ರುವಂ ।
ಕೃಪಾಲುರಸಿ ದೇವೇಶ ವಿಧಿಮೇನಂ ಪ್ರಣಾಶಯ ॥೨೨೧॥

---

ವಿಷ್ಣುವು ಹೀಗೆನ್ನಲು ಆಗ ಬ್ರಹ್ಮನು ಅವನನ್ನು ನೋಡಿ, ನೀನು ಭ್ರಾಂತನಾಗಿರುವೆ. ನನಗಿಂತಲೂ ಪೂಜ್ಯನಾದ ಇನ್ನೊಬ್ಬ ದೇವನಿರುವುದಿಲ್ಲ. ಇದು ನಿಜ. ||೨೧೭||

ಇದೇಕೆ ಹೀಗೆ ಎಲ್ಲರೂ ಭ್ರಾಂತರಾಗಿರುವರಲ್ಲ? ದುರಾಚಾರಿಗಳಾದ ಜನರು ಸಕಲ ಪ್ರಯತ್ನಗಳಿಂದಲೂ ಪೂಜ್ಯನಾಗಿರುವ ನನ್ನನ್ನು ಪೂಜಿಸದೇ ಇರುವರು. ಹೀಗೆಂದು ಹೇಳಿ ಬ್ರಹ್ಮನು ಸುಮ್ಮನಾದನು. ||೨೧೮||

ಆಗ ವಿಷ್ಣುವು ಮನನೊಂದು ಜಗದೊಡೆಯನಾದ ಶಿವನನ್ನು ನಾನಾವಿಧವಾದ ಸ್ತೋತ್ರಗಳಿಂದ ಸ್ತುತಿಸಿ ಮತ್ತೆ ಹೀಗೆಂದನು. ||೨೧೯||

ಓ ಶಂಭುವೇ, ದೇವೇಶನೇ, ಪ್ರಸನ್ನನಾಗು. ನನಗೆ ಸಂಭವಿಸಿರುವ ಈ ಕಷ್ಟಗಳನ್ನು ಹೋಗಲಾಡಿಸು. ಈಶ್ವರನಿಂದಕನಾದ ಇವನನ್ನು ಸಂಹರಿಸು. ದುಷ್ಟನಾದ ಇವನು ಅಧರ್ಮದ ಪ್ರವರ್ತಕನಾಗಿರುವನು. ||೨೨೦||

ಅಧರ್ಮವು ವೃದ್ಧಿಯನ್ನು ಹೊಂದುವುದರಿಂದ ಜನರು ನರಕವನ್ನೈದುವರು. ಇದು ನಿಜ. ಓ ದೇವೇಶನೇ, ನೀನು ದಯಾಶಾಲಿಯಾಗಿರುವೆ. ಈ ಬ್ರಹ್ಮನನ್ನು ನಾಶಗೊಳಿಸು. ||೨೨೧||

ಅಶೈವೋಽಯಂ ದುರಾಚಾರಃ ಸ್ಥಾಪನೀಯೋ ನ ಸರ್ವಥಾ ।
ಅಶೈವಶಿಕ್ಷಾ ಕರ್ತವ್ಯಾ ದೇವೇಶ ತ್ರಿಪುರಾಂತಕ ॥೨೨॥

ನೋ ಚೇದಧರ್ಮವೃದ್ಧಿಸ್ತು ಭವಿಷ್ಯತಿ ನ ಸಂಶಯಃ ।
ಅಧರ್ಮವೃದ್ಧ್ಯಾ ದೇವಾನಾಂ ದುಃಖವೃದ್ಧಿರ್ಭವಿಷ್ಯತಿ ॥೨೩॥

ಇತ್ಯುಕ್ತ್ವಾ ಪ್ರಣತೋ ವಿಷ್ಣುಃ ಸಋಷಿಃ ಸಸುತಸ್ತದಾ ।
ಪ್ರಸೀದೇಶ ಪ್ರಸೀದೇಶ ಪ್ರಸೀದೇತಿ ವದನ್ ಮುಹುಃ ॥೨೪॥

ತದೋಗ್ರರೂಪಾದನಘೋಽನ್ಯತ್ತಃ ಶ್ರೀಕಾಲಭೈರವಃ ।
ಆವಿರಾಸೀತ್ತದಾ ಲೋಕಾನ್ಭೀಷಯನ್ನಖಿಲಾನಪಿ ॥೨೫॥

ವ್ಯಾಪ್ಯಾಯಂ ಸಪ್ತಪಾತಾಲಾನನಂತಚರಣೈಃ ಸ್ವಯಂ ।
ಭೂರ್ಭುವಃಸುವರಾದೀಂಶ್ಚ ಶಿರೋಭಿರ್ವ್ಯಾಪ್ಯ ಸಂಸ್ಥಿತಃ ॥೨೬॥

---

ಓ ದೇವೇಶನೇ, ತ್ರಿಪುರಾಂತಕನೇ, ದುರಾಚಾರಿಯೂ ಶಿವನಿಂದಕನೂ ಆದ ಇವನನ್ನು ಇರಗೊಳಿಸಬಾರದು. ಶಿವದ್ವೇಷಿಗಳನ್ನು ಶಿಕ್ಷಿಸಲೇಬೇಕು. ॥೨೨॥

ಹಾಗಿಲ್ಲದಿದ್ದರೆ ಅಧರ್ಮವು ವೃದ್ಧಿಯನ್ನು ಹೊಂದುವುದು. ಇದರಲ್ಲಿ ಸಂಶಯವಿಲ್ಲ. ಅಧರ್ಮವು ವೃದ್ಧಿಯನ್ನು ಹೊಂದುವುದರಿಂದ ದೇವತೆಗಳಿಗೆ ದುಃಖವು ಹೆಚ್ಚುವುದು. ॥೨೩॥

ಹೀಗೆಂದು ಯೋಚಿಸಿ ವಿಷ್ಣುವು, ಓ ದೇವೇಶನೇ ಪ್ರಸನ್ನನಾಗು ಎಂದು ಬಾರಿಬಾರಿಗೂ ಶಿವನನ್ನು ಮೊರೆಯಿಡುತ್ತಾ ಋಷಿಗಳೊಂದಿಗೂ ಮತ್ತು ಮಕ್ಕಳೊಂದಿಗೂ ಶಿವನಿಗೆ ನಮಸ್ಕರಿಸಿದನು. ॥೨೪॥

ಆಗ ಉಗ್ರರೂಪವನ್ನು ಧರಿಸಿದ ನನ್ನ ದೆಸೆಯಿಂದ ಕಾಲಭೈರವನು ಹುಟ್ಟಿದನು. ಅವನು ಸಕಲ ಜನರನ್ನೂ ಭಯಗ್ರಸ್ತರನ್ನಾಗಿ ಮಾಡುತ್ತಾ ಆವಿರ್ಭವಿಸಿದನು. ॥೨೫॥

ಇವನು ತನ್ನ ಅಸಂಖ್ಯಾಕವಾದ ಪಾದಗಳಿಂದ ಸಪ್ತಪಾತಾಲಲೋಕಗಳನ್ನೂ ಶಿರಸ್ಸುಗಳಿಂದ ಭೂರ್ಭುವಸ್ಸುವರಾದಿ ಲೋಕಗಳನ್ನೂ ವ್ಯಾಪಿಸಿ ದೇವತೆಗಳೆದುರಿಗೆ ನಿಂತನು. ॥೨೬॥

ದಿಶೋ ದಶ ವ್ಯಾಪ್ಯ ಹಸ್ತೈರನಂತೈರ್ವಿವೃತಾನನಃ ।
ಅನಂತಸೂರ್ಯಪ್ರತಿಮಃ ಕಾಲಾನಲಸಮಪ್ರಭಃ ॥೨೨೭॥

ನಾನಾಶಸ್ತ್ರಾವೃತಕರೋ ನಾನಾಗಂಧಾನುಲೇಪನಃ ।
ನಾನಾಮಾಲ್ಯಾವೃತೋ ನಾನಾರತ್ನಾಭರಣಸಂವೃತಃ ॥೨೨೮॥

ಅನಂತರೋಮಕೂಪೇಷು ವಪನ್ನಗ್ನಿಕಣಾನ್ಬಹೂನ್ ।
ನಿಃಶ್ವಾಸಪವನೈರಗ್ನಿಂ ವಿಸೃಜನ್ರಕ್ತಲೋಚನಃ ॥೨೨೯॥

ಅಖಂಡಪ್ರಲಯಾಗ್ನೀನಾಂ ಸಮೂಹ ಇವ ಸಂಸ್ಥಿತಃ ।
ದೃಷ್ಟ್ವಾ ತಂ ವಿಸ್ಮಿತಾಃ ಸರ್ವೇ ದೇವಾಃ ಸಋಷಿಪುಂಗವಾಃ ॥೨೩೦॥

ಚಚಾಲಾವನಿರುದ್ವಿಗ್ನಾ ಚೇಲುಶ್ಚ ಕುಲಪರ್ವತಾಃ ।
ಶೇಷಶ್ಚಕಂಪೇ ಸಕಲೈಃ ಫಣಿಭಿಶ್ಚ ಸಮಾವೃತಃ ॥೨೩೧॥

---

ತನ್ನ ಅನಂತ ಹಸ್ತಗಳಿಂದ ಹತ್ತು ದಿಕ್ಕುಗಳನ್ನೂ ವ್ಯಾಪಿಸಿ ಬಾಯನ್ನು ತೆರೆದಿದ್ದನು. ಪ್ರಖರವಾದ ತೇಜಸ್ಸಿನಿಂದ ಅನಂತಸೂರ್ಯರಂತೆ ಕಾಣಿಸುತ್ತಿದ್ದನು. ಅವನ ದೇಹಕಾಂತಿಯು ಪ್ರಲಯಕಾಲದ ಅಗ್ನಿಯಂತೆ ಧಗಧಗಿಸುತ್ತಿದ್ದಿತು. ಹಸ್ತಗಳಲ್ಲಿ ನಾನಾಬಗೆಯ ಶಸ್ತ್ರಾಸ್ತ್ರಗಳನ್ನು ಧರಿಸಿದ್ದನು. ಶರೀರದ ಆದ್ಯಂತವೂ ಸುಗಂಧಯುಕ್ತವಾದ ಗಂಧವನ್ನು ಲೇಪಿಸಿದ್ದನು. ಬಗೆಬಗೆಯ ಪುಷ್ಪಮಾಲಿಕೆಗಳನ್ನು ಧರಿಸಿದ್ದನು. ಮತ್ತು ವಿವಿಧವಾದ ರತ್ನಾಭರಣಗಳಿಂದ ಅಲಂಕೃತನಾಗಿದ್ದನು. ||೨೨೭-೨೨೮||

ರೋಮಕೂಪಗಳಲ್ಲಿ ಅಗಣಿತವಾದ ಅಗ್ನಿಕಣಗಳಿದ್ದುವು. ಅವನು ತನ್ನ ಶ್ವಾಸದಿಂದ ಅಗ್ನಿಯನ್ನು ಹೊರಗೆಡವುತ್ತಿದ್ದನು. ಕಣ್ಣುಗಳು ಬೆಂಕಿಯಂತೆ ಕೆಂಪಾಗಿದ್ದುವು. ||೨೨೯||

ಆಗ ಅವನು ಅಖಂಡವಾದ ಪ್ರಲಯಾಗ್ನಿಗಳ ಸಮುದಾಯವೋ ಎಂಬಂತೆ ತೋರುತ್ತಿದ್ದನು. ಅವನನ್ನು ನೋಡಿ ದೇವತೆಗಳೂ ಮತ್ತು ಋಷಿಶ್ರೇಷ್ಠರೂ ಆಶ್ಚರ್ಯಭರಿತರಾದರು. ||೨೩೦||

ಅವನನ್ನು ನೋಡಿ ಪ್ರಕ್ಷೋಭಗೊಂಡ ಭೂಮಿಯು ನಡುಗಿತು. ಕುಲಪರ್ವತಗಳು ಚಲಿಸಿದವು. ಸರ್ಪಗಳಿಂದ ಕೂಡಿದ ಆದಿಶೇಷನು ಭಯದಿಂದ ನಡುಗಿಹೋದನು. ||೨೩೧||

ತನ್ನಿಃಶ್ವಾಸಮಹಾವಾಯುರುತ್ಪಾತಪವನೋಽಭವತ್ ।
ತತ್ಕರಾಘಾತಮಾತ್ರೇಣ ಪೇತುರುರ್ವ್ಯಾಂ ಚ ತಾರಕಾಃ ॥೨೩೨॥

ಪಪಾತ ಮೂರ್ಛಿತೋ ವಿಷ್ಣುಸ್ತಂ ದೃಷ್ಟ್ವಾಭೀಮವಿಕ್ರಮಂ ।
ಪೇತುರ್ಮುನಿವರಾಃ ಸರ್ವೇ ದೇವಾಶ್ಚೇಂದ್ರಪುರೋಗಮಾಃ ॥೨೩೩॥

ಕ್ಷುಬ್ಧಾಃ ಸಮುದ್ರಾಃ ಸರ್ವೇಽಪಿ ಕ್ಷೀರಾಬ್ಧಿಪ್ರಮುಖಾಸ್ತದಾ ।
ಉದ್ವೇಲಾಶ್ಚ ಬಭೂವುಸ್ತೇ ಮಹಾಕಲ್ಲೋಲಸಂವೃತಾಃ ॥೨೩೪॥

ತತಃ ಸ ಭೈರವೋ ಲೋಕಾನ್ಭೀಷಯನ್ನಖಿಲಾನಪಿ ।
ಪ್ರಣಮ್ಯ ಮಾಮುವಾಚೇದಂ ವಚನಂ ವಿನಯಾನ್ವಿತಃ ॥೨೩೫॥

॥ ಶ್ರೀಭೈರವ ಉವಾಚ ॥

ಶಂಭೋ ಕಿಂ ಕರವಾಣ್ಯದ್ಯ ಕಾರ್ಯಂ ತೇ ಕಿಮುಪಸ್ಥಿತಂ ।
ಶೋಷಣೀಯಾಃ ಸಮುದ್ರಾಃ ಕಿಂ ಕ್ಷಣೇನೈವಾದ್ಯ ಲೀಲಯಾ ॥೨೩೬॥

ಕಿಂ ವಾ ಕುಲಾಚಲಾಃ ಸರ್ವೇ ಪೇಷಣೀಯಾಸ್ತ್ವದಾಜ್ಞಯಾ ।
ಭಸ್ಮೀಭೂತಾಶ್ಚ ಕರ್ತವ್ಯಾ ದೇವಾಃ ಸರ್ವೇ ಕಿಮೀಶ್ವರ ॥೨೩೭॥

---

ಅವನ ನಿಃಶ್ವಾಸದಿಂದುಂಟಾದ ವಾಯುವು ಬಿರುಗಾಳಿಯಂತಿತ್ತು. ಅವನ ಕೈಗಳ ಹೊಡೆತದಿಂದಲೇ ನಕ್ಷತ್ರಗಳೆಲ್ಲಾ ಭೂಮಿಯಲ್ಲಿ ಬಿದ್ದುವು. ॥೨೩೨॥

ಅಮಿತ ಪರಾಕ್ರಮವುಳ್ಳ ಅವನನ್ನು ನೋಡಿ ವಿಷ್ಣುವು ಮೂರ್ಛೆಗೊಂಡು ಬಿದ್ದನು. ಇಂದ್ರಾದಿಗಳು, ದೇವತೆಗಳು, ಮತ್ತು ಸಕಲ ಮುನಿಪುಂಗವರೂ ಕೆಳಕ್ಕೆ ಬಿದ್ದರು. ॥೨೩೩॥

ಆಗ ಕ್ಷೀರಸಾಗರವೇ ಮೊದಲಾದ ಸಮುದ್ರಗಳು ಅಲ್ಲೋಲಕಲ್ಲೋಲವಾದುವು. ಅವುಗಳಲ್ಲಿ ದೊಡ್ಡ ದೊಡ್ಡ ತೆರೆಗಳುಂಟಾಗಿ ಅವು ದಡವನ್ನು ಅತಿಕ್ರಮಿಸಿದುವು. ॥೨೩೪॥

ಬಳಿಕ ಆ ಭೈರವನು ಉಗ್ರವಾದ ತನ್ನ ಆಕಾರದಿಂದ ಸಕಲ ಲೋಕಗಳಿಗೂ ಭೀತಿಯನ್ನುಂಟುಮಾಡುತ್ತಾ ನನಗೆ ನಮಸ್ಕರಿಸಿ ಹೀಗೆಂದನು. ॥೨೩೫॥

ಓ ಶಂಭುವೇ, ಈಗ ನಾನೇನನ್ನು ಮಾಡಲಿ? ನಾನು ನೆರವೇರಿಸುವಂತಹ ಅದಾವ ಕಾರ್ಯವು ನಿನಗೆ ಒದಗಿರುವುದು? ಸಮುದ್ರಗಳನ್ನೆಲ್ಲಾ ಕ್ಷಣಮಾತ್ರದಲ್ಲಿ

ಕಿಂ ಭಸ್ಮತಾಮುಪೈತ್ವೀಶ ಸಶೈಲವನಕಾನನಾ ।
ಪೃಥಿವೀ ಸನದೀ ಸರ್ವಾ ಮಾಮಾಜ್ಞಾಪಯ ಶಂಕರಂ ॥೨೩೮॥

ಮಾ ವಿಲಂಬಂ ಕುರುಷ್ವೇಶ ಕಿಂ ವಿಲಂಬೇನ ಶಂಕರ ।
ತ್ವತ್ಪ್ರಸಾದೇನ ಸರ್ವೇಷಾಂ ನಾಶಕಶ್ಚ ಭವಾಮ್ಯಹಂ ॥೨೩೯॥

ಮಯೋಗ್ರತರರೂಪೇಣ ತೂಷ್ಣೀಂ ಸ್ಥಾತುಂ ನ ಶಕ್ಯತೇ ।
ದೇವೋತ್ತಮ ಮಹಾದೇವ ಹರಾಜ್ಞಾಪಯ ಮಾಂ ವಿಭೋ ॥೨೪೦॥

ಏವಮುಕ್ತೋ ಭೈರವೇಣ ಪ್ರಣತಶ್ಚ ಮುಹುರ್ಮುಹುಃ ।
ತದಾ ಬ್ರಹ್ಮಶಿರಶ್ಛೇದಂ ಕುರುಷ್ವೇತ್ಯುಕ್ತವಾನಹಂ ॥೨೪೧॥

ತತೋ ವಿಧಿಂ ಭೈರವಸ್ತಂ ದೃಷ್ಟ್ವಾ ಪ್ರಸ್ಫುರಿತಾಧರಃ ।
ನಖಾಗ್ರೇಣೈವ ಚಿಚ್ಛೇದ ಶಿರಾಂಸಿ ಸ ಪಪಾತ ಚ ॥೨೪೨॥

---

ಲೀಲಾಜಾಲವಾಗಿ ಒಣಗಿಸಲೆ? ಕುಲಪರ್ವತಗಳನ್ನು ಚೂರುಚೂರಾಗಿ ಮಾಡಲೇ? ಅಥವಾ ಸಕಲ ದೇವತೆಗಳನ್ನೂ ಕ್ಷಣಮಾತ್ರದಲ್ಲಿ ದಹಿಸಲೇ? ॥೨೩೬-೨೩೭॥

ಪರ್ವತಗಳು, ವನಗಳು, ಅರಣ್ಯಗಳು, ನದಿಗಳು ಇವುಗಳೊಂದಿಗಿರುವ ಈ ಪೃಥಿವಿಯನ್ನೇ ದಹಿಸಲೇ? ಓ ಶಂಕರನೇ, ನಾನು ಯಾವ ಕಾರ್ಯವನ್ನು ನೆರವೇರಿಸಬೇಕೆಂಬುದನ್ನು ಶೀಘ್ರವಾಗಿ ನನಗೆ ಆಜ್ಞಾಪಿಸು. ॥೨೩೮॥

ಓ ಪ್ರಭುವೇ, ವಿಲಂಬವನ್ನು ಮಾಡಬೇಡ. ವಿಲಂಬದಿಂದೇನು ಪ್ರಯೋಜನ? ನಿನ್ನ ಅನುಗ್ರಹದಿಂದ ನಾನು ಸಕಲರನ್ನೂ ಈಗಲೇ ನಾಶಗೊಳಿಸುವೆನು. ॥೨೩೯॥

ನಾನು ಈ ಉಗ್ರರೂಪವನ್ನು ಧರಿಸಿ ಸುಮ್ಮನಿರಲಾರೆ. ಓ ದೇವೋತ್ತಮನೇ, ಮಹಾದೇವನೇ, ಪ್ರಭುವೇ, ಶೀಘ್ರವಾಗಿ ನನ್ನನ್ನು ಯಾವುದಾದರೊಂದು ಕಾರ್ಯಕ್ಕೆ ಆಜ್ಞಾಪಿಸು. ॥೨೪೦॥

ಹೀಗೆಂದು ಹೇಳಿ ಭೈರವನು ನನಗೆ ಬಾರಿಬಾರಿಗೂ ನಮಸ್ಕರಿಸಲು ಆಗ ನಾನು ಅವನಿಗೆ ಬ್ರಹ್ಮನ ಶಿರಸ್ಸನ್ನು ಕತ್ತರಿಸುವಂತೆ ಅಪ್ಪಣೆಯನ್ನಿತ್ತೆನು. ॥೨೪೧॥

ಬಳಿಕ ಭೈರವನು ಬ್ರಹ್ಮನನ್ನು ನೋಡಿ ಕ್ರೋಧಾವೇಶದಿಂದ ತುಟಿಗಳನ್ನು ಅಲ್ಲಾಡಿಸುತ್ತಾ ತನ್ನ ಉಗುರಿನ ಅಗ್ರಭಾಗದಿಂದಲೇ ಬ್ರಹ್ಮನ ಶಿರಸ್ಸುಗಳನ್ನು ಕತ್ತರಿಸಿದನು. ಒಡನೆಯೇ ಬ್ರಹ್ಮನು ಕೆಳಕ್ಕೆ ಬಿದ್ದನು. ॥೨೪೨॥

ತತಸ್ತಸ್ಯ ವಿಧೇಶ್ಛಿನ್ನಂ ಪ್ರಥಮಂ ತು ಶಿರಸ್ತದಾ ।
ಜಗಾಮ ನಾಗನಿಲಯಂ ಪ್ರಲಪನ್ಸತ್ವರಂ ಶಿವೇ ॥೨೪೩॥

ತದಾ ತಸ್ಯ ಶಿರೋ ದೃಷ್ಟ್ವಾ ಬ್ರಹ್ಮಣಃ ಫಣಿರಾಟ್ ತದಾ ।
ವಿಸ್ಮಿತೋಽಭೂತ್ಕಿಮೇತಸ್ಯ ಶಿರಶ್ಛೇದಸ್ಯ ಕಾರಣಂ ॥೨೪೪॥

ಇದಂ ಬ್ರಹ್ಮ ಶಿರೋ ನೂನಂ ಮಯಾ ತು ಪರಿಚೀಯತೇ ।
ಬ್ರಹ್ಮಣೋ ನ ಶಿವಾದನ್ಯಃ ಶಾಸ್ತಾ ದೇವೋ ನ ವಿದ್ಯತೇ ॥೨೪೫॥

ಪ್ರಾಯಶೋ ದೇವದೇವಸ್ಯ ಮಹಾದೇವಸ್ಯ ಪೂಜನಂ ।
ನ ಕೃತಂ ಬ್ರಹ್ಮಣಾ ತಸ್ಮಾಚ್ಛಿವೇನ ನಿಹತೋ ವಿಧಿಃ ॥೨೪೬॥

ಪ್ರಾಯಶೋ ಬ್ರಹ್ಮಣಾ ಶಂಭೋರ್ಧಿಕ್ಕಾರೋ ವಾ ಕೃತೋ ಧ್ರುವಂ।
ನಂದಿಕೇಶಸ್ಯ ವಾನ್ಯಸ್ಯ ಶಿವಭಕ್ತಸ್ಯ ವಾ ಧ್ರುವಂ ॥೨೪೭॥

---

ಬಳಿಕ ಕತ್ತರಿಸಲ್ಪಟ್ಟ ಬ್ರಹ್ಮನ ಮೊದಲನೆಯ ಶಿರಸ್ಸು ದುಃಖದಿಂದ ಪ್ರಲಪಿಸುತ್ತಾ ಒಡನೆಯೇ ನಾಗಲೋಕಕ್ಕೆ ಹೋಗಿ ಅಲ್ಲಿಂದ ಕೆಳಕ್ಕೆ ಬಿದ್ದಿತು. ॥೨೪೩॥

ಆಗ ಆದಿಶೇಷನು ಕೆಳಗೆ ಬಿದ್ದಿರುವ ಬ್ರಹ್ಮನ ಆ ಶಿರಸ್ಸನ್ನು ನೋಡಿ ಈ ಬ್ರಹ್ಮನ ಶಿರಚ್ಛೇದಕ್ಕೆ ಕಾರಣವೇನಿರಬಹುದು ಎಂದು ಅತ್ಯಂತ ಆಶ್ಚರ್ಯಭರಿತನಾದನು. ॥೨೪೪॥

ನನ್ನ ಮುಂದುಗಡೆಯಲ್ಲಿ ತೋರುತ್ತಿರುವ ಈ ಶಿರಸ್ಸು ನಿಜವಾಗಿಯೂ ಬ್ರಹ್ಮನ ಶಿರಸ್ಸೇ ಆಗಿರುವುದೆಂದು ನಾನು ನಿಶ್ಚಯಿಸುವೆನು. ಶಿವನನ್ನು ಬಿಟ್ಟು ಇನ್ನಾವ ದೇವನೂ ಬ್ರಹ್ಮನನ್ನು ಶಿಕ್ಷಿಸಲಾರನು. ಪ್ರಾಯಶಃ ಬ್ರಹ್ಮನು ದೇವೇಶನಾದ ಪರಶಿವನನ್ನು ಪೂಜಿಸಿರಲಾರನು. ಆದುದರಿಂದಲೇ ಶಿವನು ಬ್ರಹ್ಮನನ್ನು ಸಂಹರಿಸಿರಬಹುದು ಎಂದು ಆವನು ತರ್ಕಿಸಿದನು. ॥೨೪೫-೨೪೬॥

ಒಂದುವೇಳೆ ಬ್ರಹ್ಮನು ಶಿವನನ್ನಾಗಲಿ, ನಂದಿಕೇಶ್ವರನನ್ನಾಗಲಿ ಅಥವಾ ಈಶ್ವರಭಕ್ತನನ್ನಾಗಲಿ ತಿರಸ್ಕರಿಸಿರಬಹುದೆಂದೂ ತೋರುವುದು. ॥೨೪೭॥

ಶಿವಂ ವಾ ಶಿವಭಕ್ತಂ ವಾ ನಂದಿಕೇಶಂ ಶಿವಪ್ರಿಯಂ ।
ಯೋ ಧಿಕ್ಕರೋತಿ ತಸ್ಯೇಯಂ ಗತಿರ್ಭವತಿ ಸರ್ವಥಾ ॥೨೪೮॥

ಅನ್ಯಥಾ ಬ್ರಹ್ಮಣೋಽಕಾಂಡೇ ಶಿರಶ್ಛೇದಃ ಕಥಂ ಭವೇತ್ ।
ನಾಯಂ ಪ್ರಲಯಕಾಲಸ್ತು ಬ್ರಹ್ಮವಿಷ್ಣ್ವೀಶನಾಶಕಃ ॥೨೪೯॥

ಸಮಯಃ ಪ್ರಲಯಸ್ಯಾಸ್ತು ಮಾಸ್ತು ವಾಯಂ ತಥಾಪ್ಯಹಂ ।
ಕಾಶೀಂ ಪ್ರತಿ ಗಮಿಷ್ಯಾಮಿ ಯತ್ರ ಪ್ರಲಯಭೀರ್ನ ಮೇ ॥೨೫೦॥

ಮಹಾಪ್ರಲಯಕಾಲೇಽಪಿ ಕಾಶೀಸ್ಥೋ ನ ವಿನಶ್ಯತಿ ।
ತತಃ ಕಾಶೀಮಹಂ ಯಾಸ್ಯೇ ಯತ್ರ ನ ಪ್ರಲಯಾದ್ಭಯಂ ॥೨೫೧॥

ದಗ್ಧಾ ಭವಂತು ಬ್ರಹ್ಮಾದ್ಯಾ ಲೋಕಾ ದಗ್ಧಾ ಭವಂತು ಚ ।
ಯಾಸ್ಯೇಽಹಂ ಸರ್ವಥಾ ನಿತ್ಯಂ ಕಾಶೀಂ ಮಾಹೇಶ್ವರೀಂ ಪುರೀಂ ॥೨೫೨॥

---

ಯಾವನು ಶಿವನನ್ನಾಗಲಿ, ಈಶ್ವರಭಕ್ತನನ್ನಾಗಲಿ, ಶಿವನಿಗೆ ಪ್ರಿಯನಾದ ನಂದಿಕೇಶ್ವರನನ್ನಾಗಲಿ ಧಿಕ್ಕರಿಸುವನೋ, ಅವನಿಗೇನೆ ಈ ದುರ್ದೆಶೆಯು ಸಂಭವಿಸುವುದು. ॥೨೪೮॥

ಹಾಗಿಲ್ಲದಿದ್ದರೆ ಆಕಸ್ಮಿಕವಾಗಿ (ಅನಿರೀಕ್ಷಿತವಾಗಿ) ಬ್ರಹ್ಮನ ಶಿರಶ್ಛೇದವು ಆಗುವ ಬಗೆ ಹೇಗೆ? ಅಥವಾ ಇದು ಬ್ರಹ್ಮವಿಷ್ಣುಗಳೇ ಮುಂತಾದವರನ್ನು ನಾಶಪಡಿಸುವ ಪ್ರಲಯಕಾಲವೇ ಆಗಿರಬಹುದೆಂದರೆ ಇದು ಪ್ರಳಯಕಾಲವಲ್ಲ. ॥೨೪೯॥

ಅಥವಾ ಇದು ಪ್ರಳಯಕಾಲವಾಗಿರಲಿ ಪ್ರಳಯಕಾಲವಾಗದಿರಲಿ ನಾನು ಈಗಲೇ ಕಾಶೀಕ್ಷೇತ್ರಕ್ಕೆ ಹೋಗುವೆನು. ಅಲ್ಲಿ ಪ್ರಲಯಕಾಲದ ಭಯವಂತೂ ಇರುವುದಿಲ್ಲ. ॥೨೫೦॥

ಮಹಾಪ್ರಲಯಕಾಲದಲ್ಲಿಯೂ ಸಹ ಕಾಶೀಕ್ಷೇತ್ರದಲ್ಲಿ ವಾಸವಾಗಿರುವವನು ನಾಶವನ್ನು ಹೊಂದುವುದಿಲ್ಲ. ಆದುದರಿಂದ ನಾನು ಕಾಶಿಗೆ ಹೋಗುವೆನು. ಅಲ್ಲಿ ಪ್ರಲಯಕಾಲದ ಭಯವೇ ಇರುವುದಿಲ್ಲ. ॥೨೫೧॥

ಬ್ರಹ್ಮಾದಿದೇವತೆಗಳು ದಗ್ಧರಾಗಲಿ, ಲೋಕಗಳು ಸುಡಲಿ, ಹೇಗಾದರೂ ನಾನು ಈಶ್ವರನ ಪಟ್ಟಣವಾದ ಕಾಶೀನಗರಕ್ಕೆ ತೆರಳುವೆನು. ॥೨೫೨॥

ಇತ್ಯುಕ್ತ್ವಾ ಫಣಿರಾಟ್ ಶೀಘ್ರಂ ಕಾಶೀಂ ಪ್ರತಿ ಸಮಾಯಯೌ ।
ಪಾಹಿ ಪಾಹಿ ಮಹಾದೇವ ಪ್ರಲಯಾದಿತಿ ಸಂವದನ್ ॥೨೫೩॥

ಸಂಪ್ರಾಪ್ಯ ಕಾಶೀಂ ಪೂತಾತ್ಮಾ ಪ್ರಹೃಷ್ಟಹೃದಯಃ ಫಣೀ ।
ಅಮನ್ಯತ ತದಾತ್ಮಾನಂ ಕೃತಾರ್ಥಂ ಭಾಗ್ಯಸಂಶ್ರಯಂ ॥೨೫೪॥

ದೃಷ್ಟ್ವಾ ಕಾಶೀಪುರೀಂ ಶೈವೀಂ ಶೈವಮೋಕ್ಷಪ್ರದಾಯಿನೀಂ ।
ಸಾಕ್ಷಾಚ್ಛಿವಸ್ವರೂಪೀಯಂ ದೇವಾನಾಮಪಿ ದುರ್ಲಭಾ ॥೨೫೫॥

ಕೃಪಾ ಮಯಿ ಮಹೇಶಸ್ಯ ಸಂಪೂರ್ಣಾ ತಿಷ್ಠತಿ ಧ್ರುವಂ ।
ಯತೋಽತಿದುರ್ಲಭಾ ಕಾಶೀ ಸುಲಭಾದ್ಯ ಮಮಾಭವತ್ ॥೨೫೬॥

ಅತಃ ಪರಂ ಭಯಂ ನಾಸ್ತಿ ಮೃತ್ಯೋರಪಿ ಮಮ ಧ್ರುವಂ ।
ಯತಃ ಪ್ರಾಪ್ತಾ ಮಯಾ ಕಾಶೀ ಯಾಂ ಮೃತ್ಯುರ್ನಾವಪಶ್ಯತಿ ॥೨೫೭॥

---

ಹೀಗೆಂದು ಯೋಚಿಸಿ ಆದಿಶೇಷನು ಓ ಮಹಾದೇವನೇ, ಪ್ರಲಯಕಾಲದಿಂದ ನನ್ನನ್ನು ರಕ್ಷಿಸು ಎನ್ನುತ್ತಾ ಜಾಗ್ರತೆಯಾಗಿ ಕಾಶೀಕ್ಷೇತ್ರಕ್ಕೆ ನಡೆದನು. ||೨೫೩||

ಕಾಶಿಯನ್ನು ಸೇರಿ ನಾಗರಾಜನು ಸಂತೋಷಭರಿತನಾಗಿ ತಾನು ಕೃತಕೃತ್ಯನೂ ಭಾಗ್ಯಶಾಲಿಯೂ ಆದೆನೆಂದು ತಿಳಿದನು. ||೨೫೪||

ಶಿವನ ವಾಸಸ್ಥಳವೂ ಈಶ್ವರಭಕ್ತರಿಗೆ ಮೋಕ್ಷವನ್ನು ದಯಪಾಲಿಸುವುದೂ ಆದ ಕಾಶೀನಗರವನ್ನು ನೋಡಿದೊಡನೆಯೇ ಅವನು ಹೀಗೆಂದು ಯೋಚಿಸಿದನು.— ಈ ಕಾಶೀಕ್ಷೇತ್ರವು ಶಿವನ ಸ್ವರೂಪವೇ ಆಗಿದ್ದು ದೇವತೆಗಳಿಗೂ ದುರ್ಲಭವಾಗಿರುವುದು. ನನ್ನಲ್ಲಿ ನಿಜವಾಗಿಯೂ ಈಶ್ವರನ ಸಂಪೂರ್ಣವಾದ ಕೃಪೆಯಿರುವುದು. ಏಕೆಂದರೆ, ಇತರರಿಗೆ ದುರ್ಲಭವಾದ ಈ ಕಾಶೀಕ್ಷೇತ್ರವು ನನಗೆ ಈಗ ಸುಲಭವಾಯಿತು. ||೨೫೫-೨೫೬||

ಇನ್ನು ಮುಂದೆ ನನಗೆ ಮೃತ್ಯುವಿನ ದೆಸೆಯಿಂದ ಭಯವಿರುವುದಿಲ್ಲ. ಏಕೆಂದರೆ, ಮೃತ್ಯುಭಯವಿಲ್ಲದಿರುವ ಈ ಕಾಶೀಕ್ಷೇತ್ರವಾಸವು ನನಗೆ ಈಗ ಪ್ರಾಪ್ತವಾಗಿದೆ. ||೨೫೭||

ತತಃ ಸ ರತ್ನಪುಷ್ಪಾದ್ಯೈರ್ವಿಶ್ವೇಶಂ ಮಾಂ ಸನಾತನಂ ।
ಸಂಪೂಜ್ಯ ನಿತ್ಯಯಾತ್ರಾದಿ ಸರ್ವಂ ಕರ್ಮ ಚಕಾರ ಸಃ ॥೨೫೮॥

ಆದಿಭೈರವಮಭ್ಯರ್ಚ್ಯ ಧೂಪದೀಪಾದಿಭಿಸ್ತತಃ ।
ಕೃತ್ತಿವಾಸೇಶ್ವರಂ ದ್ರಷ್ಟುಂ ಪುಷ್ಪಪಾಣಿರುಪಾಯಯೌ ॥೨೫೯॥

ಶ್ರೀಕಾಲಭೈರವಂ ದೃಷ್ಟ್ವಾ ಭೀಮರೂಪಂ ಭಯಾನಕಂ ।
ಚಕಂಪೇ ಮೂರ್ಛಿತಃ ಶೇಷಃ ಪಪಾತ ಪೃಥಿವೀತಲೇ ॥೨೬೦॥

ಮಯಾ ಚೋತ್ಥಾಪಿತೋ ವಿಷ್ಣುಸ್ತತಃ ಪೂರ್ವಂ ಸ ಮೂರ್ಛಿತಃ ।
ಇಂದ್ರಾದಯಃ ಸ ಋಷಯಃ ಮಯೈವೋತ್ಥಾಪಿತಾಃ ಶಿವೇ ॥೨೬೧॥

ವಿಷ್ಣುರಿಂದ್ರಃ ಫಣಿಪತಿರ್ದೇವಾಶ್ಚಾನ್ಯೇ ಮುನೀಶ್ವರಾಃ ।
ದದೃಶುಶ್ಛಿನ್ನಶಿರಸಂ ವಿಧಿಂ ತಂ ಪತಿತಂ ಭುವಿ ॥೨೬೨॥

ತತೋ ವಿಷ್ಣುಃ ಸ ದೇವೇಂದ್ರಃ ಸ ಋಷಿಃ ಸ ಫಣಿಸ್ತಥಾ ।
ಸ್ತೋತ್ರೈರನೇಕೈಸ್ತುಷ್ಟಾವ ಭೀಮಂ ಶ್ರೀಕಾಲಭೈರವಂ ॥೨೬೩॥

---

ಬಳಿಕ ನಾಗರಾಜನು, ವಿಶ್ವೇಶ್ವರನಾದ ನನ್ನನ್ನು, ರತ್ನಗಳಿಂದಲೂ, ಪುಷ್ಪಗಳಿಂದಲೂ ಪೂಜಿಸಿ, ಅಲ್ಲಿ ನಿತ್ಯಕರ್ಮವನ್ನು ನೆರವೇರಿಸಿದನು. ॥೨೫೮॥

ಅಲ್ಲಿಯೇ ಅವನು, ಧೂಪದೀಪಾದಿಗಳಿಂದ ಆದಿಭೈರವನನ್ನು ಪೂಜಿಸಿ, ಪುಷ್ಪಗಳನ್ನು ತೆಗೆದುಕೊಂಡು, ಕೃತ್ತಿವಾಸೇಶ್ವರನನ್ನು ನೋಡಲು ಹೋದನು. ॥೨೫೯॥

ಆದಿಶೇಷನು, ಉಗ್ರವಾದ ರೂಪವನ್ನು ಧರಿಸಿದ ಕಾಲಭೈರವನನ್ನು ನೋಡಿ, ನಡುಗಿದನು. ಬಳಿಕ ಮೂರ್ಛೆಗೊಂಡು ಕೆಳಗೆ ಬಿದ್ದನು. ॥೨೬೦॥

ಎಲೌ, ಪಾರ್ವತಿಯೇ! ಇದಕ್ಕೆ ಸ್ವಲ್ಪ ಮುಂಚೆ, ಭೈರವನ ದರ್ಶನದಿಂದ ಮೂರ್ಛೆಗೊಂಡ ವಿಷ್ಣು, ಇಂದ್ರಾದಿದೇವತೆಗಳು, ಮತ್ತು ವಸಿಷ್ಠಾದಿ ಋಷಿಗಳು, ಇವರನ್ನು ನಾನು ಮೂರ್ಛೆಯಿಂದ ಎಚ್ಚರಿಸಿದೆನು. ॥೨೬೧॥

ಆಗ, ವಿಷ್ಣು, ಇಂದ್ರ, ನಾಗರಾಜ, ದೇವತೆಗಳು, ಮುನಿಪುಂಗವರು ಇವರೆಲ್ಲರೂ, ಶಿರಸ್ಸು ಕತ್ತರಿಸಿ ಕೆಳಕ್ಕೆ ಬಿದ್ದಿದ್ದ ಬ್ರಹ್ಮನನ್ನು ನೋಡಿದರು. ॥೨೬೨॥

ಬಳಿಕ, ವಿಷ್ಣುವು, ದೇವೇಂದ್ರ, ಋಷಿಗಳು, ನಾಗರಾಜ ಇವರಿಂದೊಡಗೂಡಿ,

॥ ದೇವಾ ಊಚುಃ ॥

ನಮಸ್ತೇ ಕಾಲನಾಥಾಯ ನಮಸ್ತೇ ಕಾಲರೂಪಿಣೇ ।
ನಮೋ ಭೀಮಾಯಚೋಗ್ರಾಯ ನಮಸ್ತೇ ಶೂಲಪಾಣಿನೇ ॥೨೬೪॥

ನಮಸ್ತೇ ಕಾಲಕಂಠಾಯ ನಮಸ್ತೇ ಕಾಲಭಕ್ಷಕ ।
ನಮೋ ದಿಗಂಬರಾನಂತ ನಮಃ ಪರಮಪೂರುಷ ॥೨೬೫॥

ನಮೋ ವಿಶ್ವಾತ್ಮಕ ಶ್ರೀಮನ್ನಮೋ ವಿಶ್ವೈಕಜೀವನ ।
ನಮಸ್ತೇಽಸ್ತು ಸಹಸ್ರಾಕ್ಷ ಸಹಸ್ರಕರ ತೇ ನಮಃ ॥೨೬೬॥

ಸಹಸ್ರಕರಣಧ್ಯೇಯ ನಮಸ್ತೇ ಭೈರವಪ್ರಭೋ ।
ನಮಸ್ತೇ ರುದ್ರರುದ್ರಾತ್ಮನ್ನಮಸ್ತೇ ರುದ್ರಸಂಭವ ॥೨೬೭॥

ನಮಸ್ತೇ ಶಾಂಭವಾನಂದ ನಮಸ್ತೇ ಭೂತಭಾವನ ।
ನಮಸ್ತೇ ಸರ್ವಲೋಕೇಶ ಸರ್ವಧಾರಾಮರಾರ್ಚಿತ ॥೨೬೮॥

---

ಉಗ್ರರೂಪಿಯಾದ ಕಾಲಭೈರವನನ್ನು ಬಗೆಬಗೆಯ ಸ್ತೋತ್ರಗಳಿಂದ ಸ್ತುತಿಸಿದನು. ॥೨೬೩॥

ಆಗ ಸ್ತುತ್ತಿಸುತ್ತಾ ಹೀಗೆಂದರು—ಓ, ಕಾಲನಾಥನೇ ನಿನಗೆ ನಮಸ್ಕಾರವು. ಕಾಲರೂಪನಾದ ನಿನ್ನನ್ನು ವಂದಿಸುವೆವು. ಭಯಂಕರನೂ ಉಗ್ರರೂಪಧಾರಿಯೂ, ಶೂಲಪಾಣಿಯೂ ಆದ ನಿನಗೆ ನಮಸ್ಕಾರವು. ॥೨೬೪॥

ಕಂಠದಲ್ಲಿ ವಿಷವನ್ನು ಧರಿಸಿದವನೂ, ಮೃತ್ಯುವನ್ನೇ ನಾಶಗೊಳಿಸುವವನೂ, ದಿಕ್ಕುಗಳನ್ನೇ ವಸ್ತ್ರವನ್ನಾಗಿ ಉಳ್ಳವನೂ, ವ್ಯಾಪಕನೂ, ನಿತ್ಯನೂ ಆದ ನಿನ್ನನ್ನು ವಂದಿಸುವೆವು. ॥೨೬೫॥

ಓ, ವಿಶ್ವರೂಪನೇ! ಜಗದಾಧಾರನೇ! ಸಹಸ್ರಾಕ್ಷನೇ! ಸಹಸ್ರ ಕೈಗಳನ್ನು ಧರಿಸಿರುವವನೇ! ನಿನಗೆ ವಂದನೆಗಳು. ॥೨೬೬॥

ಕಾಲಭೈರವನೇ! ನಿನ್ನ ಅನಂತರೂಪಗಳನ್ನು, ಸಹಸ್ರ ಕರಣಗಳಿಂದ ಮನಸ್ಸು ಧ್ಯಾನಿಸಬಹುದಾಗಿದೆ. ಈಶ್ವರಸ್ವರೂಪನೇ! ರುದ್ರನಿಂದ ಜನಿಸಿದವನೇ, ನಿನಗೆ ನಮಸ್ಕರಿಸುವೆವು. ॥೨೬೭॥

ಈಶ್ವರಭಕ್ತರಿಗೆ ಆನಂದವನ್ನುಂಟುಮಾಡುವವನೇ! ಪ್ರಲಯಕಾಲದಲ್ಲಿ,

ನಮಸ್ತೇ ದಿಕ್ಸ್ವರೂಪಾಯ ನಮಸ್ತೇ ಭೂಸ್ವರೂಪಿಣೇ ।
ನಮಸ್ತೇ ಸೂರ್ಯರೂಪಾಯ ಚಂದ್ರರೂಪಾಯ ತೇ ನಮಃ ॥೨೬೯॥

ನಮಸ್ತೇ ಶಾಶ್ವತಾನಂದ ನಮಸ್ತೇ ಭೂತಭಾವನ ।
ನಮಸ್ತೇ ಗ್ರಹರೂಪಾಯ ರೂಪಾತೀತಾಯ ತೇ ನಮಃ ॥೨೭೦॥

ನಮಃ ಸಕಲಕಲ್ಯಾಣಭಾಜನಾಯಾಮೃತಾತ್ಮನೇ ।
ನಮಃ ಪರಮವೀರಾಯ ನಮಃ ಪರಶುಧಾರಿಣೇ ॥೨೭೧॥

ನಮೋ ಡಮರುಹಸ್ತಾಯ ನಮಃ ಖಟ್ವಾಂಗಧಾರಿಣೇ ।
ನಮೋಽನಂತಗುಣಾಧಾರ ನಮೋಽನಂತಸ್ವರೂಪಿಣೇ ॥೨೭೨॥

ನಮೋ ವಿಭೂತಿಕವಚ ವ್ಯೋಮಕೇಶ ನಮೋ ನಮಃ ।
ನಮಸ್ತ್ರಿಶೂಲಹಸ್ತಾಯ ನಮಸ್ತೇ ಮುಂಡಮಾಲಿನೇ ॥೨೭೩॥

---

ಭೂತಗಳನ್ನು ಉಪಸಂಹರಿಸುವವನೇ! ಜಗದೊಡೆಯನೇ! ಜಗದಾಧಾರನೇ! ದೇವತೆಗಳಿಗೂ ಸಹ ಪೂಜ್ಯನಾದ ನಿನಗೆ ನಮಸ್ಕರಿಸುವೆವು. ॥೨೬೮॥

ದಿಕ್ಸ್ವರೂಪನೂ, ಪೃಥಿವಿಯ ಸ್ವರೂಪನೂ, ಸೂರ್ಯಚಂದ್ರಸ್ವರೂಪನೂ ಆದ ನಿನ್ನನ್ನು ವಂದಿಸುವೆವು. ॥೨೬೯॥

ಅಖಂಡ ನಿತ್ಯಾನಂದಸ್ವರೂಪನೂ, ಜಗತ್ಕಾರಣನೂ, ಸೂರ್ಯಚಂದ್ರಾದಿ ಗ್ರಹಗಳ ಸ್ವರೂಪನೂ, ರೂಪಾದಿ ಗುಣಹೀನನೂ ಆದ ನಿನ್ನನ್ನು ವಂದಿಸುವೆವು. ॥೨೭೦॥

ಸಕಲ ಕಲ್ಯಾಣಗಳಿಗೆ ಆಶ್ರಯನೂ, ನಿತ್ಯನೂ, ನಿತ್ಯಶಕ್ತಿಯುಳ್ಳವನೂ, ಪರಶುಧಾರಿಯೂ ಆದ ನಿನ್ನನ್ನು ನಮಿಸುವೆವು. ॥೨೭೧॥

ಕೈಯ್ಯಲ್ಲಿ ಡಮರುಗವನ್ನು ಧರಿಸಿದವನೇ! ಖಟ್ವಾಂಗಧಾರಿಯೇ! ಅನಂತ ಕಲ್ಯಾಣಗುಣಗಳುಳ್ಳವನೇ, ಅನಂತರೂಪವುಳ್ಳವನೇ, ನಿನಗೆ ನಮಸ್ಕರಿಸುವೆವು. ॥೨೭೨॥

ವಿಭೂತಿಯೇ ಕವಚವಾಗಿ ಉಳ್ಳವನೇ, ವ್ಯೋಮಕೇಶನೇ, ತ್ರಿಶೂಲ ಪಾಣಿಯೇ, ಮುಂಡಮಾಲಿಕೆಗಳನ್ನು ಧರಿಸಿದವನೇ, ನಿನಗೆ ವಂದಿಸುವೆವು. ॥೨೭೩॥

ನಮಃ ಪ್ರೇತಾಸನಾಸೀನ ಜಪಾವರ್ಣ ನಮೋಽಸ್ತುತೇ ।
ನಮೋ ಬ್ರಹ್ಮಣ್ಯರೂಪಾಯ ವಿಧಿನಾಶಕೃತೇ ನಮಃ ॥೨೭೪॥

ಅಶ್ವೈವಶ್ವೈಲವಜ್ರೇಶ ಶಿವದ್ರೋಹಿ ವಿನಾಶಕ ।
ಶಿವಭಕ್ತಪ್ರಿಯ ಶ್ರೀಮನ್ನಮಃ ಶ್ರೀಕಾಲಭೈರವ ॥೨೭೫॥

ಶರಣ್ಯಮೂರ್ತೇ ಸರ್ವಾತ್ಮನ್ನಮಸ್ತೇ ಭಕ್ತವತ್ಸಲ ।
ಶಿವನೇತ್ರಾನಲ ಶ್ರೀಮನ್ನಮಸ್ತೇ ಶಿವಪೂಜಕ ॥೨೭೬॥

ನಮೋ ರಕ್ತಾಂಬರ ಶ್ರೀಮನ್ನಮಸ್ತೇ ರಕ್ತಚಂದನ ।
ನಮಸ್ತೇ ರಕ್ತಕೇಶಾಯ ನಮಸ್ತೇ ರಕ್ತಬಾಹವೇ ॥೨೭೭॥

ನಮಸ್ತೇ ರಕ್ತಫಾಲಾಯ ನಮೋ ರಕ್ತನಖಾಯ ತೇ ।
ನಿರ್ವಿಕಾರ ನಿರೀಹೇಶ ನಿರಂಜನ ನಿರಾಶ್ರಯ ॥೨೭೮॥

---

ಶ್ಮಶಾನವಾಸಿಯೇ, [1]ಜಪಾಕುಸುಮದಂತೆ ರಕ್ತವರ್ಣವುಳ್ಳವನೇ, ಬ್ರಾಹ್ಮಣ ಸ್ವರೂಪನೇ, ಬ್ರಹ್ಮನನ್ನು ಸಂಹರಿಸಿದವನೇ, ನಿನಗೆ ನಮಸ್ಕಾರ. ॥೨೭೪॥

ಶಿವನನ್ನು ಪೂಜಿಸದಿದ್ದವರಿಗೆ ವಜ್ರಾಯುಧದಂತೆ ಭಯಂಕರನೇ, ಶಿವನಿಂದಕರನ್ನು ಸಂಹರಿಸುವವನೇ, ಈಶ್ವರಭಕ್ತರನ್ನು ಪ್ರೀತಿಸುವವನೇ, ನಿನಗೆ ವಂದನೆಗಳು. ॥೨೭೫॥

ಓ ಶರಣಾಗತರಕ್ಷಕನೇ, ವಿಶ್ವರೂಪನೇ, ಭಕ್ತವತ್ಸಲನೇ, ಶಿವನ ತೃತೀಯ ನೇತ್ರಸ್ವರೂಪನೇ, ಈಶ್ವರಾರಾಧಕನೇ, ನಿನಗೆ ನಮಸ್ಕಾರವು. ॥೨೭೬॥

ರಕ್ತಾಂಬರಧಾರಿಯೇ, ರಕ್ತಚಂದನವನ್ನು ಲೇಪಿಸಿಕೊಂಡಿರುವವನೇ, ರಕ್ತವಾದ ಕೇಶಗಳುಳ್ಳವನೇ, ರಕ್ತವಾದ ಬಾಹುಗಳುಳ್ಳವನೇ, ನಿನ್ನನ್ನು ವಂದಿಸುವೆವು. ॥೨೭೭॥

ರಕ್ತವರ್ಣವುಳ್ಳ ಹಣೆಯಿಂದ ಶೋಭಿಸುವವನೇ! ರಕ್ತವರ್ಣವುಳ್ಳ ಉಗುರುಗಳಿಂದೊಡಗೂಡಿದವನೇ, ಜರಾಮರಣಾದಿ ಷಡ್ವಿಕಾರರಹಿತನೇ, ನಿಸ್ಪೃಹನೇ, ಜಗತ್ಪ್ರಭುವೇ, ದುಃಖರಹಿತನೇ, ನಿರಾಧಾರನೇ, ನಿನಗೆ ವಂದಿಸುವೆವು. ॥೨೭೮॥

---

1 ಜಪಾಕುಸುಮ-ಕೆಂಪುದಾಸವಾಳದ ಹೂವು.

ನಿರುಪಪ್ಲವ ನಿರ್ದ್ವಂದ್ವ ನಿರಾಮಯ ನಿರಂಜನ ।
ವ್ಯಾಲೋಪವೀತಿನ್ನುಗ್ರಾತ್ಮನ್ಮಹಾಪ್ರಲಯಕಾರಣ ॥೨೭೯॥

ಅನೇಕಶಶಿಸೋಮಸೂರ್ಯಾಗ್ನಿಗಣಾಕಾರ ನಮೋಽಸ್ತು ತೇ ।
ದೃಷ್ಟ್ವಾ ತವೇದಮತ್ಯುಗ್ರಂ ರೂಪಂ ಭೀತಾ ದಿವೌಕಸಃ ॥೨೮೦॥

ಭೀತೋಽಸ್ಮ್ಯಹಂ ಕೃಪಾಸಿಂಧೋ ಭೀತಾಶ್ಚ ಋಷಿಪುಂಗವಾಃ ।
ದ್ರಷ್ಟುಂ ನ ಶಕ್ಯತೇ ಘೋರಂ ತವೇದಂ ರೂಪಮೀದೃಶಂ ॥೨೮೧॥

ಸೌಮ್ಯರೂಪಂ ವಹಸ್ವೇಶ ಪ್ರಸೀದ ಕರುಣಾಕರ ।
ದುಷ್ಟಸ್ಯೈವಂ ಮತಾ ಶಿಕ್ಷಾ ಶಿವದ್ರೋಹರತಸ್ಯ ತು ॥೨೮೨॥

ಶಿಕ್ಷೇಯಮೇವ ಸರ್ವೇಶ ಅಶೈವಾನಾಂ ದುರಾತ್ಮನಾಂ ।
ಉತ್ಸಾಹೋಽದ್ಯ ಮಹಾನಾಸೀನ್ಮಮ ಶ್ರೀಕಾಲಭೈರವ ॥೨೮೩॥

---

ಆಧ್ಯಾತ್ಮಿಕ, ಆಧಿದೈವಿಕ, ಆಧಿಭೌತಿಕವೆಂಬ ತಾಪತ್ರಯಗಳಿಂದ ಬಿಡಲ್ಪಟ್ಟವನೇ, ಶೋಕಮೋಹಗಳಿಲ್ಲದವನೇ; ಕಾಯಿಕ, ಮಾನಸಿಕವಾದ ರೋಗಗಳಿಂದ ವಿನಿರ್ಮುಕ್ತನೇ, ಸರ್ಪಭೂಷಣನೇ, ಉಗ್ರರೂಪಧಾರಿಯೇ, ಮಹಾಪ್ರಲಯವನ್ನುಂಟುಮಾಡುವವನೇ, ನಿನಗೆ ನಮಸ್ಕಾರವು. ||೨೭೯||

ಸೂರ್ಯ, ಚಂದ್ರ, ಅಗ್ನಿ, ಪ್ರಮಥಗಣಗಳು ಇವೇ ಮೊದಲಾದ ಅನೇಕ ರೂಪಗಳನ್ನು ಧರಿಸಿ ವ್ಯವಸ್ಥಿತನಾಗಿರುವವನೇ, ನಿನಗೆ ನಮಸ್ಕಾರವು. ನಿನ್ನ ಉಗ್ರವಾದ ಈ ರೂಪವನ್ನು ನೋಡಿ ದೇವತೆಗಳು ಹೆದರುವರು. ||೨೮೦||

ಓ, ದಯಾಸಾಗರನೇ! ನಾನು ಭಯಚಕಿತನಾಗಿರುವೆನು. ಈ ಮುನಿಶ್ರೇಷ್ಠರೂ ಸಹ ಭಯಭ್ರಾಂತರಾಗಿರುವರು. ನಿನ್ನ ಭಯಂಕರವಾದ ಈ ರೂಪವನ್ನು ನೋಡಲು ನಾವು ಅಸಮರ್ಥರಾಗಿರುವೆವು. ||೨೮೧||

ಓ ಕರುಣಾಕರನೇ, ಸೌಮ್ಯವಾದ ರೂಪವನ್ನು ಧರಿಸು! ದುಷ್ಟನೂ, ಶಿವದ್ರೋಹಿಯೂ ಆದ ಆ ಬ್ರಹ್ಮನಿಗೆ ಈ ವಿಧವಾದ ಶಿಕ್ಷೆಯು ಉಚಿತವಾಗಿಯೇ ಇರುವುದು. ||೨೮೨||

ಶಿವದ್ರೋಹಿಗಳಾದ ದುಷ್ಟರಿಗೆ ಇದೇ ಶಿಕ್ಷೆಯು. ಈ ದಿನ ನಮಗೆ ಅತ್ಯಾನಂದವುಂಟಾಗಿರುವುದು. ||೨೮೩||

ದುರಾತ್ಮಾಯಂ ಶಿವದ್ರೋಹೀ ನಿಹತೋಽದ್ಯ ಯತಸ್ತ್ವಯಾ ।
ಯದಾ ಮಮ ಮಹೇಶೇನ ವಿಷ್ಣುತ್ವಂ ದತ್ತಮಾದರಾತ್ ॥೨೮೪॥

ತದಾಪಿ ಭೈರವ ಶ್ರೀಮನ್ ಸಂತೋಷೋ ನೇದೃಶೋಽಭವತ್ ।
ಅಸ್ಮಿನ್ನೇ ನಿಹತೇ ದುಷ್ಟೇ ಧರ್ಮೋಽಪಿ ಸ್ಥಿರತಾಂ ಗತಃ ॥೨೮೫॥

ಅನ್ಯಥಾ ಧರ್ಮಲೇಶಸ್ಯಾಪ್ಯವಸ್ಥಾನಂ ತು ದುರ್ಲಭಂ ।
ಪರಂ ತು ಭೈರವ ಶ್ರೀಮಂಛಿಕ್ಷಾಸ್ಯ ಹಿತಕಾರಿಣೀ ॥೨೮೬॥

ಜಾತಾ ಮರಣಮಾತ್ರೇಣ ಮುಕ್ತಿರತ್ರ ಭವಿಷ್ಯತಿ ।
ತತೋಽಸ್ಯ ಮರಣಂ ಯೇನ ನ ಭವಿಷ್ಯತಿ ಭೈರವಃ ॥೨೮೭॥

ತಥಾ ಶಿರಾಂಸಿ ಗ್ರೀವಾಸು ಯೋಜಯಾಮಿ ತ್ವದಾಜ್ಞಯಾ ।
ಏಕಂ ಗತಂ ಶಿರೋಽಸ್ಯೈವ ಪಾತಾಲಂ ಪ್ರತಿ ಸತ್ವರಂ ॥೨೮೮॥

---

ಶಿವನಿಂದಕನಾದ ಈತನನ್ನು ನೀನು ಸಂಹರಿಸಿದುದರಿಂದ ನಾನು ಸಂತೋಷ ಭರಿತನಾಗಿರುವೆನು. ಪರಮೇಶ್ವರನು ನನಗೆ ವಿಷ್ಣುಪದವಿಯನ್ನು ದಯಪಾಲಿಸಿದ ಸಮಯದಲ್ಲಿಯೂ ಸಹ ನನಗೆ ಈರೀತಿಯಾದ ಸಂತೋಷವು ಉಂಟಾಗಿರಲಿಲ್ಲ. ಶಿವದ್ರೋಹಿಯಾದ ಈ ದುಷ್ಟನ ಸಂಹಾರದಿಂದ, ಧರ್ಮವು ಸ್ಥಿರವಾಯಿತು. ॥೨೮೪-೨೮೫॥

ಹಾಗಿಲ್ಲದಿದ್ದರೆ, ಧರ್ಮಲೇಶವೂ ಸಹ ಸ್ಥಿರವಾಗಿರುತ್ತಿರಲಿಲ್ಲ. ಆದರೆ ಈ ಶಿಕ್ಷೆಯು ಅಹಿತವನ್ನುಂಟುಮಾಡುವುದಾಗಿರುತ್ತದೆ. ॥೨೮೬॥

ಈ ಕಾಶೀಕ್ಷೇತ್ರದಲ್ಲಿ ಮರಣಮಾತ್ರದಿಂದ ಮುಕ್ತಿಯು ಲಭಿಸುವುದು. ಆದುದರಿಂದ ಈತನಿಗೆ ಇಲ್ಲಿ ಮರಣವೇ ಸಂಭವಿಸುವುದಿಲ್ಲ. ॥೨೮೭॥

ಪರಮೇಶ್ವರನೇ, ನಿನ್ನ ಆಜ್ಞೆಯನ್ನನುಸರಿಸಿ ಈಗ ಇವನ ಶಿರಸ್ಸುಗಳನ್ನು ಶರೀರದೊಂದಿಗೆ ಕೂಡಿಸುವೆನು. ಇವನ ಒಂದು ಶಿರಸ್ಸುಮಾತ್ರ ಪಾತಾಲಲೋಕಕ್ಕೆ ಹೋಗಿರುವುದು. ॥೨೮೮॥

ದುಃಖನೋಽವಮಶ್ಯೈವಾನಾಂ ಭಾವೀತ್ಯಾಖ್ಯಾಪನಾಯ ತತ್ ।
ತೇನೋನಶಿರಸಾ ಬ್ರಹ್ಮಾ ದುಃಖತಸ್ತಿಷ್ಠತು ಪ್ರಭೋ ॥೨೮೯॥

ಮರಣೇತ್ವಸ್ಯ ದುಃಖಾನಿ ನೇದೃಶಾನೀತಿ ಮನ್ಮಹೇ ।
ಸ್ಮರನ್ಸ್ವಕೃತಕರ್ಮಾಣಿ ದುಃಖಹೇತೂನ್ಯಯಂ ವಿಧಿಃ ॥೨೯೦॥

ತಿಷ್ಠತ್ವಾಕಲ್ಪಮತ್ಯಂತಂ ದುಃಖಿತಃ ಪ್ರಲಪನ್ಸದಾ ।
ಅಪರಾಧಿನಮಾಲೋಕ್ಯ ನೃಪಾಶ್ಚ ಕ್ರೂರಶಾಸನಾಃ ॥೨೯೧॥

ಕುರ್ವಂತಿ ಪಾದಹಸ್ತಾನ್ಯತರಲೂನಂ ದುರಾಸದಾಃ ।
ಏನಮಾಲೋಕ್ಯ ಶಿರಸಾ ಹೀನಮನ್ಯೇ ನರಾಃ ಸುರಾಃ ॥೨೯೨॥

ಶಿವದ್ರೋಹಂ ದುಃಖಹೇತುಂ ನ ಕರಿಷ್ಯಂತಿ ಸರ್ವಥಾ ।
ಬ್ರಹ್ಮಣೋಽಪೀದೃಶಂ ಜಾತಂ ಶಿವದ್ರೋಹರತಾತ್ಮನಃ ॥೨೯೩॥

---

ಪಾತಾಲಲೋಕದಲ್ಲಿರುವ ಆ ಶಿರಸ್ಸು, ಶಿವದ್ರೋಹಿಗಳಿಗೆ ಇದೇರೀತಿಯಾದ ದುಃಖವು ಸಂಭವಿಸುತ್ತದೆಂಬುದನ್ನು ಸೂಚಿಸಲಿ. ಆದೊಂದು ಶಿರಸ್ಸಿನಿಂದ ರಹಿತನಾದ ಈ ಬ್ರಹ್ಮನು, ಸದಾ ದುಃಖಿಯಾಗಿರಲಿ. ||೨೮೯||

ಇವನು ಮೃತನಾದರೆ ಆಗ ಇವನಿಗೆ ಈರೀತಿಯಾದ ದುಃಖವನ್ನು ಅನುಭವಿಸಲು ಸಾಧ್ಯವಿಲ್ಲ. ಈ ಬ್ರಹ್ಮನು ತಾನು ಆಚರಿಸಿದ ಪಾಪಕರ್ಮಗಳನ್ನು ಸ್ಮರಿಸುತ್ತಾ ಕಲ್ಪಾಂತ್ಯದವರೆಗೂ, ದುಃಖದಿಂದ ಪ್ರಲಪಿಸುತ್ತಿರಲಿ. ||೨೯೦||

ಕ್ರೂರವಾದ ಶಿಕ್ಷೆಯನ್ನು ವಿಧಿಸುವ ರಾಜರು, ಅಪರಾಧಿಯನ್ನು ನೋಡಿ, ಅಪರಾಧಕ್ಕೆ ತಕ್ಕಂತೆ ಅವನ ಕೈಗಳನ್ನಾಗಲಿ, ಕಾಲುಗಳನ್ನಾಗಲಿ ಕತ್ತರಿಸುವರು. ||೨೯೧||

ತನ್ನ ಶಿರಸ್ಸನ್ನು ಕಳೆದುಕೊಂಡ ಇವನನ್ನು ನೋಡಿ ಮನುಷ್ಯರಾಗಲಿ, ದೇವತೆಗಳಾಗಲಿ, ದುಃಖಗಳಿಗೆ ಕಾರಣವಾದ ಈಶ್ವರದ್ರೋಹವನ್ನೆಂದಿಗೂ ಮಾಡಲಾರರು. ||೨೯೨||

ಶಿವದ್ರೋಹಿಯಾದ ಬ್ರಹ್ಮನಿಗೇ ಈರೀತಿಯಾದ ದುಃಖವು ಸಂಭವಿಸಿತು. ಹೀಗಿರುತ್ತಿರಲು, ಪಾಮರರಾದ ನಮಗೆ ದುಃಖವು ಸಂಭವಿಸಲಾರದೇ? ಎಂದು ಯೋಚಿಸಿ, ಸರ್ವಜನರೂ ಭಯದಿಂದಿರುವರು. ||೨೯೩||

**ಕಿಮುತಾಸ್ಮಾಕಮಿತ್ಯನ್ಯೇ ಭೀತಾಃ ಸ್ಥಾಸ್ಯಂತಿ ಭೈರವ ।**
**ಶಿಕ್ಷೇಯಂ ಮಹತೀ ನೂನಂ ಬ್ರಹ್ಮಣೋಽಮಿತವಿಕ್ರಮ ॥೨೯೪॥**

**ಶಿಕ್ಷೈವಮೇವ ಕರ್ತವ್ಯಾ ಶಿವದ್ರೋಹರತಾತ್ಮನಾಂ ।**
**ಅತ್ಯೈವಾ ನರಕೇ ಘೋರೇ ಪಾತನೀಯಾಃ ಪ್ರಯತ್ನತಃ ॥೨೯೫॥**

**ತಥಾ ತೇಷಾಂ ದುಃಖವೃದ್ಧಿಸ್ತೋಷವೃದ್ಧಿಸ್ತಥಾ ಮಮ ।**
**ಪ್ರಾಣೈಃ ಸಂಯೋಜಯಸ್ವೈನಂ ಸತ್ತ್ವರಂ ದುಃಖಿತೋಽಸ್ತ್ವಯಂ ॥೨೯೬॥**

**ದುಃಖಂ ಪ್ರಾಣವಿಯೋಗೇಽಸ್ಯ ಕಥಂ ಭವತಿ ಭೈರವ ।**
**ಕಿಂ ಚಾಸ್ಯ ತೃಣರೂಪಸ್ಯ ವಧಾರ್ಥಂ ರೂಪಮೀದೃಶಂ ॥೨೯೭॥**

**ಮಹಾಕಲ್ಪಸ್ಯ ನಾಶೇಽಪಿ ನ ಧೃತಂ ರೂಪಮೀದೃಶಂ ॥೨೯೮॥**

---

ಓ ಪರಾಕ್ರಮಿಯಾದ ಭೈರವನೇ! ಬ್ರಹ್ಮನಿಗೆ ವಿಧಿಸಿರುವ ಈ ಶಿಕ್ಷೆಯು ಮಹತ್ತರವಾಗಿರುವುದು. ॥೨೯೪॥

ಶಿವದ್ರೋಹಿಗಳಿಗೆ ಈ ಬಗೆಯ ಶಿಕ್ಷೆಯನ್ನೇ ವಿಧಿಸುವುದು ಉಚಿತ. ಶಿವ ನಿಂದಕರನ್ನು ಭಯಂಕರವಾದ ನರಕದಲ್ಲಿರಿಸಬೇಕು. ॥೨೯೫॥

ಆಗ ಅವನ ದುಃಖವು ಪ್ರತಿಕ್ಷಣದಲ್ಲಿಯೂ ಹೆಚ್ಚಾಗುವುದು. ಅದರಂತೆಯೇ ನನ್ನ ಸಂತೋಷವೂ ಸಹ ಪ್ರತಿಕ್ಷಣದಲ್ಲಿಯೂ ವೃದ್ಧಿಯನ್ನು ಹೊಂದುವುದು. ಆದುದರಿಂದ, ಇವನಿಗೆ ಪುನಃ ಪ್ರಾಣಗಳನ್ನು ದಯಪಾಲಿಸು. ಇವನು ದುಃಖ ವನ್ನನುಭವಿಸಲಿ. ॥೨೯೬॥

ಓ ಭೈರವನೇ! ಈತನಿಗೆ ಪ್ರಾಣಗಳಿಲ್ಲದಿದ್ದರೆ ಇವನು ದುಃಖವನ್ನನುಭವಿ ಸುವ ಬಗೆ ಹೇಗೆ? ಮತ್ತು ತೃಣಸಮಾನನಾದ ಇವನನ್ನು ಸಂಹರಿಸುವುದಕ್ಕೋಸ್ಕರ ಕಲ್ಪವನ್ನೇ ನಾಶಮಾಡುವಂತಹ ಭಯಂಕರವಾದ ಈ ರೂಪವನ್ನೇಕೆ ಧರಿಸಿದೆ? ಮಹಾಕಲ್ಪವನ್ನು ನಾಶಗೊಳಿಸುವ ಸಮಯದಲ್ಲಿಯೂ ಸಹ ನೀನು ಈ ರೀತಿಯಾದ ಆಕಾರವನ್ನು ಧರಿಸಲಿಲ್ಲ. ॥೨೯೭-೨೯೮॥

ಪ್ರಾಯಶೋ ಭೈರವ ಶ್ರೀಮನ್ಪ್ರಲಯಾಂತಕರ ಪ್ರಭೋ ।
ಕುಟಿಲೇನಾಕ್ಷಿಪಾತೇನ ಸರ್ವಾನ್ಲೋಕಾನಪಿ ಕ್ಷಣಾತ್ ॥೨೯೯॥

ಭಸ್ಮೀಕರ್ತುಂ ಸಮರ್ಥೋಽಸಿ ಭೈರವಾತ್ರ ನ ಸಂಶಯಃ ।
ಪ್ರಸಂಗೇನಾಪಿ ದೇವೇಶ ತವ ರೂಪಂ ಸನಾತನಂ ॥೩೦೦॥

ದೃಷ್ಟಮದ್ಯ ಕೃತಾರ್ಥೋಽಸ್ಮಿ ಕ್ವೈದದ್ರೂಪಸ್ಯ ದರ್ಶನಂ ।
ಆದ್ಯಂತದೃಷ್ಟಮೇತನ್ನೋ ರೂಪಂ ಭೈರವ ಸರ್ವಥಾ ॥೩೦೧॥

ಇದಂ ಕಿಂಚಿದಪಿ ದ್ರಷ್ಟುಂ ನ ಶಕ್ಯಂ ಸತ್ಯಮುಚ್ಯತೇ ।
ಇತ್ಯುಕ್ತ್ವಾ ಸ ಋಷಿರ್ವಿಷ್ಣುರ್ಭೈರವಂ ಭೀಮಶಾಸನಂ ॥೩೦೨॥

ಮುಹುರ್ಮುಹುಃ ಪ್ರಣಮ್ಯಾಸ್ಯ ಪಾದಮೂಲೇ ಪಪಾತ ಸಃ ।
ಸೌಮ್ಯರೂಪಧರಃ ಶ್ರೀಮಂಸ್ತತಃ ಶ್ರೀಕಾಲಭೈರವಃ ॥೩೦೩॥

ಉತ್ಥಾಪ್ಯ ವಿಷ್ಣುಂ ವಚನಂ ಜಗಾದೈನಂ ತಥಾಸ್ತ್ವಿತಿ ।
ತತಃ ಪರಂ ಭೈರವಸ್ಯ ಭೀಮರೂಪಸ್ಯ ಕೇಶವಃ ॥೩೦೪॥

---

ಓ ಭೈರವನೇ! ಜಗತ್ಪ್ರಲಯವನ್ನೇ ಉಂಟುಮಾಡುವ ನೀನು, ನಿನ್ನ ಕುಟಿಲವಾದ ದೃಷ್ಟಿಪಾತಮಾತ್ರದಿಂದಲೇ ಕ್ಷಣಕಾಲದಲ್ಲಿ, ಸಕಲಭುವನಗಳನ್ನೂ ದಹಿಸಲು ಸಮರ್ಥನಾಗಿರುವೆ. ಇದು ನಿಜ. ಓ ದೇವೇಶನೇ! ಈ ಸದವಕಾಶವು ಲಭಿಸುವುದರಿಂದಲಾದರೂ ನಿನ್ನ ದಿವ್ಯವಾದ ಈ ರೂಪವನ್ನು ನಾವು ನೋಡಿದೆವು. ಇದರಿಂದ ನಾನು ಕೃತಾರ್ಥನಾಗಿರುವೆ. ಭವ್ಯವಾದ ಈ ರೂಪವು ಬೇರೆಯೆಲ್ಲಿಯೂ ಲಭಿಸಲಾರದು. ಈ ರೂಪದ ಆದ್ಯಂತವನ್ನೇ ನಾನು ತಿಳಿಯಲಸಮರ್ಥನಾಗಿರುವೆನು. ॥೨೯೯-೩೦೦-೩೦೧॥

ನಿನ್ನ ಈ ದಿವ್ಯರೂಪವನ್ನು ಸ್ವಲ್ಪಕಾಲದವರೆಗೂ ನೋಡಲಾರೆನು, ಇದು ನಿಜ. ಹೀಗೆಂದು ಹೇಳಿ ವಿಷ್ಣುವು ಋಷಿಗಳಿಂದೊಡಗೂಡಿ, ಭೈರವನಿಗೆ ಬಾರಿಬಾರಿಗೂ ನಮಸ್ಕರಿಸಿ, ಅವನ ಪಾದಮೂಲಕ್ಕೆ ಬಿದ್ದನು. ॥೩೦೨॥

ಕಾಲಭೈರವನು ಸೌಮ್ಯವಾದ ಆಕಾರವನ್ನು ಧರಿಸಿ, ವಿಷ್ಣುವನ್ನು ಮೇಲಕ್ಕೆಬ್ಬಿಸಿ, "ಹಾಗೆಯೇ ಆಗಲಿ" ಎಂದು ಅವನಿಗೆ ಆಶ್ವಾಸನವನ್ನಿತ್ತನು. ॥೩೦೩॥

ಎಲೌ, ಪಾರ್ವತಿಯೇ! ಬಳಿಕ ವಿಷ್ಣುವು, ಉಗ್ರರೂಪಧಾರಿಯಾದ, ಭೈರವನ ಆಜ್ಞೆಯನ್ನು ಶಿರಸಾವಹಿಸಿ ಸಂತೋಷಭರಿತನಾದನು. ॥೩೦೪॥

ಆಜ್ಞಾಂ ಮೂರ್ಧ್ನಾ ಸಮಾಧಾಯ ಹೃಷ್ಟಚಿತ್ತೋಽಭವಚ್ಛಿವೇ ।
ತತೋ ನಿಧಿಕಬಂಧೇನ ತಚ್ಛಿರಾಂಸ್ಯವನೀತಲಾತ್ ॥೩೦೫॥

ಗೃಹೀತ್ವಾ ಯೋಜಯಾಮಾಸ ಯಥಾಸ್ಥಾನಂ ಯಥಾಕ್ರಮಂ ।
ತತಃ ಸ ಭೈರವಸ್ಯೈವ ಪ್ರಸಾದಾತ್ಪ್ರಾಣವಾನಭೂತ್ ॥೩೦೬॥

ತತಶ್ಚ ದುಃಖಂ ಸಂಪ್ರಾಪ್ಯ ಗತೋಽನ್ಯತ್ರ ಸ ಲಜ್ಜಯಾ ।
ತತೋ ವವುಃ ಸುಖಂ ವಾತಾಃ ಪುಷ್ಪವೃಷ್ಟಿರ್ಬಭೂವ ಚ ॥೩೦೭॥

ಪ್ರಸನ್ನಾಶ್ಚ ದಿಶಃ ಸರ್ವಾಃ ಬಭೂವುರ್ಧೂಸರಾಃ ಪುರಾ ।
ಸಿಂಧವೋಽಪಿ ಯಥಾಸ್ಥಾನಂ ತಸ್ಥುಃ ಶೈಲಾಶ್ಚ ಪಾರ್ವತಿ ॥೩೦೮॥

ಪೃಥಿವೀ ಚ ಜಹೌ ಕಂಪಂ ಶೇಷಃ ಸ್ಥಾನಂ ಸಮಾಯಯೌ ।
ಏತಸ್ಮಿನ್ನಂತರೇ ದೇವಾಃ ಸೂರ್ಯೋಽಪ್ಯಸ್ತಂ ಗತಃ ಶಿವೇ ॥೩೦೯॥

ತತಃ ಸಂಧ್ಯಾದಿಕಂ ಕೃತ್ವಾ ಶಿವಪೂಜಾಪರಾ ಬಭುಃ ।
ತತಃ ಕಾಶೀಪಾಲನಾರ್ಥಂ ಭೈರವಃ ಸ್ಥಾಪಿತೋ ಮಯಾ ॥೩೧೦॥

---

ಬಳಿಕ, ಭೈರವನು, ಬ್ರಹ್ಮನ ಶಿರಸ್ಸುಗಳನ್ನು ತೆಗೆದುಕೊಂಡು, ಅವನ ಮುಂಡಕ್ಕೆ ಕ್ರಮವರಿತು ಜೋಡಿಸಿದನು. ॥೩೦೫॥

ತರುವಾಯ, ಬ್ರಹ್ಮನು, ಭೈರವನ ಅನುಗ್ರಹದಿಂದ, ಪ್ರಾಣಗಳನ್ನು ಪಡೆದನು. ॥೩೦೬॥

ಇದನ್ನೆಲ್ಲಾ ನೋಡಿ, ಬ್ರಹ್ಮನು ದುಃಖಿಸುತ್ತಾ-ಲಜ್ಜೆಯಿಂದ ಬೇರೆಯ ಕಡೆಗೆ ಹೊರಟುಹೋದನು. ಆಗ ಗಾಳಿಯು ಸುಖವಾಗಿ ಬೀಸಿತು. ಪುಷ್ಪವೃಷ್ಟಿ ಯುಂಟಾಯಿತು. ॥೩೦೭॥

ಮಲಿನವಾಗಿದ್ದ ದಿಕ್ಕುಗಳು ಪ್ರಸನ್ನವಾದುವು. ಸಮುದ್ರಗಳು ಎಂದಿನಂತೆ ತಮ್ಮ ತಮ್ಮ ಸ್ಥಳಗಳಲ್ಲಿ ಶಾಂತವಾಗಿದ್ದುವು. ಪರ್ವತಗಳು ನಿಶ್ಚಲವಾದುವು. ॥೩೦೮॥

ಪೃಥಿವಿಯು ಶಾಂತವಾಯಿತು. ಆದಿಶೇಷನು ತನ್ನ ಲೋಕಕ್ಕೆ ನಡೆತಂದನು. ಇಷ್ಟರೊಳಗೆ ಸೂರ್ಯನೂ ಅಸ್ತಮಿಸಿದನು. ಬಳಿಕ, ದೇವತೆಗಳೆಲ್ಲರೂ, ಸಂಧ್ಯಾವಂದನೆಯನ್ನು ನೆರವೇರಿಸಿ, ಈಶ್ವರಪೂಜೆಯಲ್ಲಿ ಮಗ್ನರಾದರು. ಅಂದಿನಿಂದ

ಕೃತ್ತಿವಾಸೇಶ್ವರಸ್ಯೈವ ದಕ್ಷಿಣಾದಿಶಿ ಸಾದರಂ ।
ತತಃ ಸಾಯಂ ವಿಷ್ಣುಮುಖ್ಯಾಃ ಕೃತ್ವಾ ಪೂಜಾಂ ಮಮ ಪ್ರಿಯೇ ॥೩೧೧॥

ಭೈರವಾಭ್ಯರ್ಚನಾರ್ಥಾಯ ಜಗ್ಮುರ್ಭೈರವಸಂನಿಧೌ ।
ತತಸ್ತೇ ಭೈರವಂ ದೇವಮುಪಚಾರೈಶ್ಚ ಷೋಡಶೈಃ ॥೩೧೨॥

ಸಂಪೂಜ್ಯಾರ್ಘ್ಯಪ್ರದಾನಾನಿ ಚಕ್ರುರ್ಭಕ್ತಿಸಮನ್ವಿತಾಃ ।
ಉಪೋಷಣಸ್ಯಾಂಗಭೂತಮರ್ಘ್ಯದಾನಮಿಹ ಸ್ಮೃತಂ ॥೩೧೩॥

ತಥಾ ಜಾಗರಣಂ ರಾತ್ರೌ ಪೂಜಾಯಾಮಚತುಷ್ಟಯೇ ।
ಭೈರವಾಯೋಗ್ರರೂಪಾಯ ಯಸ್ತ್ವರ್ಘ್ಯಂ ನ ಪ್ರಯಚ್ಛತಿ ॥೩೧೪॥

---

ಮೊದಲುಗೊಂಡು, ನಾನು ಕಾಶೀಕ್ಷೇತ್ರವನ್ನು ರಕ್ಷಿಸುವುದಕ್ಕೋಸ್ಕರ ಭೈರವನನ್ನು ಅಲ್ಲಿಯೇ ಸ್ಥಾಪಿಸಿರುವೆನು. ||೩೦೯-೩೧೦||

ಆ ಭೈರವನನ್ನು ಕೃತ್ತಿವಾಸೇಶ್ವರನ ದಕ್ಷಿಣ ದಿಕ್ಕಿನಲ್ಲಿ ಸ್ಥಾಪಿಸಿರುವೆನು. ಅದಾದ ಬಳಿಕ, ವಿಷ್ಣುವೇ ಮೊದಲಾದ ದೇವತೆಗಳು ಸಾಯಂಕಾಲದಲ್ಲಿ ನನ್ನನ್ನು ಪೂಜಿಸಿ, ಭೈರವನನ್ನು ಅರ್ಚಿಸುವುದಕ್ಕೋಸ್ಕರ, ಭೈರವನ ಸನ್ನಿಧಿಗೆ ನಡೆದರು. ||೩೧೧||

ತರುವಾಯ, ಅವರು ಧ್ಯಾನಾವಾಹನಾದಿ ಷೋಡಶೋಪಚಾರಗಳಿಂದ ಭೈರವೇಶ್ವರನನ್ನು ಪೂಜಿಸಿ, ಭಕ್ತಿಯಿಂದ, ಅರ್ಘ್ಯಗಳನ್ನು ಸಮರ್ಪಿಸಿದರು. ||೩೧೨||

ಭೈರವನನ್ನು ಪೂಜಿಸುವ ದಿವಸದಲ್ಲಿ ಉಪವಾಸದಿಂದಿರಬೇಕು. ಉಪವಾಸಕ್ಕೆ ಅಂಗವಾಗಿ ಅರ್ಘ್ಯಪ್ರದಾನ, ರಾತ್ರಿಯಲ್ಲಿ ಜಾಗರಣ, ಮತ್ತು ನಾಲ್ಕು ಯಾಮಗಳಲ್ಲಿಯೂ ಪೂಜೆ, ಇವು ವಿಹಿತವಾಗಿರುವುವು. ||೩೧೩||

ಯಾವನು, ಉಗ್ರರೂಪಿಯಾದ ಭೈರವನಿಗೆ ಅರ್ಘ್ಯವನ್ನು ಸಮರ್ಪಿಸುವುದಿಲ್ಲವೋ, ಅವನಿಗೆ ಉಪವಾಸ, ಜಾಗರಣೆ, ಇವುಗಳಿಂದುಂಟಾಗುವ ಫಲವು ಲಭಿಸಲಾರದು. ||೩೧೪||

ತಸ್ಯೋಪವಾಸಜನಿತಂ ನ ಫಲಂ ಜಾಗರಾರ್ಜಿತಂ ।
ಪಾತ್ರೇ ಪುಷ್ಪಾಣಿ ಸಜಲಾನ್ಯಾದಾಯಾರ್ಘ್ಯಮನುತ್ತಮಂ ॥೩೧೫॥

ಜಪಂತೋ ದದುರರ್ಘ್ಯಾನಿ ಭೈರವಾಯಾಮಿತಾತ್ಮನೇ ।

॥ ಅರ್ಘ್ಯಮಂತ್ರಃ ॥

[1]ಭೈರವಾರ್ಘ್ಯಂ ಗೃಹಾಣೇಶ ಭೀಮರೂಪಾವ್ಯಯಾನಘ ।
ಅನೇನಾರ್ಘ್ಯಪ್ರದಾನೇನ ತುಷ್ಟೋ ಭವ ಶಿವಪ್ರಿಯ ॥೩೧೬॥

ಸಹಸ್ರಾಕ್ಷಿಶಿರೋಬಾಹೋ ಸಹಸ್ರಚರಣಾಜರ ।
ಗೃಹಾಣಾರ್ಘ್ಯಂ ಭೈರವೇದಂ ಸಪುಷ್ಪಂ ಪರಮೇಶ್ವರ ॥೩೧೭॥

ಪುಷ್ಪಾಂಜಲಿಂ ಗೃಹಾಣೇಶ ವರದೋ ಭವ ಭೈರವ ।
ಪುನರರ್ಘ್ಯಂ ಗೃಹಾಣೇಶ ಸಪುಷ್ಪಂ ಯಾತನಾಪಹಂ ॥೩೧೮॥

ಇತಿ ಕೃತ್ವಾರ್ಘ್ಯದಾನಾನಿ ನಿಶಿ ವಿಷ್ಣುಪುರೋಗಮಾಃ ।
ಚಕ್ರುರ್ಜಾಗರಣಂ ರೂಪಂ ಶಂಸಂತೋ ಭೈರವಸ್ಯ ತೇ ॥೩೧೯॥

ಭೈರವಸ್ಯ ತು ಕರ್ತವ್ಯಾ ಪೂಜಾ ಯಾಮಚತುಷ್ಟಯೇ ।
ಕಾರ್ಯಂ ಶಿವಕಥಾಲಾಪೈರ್ನಿಶಿ ಜಾಗರಣಂ ಸದಾ ॥೩೨೦॥

---

ಅವರು, ಅರ್ಘ್ಯಪಾತ್ರೆಯಲ್ಲಿ, ಪುಷ್ಪಗಳನ್ನೂ ಮತ್ತು ನೀರನ್ನೂ ಇರಿಸಿ, ಅರ್ಘ್ಯ ಮಂತ್ರವನ್ನು ಜಪಿಸುತ್ತಾ, ಭೈರವನಿಗೆ ಅರ್ಘ್ಯವನ್ನು ಸಮರ್ಪಿಸಿದರು. ||೩೧೫||

ಅರ್ಘ್ಯಮಂತ್ರವೆನಿಸಿದ ಈ ಮಂತ್ರವನ್ನು ಪಠಿಸಿ ಭೈರವನಿಗೆ ಅರ್ಘ್ಯವನ್ನು ಸಮರ್ಪಿಸಬೇಕು. ಭೀಮರೂಪನೂ, ಸಹಸ್ರನೇತ್ರ, ಶಿರಸ್ಸು, ಬಾಹುಗಳಿಂದ ವಿರಾಜಿಸುವವನೂ ಆದ ಭೈರವನು ಈ ಅರ್ಘ್ಯದಿಂದ ತೃಪ್ತನಾಗಲಿ ಎಂಬುದೇ ಇದರ ಅರ್ಥ. ||೩೧೬-೩೧೭-೩೧೮||

ಈ ಮಂತ್ರವನ್ನು ಪಠಿಸಿ, ವಿಷ್ಣುವೇ ಮೊದಲಾದ ದೇವತೆಗಳು, ಭೈರವನಿಗೆ ಅರ್ಘ್ಯವನ್ನು ಸಮರ್ಪಿಸಿ, ರಾತ್ರಿಯಲ್ಲಿ ಅವನನ್ನು ಸ್ತುತಿಸುತ್ತಾ, ಜಾಗರಣವನ್ನಾ ಚರಿಸಿದರು. ||೩೧೯||

ನಾಲ್ಕು ಯಾಮಗಳಲ್ಲಿಯೂ ಭೈರವನನ್ನು ಪೂಜಿಸಬೇಕು. ರಾತ್ರಿ, ಶಿವಕಥೆಗಳನ್ನು ಕೇಳುತ್ತಾ ಜಾಗರಣವನ್ನಾಚರಿಸಬೇಕು. ||೩೨೦||

ಜಾಗರಂ ಚೋಪವಾಸಂ ಚ ಕೃತ್ವಾ ಕಾಲಾಷ್ಟಮೀದಿನೇ ।
ಪ್ರಯತಃ ಪಾಪನಿರ್ಮುಕ್ತಃ ಶೈವೋ ಭವತಿ ಶೋಭನೇ ॥೩೨೧॥

ಯೋ ದೇವಿ ಭೈರವಾಷ್ಟಮ್ಯಾಮುಪವಾಸಂ ಪ್ರಯತ್ನತಃ ।
ನ ಕರಿಷ್ಯತಿ ಮೋಹೇನ ಸ ಯಾತ್ಯೇವ ಹಿ ಯಾತನಾಂ ॥೩೨೨॥

ತಸ್ಮಾತ್ಪೂಜಾ ಭೈರವಸ್ಯ ಕರ್ತವ್ಯಾ ಸತತಂ ಬುಧೈಃ ।
ಯಾತನಾಭೀರುಭಿರ್ಮರ್ತ್ಯೈರ್ಮುನಿಭಿಶ್ಚಾಮರೈರಪಿ ॥೩೨೩॥

ಯಥಾಹ ಮನ್ವಹಂ ಪೂಜ್ಯಸ್ತಥಾ ಪ್ರತ್ಯಹಮಾದರಾತ್ ।
ಪೂಜನೀಯಾ ಪ್ರಯತ್ನೇನ ಭೈರವೋ ಭೀಮಶಾಸನಃ ॥೩೨೪॥

ಪುರಾ ವಿಷ್ಣುರನೇನೈವ ಭೈರವೇಣ ಹಿ ಭಕ್ಷಿತಃ ।
ನಿಷ್ಕಾಸಿತಶ್ಚ ತೇನೈವ ಪುನಃ ಸಂಸ್ಥಾಪಿತೋ ಹರಿಃ ॥೩೨೫॥

---

ದೇವಿ! ಕಾಲಾಷ್ಟಮಿಯ ದಿನದಲ್ಲಿ, ಜಾಗರಣವನ್ನೂ ಮತ್ತು ಉಪವಾಸವನ್ನೂ ನೆರವೇರಿಸಿದವನು, ಪರಿಶುದ್ಧನಾಗಿ, ಪಾಪಗಳಿಂದ ಬಿಡುಗಡೆಯನ್ನು ಹೊಂದಿ, ಈಶ್ವರಾನುಗ್ರಹಕ್ಕೆ ಪಾತ್ರನಾಗುವನು. ॥೩೨೧॥

ಎಲೌ, ದೇವಿಯೇ! ಯಾವ ಮನುಷ್ಯನು, ಭೈರವಾಷ್ಟಮಿಯ ದಿವಸ, ಅಜ್ಞಾನದಿಂದ ಉಪವಾಸವ್ರತವನ್ನು ಕೈಗೊಳ್ಳುವುದಿಲ್ಲವೋ, ಅವನು ಭೈರವನ ಯಾತನೆಗೆ ಗುರಿಯಾಗುವನು. ॥೩೨೨॥

ಆದುದರಿಂದ, ಅಸಹ್ಯವಾದ ಯಾತನೆಗೆ ಹೆದರುವ ಮನುಷ್ಯರಾಗಲಿ, ದೇವತೆಗಳಾಗಲಿ, ಮುನಿಗಳಾಗಲಿ, ಸರ್ವರೂ, ತಪ್ಪದೇ ಪ್ರತಿದಿನವೂ ಭೈರವನನ್ನು ಪೂಜಿಸಬೇಕು. ॥೩೨೩॥

ಪ್ರತಿದಿನವೂ ನನ್ನನ್ನು ಪೂಜಿಸುವಂತೆಯೇ, ಪಾಪಿಗಳಿಗೆ ಕಠಿಣವಾದ ಶಿಕ್ಷೆಯನ್ನು ವಿಧಿಸುವ ಭೈರವನನ್ನೂ ಸಹ ಪ್ರತಿದಿನವೂ ತಪ್ಪದೇ ಭಕ್ತಿಯಿಂದ ಪೂಜಿಸಬೇಕು. ॥೩೨೪॥

ಹಿಂದೆ, ಒಂದಾನೊಂದು ಸಮಯದಲ್ಲಿ ಭೈರವನೇ ವಿಷ್ಣುವನ್ನು ಭಕ್ಷಿಸಿದ್ದನು. ಮತ್ತು ಅವನೇ, ವಿಷ್ಣುವಿನ ಪದವಿಯನ್ನು ಹೋಗಲಾಡಿಸಿ ಪುನಃ ಅವನಿಗೆ ವಿಷ್ಣು ಪದವಿಯನ್ನು ದಯಪಾಲಿಸಿದನು. ಆ ವಿಚಾರವನ್ನು ಹೇಳುವೆನು. ಕೇಳು. ॥೩೨೫॥

ಪುರಾ ಕ್ಷೀರಾಬ್ಧಿಮಧ್ಯಸ್ಥೋ ವಿಷ್ಣುರ್ಲಕ್ಷ್ಮೀಸಮನ್ವಿತಃ ।
ಸಾಯಂಕಾಲೇಽಪಿ ಸಂಶ್ಲಿಷ್ಯ ಲಕ್ಷ್ಮೀಂ ತಸ್ಥೌ ಪ್ರಹರ್ಷಿತಃ ॥೩೨೬॥

ತದಾ ವಿಲೋಕ್ಯ ತಂ ಲಕ್ಷ್ಮೀಃ ವಿಷ್ಣುಂ ಪ್ರೋವಾಚ ಸಾದರಮ್ ॥೩೨೭॥

॥ ಲಕ್ಷ್ಮ್ಯುವಾಚ ॥

ರವಿರಸ್ತಂ ಗತೋ ಮುಂಚ ಶಯ್ಯಾಂ ಮಾಂ ಚ ರತಿಂ ಮಯಿ ।
ಸಾಯಂಕಾಲೇ ಶಯಾನಸ್ಯ ಲಕ್ಷ್ಮೀರ್ನಷ್ಟಾ ಭವಿಷ್ಯತಿ ॥೩೨೮॥

ವಿಶೇಷತಃ ಸ್ತ್ರೀರತಸ್ಯ ತ್ಯಕ್ತಸಂಧ್ಯಾದಿಕರ್ಮಣಃ ।
ಸಾಯಂಕಾಲೇ ಮಹಾದೇವೋ ಪೂಜನೀಯೋಽಖಿಲೈರಪಿ ॥೩೨೯॥

ಕುರು ಭಸ್ಮೋದ್ಧೂಲನಾದಿ ಸರ್ವಪಾಪವಿನಾಶಕಂ ।
ಬಿಲ್ವಪತ್ರಾದಿ ಸಂಪಾದ್ಯ ಯಜ ದೇವೋತ್ತಮಂ ಶಿವಂ ॥೩೩೦॥

---

ಹಿಂದೆ ಒಂದಾನೊಂದು ವೇಳೆಯಲ್ಲಿ, ಕ್ಷೀರಸಾಗರಶಾಯಿಯಾದ ವಿಷ್ಣುವು, ಕ್ಷೀರಾಬ್ಧಿಯಲ್ಲಿ ಲಕ್ಷ್ಮಿಯಿಂದ ಕೂಡಿದವನಾಗಿ, ಸಾಯಂಕಾಲದಲ್ಲಿಯೂ ಸಹ ಅವಳನ್ನೇ ದೃಢವಾಗಿ ಆಲಿಂಗಿಸಿಕೊಂಡು, ಸಂತೋಷದಿಂದಿದ್ದನು. ॥೩೨೬॥

ಆಗ ಅವನನ್ನು ನೋಡಿ ಲಕ್ಷ್ಮಿಯು ಹೀಗೆಂದಳು. ॥೩೨೭॥

ವಲ್ಲಭನೇ ! ಸೂರ್ಯನು ಅಸ್ತಮಿಸಿದನು. ಹಾಸಿಗೆಯಿಂದ ಏಳು, ನನ್ನ ಸಂಗವನ್ನು ಬಿಡು ! ಸಾಯಂಕಾಲದಲ್ಲಿ, ಮಲಗುವವನ ಸಂಪತ್ತು ಕ್ಷಯಿಸುವುದು. ॥೩೨೮॥

ಅದರಲ್ಲಿಯೂ ಮುಖ್ಯವಾಗಿ ಸಾಯಂಕಾಲದಲ್ಲಿ, ಸ್ತ್ರೀಯಲ್ಲಿ ಆಸಕ್ತನಾಗಿ, ಸಂಧ್ಯಾವಂದನೆಯೇ ಮೊದಲಾದ ನಿತ್ಯಕರ್ಮಗಳನ್ನು ಆಚರಿಸದಿರುವವನಿಗೆ ಸಂಪತ್ತು ಕ್ಷಯಿಸುವುದು ನಿಜ. ಸಾಯಂಕಾಲದಲ್ಲಿ, ಸರ್ವರೂ ಶಿವನನ್ನು ಪೂಜಿಸಬೇಕು. ॥೩೨೯॥

ಭಸ್ಮವನ್ನು ಲೇಪಿಸಿಕೊ. ಅದು ಸಕಲ ಪಾಪಗಳನ್ನೂ ಹೋಗಲಾಡಿಸುವುದು. ಬಿಲ್ವಪತ್ರವೇ ಮೊದಲಾದ ಸಾಮಗ್ರಿಗಳನ್ನು ಸಂಗ್ರಹಿಸಿ, ಸರ್ವಶ್ರೇಷ್ಠನಾದ ಶಿವನನ್ನು ಅರ್ಚಿಸು. ॥೩೩೦॥

ಪ್ರಣಾಮಾನಿ ಕುರು ಪ್ರೀತ್ಯಾ ಶರಣಂ ವ್ರಜ ಶಂಕರಂ ।
ಸರ್ವೇಷ್ವಪಿ ಪ್ರದೋಷೇಷು ಪೂಜನೀಯಃ ಸದಾಶಿವಃ ॥೩೩೦॥

ಇದಾನೀಂ ಸಪ್ತಮೀಯೋಗೋ ವಿಶೇಷೇಣಾದ್ಯ ವರ್ತತೇ ।
ಯಃ ಸಪ್ತಮೀಪ್ರದೋಷೇಷು ಶಂಕರಂ ಪೂಜಯಿಷ್ಯತಿ ॥೩೩೨॥

ನ ತಸ್ಯ ನರಕಾವಾಸೋ ದಾರಿದ್ರ್ಯಂ ಚ ನ ಸರ್ವಥಾ ।
ಪ್ರದೋಷಕಾಲೇ ಭಗವಾನ್ಮಹಾದೇವಃ ಸುರಾಧಿಪಃ ॥೩೩೩॥

ಕರೋತಿ ತಾಂಡವಂ ದೇವೀಮುಪವೇಶ್ಯ ಶುಭಾಸನೇ ।
ತಾಂಡವಾಭಿರತಂ ದೇವಂ ಗ್ರಹನಕ್ಷತ್ರಮೌಳಿನಂ ॥೩೩೪॥

ಹೃದಿ ಧ್ಯಾತ್ವಾ ಮಹಾದೇವಂ ಪೂಜಯಸ್ವ ಸುರೋತ್ತಮಂ ।
ಅಭಿಷಿಚ್ಯ ಮಹಾದೇವಂ ಲಿಂಗರೂಪಿಣಮವ್ಯಯಂ ॥೩೩೫॥

ಕ್ಷೀರೇಣಾನೇನ ಶುದ್ಧೈಶ್ಚ ಜಲೈರ್ನೀಹಾರಸನ್ನಿಭೈಃ ।
ಗೃಹೀತ್ವಾ ಚಂದನಂ ರಮ್ಯಂ ಶಿವಲಿಂಗಂ ಸಮರ್ಚಯ ॥೩೩೬॥

---

ಭಕ್ತಿಯಿಂದ ಶಿವನಿಗೆ ನಮಸ್ಕರಿಸು. ಶಿವನನ್ನೇ ಮರೆಹೊಗು. ಪ್ರತಿದಿನವೂ ಪ್ರದೋಷಕಾಲದಲ್ಲಿ, ಶಿವನನ್ನು ಪೂಜಿಸಬೇಕು ॥೩೩೦॥

ಈ ದಿವಸ, ವಿಶೇಷವಾಗಿ ಸಪ್ತಮೀ ತಿಥಿಯು ಪ್ರಾಪ್ತವಾಗಿರುವುದು. ಯಾವನು, ಸಪ್ತಮೀ ತಿಥಿಯ ದಿನ ಪ್ರದೋಷಕಾಲದಲ್ಲಿ ಶಿವನನ್ನು ಪೂಜಿಸುವನೋ, ಅವನಿಗೆ ಎಂದಿಗೂ ನರಕವಾಸವು ಸಂಭವಿಸುವುದಿಲ್ಲ. ಬಡತನವು ಅವನನ್ನು ಪೀಡಿಸಲಾರದು. ॥೩೩೨॥

ಪ್ರದೋಷಕಾಲದಲ್ಲಿ, ದೇವದೇವನಾದ ಶಿವನು, ಭದ್ರಾಸನದಲ್ಲಿ ಪಾರ್ವತಿಯನ್ನು ಕುಳ್ಳಿರಿಸಿ, ತಾನೇ ನೃತ್ಯವನ್ನಭಿನಯಿಸುವನು. ಗ್ರಹಗಳನ್ನೂ, ನಕ್ಷತ್ರಗಳನ್ನೂ ಚಂದ್ರನನ್ನೂ ಶಿರಸ್ಸಿನಲ್ಲಿ ಧರಿಸಿ, ನೃತ್ಯದಲ್ಲಿ ಮಗ್ನನಾದ, ಮಹಾದೇವನನ್ನು ಹೃದಯದಲ್ಲಿ ಧ್ಯಾನಿಸಿ ಪೂಜಿಸು. ॥೩೩೩-೩೩೪॥

ಲಿಂಗರೂಪಿಯಾದ ಶಿವನನ್ನು ಶುದ್ಧವಾದ ಹಾಲಿನಿಂದಲೂ ಮತ್ತು ಹಿಮದಂತೆ ತಣ್ಣಗಿರುವ ನೀರಿನಿಂದಲೂ ಅಭಿಷೇಚಿಸಿ ಪರಿಮಳಭರಿತವಾದ ಚಂದನದಿಂದ ಪರಶಿವನನ್ನು ಅರ್ಚಿಸು. ॥೩೩೫-೩೩೬॥

ಏತೈರ್ನವೈರ್ಬಿಲ್ವಪತ್ರೈರಭ್ಯರ್ಚಯ ಮಹೇಶ್ವರಂ ।
ಧೂಪದೀಪಾದಿಕಂ ದತ್ವಾ ನೈವೇದ್ಯಂ ಚ ಸಮರ್ಪಯ ॥೩೩೭॥

ಪ್ರಣಾಮಾನಿ ಕುರು ಪ್ರೀತ್ಯಾ ಶೈವಂ ಪಂಚಾಕ್ಷರಂ ಜಪಂ ।
ಕುರು ನೃತ್ಯಂ ಮಹಾದೇವ ಪ್ರೀತ್ಯರ್ಥಂ ಕರತಾಡನೈಃ ॥೩೩೮॥

ಪ್ರೀಣಯಸ್ವ ಮಹಾದೇವಂ ಶರಣಂ ಯಾಹಿ ಶಂಕರಂ ।
ಶಿವಪೂಜಾರ್ಥಮಾಲಸ್ಯಂ ಯೋ ಕರಿಷ್ಯತಿ ಮೂಢಧೀಃ ॥೩೩೯॥

ಸ ವಿಹಾಯ ಕ್ಷೀರಮುಷ್ಣಂ ಮೂತ್ರಂ ಪಿಬತಿ ಸರ್ವಥಾ ।
ಯದಿ ತ್ಯಕ್ಷ್ಯಸಿ ಸಾಯಾಹ್ನೇ ಮಹಾದೇವಸ್ಯ ಪೂಜನಂ
ತದಾ ತ್ವಯಾ ಮಯಾಪ್ಯದ್ಯ ದುಃಖಂ ಪ್ರಾಪ್ಯಂ ನ ಸಂಶಯಃ॥೩೪೦॥

ಪತ್ರೈರ್ಜಲೈರ್ವಾ ಮಂತ್ರೈರ್ವಾ ಪೂಜಿತಃ ಪರಮೇಶ್ವರಃ ।
ತುಷ್ಟೋ ಭವತಿ ಗೌರೀಶಸ್ತಮೇವಾರ್ಚಯ ಶಂಕರಂ ॥೩೪೧॥

---

ಹೊಸದಾದ ಈ ಬಿಲ್ವಪತ್ರೆಗಳಿಂದ ಶಿವನನ್ನು ಪೂಜಿಸು. ಧೂಪದೀಪಗಳನ್ನೂ ನೈವೇದ್ಯವನ್ನೂ ಸಮರ್ಪಿಸು. ॥೩೩೭॥

ಭಕ್ತಿಯಿಂದ ಶಿವನಿಗೆ ನಮಸ್ಕರಿಸು. ಶಿವಪಂಚಾಕ್ಷರಮಂತ್ರವನ್ನು ಜಪಿಸು. ಶಿವನನ್ನು ಸಂತೋಷಪಡಿಸುವುದಕ್ಕೋಸ್ಕರ ಕರತಾಡನಗಳಿಂದ ನೃತ್ಯವನ್ನಭಿನಯಿಸು. ॥೩೩೮॥

ಹೇಗಾದರೂ ಶಿವನನ್ನು ತೃಪ್ತಿಗೊಳಿಸು. ಅವನನ್ನು ಮರೆಹೊಗು. ಈಶ್ವರಾರಾಧನೆಯಲ್ಲಿ ಉದಾಸೀನನಾಗಿರುವವನು ಅಜ್ಞಾನಿಯೇ ಸರಿ. ॥೩೩೯॥

ಯಾವನು ಉದಾಸೀನತೆಯಿಂದ ಶಿವಪೂಜೆಯನ್ನು ಬಿಡುವನೋ ಅವನು, ಮಧುರವಾದ ಹಾಲನ್ನು ಬಿಟ್ಟು ಉಷ್ಣವಾದ ಮೂತ್ರವನ್ನು ಕುಡಿದವನಂತೆಯೇ ಸರಿ. ನೀನು ಈ ಪ್ರದೋಷಕಾಲದಲ್ಲಿ ಶಂಕರನನ್ನು ಪೂಜಿಸದಿದ್ದರೆ ನಾವಿಬ್ಬರೂ ದುಃಖವನ್ನನುಭವಿಸಬೇಕಾಗುವುದು. ॥೩೪೦॥

ಪರಮೇಶ್ವರನನ್ನು ಪತ್ರೆಗಳಿಂದಾಗಲಿ, ಉದಕದಿಂದಾಗಲಿ ಅಥವಾ ಮಂತ್ರಗಳಿಂದಾಗಲಿ ಪೂಜಿಸಿದರೆ ಅವನು ಸುಪ್ರೀತನಾಗುವನು. ಆದುದರಿಂದ ಪರಶಿವನನ್ನೇ ಈಗ ಆರಾಧಿಸು. ॥೩೪೧॥

ಧತ್తూರಕುಸುಮೇನಾಪಿ ಪೂಜಿತಃ ಶಂಕರಃ ಸ್ವಯಂ ।
ತುಷ್ಟೋ ಭವತಿ ಗೌರೀಶಸ್ತ್ವಮೇನಾರ್ಚಯ ಶಂಕರಂ ।
ದದಾತಿ ಪರಮಂ ಸ್ಥಾನಂ ಯೋಗಿನಾಮಪಿ ದುರ್ಲಭಂ ॥೩೪೨॥

ತಸ್ಮಾದುತ್ಥಾಯ ಯತ್ನೇನ ಪೂಜಯಸ್ವ ಸದಾಶಿವಂ ।
ಸಂಪೂಜ್ಯ ಸಾಯಂ ವಿಶ್ವೇಶಂ ನಿಷ್ಪಾಪೋ ಭವ ಸತ್ವರಂ ॥೩೪೩॥

ಸಾಯಂಕಾಲೇ ಮಹಾದೇವಂ ಯೋ ನಾರ್ಚಯತಿ ಶಂಕರಂ ।
ಸ ಏವ ಸರ್ವಪಾಪಾನಾಮಾಶ್ರಯೋ ಭವತಿ ಧ್ರುವಂ ॥೩೪೪॥

ಐಶ್ವರ್ಯಂ ತು ತ್ವಯಾ ಪ್ರಾಪ್ತಂ ಶಂಕರಸ್ಯೈವ ಪೂಜಯಾ ।
ತಾದೃಶೇನ ತ್ವಯಾ ತ್ಯಾಜ್ಯಂ ಕಥಂ ಶಂಕರಪೂಜನಂ ॥೩೪೫॥

ಸಾಯಂ ತ್ಯಕ್ತ್ವಾ ಶಂಕರಸ್ಯ ದೇವದೇವಸ್ಯ ಪೂಜನಂ ।
ಯಸ್ತಿಷ್ಠತ್ಯಾಪದೋ ಪ್ರಾಪ್ತ್ಯೈ ಸ ತಿಷ್ಠತಿ ನ ಸಂಶಯಃ ॥೩೪೬॥

---

ಧತ್ತೂರಪುಷ್ಪದಿಂದ (ದತ್ತೂರೀ ಹೂವು) ಅರ್ಚಿಸಿದರೂ ಸಹ ಅವನು ಸುಪ್ರೀತನಾಗುವನು. ಆದುದರಿಂದ ಶಿವನನ್ನೇ ಆರಾಧಿಸು. ನಿನ್ನ ಆರಾಧನೆಯಿಂದ ಸಂತುಷ್ಟನಾದ ಆ ಪರಶಿವನು ಯೋಗಿಗಳಿಗೂ ದುರ್ಲಭವಾದ ಶಾಶ್ವತವಾದ ಪದವಿಯನ್ನು ಅನುಗ್ರಹಿಸುವನು. ||೩೪೨||

ಆದುದರಿಂದ ಶೀಘ್ರವಾಗಿ ಮೇಲಕ್ಕೆದ್ದು ಶಿವನನ್ನು ಪೂಜಿಸು. ಸಾಯಂ ಕಾಲದಲ್ಲಿ ಈಶ್ವರನನ್ನು ಪೂಜಿಸಿ ಪಾಪದಿಂದ ಮುಕ್ತನಾಗು. ||೩೪೩||

ಯಾವನು ಪ್ರದೋಷಕಾಲದಲ್ಲಿ ಶಿವನನ್ನು ಅರ್ಚಿಸುವುದಿಲ್ಲವೋ ಅವನನ್ನು ಸಕಲ ಪಾಪಗಳೂ ಆಶ್ರಯಿಸುವುವು. ||೩೪೪||

ಶಿವನ ಆರಾಧನೆಯಿಂದಲೇ ನೀನು ಅಗಣಿತವಾದ ಸಂಪತ್ತನ್ನು ಪಡೆದಿರುವೆ. ಹೀಗಿರುತ್ತಿರಲು ನೀನು ಶಿವನನ್ನು ಆರಾಧಿಸದೇ ಇರುವುದು ಉಚಿತವೇ ? ||೩೪೫||

ಯಾವನು ಪ್ರದೋಷಕಾಲದಲ್ಲಿ ಈಶ್ವರಾರಾಧನೆಯನ್ನು ತ್ಯಜಿಸುವನೋ, ಅವನಿಗೆ ವಿಪತ್ಪರಂಪರೆಗಳು ಸಂಭವಿಸುವುವು. ಇದರಲ್ಲಿ ಸಂಶಯವಿರುವುದಿಲ್ಲ. ||೩೪೬||

ಯಸ್ಮಾದೈಶ್ವರ್ಯಕಾಮೇನ ಮೋಕ್ಷಕಾಮೇನ ಚಾನಘ ।
ಕರ್ತವ್ಯಮತಿಯತ್ನೇನ ಶಂಕರಸ್ಯೈವ ಪೂಜನಂ ॥೩೪೭॥

ಮಹಾಪಾತಕಯುಕ್ತೋ ವಾ ಯುಕ್ತೋ ವಾ ಸರ್ವಪಾತಕೈಃ ।
ಮುಚ್ಯತೇ ಪಾತಕೈಃ ಸರ್ವೈಃ ಪ್ರದೋಷೇ ಶಿವಪೂಜಯಾ ॥೩೪೮॥

ಹಿತಮೇವ ಮಯೋಕ್ತಂ ತೇ ನಾಹಿತಂ ವಚ್ಮಿ ಸರ್ವಥಾ ।
ಅವಿಲಂಬೇನ ಯತ್ನೇನ ಪೂಜಯಸ್ವ ಮಹೇಶ್ವರಂ ॥೩೪೯॥

ಇತ್ಯುಕ್ತ್ವಾ ಸಂಸ್ಥಿತಾಂ ಲಕ್ಷ್ಮೀಂ ಭ್ರಾಂತಚಿತ್ತೋ ಹರಿಸ್ತದಾ ।
ಉವಾಚ ವಚನಂ ಲಕ್ಷ್ಮೀಂ ಕಂಪಯನ್ಕುಪಿತಾನನಃ ॥೩೫೦॥

ಕೋ ವಾ ಮಮಾಸ್ತಿ ಸಂಪೂಜ್ಯಃ ಪೂಜ್ಯೋಽಹಂ ಸರ್ವದೇಹಿಭಿಃ ।
ಕ್ವ ಶಂಕರಃ ಕ್ವ ವಾ ತಸ್ಯ ಪೂಜನೇ ಮುಕ್ತಿಹೇತುತಾ ॥೩೫೧॥

---

ಐಶ್ವರ್ಯವನ್ನಾಗಲಿ, ಮೋಕ್ಷವನ್ನಾಗಲಿ ಅಪೇಕ್ಷಿಸುವವನು ತಪ್ಪದೇ ಶಿವನನ್ನೇ ಪೂಜಿಸಬೇಕು. ॥೩೪೭॥

ಮನುಷ್ಯನು ಮಹಾಪಾತಕಗಳಿಂದ ಕೂಡಿರಲಿ ಅಥವಾ ಸಕಲ ಪಾಪಗಳಿಂದ ಲಾದರೂ ಕೂಡಿರಲಿ, ಪ್ರದೋಷಕಾಲದಲ್ಲಿ ಶಿವನನ್ನು ಪೂಜಿಸುವುದರಿಂದ ಅವನು ಸಕಲ ಪಾಪಗಳಿಂದಲೂ ಮುಕ್ತನಾಗುವನು. ॥೩೪೮॥

ಓ ಪ್ರಿಯತಮನೇ, ನಾನು ನಿನಗೆ ಹಿತವಚನವನ್ನೇ ನುಡಿದಿರುವೆನು. ನಿನ್ನ ಬಳಿಯಲ್ಲಿ ಅಹಿತವಾದ ವಚನವನ್ನೆಂದಿಗೂ ಹೇಳಲಾರೆನು. ಇನ್ನಾದರೂ ತಡಮಾಡದೆ ಶ್ರದ್ಧೆಯಿಂದ ಶಿವನನ್ನು ಆರಾಧಿಸು. ॥೩೪೯॥

ಹೀಗೆಂದು ಹೇಳಿ ಸುಮ್ಮನಾದ ಲಕ್ಷ್ಮಿಯನ್ನು ನೋಡಿ, ಅಜ್ಞಾನಿಯಾದ ವಿಷ್ಣುವು ಅತಿ ಕೋಪದಿಂದ ಅವಳನ್ನು ಧಿಕ್ಕರಿಸುತ್ತಾ ಲಕ್ಷ್ಮಿಯೊಡನೆ ಹೀಗೆಂದನು. ॥೩೫೦॥

ನನಗೆ ಪೂಜ್ಯನಾದ ಇನ್ನೊಬ್ಬನಾವನಿರುವನು ? ನಾನೇ ಸಕಲ ಪ್ರಾಣಿಗಳಿಗೂ ಪೂಜ್ಯನು. ಅಲ್ಪನಾದ ಆ ಶಂಕರನೆಲ್ಲಿ ? ಅವನ ಆರಾಧನೆಯಿಂದ ಮುಕ್ತಿಯು ಎಂದಿಗಾದರೂ ಲಭಿಸುವುದೇ ? ॥೩೫೧॥

ಇತ್ಯುಕ್ತಂ ತದ್ವಚಃ ಶ್ರುತ್ವಾ ಲಕ್ಷ್ಮೀರ್ವಿಷ್ಣುಮುವಾಚ ಸಾ ॥೩೫೨॥
ಹಾ ಹಾ ವಿಷ್ಣೋ ಭ್ರಾಂತಚಿತ್ತಃ ಕಥಂ ಜಾತೋಽಸಿ ತದ್ವದ ।

॥ ಲಕ್ಷ್ಮ್ಯುವಾಚ ॥

ತವಾಶುಭಸ್ಯ ಕಾಲೋಽಯಂ ಸತ್ವರಂ ಸಮುಪಸ್ಥಿತಃ ॥೩೫೩॥
ನೋಚೇನ್ಮಹಾದೇವನಿಂದಾ ಕಥಂ ಕಾರ್ಯಾ ತ್ವಯಾ ಹರೇ ।

ದೃಶ್ಯಂತೇ ದುಷ್ಟಚಿಹ್ನಾನಿ ಶುಭಚಿಹ್ನಂ ನ ಕಿಂಚನ ॥೩೫೪॥

ಭ್ರಷ್ಟಂ ಚ ಮಮ ಧಮ್ಮಿಲ್ಲಮುತ್ತರೀಯಮಧೋಗತಂ ।
ತ್ರುಟಿತಾ ಕಂಠಮಾಲಾ ಚ[1] ಭ್ರೂರ್ವ್ಯಥಾಪಿ ಸಮುತ್ಥಿತಾ ॥೩೫೫॥

ಕ್ಷಣಾರ್ಧೇನೈವ ಸಂಪ್ರಾಪ್ಯಮಶುಭಂ ನಾತ್ರ ಸಂಶಯಃ ।
ಮಹಾದೇವಸ್ಯ ಯೋ ನಿಂದಾಂ ಕರಿಷ್ಯತಿ ಸುರೋಽಪಿ ವಾ ॥೩೫೬॥

---

ವಿಷ್ಣುವು ಹೀಗೆನ್ನಲು ಆ ಮಾತನ್ನು ಕೇಳಿ ಲಕ್ಷ್ಮಿಯು ಅವನನ್ನು ಕನಿಕರ ದಿಂದ ನೋಡಿ ಹೀಗೆಂದಳು. ॥೩೫೨॥

ಮಹಾವಿಷ್ಣುವೇ, ನೀನೇಕೆ ಈರೀತಿಯಲ್ಲಿ ಅಜ್ಞಾನಪರವಶನಾಗಿರುವೆ. ಇದೀಗ ನಿನಗೆ ಅಮಂಗಳವನ್ನುಂಟುಮಾಡುವ ಸಮಯವು ಒದಗಿರುವುದು. ಅಯ್ಯೋ, ಹೀಗಾಯಿತೇ ? ॥೩೫೩॥

ಹಾಗಿಲ್ಲದಿದ್ದರೆ ನೀನೇಕೆ ಶಿವನನ್ನು ನಿಂದಿಸುತ್ತಿದ್ದೆ! ಇದೀಗ ಅಪಶಕುನ ಗಳೇ ಕಂಡುಬರುವುವಲ್ಲದೇ ಶುಭಶಕುನಗಳ ಚಿಹ್ನೆಯೇ ಕಂಡುಬರುವುದಿಲ್ಲವಲ್ಲಾ. ॥೩೫೪॥

ನನ್ನ ತುರುಬು ಬಿಚ್ಚಿಹೋಯಿತು. ಮೇಲುಹೊದಿಕೆಯು ವಕ್ಷಃಸ್ಥಲದಿಂದ ಜಾರಿ ಕೆಳಕ್ಕೆ ಬಿದ್ದಿತು. ಕತ್ತಿನಲ್ಲಿದ್ದ ಸರವು ಕಡಿಯಿತು. ಬಲಹುಬ್ಬು ಅದುರು ತ್ತಿರುವುದು. ॥೩೫೫॥

ಇನ್ನು ಅರ್ಧಕ್ಷಣದಲ್ಲಿಯೇ ನಮಗೆ ಅಮಂಗಳವು ಸಂಭವಿಸುವುದು. ಇದರಲ್ಲಿ ಸಂಶಯಪಡಬೇಕಾದುದಿಲ್ಲ. ಯಾವನು ಶಿವನನ್ನು ನಿಂದಿಸುವನೋ ಅವನು

---

1. ಸ್ತ್ರೀಯರಿಗೆ ಬಲಗಡೆಯ ಹುಬ್ಬು ಅದುರಿದರೆ ಅಮಂಗಳವುಂಟಾಗುವುದೆಂದು ಶಕುನ ಶಾಸ್ತ್ರಜ್ಞರು ಹೇಳುವರು.

ಸ ಚಂಡಾಲ ಇತಿ ಜ್ಞೇಯೋ ಭವತ್ಯಗ್ರೇಽಪಿ ಸೋಽಂತ್ಯಜಃ ।
ಏವಮುಕ್ತ್ವಾ ಸ್ಥಿತಾಂ ಲಕ್ಷ್ಮೀಂ ತದಾನೀಮೇವ ಭೈರವಃ ॥೩೫೭॥

ಕ್ಷೀರಾಬ್ಧಿಪ್ರಮುಖಾನಬ್ಧೀನ್ಪಪೌ ತತ್ಪ್ರಾಪ ಲೀಲಯಾ ।
ಪಂಚಾಶದ್ಯುಗಪರ್ಯಂತಂ ಸಮುದ್ರಾಸ್ತಸ್ಯ ಚೋದರೇ ॥೩೫೮॥

ಸ್ಥಿತೋ ವಿಷ್ಣುಃ ಸ್ಥಿತೋ ಲಕ್ಷ್ಮೀಸಹಿತಃ ಸಂಕಟಂ ವಹನ್ ।
ತತಶ್ಚಿಕ್ಷೇಪ ಸಕಲಾನಬ್ಧೀನಮಿತಮಿಕ್ರಮಃ ॥೩೫೯॥

ತದಾ ದುಃಖಮನುಭೂದ್ವಿಷ್ಣೋರ್ನಕ್ರಾಣಾಮಪಿ ಶೋಭನೇ ।
ತತಃ ಪಪಾತ ಗಹನೇ ವಿಷ್ಣುರ್ಜಲವಿವರ್ಜಿತೇ ॥೩೬೦॥

ಪಪಾತಾನ್ಯತ್ರ ಲಕ್ಷ್ಮೀಃ ಸಾ ದುಃಖಿತಾ ಭಯವಿಹ್ವಲಾ ।
ಪತಿತಾ ಶೋಕಸಂವಿಷ್ಟಾ ಸ್ಮರಂತೀ ಶಂಕರಂ ತದಾ ॥೩೬೧॥

---

ದೇವತೆಯಾಗಿದ್ದರೂ ಸಹ ಚಂಡಾಲಸದೃಶನೆಂದು ತಿಳಿಯಬೇಕು. ಅಲ್ಲದೇ ಮುಂದಿನ ಜನ್ಮದಲ್ಲಿಯೂ ಅವನು ಚಂಡಾಲನಾಗಿಯೇ ಜನಿಸುವನು. ||೩೫೭||

ಲಕ್ಷ್ಮಿಯು ಹೀಗೆಂದು ಹೇಳಿ ಸುಮ್ಮನಾಗಲು ಅಷ್ಟರಲ್ಲಿಯೇ ಭೈರವನು ಕ್ಷೀರಸಾಗರವೇ ಮೊದಲಾದ ಸಕಲ ಸಮುದ್ರಗಳನ್ನೂ ತನ್ನ ಲೀಲೆಯಿಂದ ಪಾನಮಾಡಿದನು. ಐವತ್ತು ಯುಗಗಳು ಕಳೆಯುವವರೆಗೆ ಸಮುದ್ರಗಳು ಅವನ ಉದರದಲ್ಲಿದ್ದವು. ವಿಷ್ಣುವು ಲಕ್ಷ್ಮೀಸಮೇತನಾಗಿ ಅತ್ಯಂತ ದುಃಖದಿಂದ ಭೈರವನ ಉದರದಲ್ಲಿಯೇ ನೆಲಸಿದ್ದನು. ||೩೫೮||

ಐವತ್ತು ಯುಗಗಳು ಕಳೆದ ಬಳಿಕ ಅಮಿತಪರಾಕ್ರಮವುಳ್ಳ ಭೈರವನು ಸಕಲ ಸಮುದ್ರಗಳನ್ನೂ ತನ್ನ ಉದರದಿಂದ ಹೊರಗೆಡವಿ ಬಹಳ ದೂರ ಎರಚಿದನು. ||೩೫೯||

ಆಗ ಆ ರಭಸಕ್ಕೆ ಮೊಸಳೆಯೇ ಮೊದಲಾದ ಜಲಚರಗಳಿಂದ ವಿಷ್ಣುವು ಅತ್ಯಂತ ದುಃಖವನ್ನನುಭವಿಸಿದನು. ಆಗ ವಿಷ್ಣುವು ಶೋಕದಿಂದ ಮರುಗಿದನು. ಕಡೆಗೆ ವಿಷ್ಣುವು ನಿರ್ಜಲವಾದ ಒಂದಾನೊಂದು ಅರಣ್ಯದಲ್ಲಿ ಬಿದ್ದನು. ||೩೬೦||

ಲಕ್ಷ್ಮಿಯೂ ಸಹ ಒಂದಾನೊಂದು ದುರ್ಗಮವಾದ ಪ್ರದೇಶದಲ್ಲಿ ಬಿದ್ದು ಭಯಚಕಿತಳಾಗಿ ದುಃಖಿಸತೊಡಗಿದಳು. ಆಗ ಆಕೆಯು ಶಿವನನ್ನು ಸ್ಮರಿಸುತ್ತಾ ದುಃಖಿಸಿದಳು. ||೩೬೧||

ಕ್ವಾಸಿ ಶಂಭೋ ಮಹಾದೇವ ಪಾಹಿ ಪಾಹೀತಿ ಚಾವದತ್ ।
ಏತಸ್ಮಿನ್ನಂತರೇ ಕಾಲೇ ವಿಷ್ಣುರ್ಲಕ್ಷ್ಮೀಮುಪಾಯಯೌ ॥೩೬೨॥

ವಿಷ್ಣುಂ ದುಃಖಿತಮಾಲೋಕ್ಯ ಲಕ್ಷ್ಮೀರ್ದುಃಖಪರಾಪ್ಯಭೂತ್ ।
ಲಕ್ಷ್ಮೀಮುವಾಚ ವಿಷ್ಣುಸ್ತ್ವಾಂ ಮಯಾ ತವ ವಚಃ ಪುರಾ ॥೩೬೩॥

ನ ಶ್ರುತಂ ತತ್ಫಲಂ ಜಾತಮಾಶು ದುಃಖಮುಪಾಗತಂ ।
ಶಂಕರಾಭ್ಯರ್ಚನಂ ತ್ಯಕ್ತ್ವಾ ಸಾಯಂ ಸ್ಥಿತಮತೋ ಮಯಾ ॥೩೬೪॥

ಪ್ರಾಪ್ತಂ ತು ದುಃಖಹಂ ದುಃಖಂ ಮತ್ಸಂಬಂಧಾತ್ತ್ವಯಾಪಿ ತತ್ ।
ಆಪದಾಮಾಶ್ರಯಾ ಶ್ರಾಂತಾ ಶ್ರಾಂತೋಽಹಮಪಿ ದುಃಖಭಾಕ್ ॥೩೬೫॥

ಮಯಾ ಭ್ರಾಂತೇನ ನ ಕೃತಂ ಸಾಯಂ ಶಂಕರಪೂಜನಂ ।
ವಿಧ್ಯುಕ್ತಕರ್ಮನಿರತೈರ್ದುಃಖಂ ನ ಪ್ರಾಪ್ಯತೇ ಬುಧೈಃ ॥೩೬೬॥

ತದನ್ಯೈಃ ಸರ್ವಥಾ ಪ್ರಾಪ್ಯಂ ದುಃಖಂ ನೂನಂ ಕ್ಷಣೇ ಕ್ಷಣೇ ।
ಸಾಯಂ ಶಿವಾರ್ಚನಂ ಕಾರ್ಯಮಪ್ರಮಾದೇನ ಪಾವನೈಃ ॥೩೬೭॥

---

"ಓ ಶಂಭುವೇ, ಮಹಾದೇವನೇ, ನೀನೆಲ್ಲಿರುವೆ. ನನ್ನನ್ನು ರಕ್ಷಿಸು" ಎಂದು ಕೊರಗುತ್ತಾ ಲಕ್ಷ್ಮಿಯ ಸಮೀಪಕ್ಕೆ ವಿಷ್ಣುವು ಬಂದನು. ||೩೬೨||

ದುಃಖಿಸುತ್ತಿದ್ದ ವಿಷ್ಣುವನ್ನು ನೋಡಿ ಲಕ್ಷ್ಮಿಯು ಮತ್ತೂ ಶೋಕಪರವಶಳಾದಳು. ಆಗ ವಿಷ್ಣುವು ಅವಳನ್ನು ನೋಡಿ ಹೀಗೆಂದನು. ಪ್ರಿಯೇ, ಈಹಿಂದೆ ನಾನು ನಿನ್ನ ಮಾತನ್ನು ಕೇಳಲಿಲ್ಲ. ಆದರಿಂದಲೇ ನಮಗೆ ಈರೀತಿಯಾದ ದುಃಖವು ಸಂಭವಿಸಿತು. ನಾನು ದಾರುಣವಾದ ದುಃಖವನ್ನು ಅನುಭವಿಸಬೇಕಾಯಿತು. ನನ್ನ ಸಹವಾಸದಿಂದ ನೀನೂ ಸಹ ದುಃಖಕ್ಕೆ ಗುರಿಯಾದೆ. ಈಗ ನಾವಿಬ್ಬರೂ ದುಃಖದಿಂದ ಬಳಲಿ ಬೆಂಡಾಗಿರುವೆವು. ||೩೬೩-೩೬೪-೩೬೫||

ನಾನು ಅಜ್ಞಾನದ ದೆಸೆಯಿಂದ ಪ್ರದೋಷಕಾಲದಲ್ಲಿ ಪರಶಿವನನ್ನು ಪೂಜಿಸಲಿಲ್ಲ. ಶಾಸ್ತ್ರವಿಹಿತಕರ್ಮಗಳನ್ನಾಚರಿಸುವವರಿಗೆ ದುಃಖವು ಎಂದಿಗೂ ಸಂಭವಿಸಲಾರದು. ||೩೬೬||

ವಿಧಿಶಾಸ್ತ್ರದಿಂದ ವಿಹಿತವಾದ ಕರ್ಮಗಳನ್ನಾಚರಿಸದಿದ್ದವರು, ಪ್ರತಿಕ್ಷಣದಲ್ಲಿಯೂ ದುಃಖವನ್ನನುಭವಿಸುವರು. ಆದುದರಿಂದ ದುಃಖಭೀರುಗಳಾದವರು ಪರಿಶುದ್ಧರಾಗಿ ಪ್ರದೋಷಕಾಲದಲ್ಲಿ ತಪ್ಪದೇ ಶಿವನನ್ನು ಆರಾಧಿಸಬೇಕು. ||೩೬೭||

ತಸ್ಮಾನ್ನ ಪ್ರಮಾದೋ ಭೂಯಾದಿತಿ ವೇದೇಽಪಿ ವರ್ತತೇ ।
ಅತಃ ಪರಂ ಪೂಜಯಾಮಿ ಶಂಕರಂ ಲೋಕಶಂಕರಂ ॥೩೬೮॥

ಅತಿಯತ್ನೇನ ಕಮಲೇ ಗತೋ ಮೋಹೋ ಮಮಾಧುನಾ ।
ಆಯಾಹಿ ಯಾಮೋ ನಿಲಯಂ ವೈಷ್ಣವಂ ದುಃಖನಾಶಕಂ ॥೩೬೯॥

ತಚ್ಛಂಕರಾರ್ಚನಾಲ್ಲಬ್ಧಂ ಪದಂ ಸರ್ವಾರ್ಥಸಾಧಕಂ ॥೩೭೦॥

॥ ಸದಾಶಿವ ಉವಾಚ ॥

ಇತ್ಯುಕ್ತಂ ತದ್ವಚಃ ಶ್ರುತ್ವಾ ವಿಷ್ಣುಂ ಲಕ್ಷ್ಮೀರುವಾಚ ತಂ ।
ಕ್ವ ವೈಷ್ಣವಪದಂ ವಿಷ್ಣೋ ಕಿಮದ್ಯಾಸ್ತೇ ಚ ತತ್ಪದಂ ॥೩೭೧॥

ತತ್ಪದಂ ರಿಟಿನಾ ಪ್ರಾಪ್ತಂ ದತ್ತಂ ತನ್ನಂದಿನಾ ಪುರಾ ।
ತಸ್ಮೈ ತೇನ ಕಥಂ ದೇಯಂ ತತ್ಪದಂ ಸರ್ವಸೌಖ್ಯದಂ ॥೩೭೨॥

---

ಈಶ್ವರಾರಾಧನೆಯಲ್ಲಿ ಅಜಾಗರೂಕನಾಗಿರಬಾರದೆಂದು ವೇದದಲ್ಲಿಯೂ ಹೇಳಲ್ಪಟ್ಟಿರುವುದು. ಆದುದರಿಂದ ಇನ್ನುಮುಂದಾದರೂ ಲೋಕಕಲ್ಯಾಣಕರನಾದ ಶಿವನನ್ನು ಆರಾಧಿಸುವೆನು. ॥೩೬೮॥

ದೀರ್ಘಕಾಲದವರೆಗೆ ಯೋಚಿಸಿದ ಬಳಿಕ ಈಗ ನನ್ನ ಅಜ್ಞಾನವು ದೂರವಾಯಿತು. ಇತ್ತ ಬಾ! ವಿಷ್ಣುವಿನ ಆಲಯವಾದ ವೈಕುಂಠಕ್ಕೆ ಹೋಗೋಣ. ಅದು ದುಃಖವನ್ನು ನಾಶಗೊಳಿಸುವುದು. ॥೩೬೯॥

ಸಕಲ ಇಷ್ಟಾರ್ಥಗಳನ್ನೂ ಕರುಣಿಸುವ ಆ ವಿಷ್ಣುಪದವಿಯು ಈಶ್ವರಾರಾಧನೆಯಿಂದಲೇ ದೊರಕಿರುವುದಲ್ಲವೇ! ಎಂದು ವಿಷ್ಣುವು ಹೇಳಲು, ॥೩೭೦॥

ದೇವಿ, ವಿಷ್ಣುವಿನ ಆ ಮಾತನ್ನು ಕೇಳಿ, ಲಕ್ಷ್ಮಿಯು ಅವನನ್ನು ಕುರಿತು ಹೀಗೆಂದಳು. ಎಲೈ ವಿಷ್ಣುವೇ, ಈಗ ನಿನಗೆ ಆ ವೈಷ್ಣವಪದವಿಯೆಲ್ಲಿಂದ ಬಂದಿತು? ಆ ಪದವಿಯೂ ನಿನಗೆ ಈಗಿರುವುದೇ? ಅದರ ಕೆಲಸವು ಮುಗಿದುಹೋಯಿತು. ॥೩೭೧॥

ಆ ಪದವಿಯನ್ನು ಈ ಹಿಂದೆಯೇ ನಂದಿಯು ರಿಟಿ ಎಂಬ ಪ್ರಮಥಗಣಕ್ಕೆ ದಯಪಾಲಿಸಿರುವನು. ಇನ್ನು ರಿಟಿಯು ನಿನಗೆ ಆ ಪದವಿಯನ್ನು ಹಿಂತಿರುಗಿ ಕೊಡುವ ಬಗೆ ಹೇಗೆ? ॥೩೭೨॥

ಅತಃ ಪರಂ ಕಥಂ ನಂದೀ ಪ್ರಸನ್ನಸ್ತೇ ಭವಿಷ್ಯತಿ ।
ತುಷ್ಟಿಸ್ತು ನಂದಿಕೇಶಸ್ಯ ಭೂಯಸಾ ತಪಸಾಪಿ ನ ॥೩೭೩॥

ಯದ್ಯತ್ಪದಂ ತು ದೇವಾನಾಂ ಧಿಕ್ಕಾರೇಣ ಮಹೇಶಿತುಃ ।
ಚ್ಯುತಂ ತತ್ತತ್ಪದಂ ಸರ್ವಂ ನಂದಿಕೇಶೇನ ಗೃಹ್ಯತೇ ॥೩೭೪॥

ಶಿವಃ ಕದಾಚಿತ್ತಪಸಾ ಪ್ರೀತೋಽಲ್ಪೇನ ಭವತ್ಯಯಂ ।
ನಂದಿಸ್ತು ನ ಭವತ್ಯೇವ ಸಹಸಾ ಪ್ರೀತಮಾನಸಃ ॥೩೭೫॥

ಶಿವಧಿಕ್ಕಾರನಿರತಂ ನಂದಿಕೇಶೋ ಬಲಾನ್ವಿತಃ ।
ಶಸ್ತ್ರೈಃ ಸಂತಾಡಯತ್ಯಾಶು ದುಃಖಾಬ್ಧೌ ಪಾತಯತ್ಯಪಿ ॥೩೭೬॥

ಅನೇಕೇಷು ವಿಚಿತ್ರೇಷು ಬಹುದುಃಖಪ್ರದೇಷ್ವಯಂ ।
ಅಶ್ವೈವಾನ್ಪಾತಯತ್ಯೇವ ತೇಷಾಂ ದುಃಖಪ್ರದೋ ಮುಹುಃ ॥೩೭೭॥

---

ಇನ್ನುಮುಂದೆ ನಂದಿಯು ನಿನಗೆ ಪ್ರಸನ್ನನಾಗುವನೇ ? ದೀರ್ಘಕಾಲದವರೆಗೆ ತಪಸ್ಸನ್ನಾಚರಿಸಿದರೂ ಸಹ ನಂದಿಯು ಸುಪ್ರೀತನಾಗಲಾರನು. ॥೩೭೩॥

ಈಶ್ವರನನ್ನು ತಿರಸ್ಕರಿಸುವುದರಿಂದ ಭ್ರಷ್ಟರಾದ ದೇವತೆಗಳ ಆಯಾ ಸ್ಥಾನಮಾನಗಳನ್ನು ನಂದಿಕೇಶ್ವರನು ತನ್ನ ಅಧೀನದಲ್ಲಿರಿಸಿಕೊಳ್ಳುವನು. ॥೩೭೪॥

ಒಂದುವೇಳೆ ಶಿವನು ಅಲ್ಪವಾದ ತಪಸ್ಸಿನಿಂದಲೇ ಪ್ರಸನ್ನನಾದರೂ ಆಗಬಹುದು. ಆದರೆ ನಂದಿಕೇಶ್ವರನು ಮಾತ್ರ ಶೀಘ್ರವಾಗಿ ಸುಪ್ರೀತನಾಗಲಾರನು. ॥೩೭೫॥

ಶಿವನನ್ನು ತಿರಸ್ಕರಿಸುವವನನ್ನು ಬಲಶಾಲಿಯಾದ ಆ ನಂದಿಕೇಶ್ವರನು ತನ್ನ ಆಯುಧಗಳಿಂದ ಮನಬಂದಂತೆ ಹೊಡೆದು ಶೋಕಸಾಗರದಲ್ಲಿ ಮುಳುಗಿಸುವನು. ॥೩೭೬॥

ಅವನು ಶಿವದ್ರೋಹಿಗಳಿಗೆ ಮತ್ತೆ ಮತ್ತೆ ದುಃಖವನ್ನುಂಟುಮಾಡುತ್ತಾ, ವಿವಿಧವಾದ ಮತ್ತು ದುಃಖದಾಯಕವಾದ ಅನೇಕ ನರಕಗಳಲ್ಲಿ ಇರಿಸುವನು. ॥೩೭೭॥

ಯೇನ ಕೇನಾಪಿ ವಾ ವಿಷ್ಣೋ ಮಹಾದೇವಸ್ಯ ಶಾಸನಂ ।
ನ ಲಂಘನೀಯಂ ಸರ್ವೇಷಾಂ ಶಾಸ್ತಾ ಯಸ್ಮಾನ್ಮಹೇಶ್ವರಃ ॥೩೭೮॥

ಸರ್ವೇಷಾಮಪಿ ದೇವಾನಾಂ ಯತಃ ಶಾಸ್ತಾ ಮಹೇಶ್ವರಃ ।
ತತಸ್ತದಾಜ್ಞಾಕಾರಿತ್ವಂ ದೇವಾನಾಮುಚಿತಂ ಹರೇ ॥೩೭೯॥

ಇಂದ್ರಃ ಪುರಾ ಸ್ವರ್ಗಲೋಕೇ ಸ್ಥಿತಃ ಶಚ್ಯಾ ಸಮನ್ವಿತಃ ।
ಪ್ರದೋಷೇ ನಾರ್ಚಯಾಮಾಸ ಭ್ರಾಂತೋ ದೇವೋತ್ತಮಂ ಶಿವಂ ॥೩೮೦॥

ತಮುವಾಚ ಶಚೀದೇವೀ ಪೂಜಯಸ್ವೇತಿ ಶಂಕರಂ ।
ತದಾವಗಣನಾ ತೇನ ಕೃತಾ ತದ್ವಚನಸ್ಯ ತು ॥೩೮೧॥

ಸ್ವರ್ಗಲೋಕಸ್ಯ ನಾಥೋಽಹಂ ಪೂಜ್ಯೋಽಹಮಖಿಲೈಃ ಸುರೈಃ ।
ಮಮ ಪೂಜ್ಯತಮೋ ಲೋಕೇ ಕಸ್ತಿಷ್ಠತಿ ವದ ಪ್ರಿಯೇ ॥೩೮೨॥

---

ಓ ವಿಷ್ಣುವೇ, ಈಶ್ವರಾಜ್ಞೆಯನ್ನು ಯಾವ ವಿಧದಿಂದಲೂ ಉಲ್ಲಂಘಿಸಬಾರದು. ಶಿವನೇ ಸಕಲ ಪ್ರಾಣಿಗಳಿಗೂ ಶಾಸಕನಾಗಿರುವನು. ||೩೭೮||

ಶಿವನು ದೇವತೆಗಳಿಗೆಲ್ಲರಿಗೂ ಶಿಕ್ಷಕನಾಗಿರುವುದರಿಂದ ದೇವತೆಗಳಿಗೆ ಅವನ ಆಜ್ಞೆಯನ್ನು ಪರಿಪಾಲಿಸುವುದು ಉಚಿತವಾಗಿರುವುದು. ||೩೭೯||

ಎಲೌ ಪಾರ್ವತಿಯೇ, ಹಿಂದೆ ದೇವೇಂದ್ರನು ಶಚೀದೇವಿಯೊಂದಿಗೆ ಸ್ವರ್ಗದಲ್ಲಿ ವಾಸವಾಗಿದ್ದನು. ಅವನು ಒಂದು ದಿನ ಅಜ್ಞಾನಪರವಶನಾಗಿ ಪ್ರದೋಷಕಾಲದಲ್ಲಿ ಶಿವನನ್ನು ಆರಾಧಿಸಲಿಲ್ಲ. ||೩೮೦||

ಆಗ ಶಚೀದೇವಿಯು ಪತಿಯನ್ನು ಕುರಿತು "ಶಿವನನ್ನು ಆರಾಧಿಸು" ಎಂದು ಹೇಳಲು, ದೇವೇಂದ್ರನು ಅವಳ ಮಾತನ್ನು ಅಲ್ಲಗಳೆದನು. ||೩೮೧||

ಮತ್ತು ಅವನು ಶಚೀದೇವಿಯನ್ನು ಕುರಿತು ಹೀಗೆಂದನು --ಎಲೌ ಪ್ರಿಯತಮೆಯೇ, ಸ್ವರ್ಗಲೋಕದ ಒಡೆಯನಾದ ನಾನು ಸರ್ವರಿಗೂ ಪೂಜ್ಯನಾಗಿರುವೆನು. ಈ ಲೋಕದಲ್ಲಿ ನನಗೆ ಪೂಜ್ಯನಾದವನು ಅದಾವನಿರುವನು? ||೩೮೨||

ಇತ್ಯುಕ್ತ್ವಾ ಭೋಗನಿರತಃ ಶಚೀಮಾಲಿಂಗ್ಯ ಸಾದರಂ ।
ತಸ್ಮಾವಿಂದ್ರಃ ಕಲ್ಪಪುಷ್ಪಶಯ್ಯಾಯಾಂ ಮದನಾತುರಃ ॥೩೮೩॥

ತದಾನೀಂ ನಂದಿಕೇಶಸ್ಯ ಭೃತ್ಯಃ ಕಶ್ಚಿತ್ಸಮಾಗತಃ ।
ಶಿವಾವಗಣನಾವಾಕ್ಯಂ ಶ್ರುತ್ವಾ ಚೇಂದ್ರಮುಖೋದ್ಗತಂ ॥೩೮೪॥

ತತಃ ಸೋಽಪ್ಯತಿರುಷ್ಟಃ ಸನ್ ಶೂಲಂ ಜಗ್ರಾಹ ಪಾಣಿನಾ ।
ಇಂದ್ರಂ ತತಃ ಸ ಶೂಲಾಗ್ರೇ ಪ್ರೋಥಯಾಮಾಸ ಸತ್ವರಂ ॥೩೮೫॥

ತತಃ ಸ ಭ್ರಾಮಯಾಮಾಸ ಶೂಲಾಗ್ರೇ ಸಂನಿವೇಶ್ಯ ತಂ ।
ದ್ವಾತ್ರಿಂಶದ್ಯುಗಪರ್ಯಂತಂ ಚಕ್ರವದ್ಗಗನಾಂತರೇ ॥೩೮೬॥

ತತಸ್ತಂ ಪಾತಯಾಮಾಸ ಸ ತು ದರ್ದುರಪರ್ವತೇ ।
ಪತಿತ್ವಾ ತತ್ರ ದೇವೇಂದ್ರಸ್ತಿಷ್ಠತ್ಯದ್ಯಾಪಿ ದುಃಖಿತಃ ॥೩೮೭॥

---

ಹೀಗೆಂದು ಹೇಳಿ ಇಂದ್ರನು ಭೋಗಾಸಕ್ತನಾಗಿ ಶಚಿಯನ್ನು ಪ್ರೀತಿಯಿಂದ ಆಲಿಂಗಿಸಿ, ಕಾಮುಪರವಶನಾಗಿ ಕಲ್ಪವೃಕ್ಷದ ಪುಷ್ಪಗಳಿಂದ ರಚಿಸಲ್ಪಟ್ಟ ಹಾಸಿಗೆಯಲ್ಲಿ ಪವಡಿಸಿದನು. ॥೩೮೪॥

ಆಗ ಇಂದ್ರನು ಶಿವನನ್ನು ನಿಂದಿಸಿದ ವೃತ್ತಾಂತವನ್ನು ಕೇಳಿ, ನಂದಿಕೇಶನ ಒಬ್ಬಾನೊಬ್ಬ ಸೇವಕನು ಅಲ್ಲಿಗೆ ಬಂದನು. ॥೩೮೪॥

ಶಿವನಿಂದೆಯಿಂದ ಆ ಭೃತ್ಯನು ಅತ್ಯಂತ ಕೋಪಗೊಂಡು ಶೂಲವನ್ನು ಕೈಯ್ಯಲ್ಲಿ ತೆಗೆದುಕೊಂಡು, ಅದರ ಅಗ್ರದಿಂದ ಇಂದ್ರನನ್ನು ಚುಚ್ಚಿ ಮೇಲಕ್ಕೆತ್ತಿದನು. ॥೩೮೫॥

ತರುವಾಯ ಅವನು ಇಂದ್ರನನ್ನು ಶೂಲದ ಅಗ್ರಭಾಗದಲ್ಲಿಯೇ ಮೂವತ್ತೆರಡು ಯುಗಗಳು ಕಳೆಯುವ ವರೆಗೆ ನಿಲ್ಲಿಸಿದ್ದು ಶೂಲವನ್ನು ಅಂತರಿಕ್ಷದಲ್ಲಿ ಚಕ್ರದಂತೆ ಗಿರಗಿರನೆ ತಿರುಗಿಸಿದನು. ॥೩೮೬॥

ಕೊನೆಗೆ ಅವನನ್ನು ದರ್ದುರವೆಂಬ ಪರ್ವತದಲ್ಲಿ ಬೀಳಿಸಿದನು. ಇಂದ್ರನು ಈಗಲೂ ಆ ದರ್ದುರಪರ್ವತದಲ್ಲಿ ಬಿದ್ದು ದುಃಖವನ್ನನುಭವಿಸುತ್ತಿರುವನು. ॥೩೮೭॥

ನಂದಿಕೇಶಸ್ಯ ಭೃತ್ಯೇನ ಸ್ವರ್ಗಲೋಕಃ ಸಮಾವೃತಃ ।
ಇಂದ್ರೋಽಪಿ ಸ ತಪಶ್ಚರ್ಯಾಪರೋ ಭೂತ್ವಾಧಿತಿಷ್ಠತಿ ॥೩೮೮॥

ಶಂಕರಸ್ಯಾವಗಣನಾತತಃ ಸ್ವಪ್ನೇಽಪಿ ಸರ್ವಥಾ ।
ದೇವದೇವಾಧಿದೇವಸ್ಯ ನ ಕರ್ತವ್ಯಾ ಜನಾರ್ದನ ॥೩೮೯॥

ಶಿವಂ ತ್ವನನ್ಯಸದೃಶಂ ಯೇಽನ್ಯದೇವಸಮಂ ವಿದುಃ ।
ನ ತೇ ಪತಿವ್ರತಾಜಾತಾ ಜಾರಜಾಸ್ತೇ ನ ಸಂಶಯಃ ॥೩೯೦॥

ಅನ್ಯದೇವಸಮಂ ಮತ್ವಾ ಶಿವಂ ದೇವೋತ್ತಮಂ ಪ್ರಭುಂ ।
ಆಚಂದ್ರಾರ್ಕಮಘೋರೇಷು ನರಕೇಷು ಪತಿಷ್ಯತಿ ॥೩೯೧॥

ಸ ಮದ್ಯಪಃ ಸ ಚಾಂಡಾಲಃ ಸ ಮಹಾಪಾತಕಾಶ್ರಯಃ ।
ಮನುತೇ ಯೋಽನ್ಯಸದೃಶಂ ದೇವದೇವೋತ್ತಮಂ ಶಿವಂ ॥೩೯೨॥

---

ನಂದಿಕೇಶನ ಆ ಭೃತ್ಯನು ಸ್ವರ್ಗಲೋಕವನ್ನಾಕ್ರಮಿಸಿದನು. ಇಂದ್ರನಾದರೋ, ಶಿವನಿಂದೆಯಿಂದ ಇಂದಿಗೂ ತಪಸ್ಸನ್ನಾಚರಿಸುತ್ತಲೇ ಇರುವನು. ಓ ಜನಾರ್ದನನೇ, ಆದುದರಿಂದ ದೇವೇಶನಾದ ಶಿವನನ್ನು ಎಂದಿಗೂ ನಿಂದಿಸಬಾರದು. ||೩೮೮-೩೮೯||

ಇತರರಿಗೆ ಅಸದೃಶನಾದ ಶಿವನನ್ನು ಇತರ ದೇವತೆಗಳಿಗೆ ಸಮಾನನನ್ನಾಗಿ ಯಾರು ತಿಳಿಯುವರೋ ಅವರು ಪತಿವ್ರತೆಯಾದ ಜನನಿಯ ಉದರದಿಂದ ಜನಿಸಿದವರಲ್ಲ. ಮತ್ತೇನೆಂದರೆ ಅವರು ಜಾರನಿಂದಲೇ ಜನಿಸಿದವರೆನ್ನಬಹುದು. ||೩೯೦||

ಶಿವನು ಇತರ ದೇವತೆಗಳಿಗೆ ಸಮಾನನಾದವನೆಂದು ತಿಳಿದವರು ಅಘೋರವೆಂಬ ಹೆಸರುಳ್ಳ ಮಹಾನರಕದಲ್ಲಿ ಸೂರ್ಯಚಂದ್ರರಿರುವಪರ್ಯಂತ ಬೀಳುವರು. ||೩೯೧||

ಯಾವನು ಶಿವನನ್ನು ಇತರ ದೇವತೆಗಳೊಂದಿಗೆ ಹೋಲಿಸುವನೋ ಅವನು ಮದ್ಯಪಾನವನ್ನು ಮಾಡಿದವನಿಗೆ ಸಮಾನನು. ಅವನೇ ಚಂಡಾಲನು. ಅವನೇ ಸಕಲ ಪಾಪಗಳಿಗೂ ಆಶ್ರಯನೂ ಆಗಿರುವನು. ||೩೯೨||

ಪ್ರಾಪ್ತಂ ಶಿವಪ್ರಸಾದೇನ ವಿಷ್ಣುತ್ವಂ ಚ ತ್ವಯಾ ಪುರಾ ।
ತತಸ್ತ್ವಂ ಸರ್ವಭಾವೇನ ಶಂಕರಂ ಶರಣಂ ವ್ರಜ ॥೩೯೩॥

ನಾಽನ್ಯದೇವಸಮಃ ಶಂಭುಃ ಶಿವೋ ದೇವೋತ್ತಮಃ ಪ್ರಭುಃ ।
ತಸ್ಯಾವಗಣನಾ ವಿಷ್ಣೋ ಸರ್ವನಾಶಾಯ ಜಾಯತೇ ॥೩೯೪॥

ತತಃ ಶಂಭುಂ ಪ್ರೀಣಯಸ್ವ ತಪಸೋಗ್ರೇಣ ಸಾದರಂ ।
ಪ್ರಸನ್ನಃ ಪಾರ್ವತೀನಾಥಸ್ತುಭ್ಯಮಿಷ್ಟಂ ಪ್ರದಾಸ್ಯತಿ ॥೩೯೫॥

॥ ಶಿವ ಉವಾಚ ॥

ಇತ್ಯುಕ್ತಃ ಸ ತಯಾ ವಿಷ್ಣುಸ್ತತ್ರೈವೋಗ್ರಂ ತಪಸ್ತದಾ ।
ತಪ್ತುಂ ಸಮಾರಭೇ ದೇವಿ ಪಂಚ ಪ್ರಜ್ವಾಲ್ಯ ಪಾವಕಾನ್ ॥೩೯೬॥

ತ್ರಿಕೋಟಿಯುಗಪರ್ಯಂತಂ ತಪಸ್ತಪ್ತಂ ಚ ವಿಷ್ಣುನಾ ।
ಜಿತಾಹಾರೇಣ ತೇನೈವ ಶ್ವಾಸಾನ್ಸಮ್ಯಙ್ನಿರುಂಧ್ಯ ಚ ॥೩೯೭॥

---

ನೀನು ಈಹಿಂದೆ ಈಶ್ವರಾನುಗ್ರಹದಿಂದಲೇ ವಿಷ್ಣುಪದವಿಯನ್ನು ಹೊಂದಿದ್ದೆ. ಆದುದರಿಂದ ಈಗಲೂ ನೀನು ಸಕಲ ವಿಧಗಳಿಂದಲೂ ಶಿವನನ್ನೇ ಮರೆಹೊಗು. ॥೩೯೩॥

ಶಿವನು ಇತರ ದೇವತೆಗಳಿಗೆ ಸಮಾನನಲ್ಲ. ಅವನು ದೇವತೆಗಳಲ್ಲೆಲ್ಲಾ ಶ್ರೇಷ್ಠತಮನೂ ಪ್ರಭುವೂ ಆಗಿರುವನು. ಅವನನ್ನು ತಿರಸ್ಕರಿಸುವುದರಿಂದ ಸರ್ವಸ್ವವೂ ನಾಶಹೊಂದುವುದು. ॥೩೯೪॥

ಆದುದರಿಂದ ಭಯಂಕರವಾದ ತಪಸ್ಸನ್ನಾಚರಿಸಿ ಶಿವನು ಪ್ರಸನ್ನನಾಗುವಂತೆ ಮಾಡಿಕೋ. ನಿನ್ನ ತಪಸ್ಸಿಗೆ ಮೆಚ್ಚಿ ಪ್ರಸನ್ನನಾದ ಆ ಗಿರಿಜಾರಮಣನು ನಿನ್ನ ಇಷ್ಟಾರ್ಥವನ್ನು ಪೂರಯಿಸುವನು. ॥೩೯೫॥

ದೇವಿ, ಲಕ್ಷ್ಮಿಯು ಹೀಗೆನ್ನಲು ಆಗ ವಿಷ್ಣುವು ಅಲ್ಲಿಯೇ ಪಂಚಾಗ್ನಿಗಳನ್ನು ಸ್ಥಾಪಿಸಿ ಅವುಗಳ ನಡುವೆ ನಿಂತು ಉಗ್ರವಾದ ತಪಸ್ಸಿಗೆ ಆರಂಭಿಸಿದನು. ॥೩೯೬॥

ಅವನು ಮೂರು ಕೋಟಿ ಯುಗಗಳು ಕಳೆಯುವವರೆಗೂ ಉಪವಾಸದಿಂದಿದ್ದು ಶ್ವಾಸಗಳನ್ನು ನಿರೋಧಿಸಿ ತಪಸ್ಸನ್ನಾಚರಿಸಿದನು. ॥೩೯೭॥

ಪ್ರಸನ್ನೋಽಸ್ಮಿ ತತೋ ವಿಷ್ಣೋಸ್ತದುಗ್ರತಪಸಾ ಶಿವೇ ।
ಪ್ರಸನ್ನೇ ಸತಿ ಮಾಂ ವಿಷ್ಣುಸ್ತುಷ್ಟಾವ ಬಹುಧಾ ಸ್ತವೈಃ ॥೩೯೮॥

ತತಃ ಪದಂ ದಾಪಿತಂ ಚ ವಿಷ್ಣವೇ ರಿಟಿತೋ ಮಯಾ ।
ತತ್ರೈವ ಸ ಮಹಾವಿಷ್ಣುಃ ಸ್ಮೃತ್ವಾ ದುಃಖಾನಿ ಸರ್ವಥಾ ॥೩೯೯॥

ತದಾ ಪ್ರಭೃತಿ ವಿಷ್ಣುರ್ಮಾಮಪ್ರಮಾದೇನ ಸಾದರಂ ।
ಪೂಜಯತ್ಯತಿಯತ್ನೇನ ಸರ್ವಕಾಲೇಷ್ವತಂದ್ರಿತಃ ॥೪೦೦॥

ಇತಸ್ತ್ರಿಂಶತ್ಸಹಸ್ರಾಂತೇ ಕಲ್ಪೇ ವಿಷ್ಣುಃ ಪ್ರತಾಪವಾನ್ ।
ನಾರಸಿಂಹಂ ಪರಂ ರೂಪಮುಗ್ರಂ ಸಂಧಾರಯಿಷ್ಯತಿ ॥೪೦೧॥

ಯೋಜನಾನಾಂ ಶತಂ ವ್ಯಾಪ್ಯ ಭಾನುಮಂಡಲಸನ್ನಿಭಃ ।
ಕೃತ್ವಾ ಸ ದೇವಕಾರ್ಯಾಣಿ ದೇವೈಸ್ಸಂಪೂಜಿತಸ್ತದಾ ॥೪೦೨॥

---

ವಿಷ್ಣುವಿನ ಆ ಉಗ್ರವಾದ ತಪಸ್ಸಿನಿಂದ ನಾನು ಪ್ರಸನ್ನನಾಗಲು ಅವನು ನನ್ನನ್ನು ಬಗೆಬಗೆಯಾದ ಸ್ತೋತ್ರಗಳಿಂದ ಸ್ತುತಿಸಿದನು. ॥೩೯೮॥

ಬಳಿಕ ನಾನು ರಿಟಿಯ ವಶದಲ್ಲಿ ಇದ್ದ ಆ ವಿಷ್ಣುಪದವಿಯನ್ನು ರಿಟಿಯಿಂದ ಪುನಃ ವಿಷ್ಣುವಿಗೆ ಕೊಡಿಸಿದೆನು. ಆಗ ವಿಷ್ಣುವು ನನ್ನನ್ನು ಸ್ಮರಿಸಿ, ಅಲ್ಲಿಯೇ ತನ್ನ ದುಃಖಗಳನ್ನು ಮರೆತನು. ॥೩೯೯॥

ಅಂದಿನಿಂದ ಮೊದಲುಗೊಂಡು ವಿಷ್ಣುವು ತ್ರಿಕಾಲಗಳಲ್ಲಿಯೂ ತಪ್ಪದೇ ನನ್ನನ್ನು ಆರಾಧಿಸಲುಪಕ್ರಮಿಸಿದನು. ॥೪೦೦॥

ಈ ಕಲ್ಪದಿಂದ ಮುಂದುವರಿದು ಮೂವತ್ತುಸಹಸ್ರವರ್ಷಗಳು ಕಳೆದಬಳಿಕ ಪರಾಕ್ರಮಿಯಾದ ವಿಷ್ಣುವು ಉಗ್ರವಾದ ನರಸಿಂಹನ ರೂಪವನ್ನು ಧರಿಸುವನು. ॥೪೦೧॥

ಅವನು ನೂರಾರುಯೋಜನಪರ್ಯಂತ ವ್ಯಾಪಿಸಿ ಸೂರ್ಯಮಂಡಲದಂತೆ ಹೊಳೆಯುತ್ತಾ, ದೇವಕಾರ್ಯಗಳನ್ನು ನೆರವೇರಿಸಿಕೊಟ್ಟು ದೇವತೆಗಳಿಂದ ಪೂಜಿತನಾಗುವನು. ॥೪೦೨॥

ನ ಮತ್ತೋಽಸ್ತ್ಯಧಿಕೋ ಲೋಕೇ ನ ಮಯಾ ಸದೃಶೋಽಪಿ ವಾ ।
ನಾಸ್ತೀತಿ ಸುರವರ್ಗೇಷು ಪಶ್ಯತ್ಸ್ವಪಿ ವದಿಷ್ಯತಿ ॥೪೦೩॥

ತದಾ ತು ಶಾರಭಂ ರೂಪಂ ಧೃತ್ವಾ ತಂ ಸಂಹರಾಮ್ಯಹಂ ।
ನಖಾಗ್ರೇ ಪ್ರೋಥಯಿತ್ವಾ ತಂ ಭ್ರಾಮಯಾಮಿ ನ ಸಂಶಯಃ ॥೪೦೪॥

ಹರಿಂ ಹರಂ ತಮೀಶಾನಂ ವಿಶ್ವಸ್ಯ ಸಕಲಸ್ಯ ಚ ।
ಅನುಯಾಸ್ಯಂತಿ ಮಾಂ ದೇವಾ ಮತೀನಾಂ ಋಷಭಂ ಪ್ರಭುಂ॥೪೦೫॥

ತತೋ ವಿದಾರ್ಯ ತದ್ವೇರಂ ಘೋರರೂಪಂ ವಹಾಮ್ಯಹಂ ।
ಭೀತಾಸ್ತದಾನೀಂ ಮಾಂ ದೇವಾಸ್ತೋಷ್ಯಂತಿ ಬಹುಧಾಸ್ತವೈಃ॥೪೦೬॥

ಹತಂ ವಿಲೋಕ್ಯ ಯತ್ನೇನ ಭೈರವಃ ಕಾಶಿಪಾಲಕಃ ।
ಪೇಷಯಿಷ್ಯತಿ ಪಾಷಾಣೇ ಪುನರ್ಜೀವನ ಶಂಕಯಾ ॥೪೦೭॥

---

ಆಗ ನೃಸಿಂಹರೂಪವನ್ನು ಧರಿಸಿದ ಅವನು ‘ ಈ ಲೋಕದಲ್ಲಿ ನನಗಿಂತಲೂ ಶ್ರೇಷ್ಠನಾದ ಇನ್ನೊಬ್ಬನಿರುವುದಿಲ್ಲ. ದೇವತೆಗಳಲ್ಲಿ ನನಗೆ ಸಮಾನನಾದವನೊಬ್ಬನಿಲ್ಲ’ ಹೀಗೆಂದು ದೇವತೆಗಳ ಸಮಕ್ಷದಲ್ಲಿ ಹೇಳುವನು. ॥೪೦೩॥

ಆಗ ನಾನು ಶರಭರೂಪವನ್ನು ಧರಿಸಿ ಅವನನ್ನು ಸಂಹರಿಸುವೆನು. ಹರಿತವಾದ ಉಗುರುಗಳ ಅಗ್ರಭಾಗದಿಂದ ಅವನನ್ನು ಚುಚ್ಚಿ ಚಕ್ರದಂತೆ ಗಿರಗಿರನೆ ತಿರುಗಿಸುವೆನು. ಇದು ನಿಜ. ॥೪೦೪॥

ದೇವತೆಗಳೆಲ್ಲರೂ ವಿಷ್ಣುಸ್ವರೂಪನೂ, ಶಿವಸ್ವರೂಪನೂ, ಜಗತ್ಪ್ರಭುವೂ, ಜ್ಞಾನದಾಯಕನೂ ಆದ ನನ್ನನ್ನು ಆಗ ಮರೆಹೋಗುವರು. ॥೪೦೫॥

ಬಳಿಕ ನಾನು ನೃಸಿಂಹನ ವಕ್ಷಸ್ಥಲವನ್ನು ಸೀಳಿ ಭಯಂಕರವಾದ ರೂಪವನ್ನು ಧರಿಸುವೆನು. ಆಗ, ಘೋರವಾದ ನನ್ನ ಆ ಆಕಾರವನ್ನು ನೋಡಿ, ದೇವತೆಗಳು ಭಯಚಕಿತರಾಗಿ, ನನ್ನನ್ನು, ಬಗೆಬಗೆಯ ಸ್ತೋತ್ರಗಳಿಂದ ಸ್ತುತಿಸುವರು. ॥೪೦೬॥

ನನ್ನಿಂದ ಸಂಹರಿಸಲ್ಪಟ್ಟ, ನೃಸಿಂಹನನ್ನು ನೋಡಿ, ಕಾಶೀಕ್ಷೇತ್ರದ ಪಾಲಕನಾದ ಭೈರವನು, “ ಮೃತನಾದ ನೃಸಿಂಹನು ಪುನಃ ಎಲ್ಲಿ, ಜೀವಿಸುವನೋ ’, ಎಂಬ ಸಂದೇಹದಿಂದ, ಅವನನ್ನು ಕಲಿನಲ್ಲಿರಿಸಿ ಅರೆಯುವನು. ॥೪೦೭॥

ತದಾ ಪ್ರಭೃತಿ ದೇವಾನಾಂ ನಾರಸಿಂಹನಿಪಾತನಂ ।
ಪೂಜಯಿಷ್ಯಂತಿ ತನ್ನಾಮ್ನಾ ಸರ್ವಪಾಪಭಯಾಪಹಂ ॥೪೦೮॥

ಅಶ್ಶೈವಂ ಭೈರವೋ ವೀಕ್ಷ್ಯ ದಾವಾನಲಸಮಪ್ರಭಃ ।
ದಹಿಷ್ಯತಿ ನ ಸಂದೇಹಸ್ತಮಶ್ಶೈವಂ ದುರಾಸದಂ ॥೪೦೯॥

ಅಶ್ಶೈವನಾಶನಾರ್ಥಾಯ ಕಾಶ್ಯಾಂ ಶ್ರೀ ಕಾಲಭೈರವಃ ।
ಸ್ಥಾಪಿತೋಽಸ್ತಿ ಮಯಾ ದೇವಿ ಸುರಗಂಧರ್ವಪೂಜಿತಃ ॥೪೧೦॥

ದೃಶ್ಯತೇ ಭೈರವಃ ಕಾಶ್ಯಾಮಶ್ಶೈವಪ್ರಲಯಾನಲಃ ।
ಚತುರ್ದಶೇಷು ಭುವನೇಷ್ವೇತತ್ತುಲ್ಯೋ ನ ಶಾಸಕಃ ॥೪೧೧॥

ಹಂತ್ಯಯಂ ಬ್ರಹ್ಮವಿಷ್ಣ್ವಾದೀನ್ಕ್ರೋಧಸಂಕುಲಿತೇಕ್ಷಣಃ ।
ಮಹಾಕಾಲಾನಲಪ್ರಖ್ಯೋ ದುರಾಧರ್ಷೋ ಮಮಾಪ್ಯಯಂ ॥೪೧೨॥

---

ಅಂದಿನಿಂದ ಮೊದಲುಗಂಡು, ದೇವತೆಗಳು ನರಸಿಂಹನನ್ನು ಸಂಹರಿಸಿದ ನನ್ನನ್ನು ಅದೇ ಹೆಸರಿನಿಂದ ಪೂಜಿಸುವರು. ||೪೦೮||

ಶಿವದ್ವೇಷಿಯನ್ನು ನೋಡಿದೊಡನೆಯೇ ಭೈರವನು ಕಾಡುಕಿಚ್ಚಿನಂತೆ, ಪ್ರಜ್ವಲಿಸುತ್ತಾ ಪಾಪಿಯಾದ ಆ ಶಿವನಿಂದಕನನ್ನು, ದಹಿಸುವನು. ಇದು ನಿಜ. ||೪೦೯||

ಎಲೌ ದೇವಿಯೇ! ಶಿವನಿಂದಕರನ್ನು ಸಂಹರಿಸುವುದಕ್ಕೋಸ್ಕರ ನಾನು, ಕಾಶೀಕ್ಷೇತ್ರದಲ್ಲಿ ಕಾಲಭೈರವನನ್ನು ಸ್ಥಾಪಿಸಿರುವೆನು. ಅವನನ್ನು ಸಕಲ ದೇವತೆಗಳೂ ಮತ್ತು ಗಂಧರ್ವರೂ ಪೂಜಿಸುತ್ತಿರುವರು. ||೪೧೦||

ಕಾಶೀಕ್ಷೇತ್ರದಲ್ಲಿ ನೆಲಸಿರುವ ಭೈರವನು, ಶಿವದ್ರೋಹಿಗಳಿಗೆ ಪ್ರಲಯಕಾಲದ ಅಗ್ನಿಯಂತೆ ಕಾಣಿಸುತ್ತಿರುವನು. ಚತುರ್ದಶ ಭುವನಗಳಲ್ಲಿ, ಭೈರವನಿಗೆ ಸಮಾನವಾದ ಶಾಸಕನು ಇನ್ನೊಬ್ಬನಿರುವುದಿಲ್ಲ. ||೪೧೧||

ಪ್ರಲಯಕಾಲದ ಅಗ್ನಿಗೆ ಸಮಾನನಾದ ಇವನು, ಕೋಪದಿಂದ ಕೆಂಪಾದ ಕಣ್ಣುಗಳುಳ್ಳವನಾಗಿ, ಬ್ರಹ್ಮ, ವಿಷ್ಣು, ಮೊದಲಾದ ದೇವತೆಗಳನ್ನು ಸಂಹರಿಸುವನು. ಅವನು ನನಗೂ ಅಜೇಯನಾಗಿರುವನು. ||೪೧೨||

ಯಾತನಾಸ್ತಂಭನಿಕಟೇ ಯದಾ ಶೂಲಧರಃ ಸ್ಥಿತಃ ।
ತದಾ ಮಮಾಪಿ ಸುಭಗೇ ದುರ್ನಿರೀಕ್ಷ್ಯೋಽಹಿ ಭೈರವಃ ॥೪೧೩॥

ಏಕೋಽಪ್ಯನೇಕಧಾ ಭೂತ್ವಾ ವಿಶ್ವರೂಪೋಽತಿಭೀಷಣಃ ।
ಸಂಚರತ್ಯಸ್ತ್ರಹಸ್ತೋಽಯಂ ಯಾತನಾಸ್ತಂಭವೀಥಿಷು ॥೪೧೪॥

ವಿಗ್ರಹಾಃ ಕಾಲನಾಥಸ್ಯ ಪ್ರಜ್ವಲದ್ಭೂಧರಾ ಇವ ।
ಯಾತನಾಸ್ತಂಭಪಾರ್ಶ್ವೇಷು ದೃಶ್ಯಂತೇ ಭೈರವಾಃ ಶಿವೇ ॥೪೧೫॥

ಅವಾಪುರ್ಭೈರವಂ ಕ್ರೂರಂ ಪುರಾ ವಿಷ್ಣುಪುರೋಗಮಾಃ ।
ತೇ ತತ್ಕ್ರೋಧಾನಲಹತಾ ನಿಪೇತುರ್ಭುವಿ ಮೂರ್ಛಿತಾಃ ॥೪೧೬॥

ತತಸ್ತೇ ಯುಗಪರ್ಯಂತಂ ಪತಿತಾಃ ಪುನರುತ್ಥಿತಾಃ ।
ಶಾಂತೇ ಕ್ರೋಧಾನಲೇ ನೋ ಚೇದ್ಯಾಸ್ಯಂತೇ ತೇಽಪಿ ಭಸ್ಮತಾಂ ॥೪೧೭॥

---

ಭೈರವನು, ಯಾತನಾಸ್ತಂಭದ ಬಳಿಯಲ್ಲಿ, ಶೂಲಧಾರಿಯಾದ ನಿಂತ ಸಮಯದಲ್ಲಿ ನಾನೂ ಸಹ ಅವನನ್ನು ನೋಡಲು ಅಂಜುವೆನು. ॥೪೧೩॥

ಅವನು, ಒಬ್ಬನಾಗಿದ್ದರೂ ಸಹ ತನ್ನ ಮಹಿಮೆಯಿಂದ ಅನೇಕ ರೂಪಗಳನ್ನು ಧರಿಸಿ ಕೈಗಳಲ್ಲಿ, ಆಯುಧಗಳನ್ನು ಧರಿಸಿ, ಅತ್ಯಂತ ಭಯವನ್ನುಂಟು ಮಾಡುತ್ತಾ, ಯಾತನಾಸ್ತಂಭಕ್ಕೆ ಹೋಗುವ ಮಾರ್ಗಗಳಲ್ಲಿ ಸಂಚರಿಸುವನು. ॥೪೧೪॥

ಯಾತನಾಸ್ತಂಭದ, ಅಕ್ಕಪಕ್ಕಗಳಲ್ಲಿ ನಿಂತಿರುವ ಭೈರವನ ಮೂರ್ತಿಗಳು, ಕಾಡುಕಿಚ್ಚಿನಿಂದ ಪ್ರಜ್ವಲಿಸುತ್ತಿರುವ ಪರ್ವತಗಳಂತೆ, ಅದ್ಭುತವಾಗಿ ಕಾಣಿಸುತ್ತಿರುವುವು. ॥೪೧೫॥

ಹಿಂದೆ ಒಂದಾನೊಂದು ಸಮಯದಲ್ಲಿ, ವಿಷ್ಣುವೇ ಮೊದಲಾದ ದೇವತೆಗಳು, ಕ್ರೂರನಾದ ಭೈರವನ ಬಳಿಗೆ ಹೋದರು. ಆಗ ಅವರು, ಕೋಪದಿಂದ, ಕಾದ ಕೆಂಡದಂತೆ ಕೆಂಪಾದ ಕಣ್ಣುಗಳಿಂದ ಕೂಡಿದ, ಭೈರವನನ್ನು ನೋಡಿದೊಡನೆಯೇ ಹೆದರಿ ಮೂರ್ಛೆಗೊಂಡು ಕೆಳಕ್ಕೆ ಬಿದ್ದರು. ॥೪೧೬॥

ಬಳಿಕ, ಮೂರ್ಛೆಗೊಂಡು ಬಿದ್ದ ಅವರು, ಒಂದು ಯುಗವು ಕಳೆಯುವವರೆಗೂ ಹಾಗೆಯೇ ಇದ್ದು, ತರುವಾಯ ಎಚ್ಚೆತ್ತು ಮೇಲಕ್ಕೆದ್ದರು. ಆಗ ಭೈರವನ

ಪ್ರತ್ಯಾಶ್ರಮಂ ಪ್ರತಿಗೃಹಂ ಪ್ರವಿಶ್ಯಾಯಂ ತು ಭೈರವಃ ।
ಅಶ್ವೈವಾನ್ಪಶ್ಯತಿ ಪ್ರಾಜ್ಞಃ ಶಿವಾರ್ಚನಪರಾಙ್ಮುಖಾನ್ ॥೪೧೮॥

ಭಸ್ಮೋದ್ಧೂಳನರುದ್ರಾಕ್ಷಧಾರಣಾದಿಪರಾಙ್ಮುಖಾನ್ ।
ಲಿಂಗಪೂಜಾನಿಹೀನಾಂಶ್ಚ ದೃಷ್ಟ್ವಾ ಕ್ರುದ್ಧೋ ಭವತ್ಯಯಂ ॥೪೧೯॥

ಕ್ರೋಧೋಽಸ್ಯ ವಿಫಲೋ ನೈವ ಭವಿಷ್ಯತಿ ಕದಾಚನ ।
ಯಸ್ಮಿನ್ಕ್ರೋಧೋಽಸ್ಯ ತಂ ಘೋರಂ ಪಾತಯತ್ಯಶ್ಮಮಂಡಲೇ ॥೪೨೦॥

ದೇವಾನಾಮಪಿ ಸರ್ವೇಷಾಂ ಶಾಸ್ತಾ ಶ್ರೀಕಾಲಭೈರವಃ ।
ತದನ್ಯೇ ತೃಣಭೂತಾಸ್ತು ಗಂಧರ್ವಾ ಮುನಯೋ ನರಾಃ ॥೪೨೧॥

ಭೈರವೋ ಭೀಮವೇಷೋಽಯಂ ದುರ್ನಿರೀಕ್ಷ್ಯಃ ಸುರೈರಪಿ ।
ಯದಾ ಕ್ರೋಧಸಮಾಕ್ರಾಂತಸ್ತದಾ ದ್ರಷ್ಟುಂ ನ ಶಕ್ಯತೇ ॥೪೨೨॥

---

ಕ್ರೋಧಾಗ್ನಿಯು ಶಾಂತವಾಗದಿದ್ದಿದ್ದರೆ, ಅವರೆಲ್ಲರೂ ಭಸ್ಮಾವಶೇಷರಾಗುತ್ತಿದ್ದರು. ॥೪೧೭॥

ಆ ಭೈರವನು, ಪ್ರತಿಯೊಂದು ಆಶ್ರಮಕ್ಕೂ ಮತ್ತು ಪ್ರತಿಯೊಂದೇ ಮನೆಗೂ ಪ್ರವೇಶಿಸಿ, ಅಲ್ಲಿ, ಈಶ್ವರನನ್ನು ದ್ವೇಷಿಸುತ್ತಾ, ಅವನ ಆರಾಧನೆಯನ್ನು ಕೈಗೊಳ್ಳದಿರುವ ಮನುಷ್ಯರು ಯಾರಾದರೂ ಇರುವರೇ ಎಂದು ಸೂಕ್ಷ್ಮದೃಷ್ಟಿಯಿಂದ ನೋಡುವನು. ॥೪೧೮॥

ಭಸ್ಮ, ರುದ್ರಾಕ್ಷಿಗಳನ್ನು ಧರಿಸದೆ, ಶಿವಲಿಂಗಪೂಜೆಯನ್ನು ಮಾಡದೇ ಇರುವವರನ್ನು ನೋಡಿ ಇವನು ಕೋಪಗೊಳ್ಳುವನು. ॥೪೧೯॥

ಇವನ ಕೋಪವು ಎಂದಿಗೂ ವಿಫಲವಾಗುವುದಿಲ್ಲ. ಇವನು ಯಾರಲ್ಲಿ ಕೋಪಗೊಳ್ಳುವನೋ ಅವನನ್ನು ಕೆಂಪಾಗಿ ಕಾದ ಲೋಹದ ಕುಲುಮೆಯಲ್ಲಿ ಹಾಕುವನು. ॥೪೨೦॥

ಕಾಲಭೈರವನು ಸಕಲ ದೇವತೆಗಳಿಗೂ ಶಾಸಕನಾಗಿರುವನು. ಇನ್ನುಳಿದ ಗಂಧರ್ವರು, ಮುನಿಗಳು ಮತ್ತು ಮನುಷ್ಯರು ಇವನಿಗೆ ತೃಣಪ್ರಾಯರು. ॥೪೨೧॥

ಭಯಂಕರವಾದ ಆಕಾರವನ್ನು ಧರಿಸಿದ ಈ ಭೈರವನನ್ನು ನೋಡಲು ದೇವತೆಗಳೂ ಸಹ ಅಂಜುವರು. ಕ್ರೋಧಪರವಶನಾದಾಗ ಅವನನ್ನು ನೋಡಲು ಸಾಧ್ಯವೇ ಇಲ್ಲ. ॥೪೨೨॥

ಅಶೈವಶಾಸಕಂ ಕ್ರೂರಂ ಸ್ರಾಪ್ಯ ಶ್ರೀಕಾಲಭೈರವಂ ।
ಸುಖೇನ ಸಂವಸಾಮ್ಯತ್ರ ಕಾಶ್ಯಾಂ ನಿತ್ಯಂ ವರಾನನೇ ॥೪೨೩॥

ಯದಾ ತು ಶೈವಧರ್ಮಾಣಾಂ ಸಂಕ್ಷಯಃ ಸಂಭವಿಷ್ಯತಿ ।
ತದಾಯಂ ಶಾಂಭವಂ ಧರ್ಮಂ ಸ್ಥಾಪಯಿಷ್ಯತಿ ಭೈರವಃ ॥೪೨೪॥

ಶೈವಧರ್ಮಕ್ಷಯಂ ಯಸ್ತು ಕರ್ತುಮಿಚ್ಛತಿ ಪಾರ್ವತಿ ।
ಸಮಿತ್ರಂ ತಂ ಭೈರವೋಯಂ ನರಕೇ ಪಾತಯಿಷ್ಯತಿ ॥೪೨೫॥

ಅಶೈವಾನಾಂ ತು ದುಷ್ಟಾನಾಂ ದುಃಖದೋ ಭೈರವಃ ಪರಃ ।
ಅಶೈವಾನಾಂ ತದನ್ಯಸ್ತು ಶಾಸಕೋ ನ ಭವಿಷ್ಯತಿ ॥೪೨೬॥

ಮಾಹಾತ್ಮ್ಯಂ ಭೈರವಸ್ಯೇದಂ ಸಮಾಖ್ಯಾತಂ ಮಯಾ ಶಿವೇ ।
ಸರ್ವಪಾಪಕ್ಷಯಕರಂ ಪಠತಾಂ ಶೃಣ್ವತಾಮಪಿ ॥೪೨೭॥

---

ಎಲೌ ಸುಮುಖಿಯೇ, ಶಿವದ್ರೋಹಿಗಳ ಶಾಸಕನೂ ಭಯಂಕರನೂ ಆದ ಕಾಲಭೈರವನನ್ನು ಸ್ಥಾಪಿಸಿ, ನಾನು ಅವನೊಂದಿಗೆ ಈ ಕಾಶೀಕ್ಷೇತ್ರದಲ್ಲಿ ನಿರಂತರವೂ ವಾಸವಾಗಿರುವೆನು. ॥೪೨೩॥

ಶಿವನಿಗೆ ಪ್ರೀತಿಕರವಾದ ಸದಾಚಾರಗಳು ಕ್ಷಯಿಸಲು ಆಗ ಈ ಭೈರವನು ಆ ಧರ್ಮಗಳನ್ನು ಪುನಃ ಉದ್ಧರಿಸುವನು. ॥೪೨೪॥

ಎಲೌ ಪಾರ್ವತಿಯೇ, ಯಾವ ಮನುಜನು ಶಿವನಿಗೆ ಪ್ರಿಯವಾದ ಆಚಾರಗಳು ಕ್ಷಯಿಸುವಂತೆ ಮಾಡುವನೋ ಅವನನ್ನು ಈ ಭೈರವನು ಅವನ ಮಿತ್ರರೊಂದಿಗೆ ನರಕದಲ್ಲಿರಿಸುವನು. ॥೪೨೫॥

ದುಷ್ಟರಾದ ಈಶ್ವರನಿಂದಕರಿಗೆ ಭೈರವನೇ ದುಃಖವನ್ನುಂಟುಮಾಡುವನು. ಪರಶಿವನಿಂದಕರಿಗೆ ಭೈರವನಿಗಿಂತಲೂ ಇತರನಾದ ಶಾಸಕನು ಇನ್ನೊಬ್ಬನಿರುವುದಿಲ್ಲ. ॥೪೨೬॥

ಎಲೌ ಪಾರ್ವತಿಯೇ, ಇದೀಗ ಭೈರವನ ಮಹಿಮೆಯನ್ನು ನಿನಗೆ ಹೇಳಿರುವೆನು. ಅದನ್ನು ಪಠಿಸುವವರೂ ಮತ್ತು ಕೇಳುವವರೂ ಸಕಲ ಪಾಪಗಳಿಂದಲೂ ವಿಮುಕ್ತರಾಗುವರು. ॥೪೨೭॥

ಯೇನೇದಂ ಪಠ್ಯತೇ ಪ್ರಾತರ್ಮಾಹಾತ್ಮ್ಯಂ ಭೈರವಸ್ಯ ತು ।
ನ ತಸ್ಯ ಸರ್ವಥಾ ದುಃಖಂ ಸ್ವಪ್ನೇಽಪಿ ಕಮಲಾನನೇ ॥೪೨೮॥

ಇದಂ ಮಾಹಾತ್ಮ್ಯಮಮಲಮಾದಿತ್ಯಾಭಿಮುಖೋ ಯದಿ ।
ಪಠತಿ ಪ್ರೀತಹೃದಯೋ ನ ಸ ಪ್ರಾಪ್ನೋತಿ ಯಾತನಾಂ ॥೪೨೯॥

ಬಾಲಗ್ರಹಾದಿರೋಗೇಷು ರಕ್ಷಾಕರಮನುತ್ತಮಂ ।
ಕುಷ್ಠಾಪಸ್ಮಾರರೋಗಾದಿ ವಿನಾಶಕಮಪಿ ಪ್ರಿಯೇ ॥೪೩೦॥

ಭೂರ್ಜಪತ್ರೇ ಲಿಖಿತ್ವೇದಂ ಮಾಹಾತ್ಮ್ಯಂ ಪ್ರತ್ಯಹಂ ಶಿವೇ ।
ಯಃ ಪೂಜಯಿಷ್ಯತಿ ಪ್ರಾಜ್ಞೋ ಸ ದುಃಖಾನಿ ನ ಪಶ್ಯತಿ ॥೪೩೧॥

ಏತನ್ಮಾಹಾತ್ಮ್ಯಮಂತ್ರೈಸ್ತು ಪ್ರತ್ಯಹಂ ಭೈರವಾರ್ಚಕೈಃ ।
ಪ್ರೀಣನೀಯೋ ಭೀಮರೂಪೋ ಭೈರವೋ ಭೀಮವಿಕ್ರಮಃ ॥೪೩೨॥

---

ಎಲೌ ಪದ್ಮಮುಖಿಯೇ, ಯಾವ ಮನುಜನು ಭೈರವನ ಈ ಮಹಿಮೆಯನ್ನು ಪ್ರಾತಃಕಾಲದಲ್ಲಿ ಪಠಿಸುವನೋ ಅವನಿಗೆ ಸ್ವಪ್ನದಲ್ಲಿಯೂ ಸಹ ದುಃಖವು ಸಂಭವಿಸುವುದಿಲ್ಲ. ||೪೨೮||

ಪವಿತ್ರವಾದ ಈ ಭೈರವಮಾಹಾತ್ಮ್ಯವನ್ನು ಸೂರ್ಯನಿಗೆ ಎದುರಾಗಿ ನಿಂತು ಪ್ರೀತಿಯಿಂದ ಯಾವನು ಪಠಿಸುವನೋ, ಅವನು ಭೈರವನ ಯಾತನೆಗೆ ಗುರಿಯಾಗುವುದಿಲ್ಲ. ||೪೨೯||

ಪ್ರಿಯೇ, ಇದು ಬಾಲಗ್ರಹಾದಿರೋಗಗಳನ್ನು ಹೋಗಲಾಡಿಸುವುದು. ಅಲ್ಲದೇ ಇದನ್ನು ಪಠಿಸುವುದರಿಂದಲೂ ಮತ್ತು ಕೇಳುವುದರಿಂದಲೂ ಕುಷ್ಠ, ಅಪಸ್ಮಾರ ಮುಂತಾದ ಮಹಾರೋಗಗಳೂ ಸಹ ಶೀಘ್ರವಾಗಿ ನಾಶವನ್ನು ಹೊಂದುವುವು. ||೪೩೦||

ಈ ಭೈರವಮಾಹಾತ್ಮ್ಯವನ್ನು ಭೂರ್ಜಪತ್ರೆಯಲ್ಲಿ ಬರೆದು ಪ್ರತಿದಿನವೂ ಯಾವನು ಪೂಜಿಸುವನೋ ಅವನು ಎಂದಿಗೂ ದುಃಖಗಳನ್ನು ಅನುಭವಿಸುವುದಿಲ್ಲ. ||೪೩೧||

ಭೈರವನನ್ನು ಪೂಜಿಸುವವರು ಅವನ ಈ ಮಾಹಾತ್ಮ್ಯದಿಂದೊಳಗೊಂಡ ಮಂತ್ರಗಳಿಂದ ಉಗ್ರರೂಪಿಯೂ, ಅತಿ ಪರಾಕ್ರಮಿಯೂ ಆದ ಭೈರವನನ್ನು ಪ್ರತಿ ದಿನವೂ ತೃಪ್ತಿಗೊಳಿಸಬೇಕು. ||೪೩೨||

ಕಾಲಾಷ್ಟಮ್ಯಾಂ ವಿಶೇಷೇಣ ಕಾಲಭೈರವಸನ್ನಿಧೌ ।
ತತ್ಪ್ರಾದುರ್ಭಾವಮಾಹಾತ್ಮ್ಯಂ ಪಠನೀಯಂ ಪ್ರಯತ್ನತಃ ॥೪೩೩॥

ಶೃಣ್ವನ್ ಶ್ರೀಭೈರವಸ್ಯೇಮಾಂ ಪ್ರಾದುರ್ಭಾವಕಥಾಂ ನರಃ ।
ಭೈರವಾರ್ಚಾರತಃ ಶೈವೋ ಯಾತನಾಂ ನೈವ ಪಶ್ಯತಿ ॥೪೩೪॥

ನಿತ್ಯಂ ಭೈರವಮಾಹಾತ್ಮ್ಯಂ ಮಂತ್ರಾವರ್ತನಪೂರ್ವಕಂ ।
ಪ್ರದಕ್ಷಿಣಾದಿಕಂ ಕಾರ್ಯಂ ಭೈರವೋ ಯಾತನಾಪಹಃ ॥೪೩೫॥

ಶ್ರೀಕಾಲಭೈರವೇ ಭಕ್ತಿಃ ಸದಾ ಕಾರ್ಯಾ ಪ್ರಯತ್ನತಃ ।
ಪೂಜನೀಯೋಽನ್ವಹಂ ಪೂಜ್ಯೋ ದೇವಾನಾಮಪಿ ಶಾಸಕಃ ॥೪೩೬॥

ದೇವಾಶ್ಚ ಸರ್ವದಾ ಭೀತಾಃ ಶಾಸಕಂ ಕಾಲಭೈರವಂ ।
ಪೂಜಯಂತ್ಯತಿಯತ್ನೇನ ಪ್ರತ್ಯಹಂ ಭೀಮವಿಕ್ರಮಂ ॥೪೩೭॥

---

ಅದರಲ್ಲಿಯೂ ಮುಖ್ಯವಾಗಿ ಕಾಲಾಷ್ಟಮಿಯ ದಿವಸ (ಕಾರ್ತಿಕ ಬಹುಳ ಅಷ್ಟಮಿ) ಕಾಲಭೈರವನ ಸನ್ನಿಧಿಯಲ್ಲಿ ಅವನು ಜನಿಸಿದ ಪ್ರಕಾರವನ್ನು ತಿಳಿಯಪಡಿಸುವ ಕಥಾಭಾಗವನ್ನು ತಪ್ಪದೇ ಪಠಿಸಬೇಕು. ॥೪೩೩॥

ಭೈರವನ ಆವಿರ್ಭಾವವನ್ನು ತಿಳಿಯಪಡಿಸುವ ಈ ಕಥೆಯನ್ನು ಕೇಳಿ ಅವನನ್ನು ಪೂಜಿಸುವ ಮನುಷ್ಯನು ಎಂದಿಗೂ ದುಃಖಗಳಿಗೆ ಗುರಿಯಾಗುವುದಿಲ್ಲ. ॥೪೩೪॥

ಪ್ರತಿದಿನವೂ ಭೈರವಮಂತ್ರಗಳನ್ನು ಪಠಿಸಿ ಭೈರವಮಹಿಮೆಯನ್ನು ಧ್ಯಾನಿಸುತ್ತಾ ಅವನಿಗೆ ಪ್ರದಕ್ಷಿಣೆಯನ್ನು ಮಾಡಬೇಕು. ಭೈರವನು ಸಕಲ ದುಃಖಗಳನ್ನೂ ಹೋಗಲಾಡಿಸುವನು. ॥೪೩೫॥

ಶ್ರೀಕಾಲಭೈರವನಲ್ಲಿ ಅನವರತವೂ ಭಕ್ತಿಯನ್ನಿಟ್ಟು ಪೂಜಿಸಬೇಕು. ಅವನು ದೇವತೆಗಳಿಗೆ ಪೂಜ್ಯನೂ ಅವರ ಶಾಸಕನೂ ಆಗಿರುವನು. ॥೪೩೬॥

ದೇವತೆಗಳು ಸದಾ ಶಾಸಕನಾದ ಕಾಲಭೈರವನಿಗೆ ಹೆದರಿ ಪ್ರತಿದಿನವೂ ಅತಿ ಪರಾಕ್ರಮಿಯಾದ ಅವನನ್ನು ಶ್ರದ್ಧೆಯಿಂದ ಅರ್ಚಿಸುವರು. ॥೪೩೭॥

ಭೈರವಾನರ್ಚಕಂ ದೃಷ್ಟ್ವಾ ಭೈರವಾಪ್ರೇಷಿತಾನ್ಯಪಿ ।
ತನ್ನಾಶಕಾನಿ ಶಸ್ತ್ರಾಣಿ ಸ್ವತ ಏವ ಪ್ರಯಾಂತಿ ಹಿ ॥೪೩೮॥

ಭೈರವೋ ಬ್ರಹ್ಮವಿಷ್ಣ್ವಾದೀನಪಿ ಸಂತರ್ಜಯತ್ಪುರಾ ।
ತದನ್ಯಗಣನಾ ತೇನ ಕಥಂ ಕಾರ್ಯಾ ವದ ಪ್ರಿಯೇ ॥೪೩೯॥

ನ ಭೈರವಾದುಗ್ರರೂಪಾದನ್ಯಃ ಕಾಶ್ಯಾಂ ಪ್ರಶಾಸಕಃ ।
ಅಶೈವಾದಪರಃ ಕಾಶ್ಯಾಂ ಶಾಸ್ಯೋಽಪಿ ನ ವರಾನನೇ ॥೪೪೦॥

ಅಶೈವಂ ಮೃತಮಾಲೋಕ್ಯ ಕಾಶ್ಯಾಂ ಭೈರವಕಿಂಕರಾಃ ।
ದೀರ್ಘತಪ್ತಾಯಸಾಸ್ತ್ರಾಗ್ರ್ಯೈಸ್ತಾಡಯಂತ್ಯುರುವಿಕ್ರಮಾಃ ॥೪೪೧॥

ಪ್ರಲಯಾನಲಸಂಕಾಶೋ ಜ್ವಾಲಾಮಾಲಾಸಮಾವೃತಃ ।
ಕಾಲಭೈರವಕೋಪಾಗ್ನಿರಶೈವೇಂಧನದಾಹಕಃ ॥೪೪೨॥

---

ಭೈರವನನ್ನು ಪೂಜಿಸದೇ ಇರುವವನನ್ನು ನೋಡಿ, ಭೈರವನ ಆಯುಧಗಳು ಅವನ ಅಪ್ಪಣೆಯಿಲ್ಲದಿದ್ದರೂ ಹೊರಟು ತಾವಾಗಿಯೇ ಇವನ ಬಳಿಗೆ ಬಂದು ಇವನನ್ನು ನಾಶಗೊಳಿಸುವುವು. ॥೪೩೮॥

ಪ್ರಿಯೇ, ಈ ಹಿಂದೆ ಭೈರವನು ಬ್ರಹ್ಮ, ವಿಷ್ಣು ಮೊದಲಾದ ದೇವತೆಗಳನ್ನೇ ಬೆದರಿಸಿರುವನು. ಹೀಗಿರುತ್ತಿರಲು ಅವನು ಇತರರನ್ನು ಲೆಕ್ಕಿಸುವನೇ? ॥೪೩೯॥

ಕಾಶೀಕ್ಷೇತ್ರದಲ್ಲಿ ಉಗ್ರರೂಪಿಯಾದ ಭೈರವನಿಗಿಂತಲೂ, ಬೇರೊಬ್ಬ ಶಾಸಕನು ಇರುವುದಿಲ್ಲ. ಕಾಶಿಯಲ್ಲಿ ಶಿವದ್ವೇಷಿಗಿಂತಲೂ, ಭೈರವನ ಶಾಸನಕ್ಕೆ ಅರ್ಹನಾದವನು ಇನ್ನೊಬ್ಬನಿರುವುದಿಲ್ಲ. ॥೪೪೦॥

ಕಾಶೀಕ್ಷೇತ್ರದಲ್ಲಿ ಈಶ್ವರದ್ರೋಹಿಯು ಮೃತನಾದರೆ ಅವನನ್ನು ನೋಡಿ, ಅತಿ ಪರಾಕ್ರಮಿಗಳಾದ ಭೈರವನ ಭೃತ್ಯರು ದಯೆಯಿಲ್ಲದೆ ಒಡನೆಯೇ, ಕೆಂಪಾಗಿ ಕಾದ ಉದ್ದವಾದ, ಕಬ್ಬಿಣದ ಆಯುಧಗಳಿಂದ ಮನಬಂದಂತೆ ಹೊಡೆಯುವರು. ॥೪೪೧॥

ಪ್ರಲಯಕಾಲದ ಅಗ್ನಿಗೆ ಸಮಾನವೂ ಜ್ವಾಲೆಗಳ ಮಾಲೆಗಳಿಂದ ಕೂಡಿರುವುದೂ ಆದ ಕಾಲಭೈರವನ ಕ್ರೋಧಾಗ್ನಿಯು ಈಶ್ವರ ದ್ವೇಷಿಗಳೆಂಬ ಕಟ್ಟಿಗೆಗಳನ್ನು ಶೀಘ್ರವಾಗಿ ಸುಡುವುದು. ॥೪೪೨॥

ತತಃ ಕಾಶ್ಯಾಂ ವಿಶೇಷೇಣ ಶಿವೈಕಪರದೇವತೈಃ ।
ಶೈವೈಃ ಸ್ಥಾತವ್ಯಮನಿಶಮಶೈವೈರ್ನ ಕದಾಚನ ॥೪೪೩॥

॥ ಭೈರವಮಂತ್ರಃ ॥

ಕಪಾಲೀ ಕುಂಡಲೀ ಭೀಮೋ ಭೈರವೋ ಭೀಮವಿಕ್ರಮಃ ।
ವ್ಯಾಲೋಪವೀತೀ ಕವಚೀ ಶೂಲೀ ಶೂರಃ ಶಿವಪ್ರಿಯಃ ॥೪೪೪॥

ಏತಾನಿ ದಶನಾಮಾನಿ ಪಠನ್ಯಃ ಪ್ರಣಮೇತ್ಸದಾ ।
ಶೈವಃ ಶಿವಾರ್ಚಕಸ್ತಸ್ಯ ನಾಸ್ತಿ ಭೈರವಯಾತನಾ ॥೪೪೫॥

॥ ನಾಗಕೂಪಮಹಿಮಾ ॥

ಕರ್ಕೋಟಕಶ್ಚಕಾರಾತ್ರ ತಪೋ ಘೋರತರಂ ಮುದಾ ।
ಸಹಸ್ರಯುಗಪರ್ಯಂತಂ ಕಾಶ್ಯಾಂ ಪಂಚಾಗ್ನಿಮಧ್ಯಗಃ ॥೪೪೬॥

ತತ್ರ ಕಾರ್ಕೋಟಕಾಖ್ಯಂ ಚ ಲಿಂಗಂ ಸಂಸ್ಥಾಪಯನ್ಮುದಾ ।
ತಲ್ಲಿಂಗಸ್ಯ ಪುರೋಭಾಗೇ ಕುಂಡಮೇಕಂ ಸಸರ್ಜ ಚ ॥೪೪೭॥

---

ಆದುದರಿಂದ ಮುಖ್ಯವಾಗಿ ಈಶ್ವರಾರ್ಚನೆಯಲ್ಲಿ ಆಸಕ್ತರಾದ ಭಕ್ತರೇ ಕಾಶೀಕ್ಷೇತ್ರದಲ್ಲಿ ನೆಲಸಬೇಕಲ್ಲದೇ ಶಿವದ್ವೇಷಿಗಳು ಎಂದಿಗೂ ಇರಬಾರದು. ||೪೪೩||

ಕಪಾಲಿ, ಕುಂಡಲಿ, ಭೀಮ, ಭೈರವ, ಭೀಮವಿಕ್ರಮ, ವ್ಯಾಲೋಪವೀತಿ, ಕವಚ, ಶೂಲಿ, ಶೂರ, ಶಿವಪ್ರಿಯ ಇವು ಹತ್ತು ಭೈರವನ ನಾಮಧೇಯಗಳಾಗಿರುವುವು. ಈ ಹತ್ತು ನಾಮಗಳನ್ನು ಪಠಿಸಿ, ಭೈರವವನ್ನು ವಂದಿಸಿ ಅನವರತವೂ ಶಿವಾರಾಧನೆಯಲ್ಲಿ ಆಸಕ್ತನಾದವನಿಗೆ ಭೈರವನ ಯಾತನೆಯು ಯಾವಾಗಲೂ ಸಂಭವಿಸುವುದಿಲ್ಲ. ||೪೪೪-೪೪೫||

ಹಿಂದೆ ಈ ಕಾಶೀಕ್ಷೇತ್ರದಲ್ಲಿ ಕಾರ್ಕೋಟಕನೆಂಬ ಸರ್ಪನು ಸಹಸ್ರಯುಗಗಳು ಕಳೆಯುವವರೆಗೆ ಪಂಚಾಗ್ನಿಗಳ ನಡುವೆ ನಿಂತು, ಉಗ್ರವಾದ ತಪಸ್ಸನ್ನಾಚರಿಸಿದನು. ||೪೪೬||

ಅಲ್ಲಿ ಕಾರ್ಕೋಟಕವೆಂಬ ಹೆಸರುಳ್ಳ ಒಂದು ಶಿವಲಿಂಗವನ್ನು ಸ್ಥಾಪಿಸಿ, ಆ ಲಿಂಗದ ಮುಂಭಾಗದಲ್ಲಿ ಒಂದಾನೊಂದು ಕುಂಡವನ್ನು ನಿರ್ಮಿಸಿದನು. ||೪೪೭||

ಯದಾ ಘೋರಂ ತಪಸ್ತಪ್ತಂ ತೇನ ತಲ್ಲಿಂಗಸನ್ನಿಧೌ ।
ತದಾ ತಲ್ಲಿಂಗತಃ ಶಂಭುರಾವಿರಾಸಮಹಂ ಶುಭೇ ॥೪೪೮॥

ತತಃ ಸಂವೀಕ್ಷ್ಯ ಮಾಂ ನಾಗಃ ಪ್ರಣಿಪತ್ಯ ಪುನಃ ಪುನಃ ।
ಕೃತ್ವಾ ಪೂಜಾಂ ಯಥಾಶಾಸ್ತ್ರಂ ಚಕಾರ ಸ್ತೋತ್ರಮಾದರಾತ್ ॥೪೪೯॥

ತತಸ್ತೇನೈವ ನಾಗೇನ ಯಾಚಿತೌ ಚ ವರೋತ್ತಮೌ ।
ಏಕೋ ಮಹೇಶ್ವರೇ ಭಕ್ತಿರ್ದೃಢಾಸ್ತ್ವಿತಿ ವರಃ ಪರಃ ॥೪೫೦॥

ಅನ್ಯೋ ನಭಃ ಶುಕ್ಲಪಕ್ಷಪಂಚಮ್ಯಾಂ ಯೇ ಜನಾ ಮುದಾ ।
ಸ್ನಾನಂ ಕುರ್ವಂತ್ಯತ್ರ ಕುಂಡೇ ತೇಷಾಂ ರೋಗಾದಿ ಮಾಸ್ತ್ವಿತಿ ॥೪೫೧॥

ತತೋ ದತ್ತಂ ಮಯಾ ತಸ್ಮೈ ವರದ್ವಯಮನುತ್ತಮಂ ।
ತತಃ ಪರಮಪಿ ಪ್ರೀತ್ಯಾ ತಪ್ತಂ ಘೋರತರಂ ತಪಃ ॥೪೫೨॥

---

ಆವನು ಆ ಲಿಂಗದ ಸನ್ನಿಧಿಯಲ್ಲಿ ಭಯಂಕರವಾದ ತಪಸ್ಸನ್ನಾಚರಿಸಲು ಆಗ ನಾನು ಆ ಶಿವಲಿಂಗದಿಂದ ಆವಿರ್ಭವಿಸಿದೆನು. ॥೪೪೮॥

ಬಳಿಕ ಆ ಸರ್ಪವು ನನ್ನನ್ನು ನೋಡಿ ಮತ್ತೆ ಮತ್ತೆ ನನಗೆ ನಮಸ್ಕರಿಸಿ, ಶಾಸ್ತ್ರೋಕ್ತವಾದ ವಿಧಾನದಿಂದ ಪೂಜಿಸಿ ಸ್ತುತಿಸಿತು. ॥೪೪೯॥

ತರುವಾಯ ಆ ನಾಗನು ತಾನಾಗಿಯೇ ನನ್ನ ಬಳಿಯಲ್ಲಿ ಎರಡು ವರಗಳನ್ನು ಬೇಡಿಕೊಂಡನು. "ನನಗೆ ಮಹೇಶ್ವರನಲ್ಲಿ ದೃಢವಾದ ಭಕ್ತಿಯುಂಟಾಗಲಿ" ಎಂಬುದೇ ಮೊದಲನೆಯ ವರವಾಗಿದ್ದಿತು. ಭಾದ್ರಪದ ಶುದ್ಧ ಪಂಚಮಿಯು ದಿನ ಯಾವ ಜನರು ಈ ಕುಂಡದಲ್ಲಿ ಭಕ್ತಿಯಿಂದ ಸ್ನಾನವನ್ನಾಚರಿಸುವರೋ ಅವರಿಗೆ ರೋಗಾದಿಗಳು ಬರದಿರಲಿ, ಎಂಬುದೇ ಎರಡನೆಯ ವರವಾಗಿದ್ದಿತು. ॥೪೫೦-೪೫೧॥

ಬಳಿಕ ನಾನು ಅವನಿಗೆ ಅವನು ಯಾಚಿಸಿದ ಆ ಎರಡು ವರಗಳನ್ನಿತ್ತೆನು. ಅನಂತರವೂ ಆವನು ಇನ್ನೂ ಭಯಂಕರವಾದ ತಪಸ್ಸನ್ನಾಚರಿಸಿದನು. ॥೪೫೨॥

ವಿಷದೋಷಾದಿಶಾಂತ್ಯರ್ಥಂ ತದ್ದಿನೇ ಸರ್ವಥಾ ಜನೈಃ ।
ಸ್ನಾನಂ ಕಾರ್ಯಂ ಪ್ರಯತ್ನೇನ ಶ್ರಾದ್ಧಂ ಚ ವಿಧಿಪೂರ್ವಕಂ ॥೪೫೩॥

ಕಾರ್ಕೋಟಕುಂಡನಿಕಟೇ ಸಂತಿ ಶೈವಾಸ್ಸಹಸ್ರಶಃ ।
ತೈರಪಿ ಸ್ವಸ್ವನಾಮ್ನೈವ ಲಿಂಗಾನಿ ಸ್ಥಾಪಿತಾನಿ ಚ ॥೪೫೪॥

ಕಾರ್ಕೋಟಕಸ್ತಪಸ್ತ್ಯಕ್ತ್ವಾ ಶೈವೈಃ ಸಹ ಕದಾಚನ ।
ಸ್ನಾನಾರ್ಥಂ ಶಿವಗಂಗಾಯಾಂ ಗತಃ ಶಿವಪರಾಯಣಃ ॥೪೫೫॥

ತತ್ರ ಸ್ನಾತ್ವಾ ಯಥಾಶಾಸ್ತ್ರಮಾಗ್ನೀಧ್ರೇಶ್ವರಮವ್ಯಯಂ ।
ಸಾದರಂ ಪೂಜಯಾಮಾಸ ಸ ಶೈವಃ ಶಿವತತ್ಪರಃ ॥೪೫೬॥

ತತಃ ಪಂಚಾಗ್ನಿಮಧ್ಯಸ್ಥಂ ಊರ್ಧ್ವಬಾಹುಂ ಜಿತೇಂದ್ರಿಯಂ ।
ಜಟಾಭಸಿತವೀತಾಂಗಂ ದದರ್ಶ ಸ ಜನಾರ್ದನಂ ॥೪೫೭॥

---

ಭಾದ್ರಪದ ಶುದ್ಧ ಪಂಚಮಿಯ ದಿನ ಆ ಕಾರ್ಕೋಟಕ ಕುಂಡದಲ್ಲಿ ಸ್ನಾನವನ್ನಾಚರಿಸಿ ವಿಧಿಪೂರ್ವಕವಾಗಿ ಶ್ರಾದ್ಧವನ್ನು ನೆರವೇರಿಸಬೇಕು. ಅದರಿಂದ ವಿಷದೋಷವಿದ್ದರೆ ಅದು ದೂರವಾಗುವುದು. ॥೪೫೩॥

ಕಾರ್ಕೋಟಕುಂಡದ ಸಮೀಪದಲ್ಲಿ ಸಾವಿರ ಮಂದಿ ಈಶ್ವರಭಕ್ತರು ಸದಾ ವಾಸವಾಗಿರುವರು. ಅವರೆಲ್ಲರೂ ತಮ್ಮ ತಮ್ಮ ಹೆಸರಿನಿಂದ ಅಲ್ಲಿ ಶಿವಲಿಂಗಗಳನ್ನು ಸ್ಥಾಪಿಸಿರುವರು. ॥೪೫೪॥

ಒಂದಾನೊಂದು ಸಮಯದಲ್ಲಿ ಕಾರ್ಕೋಟಕನು ತಪಸ್ಸನ್ನು ತ್ಯಜಿಸಿ, ಕೆಲಮಂದಿ ಈಶ್ವರಭಕ್ತರೊಂದಿಗೆ ಸ್ನಾನವನ್ನಾಚರಿಸುವುದಕ್ಕೋಸ್ಕರ ಶಿವಗಂಗೆಗೆ ತೆರಳಿದನು. ॥೪೫೫॥

ಈಶ್ವರಭಕ್ತನಾದ ಅವನು ಅಲ್ಲಿ ಸ್ನಾನವನ್ನಾಚರಿಸಿ ಭಕ್ತಿಯಿಂದ ಆಗ್ನೀಧ್ರೇಶ್ವರನನ್ನು ಪೂಜಿಸಿದನು. ॥೪೫೬॥

ಅಲ್ಲಿ ಅವನು ಪಂಚಾಗ್ನಿಗಳ ನಡುವೆ ತೋಳುಗಳನ್ನು ಮೇಲಕ್ಕೆತ್ತಿ ಜಟಾಧಾರಿಯಾಗಿ ಭಸ್ಮವನ್ನು ಲೇಪಿಸಿ ನಿಂತಿದ್ದ ವಿಷ್ಣುವನ್ನು ನೋಡಿದನು. ॥೪೫೭॥

ದೃಷ್ಟ್ವಾ ಪ್ರಣಮ್ಯ ಬಹುಧಾ ಕೃತಾಂಜಲಿಪುಟಸ್ತತಃ ।
ಉವಾಚ ವಚನಂ ಚಾರು ಶಿವಭಕ್ತ ಹಿತಾವಹಂ ॥೪೫೮॥

ಕಿಂ ನಾಮ ಸರ್ವದಾ ಸರ್ವೈರ್ಜಪನೀಯಂ ಪ್ರಯತ್ನತಃ ।
ಕುತ್ರ ಸ್ಥಾತವ್ಯಮನಿಶಂ ಕಥಂ ಧ್ಯೇಯೋ ಮಹೇಶ್ವರಃ ॥೪೫೯॥

ಕಾಶ್ಮೀರಾದೀನಿ ಲಿಂಗಾನಿ ಸಂತಿ ನಾನಾವಿಧಾನಿ ಚ ।
ತೇಷು ಶ್ರೇಷ್ಠತರಂ ಲಿಂಗಂ ಕಿಮಿಷ್ಟಫಲದಾಯಕಂ ॥೪೬೦॥

ಕುತ್ರ ವಾ ದೇವದೇವಸ್ಯ ಮಹಾದೇವಸ್ಯ ಸನ್ನಿಧಿಃ ।
ಕೇನ ರೂಪೇಣ ಕರ್ತವ್ಯಂ ಶಿವಲಿಂಗಸ್ಯ ಪೂಜನಂ ॥೪೬೧॥

ಇದಂ ಸರ್ವಂ ವಿಶೇಷೇಣ ನಿಶ್ಚಿತ್ಯ ವದ ಸಾದರಂ ।
ಕೃಪಯಾ ಶಿವಭಕ್ತಾನಾಂ ಹಿತಾಯ ಶಿವಪೂಜಕ ॥೪೬೨॥

---

ಅವನನ್ನು ನೋಡಿದೊಡನೆಯೇ ಅನೇಕಬಾರಿ ಅವನಿಗೆ ನಮಸ್ಕರಿಸಿ ಅಂಜಲಿಬದ್ಧನಾಗಿ ಈಶ್ವರಭಕ್ತರಿಗೆ ಹಿತಕರವಾದ ಮಾತನ್ನಾಡುತ್ತಾ ಹೀಗೆಂದನು. ॥೪೫೮॥

ಓ ವಿಷ್ಣುವೇ, ಸಕಲ ಜನರೂ ನಿರಂತರವೂ ಜಪಿಸಲು ಯೋಗ್ಯವಾದ ನಾಮಧೇಯವು ಅದಾವುದಿರುವುದು? ಸದಾ ವಾಸವಾಗಿರಲು ಯೋಗ್ಯವಾದ ಪ್ರದೇಶವು ಯಾವುದು? ಮತ್ತು ಪರಮೇಶ್ವರನನ್ನು ಧ್ಯಾನಿಸುವ ಕ್ರಮವು ಹೇಗೆ? ॥೪೫೯॥

ಕಾಶ್ಮೀರ, ಬಾಣ, ಸ್ಫಟಿಕ ಮುಂತಾದುವುಗಳಿಂದ ಪ್ರಸಿದ್ಧವಾದ ನಾನಾಬಗೆಯ ಶಿವಲಿಂಗಗಳಿರುವುವು. ಅವುಗಳಲ್ಲಿ ಇಷ್ಟಾರ್ಥಗಳನ್ನು ದಯಪಾಲಿಸುವುದೂ ಶ್ರೇಷ್ಠತಮವೂ ಆದ ಶಿವಲಿಂಗವು ಯಾವುದು? ॥೪೬೦॥

ದೇವೇಶನಾದ ಪರಶಿವನ ಸನ್ನಿಧಿಯು ಎಲ್ಲಿರುವುದು? ಮತ್ತು ಶಿವಲಿಂಗವನ್ನು ಪೂಜಿಸುವ ಕ್ರಮವು ಹೇಗೆ? ॥೪೬೧॥

ಓ ವಿಷ್ಣುವೇ, ಇದೆಲ್ಲವನ್ನೂ ವಿಶೇಷವಾಗಿ ವಿಮರ್ಶಿಸಿ ನನಗೆ ಹೇಳು. ಅದರಿಂದ ಈಶ್ವರಭಕ್ತರಿಗೆ ಹಿತವುಂಟಾಗುವುದು. ॥೪೬೨॥

|| ವಿಷ್ಣುರುವಾಚ ||

ಕರ್ಕೋಟಕ ತ್ವಯಾ ಪೃಷ್ಟಂ ಸಮ್ಯಗೇವ ಯಥೋಚಿತಂ ।
ಯಥಾಶಾಸ್ತ್ರಂ ಯಥಾಜ್ಞಾನಂ ತಥಾವಕ್ಷ್ಯೇ ಶೃಣು ಪ್ರಿಯ ॥೪೬೩॥

ವೇದೋಪಗೀತೋ ಬಹುಧಾ ಯಶ್ಚ ಶೈವಃ ಷಡಕ್ಷರಃ ।
ಸ ಏವ ಸರ್ವಥಾ ಜಪ್ಯಃ ಶಿವಮಂತ್ರೋ ಮುಮುಕ್ಷುಭಿಃ ॥೪೬೪॥

ಶಿವಮಂತ್ರಜಪಾಸಕ್ತಾಃ ಮುಕ್ತಾಃ ಸರ್ವೇ ಮುನೀಶ್ವರಾಃ ।
ನ ಶೈವಮಂತ್ರಾದಪರೋ ಮಂತ್ರೋ ಮುಕ್ತಿಪ್ರದಾಯಕಃ ॥೪೬೫॥

ಶೈವಮಂತ್ರಂ ವಿಹಾಯಾನ್ಯಂ ಮಂತ್ರಂ ಯಃ ಸಮುಪಾಸತೇ ।
ಸ ಮಣಿಂ ಕರಗಂ ತ್ಯಕ್ತ್ವಾ ಕಾಚಾರ್ಥಂ ಯತತೇ ಧ್ರುವಂ ॥೪೬೬॥

---

ಎಲೈ ಕರ್ಕೋಟಕನೇ, ನಿನ್ನ ಈ ಪ್ರಶ್ನೆಯು ಬಹು ಸಮಂಜಸವಾಗಿರುವುದು. ಅದನ್ನು ಶಾಸ್ತ್ರದಲ್ಲಿದ್ದಂತೆ ನನಗೆ ತಿಳಿದ ಮಟ್ಟಿಗೆ ನಿನಗೆ ಹೇಳುವೆನು ಕೇಳು. ||೪೬೩||

ವೇದವು ನಾನಾಕಡೆಗಳಲ್ಲಿ [1] ಆರು ಅಕ್ಷರಗಳಿಂದ ಕೂಡಿರುವ ಶಿವಪಂಚಾಕ್ಷರೀ ಮಂತ್ರವನ್ನು ಸ್ತುತಿಸಿರುವುದು. ಮೋಕ್ಷವನ್ನು ಬಯಸುವವರು ಸರ್ವಪ್ರಕಾರದಿಂದಲೂ ಆ ಮಂತ್ರವನ್ನೇ ಜಪಿಸಬೇಕು. ||೪೬೪||

ಇದುವರೆಗೆ ಶಿವಪಂಚಾಕ್ಷರಮಂತ್ರವನ್ನು ಜಪಿಸುವುದರಲ್ಲಿಯೇ ಮಗ್ನರಾದ ಮುನಿಗಳೆಲ್ಲರೂ ಮೋಕ್ಷವನ್ನು ಹೊಂದಿರುವರು. ಶಿವಮಂತ್ರಕ್ಕಿಂತಲೂ ಮುಕ್ತಿಯನ್ನು ದಯಪಾಲಿಸುವ ಇನ್ನೊಂದು ಮಂತ್ರವಿರುವುದಿಲ್ಲ. ||೪೬೫||

ಯಾವನು ಶೈವಮಂತ್ರವನ್ನು ಬಿಟ್ಟು ಇತರ ಮಂತ್ರವನ್ನು ಜಪಿಸುವನೋ ಅವನು ಕೈಗೆ ಸಿಕ್ಕಿದ ರತ್ನವನ್ನು ಬಿಟ್ಟು ಗಾಜಿನ ತುಂಡನ್ನು ತೆಗೆದುಕೊಳ್ಳಲು ಪ್ರಯತ್ನಿಸಿದ ಮನುಷ್ಯನಂತೆಯೇ ಆಗುವನು. ಇದು ನಿಜ. ||೪೬೬||

---

1 ಒಂದೇ ಶಿವಪಂಚಾಕ್ಷರಮಂತ್ರವು ಓಂಕಾರದಿಂದ ಸಹಿತವಾದರೆ ಷಡಕ್ಷರವೆಂದೂ, ಓಂಕಾರದಿಂದ ರಹಿತವಾದರೆ ಪಂಚಾಕ್ಷರವೆಂದೂ ವ್ಯವಹರಿಸಲ್ಪಡುವುದು.

ಪ್ರಭಾವಃ ಶೈವಮಂತ್ರಾಣಾಂ ಜ್ಞಾಯತೇ ನ ಮಯಾ ಧ್ರುವಂ ।
ತತ್ತ್ವಂ ತು ಶಿವಮಂತ್ರಾಣಾಂ ಜಾನಾತಿ ಶಿವ ಏವ ಹಿ ॥೪೬೭॥

॥ ಶಿವನಾಮಮಹಿಮಾ ॥

ಪುರಾ ಹಿಮಾಲಯಪ್ರಾಂತೇ ಕಶ್ಚಿದ್ವಿಪ್ರೋ ದ್ವಿಜಾಧಮಃ ।
ಬ್ರಹ್ಮಹತ್ಯಾದಿಪಾಪಾನಿ ಚಕಾರ ಕ್ರೂರಮಾನಸಃ ॥೪೬೮॥

ಹತಾಃ ಮೃಗವರಾಃ ಶುದ್ಧಾಃ ಮೃಗಮಾಂಸಮನೇಕಧಾ ।
ಭಕ್ಷಿತಂ ಗೋಸಹಸ್ರಾಣಿ ನಿಹತಾನ್ಯಸಿತಾನಿ ಚ ॥೪೬೯॥

ಸ ಏವ ಕ್ರೂರಸರ್ಪೇಣ ದಂಶಿತೋಽಭೂತ್ಕದಾಚನ ।
ತತಃ ಶಿವ ಶಿವೇತ್ಯೇತದುಕ್ತ್ವಾ ನಾಮಾಮೃತಂ ದ್ವಿಜಃ ॥೪೭೦॥

ತದಾನೀಂ ಕೋಟಿಶಃ ಕ್ರೂರಾ ಯಮದೂತಾಃ ಸಮಾಗತಾಃ ।
ತತಸ್ತೇ ಗಂತುಮುದ್ಯುಕ್ತಾ ಬದ್ಧ್ವಾ ಪಾಶೈರ್ದ್ವಿಜಾಧಮಂ ॥೪೭೧॥

---

ಶಿವಮಂತ್ರಗಳ ಪ್ರಭಾವವು ಎಷ್ಟಿರುವುದೆಂಬುದನ್ನು ನಾನು ನಿಜವಾಗಿಯೂ ಅರಿತಿರುವುದಿಲ್ಲ. ಅವುಗಳ ರಹಸ್ಯವನ್ನು ಶಿವನೇ ತಿಳಿದಿರುವವನು. ||೪೬೭||

ಹಿಂದೆ ಹಿಮವತ್ಪರ್ವತದ ತಪ್ಪಲಿನಲ್ಲಿ ಹೀನವೃತ್ತಿಯುಳ್ಳ ಒಬ್ಬಾನೊಬ್ಬ ಬ್ರಾಹ್ಮಣನಿದ್ದನು. ಕ್ರೂರನಾದ ಅವನು ಬ್ರಹ್ಮಹತ್ಯೆಯೇ ಮೊದಲಾದ ಮಹಾ ಪಾತಕಕಾರ್ಯಗಳನ್ನು ಮಾಡಿದ್ದನು. ||೪೬೮||

ಅವನು ಸಾಧುವಾದ ಅನೇಕ ಮೃಗಗಳನ್ನು ಸಂಹರಿಸಿದ್ದನು. ಮತ್ತು ಅನೇಕಬಾರಿ ಮೃಗಮಾಂಸವನ್ನು ಭಕ್ಷಿಸಿದ್ದನು. ಸಾವಿರಾರು ಗೋವುಗಳನ್ನೂ ಮತ್ತು ಕೃಷ್ಣಸಾರಂಗ ಮೃಗಗಳನ್ನೂ ಸಹ ಸಂಹರಿಸಿದ್ದನು. ||೪೬೯||

ಹೀಗಿರುತ್ತಿರಲು ಒಂದು ದಿನ ಕ್ರೂರವಾದ ಸರ್ಪವು ಆ ಬ್ರಾಹ್ಮಣನನ್ನು ಕಚ್ಚಲು ಆಗ ಆ ಬ್ರಾಹ್ಮಣನು " ಶಿವ ಶಿವ '' ಎಂಬ ಶಿವನಾಮವನ್ನು ಉಚ್ಚರಿಸುತ್ತಾ ಮೃತನಾದನು. ||೪೭೦||

ಆಗ ಕೋಟ್ಯಂತರ ಯಮದೂತರು ಅಲ್ಲಿಗೆ ಬಂದು ನೀಚನಾದ ಆ ಬ್ರಾಹ್ಮಣನನ್ನು ತಮ್ಮ ಪಾಶಗಳಿಂದ ಬಂಧಿಸಿ ಹೊರಡಲುದ್ಯುಕ್ತರಾದರು. ||೪೭೧||

ತದಾ ಕಶ್ಚಿದ್ಧಿಮಗಿರೌ ಸಂಚರನ್ ಶಿವಕಿಂಕರಃ ।
ತದುಕ್ತಂ ಮೃತಕಾಲೀನಂ ನಾಮ ಶುಶ್ರಾವ ಶಾಂಕರಂ ॥೪೭೨॥

ಶ್ರುತ್ವಾ ತನ್ನಾಮ ವಿಮಲಂ ಧನ್ಯಂ ಮತ್ವಾ ಚ ತಂ ದ್ವಿಜಂ ।
ಯಾಮ್ಯಾಯಕಿಂಕರಾನ್ದೃಷ್ಟ್ವಾ ಜಗಾದ ವಚನಂ ಮುದಾ ॥೪೭೩॥

॥ ಶಿವಕಿಂಕರ ಉವಾಚ ॥

ರೇ ರೇ ಯಮಭಟಾಃ ಕ್ರೂರಾಃ ಶೃಣ್ವಂತು ವಚನಂ ಮಮ ।
ಅನೇನೋಚ್ಚಾರಿತಂ ದಿವ್ಯಂ ಶಿವನಾಮ ಶ್ರುತಂ ಮಯಾ ॥೪೭೪॥

ಅಯಂ ಶೈವವರೋ ಧನ್ಯೋ ನಾಸ್ಯ ಯಾಮ್ಯಾಯಯಾತನಾ ।
ದೇಯಮಸ್ಮೈ ಮಹೇಶೇನ ಗಾಣಪತ್ಯಂ ನ ಸಂಶಯಃ ॥೪೭೫॥

ಶಿವೇತಿ ನಾಮ ವಿಮಲಂ ಯದಾಸಾವುಕ್ತವಾದರಾತ್ ।
ತೇನೈವಾಖಿಲಪಾಪಾನಿ ನಷ್ಟಾನ್ಯಸ್ಯ ನ ಸಂಶಯಃ ॥೪೭೬॥

---

ಆಗ ಹಿಮವತ್ಪರ್ವತದಲ್ಲಿ ಸಂಚರಿಸುತ್ತಿದ್ದ ಓರ್ವ ಈಶ್ವರನ ಸೇವಕನು, ಮೃತನಾದ ಈ ಬ್ರಾಹ್ಮಣನು ಮರಣಸಮಯದಲ್ಲಿ ಶಿವನಾಮವನ್ನುಚ್ಚರಿಸಿದುದನ್ನು ಕೇಳಿದನು. ॥೪೭೨॥

ಅವನು ಪವಿತ್ರವಾದ ಆ ಶಿವನಾಮವನ್ನು ಕೇಳಿದೊಡನೆಯೇ, ಶಿವನಾಮವನ್ನುಚ್ಚರಿಸಿದ ಈ ಬ್ರಾಹ್ಮಣನು ಪುಣ್ಯಶಾಲಿಯಾಗಿರುವನೆಂದು ತಿಳಿದು ಯಮನ ಭೃತ್ಯರನ್ನು ನೋಡಿ ಪ್ರೀತಿಯಿಂದ ಹೀಗೆಂದನು. ॥೪೭೩॥

"ಎಲೈ ಕ್ರೂರರಾದ ಯಮಕಿಂಕರರೇ, ನನ್ನ ಮಾತನ್ನು ಕಿವಿಗೊಟ್ಟು ಕೇಳಿರಿ. ಈತನು ಮರಣಕಾಲದಲ್ಲಿ ಪವಿತ್ರವಾದ ಶಿವನಾಮವನ್ನು ಉಚ್ಚರಿಸಿದುದನ್ನು ನಾನು ಕೇಳಿರುವೆನು. ॥೪೭೪॥

ಈತನು ಈಶ್ವರಭಕ್ತಾಗ್ರೇಸರನೂ, ಪುಣ್ಯಶಾಲಿಯೂ ಆಗಿರುವನು. ಇವನು ಯಮಲೋಕದ ಶಿಕ್ಷೆಗೆ ಅರ್ಹನಾಗಿರುವುದಿಲ್ಲ. ಇವನಿಗೆ ಪರಮೇಶ್ವರನು ಪ್ರಮಥಗಣಗಳ ಆಧಿಪತ್ಯವನ್ನು ಕೊಡುವನು. ಇದರಲ್ಲಿ ಸಂಶಯವಿರುವುದಿಲ್ಲ. ॥೪೭೫॥

ಈತನು ಮರಣಕಾಲದಲ್ಲಿ ಭಕ್ತಿಯಿಂದ ಮೊಟ್ಟಮೊದಲು ಯಾವಾಗ

ತದನಂತರಮುಕ್ತಂ ಯಚ್ಛಿವನಾಮಾಘನಾಶನಂ ।
ಮುಕ್ತಿದಂ ತದ್ಭವತ್ಯೇವ ಮಾಕುರ್ವಂತ್ವತ್ರ ಸಂಶಯಃ ॥೪೭೭॥

ನ ನೇಯೋಽಯಂ ಭವದ್ಭಿಸ್ತು ಗಂತವ್ಯಂ ಭವತಾಂ ಯದಿ ।
ಜೀವನೇಚ್ಛಾ ತದಾ ನೋಚೇದ್ಧನಿಷ್ಯಾಮಿ ನ ಸಂಶಯಃ ॥೪೭೮॥

ಇತಿ ತದ್ವಚನಂ ಶ್ರುತ್ವಾ ಮತ್ತಾಸ್ತೇ ಯಮಕಿಂಕರಾಃ ।
ಅನಾದೃತ್ಯೈವ ತದ್ವಾಕ್ಯಂ ತಂ ಬದ್ಧ್ವಾ ಗಂತುಮುದ್ಯತಾಃ ॥೪೭೯॥

ತದಾಭವನ್ಮಹದ್ಯುದ್ಧಂ ದೇವದಾನವದುಃಸಹಂ ।
ದೇವಗಂಧರ್ವಯಕ್ಷಾಣಾಂ ದುರ್ನಿರೀಕ್ಷ್ಯಂ ಭಯಪ್ರದಂ ॥೪೮೦॥

---

ಶಿವನಾಮವನ್ನು ಉಚ್ಚರಿಸಿದನೋ ಆದರಿಂದಲೇ ಇವನ ಸಕಲ ಪಾಪಗಳೂ ನಷ್ಟವಾಗಿರುವುವು. ಇದರಲ್ಲಿ ಸಂಶಯುವೇ ಇರುವುದಿಲ್ಲ. ॥೪೭೬॥

ಎರಡನೆಯ ಬಾರಿ ಉಚ್ಚರಿಸಿದ ಶಿವನಾಮವು ಇವನಿಗೆ ಮೋಕ್ಷವನ್ನುಂಟು ಮಾಡುವುದಾಗಿರುತ್ತದೆ. ಇದರಲ್ಲಿ ಸಂಶಯಪಡಬೇಡಿ. ॥೪೭೭॥

ನೀವು ಇವನನ್ನು ಯಮಸದನಕ್ಕೆ ಕೊಂಡೊಯ್ಯದೇ ಬಂಧಹಾದಿಯನ್ನು ಹಿಡಿದು ಹಿಂದಿರುಗಿರಿ. ನಿಮಗೆ ಪ್ರಾಣದ ಮೇಲಿನ ಆಸೆಯಿದ್ದರೆ ಇದೀಗಲೇ ಇಲ್ಲಿಂದ ಹೊರಡಿರಿ. ಅದಿಲ್ಲದಿದ್ದರೆ ನಿಮ್ಮನ್ನು ಇಲ್ಲಿಯೇ ಸಂಹರಿಸುವೆನು. ಇದು ನಿಜ." ॥೪೭೮॥

ಅವನ ಮಾತನ್ನು ಕೇಳಿಯೂ ಮದಿಸಿದ ಆ ಯಮಕಿಂಕರರು ಆ ಶಿವದೂತನ ವಾಕ್ಯವನ್ನು ಅಲ್ಲಗಳೆದು ಮೃತನಾದ ಬ್ರಾಹ್ಮಣನನ್ನು ಪಾಶಗಳಿಂದ ಬಿಗಿದು ಅಲ್ಲಿಂದ ಹೊರಡಲು ಉದ್ಯುಕ್ತರಾದರು. ॥೪೭೯॥

ಆಗ ಅವರ ನಡುವೆ ಭಯಂಕರವಾದ ಕಾಳಗವಾಯಿತು. ದೇವತೆಗಳು ಅವರ ಪ್ರಭಾವವನ್ನು ಸಹಿಸದಾದರು. ದೇವದಾನವರೂ ಸಹ ಅಸಮರ್ಥರಾದರು. ಅಲ್ಲದೇ ಘೋರವಾದ ಆ ಸಮರವನ್ನು ನೋಡಿ ದೇವತೆಗಳು, ಗಂಧರ್ವರು ಮತ್ತು ಯಕ್ಷರು ಭಯಗೊಂಡರು. ॥೪೮೦॥

ಸಾರ್ಧಕೋಟಿಸಹಸ್ರಂ ತೇ ದುರ್ಜಯಾ ಯಮಕಿಂಕರಾಃ ।
ತೈಃ ಸಹೈಕಶ್ಚಕಾರೋಗ್ರಂ ಜನ್ಯಂ ಸ ಶಿವಕಿಂಕರಃ ॥೪೮೧॥

ಯುದ್ಧಭೂಮಿಗತಾಃ ಕ್ರೂರಾಃ ಯಾವಂತೋ ಯಮಕಿಂಕರಾಃ ।
ತಾವಂತ ಏವ ಸಂತ್ಯತ್ರ ಶೈವಾ ಇತಿ ವಿದುಃ ಸುರಾಃ ॥೪೮೨॥

ಶೈವೇನ ಪ್ರೇಷಿತಂ ಶೂಲಮೇಕಮೇಕೈಕದಾ ತದಾ ।
ಸಾರ್ಧಕೋಟಿಸಹಸ್ರಾಣಿ ಶೂಲಾನಿ ಸಮಜಾಯತ ॥೪೮೩॥

ಶೈವೋ ವಿಭೂತಿಕವಚಃ ಶೂಲಮಾತ್ರಕರಃ ಶುಚಿಃ ।
ಚಿತ್ರಂ ಯುದ್ಧಂ ಚಕಾರೈಕಃ ಸಹ ತೈರ್ಯಮಕಿಂಕರೈಃ ॥೪೮೪॥

ಏಕಮೇವೋಗ್ರವೀರ್ಯಂ ತಂ ದೃಷ್ಟ್ವೈವ ಶಿವಕಿಂಕರಂ ।
ದೇವದಾನವಗಂಧರ್ವಾ ಯಯುಃ ಪ್ರತಿದಿಶಂ ಪ್ರತಿ ॥೪೮೫॥

---

ಅಜೇಯರಾದ ಆ ಯಮದೂತರು ಒಂದೂವರೆ ಕೋಟಿ ಸಹಸ್ರ ಮಂದಿ ಇದ್ದರು. ಈ ಶಿವದೂತನು ಅವರೊಂದಿಗೆ ಒಬ್ಬಂಟಿಗನಾಗಿ ಭಯಂಕರವಾದ ಕಾಳಗವನ್ನು ನಡೆಸಿದನು. ||೪೮೧||

ಘೋರವಾದ ಈ ಕಾಳಗವನ್ನು ನೋಡಿ ದೇವತೆಗಳು "ಯುದ್ಧರಂಗದಲ್ಲಿ ಎಷ್ಟು ಮಂದಿ ಯಮದೂತರು ಯುದ್ಧವನ್ನು ಮಾಡುತ್ತಿರುವರೋ ಅಷ್ಟೇ ಮಂದಿ ಶಿವದೂತರೂ ಸಹ ಆ ಯಮಭಟರೊಂದಿಗೆ ಯುದ್ಧವನ್ನು ಮಾಡುತ್ತಿರುವರೆಂದು ಭಾವಿಸಿದರು. ||೪೮೨||

ಶಿವದೂತನು ಶತ್ರುಗಳ ಸಂಹಾರಕ್ಕೋಸ್ಕರ ಒಂದೊಂದು ಬಾರಿ ಪ್ರಯೋಗಿಸಿದ ಒಂದೊಂದು ಶೂಲವೂ ಸಹ ಒಂದೂವರೆಕೋಟಿ ಸಹಸ್ರ ಶೂಲಗಳಾಗಿ ಪರಿಣಮಿಸುತ್ತಿತ್ತು. ||೪೮೩||

ವಿಭೂತಿಯೇ ಅವನ ಕವಚವಾಗಿದ್ದಿತು. ತ್ರಿಶೂಲವೇ ಅವನ ಆಯುಧವಾಗಿದ್ದಿತು. ಈ ರೀತಿಯಲ್ಲಿ ಆ ಶಿವದೂತನು ಒಬ್ಬಂಟಿಗನಾಗಿ ಅಸಂಖ್ಯಾಕರಾದ ಆ ಯಮದೂತರೊಂದಿಗೆ ಅದ್ಭುತವಾದ ಯುದ್ಧವನ್ನು ಮಾಡಿದನು. ||೪೮೪||

ಅಮಿತಪರಾಕ್ರಮವುಳ್ಳವನೂ ಏಕಾಕಿಯೂ ಆದ ಆ ಶಿವದೂತನನ್ನು ನೋಡಿ ದೇವತೆಗಳು, ದಾನವರು ಮತ್ತು ಯಕ್ಷರು ದಿಕ್ಕುದಿಕ್ಕುಗಳಿಗೆ ಓಡಿದರು. ||೪೮೫||

ತದಾಭವಚ್ಛೋಣಿತಸ್ಯ ಪ್ರವಾಹೋ ಮಾಂಸಕರ್ದಮಃ ।
ವಸಾಫೇನಗಣಾಕೀರ್ಣಃ ಸಂಕೀರ್ಣೋ ಯಮಕಿಂಕರೈಃ ॥೪೮೬॥

ತತಃ ಶ್ರಾಂತೇ ಘೋರಯುದ್ಧೇ ಶ್ರುತ್ವಾ ವಾರ್ತಾಂ ಯಮಸ್ತದಾ ।
ಸರ್ವಸನ್ನಾಹಯುಕ್ತಃ ಸನ್ ಯಯೌ ಯುದ್ಧಭುವಂ ಪ್ರತಿ ॥೪೮೭॥

ತಮಾಗತಂ ಸಮಾಲೋಕ್ಯ ಯಮಂ ಸ ಶಿವಕಿಂಕರಃ ।
ಏಹಿ ಏಹಿ ಯಮೇತ್ಯುಕ್ತ್ವಾ ಶೂಲಂ ಜಗ್ರಾಹ ಪಾಣಿನಾ ॥೪೮೮॥

ತತೋ ಯಮಃ ಶೂಲಹಸ್ತಂ ರುದ್ರಾಕ್ಷವಲಯಾವೃತಂ ।
ವಿಭೂತಿಕವಚಂ ಶೈವಂ ದದರ್ಶ ಶಿವಕಿಂಕರಂ ॥೪೮೯॥

ದೃಷ್ಟ್ವಾ ಕೃತಾಂಜಲಿಪುಟಃ ಕಂಪಮಾನೋ ಭಯಾಕುಲಃ ।
ಪ್ರಣಮ್ಯ ದಂಡವದ್ಭೂಮೌ ಪೂಜಾಂ ಚಕ್ರೇ ಯಥಾವಿಧಿ ॥೪೯೦॥

---

ಆಗ ಆ ಯಮದೂತರ ಶರೀರದಿಂದ ಉಂಟಾದ ರಕ್ತಪ್ರವಾಹವು ಮಾಂಸದಿಂದಲೂ, ಮೇದಸ್ಸು, ನೊರೆ ಮುಂತಾದುವುಗಳಿಂದಲೂ ಮಲಿನವಾಯಿತು. ಈ ರೀತಿಯಲ್ಲಿ ಯಮಕಿಂಕರರ ಶರೀರದಾದ್ಯಂತವೂ ಮಾಂಸದಿಂದ ಮಲಿನವಾದ ರಕ್ತಪ್ರವಾಹದಿಂದ ಒದ್ದೆಯಾಯಿತು. ॥೪೮೬॥

ಬಳಿಕ ಭಯಂಕರವಾದ ಆ ಯುದ್ಧವು ಪ್ರಬಲವಾಗಲು ಈ ವೃತ್ತಾಂತವನ್ನು ಕೇಳಿ ಯಮನು ಯುದ್ಧಸನ್ನದ್ಧನಾಗಿ ರಣರಂಗಕ್ಕೆ ಬಂದನು. ॥೪೮೭॥

ರಣರಂಗಕ್ಕೆ ಬಂದ ಯಮನನ್ನು ನೋಡಿ ಆ ಶಿವದೂತನು, "ಎಲೈ ಯಮನೇ, ಇತ್ತ ಬಾ" ಎಂದು ಯಮನನ್ನು ಯುದ್ಧಕ್ಕೆ ಆಹ್ವಾನಿಸುತ್ತಾ ಶೂಲವನ್ನು ಕೈಯಿಂದ ಹಿಡಿದನು. ॥೪೮೮॥

ತರುವಾಯ ಯಮನೂ ಕೈಗಳಲ್ಲಿ ಶೂಲವನ್ನು ಧರಿಸಿ ರುದ್ರಾಕ್ಷದ ಕಂಕಣಗಳಿಂದ ಭೂಷಿತನಾಗಿ, ವಿಭೂತಿಯನ್ನೇ ಕವಚವನ್ನಾಗಿ ಧರಿಸಿದ ಆ ಶಿವದೂತನನ್ನು ನೋಡಿದನು. ॥೪೮೯॥

ಆವನನ್ನು ನೋಡಿದೊಡನೆಯೇ ಭಯದಿಂದ ಗಡಗಡನೆ ನಡುಗುತ್ತಾ ಅಂಜಲಿಬದ್ಧನಾಗಿ ನಿಂತು ಆವನಿಗೆ ದೀರ್ಘದಂಡನಮಸ್ಕಾರವನ್ನು ಮಾಡಿ ಕ್ರಮವರಿತು ಪೂಜಿಸಿದನು. ॥೪೯೦॥

ಪುನಃ ಪ್ರಣಮ್ಯ ಬಹುಧಾ ಪ್ರಸಾದ್ಯ ಶಿವಕಿಂಕರಂ ।
ಜಗಾದ ವಚನಂ ಚಾರು ವಿನಯಾನ್ನಯುಕೋವಿದಃ ॥೪೯೧॥

ಶಿವಭಕ್ತವರ ಶ್ರೀಮನ್ಕೋಽಯಂ ತತ್ತ್ವವಿದಾಂ ವರ ।
ಏತಸ್ಮಿನ್ನೀದೃಶೀ ಭಕ್ತಿಸ್ತವ ಜಾತಾ ಕಥಂ ವದ ॥೪೯೨॥

ಅನೇನ ಬ್ರಹ್ಮಹತ್ಯಾದಿ ಪಾಪಾನಿ ವಿವಿಧಾನಿ ಚ ।
ಕೃತಾನೀತಿ ವದತ್ಯೇವ ಚಿತ್ರಗುಪ್ತೋ ವಿಶಾರದಃ ॥೪೯೩॥

ಅನಾಲೋಚಿತವಕ್ತಾಯಂ ನ ಭವತ್ಯೇವ ಸರ್ವಥಾ ।
ವಿಶ್ವಾಸೋ ಬಹುಧಾಸ್ತ್ಯಸ್ಮಿನ್ನನೃತಂ ನ ವದತ್ಯಯಂ ॥೪೯೪॥

ಈದೃಶಃ ಪಾಪನಿರತಃ ಕಥಂ ವಾ ರಕ್ಷಿತಸ್ತ್ವಯಾ ।
ಕಥಂ ಮಮ ಹತಂ ಸೈನ್ಯಮವಿಚಾರ್ಯ ತ್ವಯಾಧುನಾ ॥೪೯೫॥

---

ಬಳಿಕ ಮತ್ತೊಮ್ಮೆ ಅವನಿಗೆ ನಮಸ್ಕರಿಸಿ ಪರಿಪರಿಯಿಂದ ಕ್ಷಮೆಯನ್ನು ಬೇಡುತ್ತಾ ವಿನಯಾನ್ವಿತನಾಗಿ ಮಧುರವಾದ ವಾಣಿಯಿಂದ ಹೀಗೆಂದನು. ॥೪೯೧॥

ಓ ಈಶ್ವರಭಕ್ತಾಗ್ರೇಸರನೇ, ಮತ್ತು ತತ್ತ್ವಜ್ಞಾನಿಗಳಲ್ಲಿ ಶ್ರೇಷ್ಠನೇ, ಮೃತನಾಗಿ ಬಿದ್ದಿರುವ ಈತನಾರು? ಇವನಲ್ಲಿ ನಿನಗೆ ಈರೀತಿಯಾದ ಅಗಾಧವಾದ ಭಕ್ತಿಯುಂಟಾಗಲು ಕಾರಣವೇನು ? ॥೪೯೨॥

ಈತನು ಬ್ರಹ್ಮಹತ್ಯೆಯೇ ಮೊದಲಾದ ನಾನಾಬಗೆಯ ಮಹಾಪಾತಕಗಳನ್ನು ಆಚರಿಸಿರುವನೆಂದು ಪ್ರಾಣಿಗಳ ಧರ್ಮಾಧರ್ಮಗಳನ್ನು ವಿಮರ್ಶಿಸುವುದರಲ್ಲಿ ನಿಪುಣನಾದ ಚಿತ್ರಗುಪ್ತನೇ ಹೇಳುತ್ತಿರುವನು. ॥೪೯೩॥

ಈ ಚಿತ್ರಗುಪ್ತನು ವಿಷಯವನ್ನು ವಿಮರ್ಶಿಸದೇ ಮಾತನಾಡುವವನಲ್ಲ. ಇವನು ಎಂದಿಗೂ ಸುಳ್ಳನ್ನು ನುಡಿಯುವುದಿಲ್ಲವೆಂದು ನನಗೆ ಇವನಲ್ಲಿ ದೃಢವಾದ ನಂಬಿಕೆಯಿರುವುದು. ॥೪೯೪॥

ಪಾಪಕರ್ಮಗಳಲ್ಲಿ ಮಗ್ನನಾದ ಇಂತಹ ನೀಚನನ್ನು ನೀನು ರಕ್ಷಿಸುವುದಕ್ಕೆ ಕಾರಣವೇನಿರುವುದು ? ಅಲ್ಲದೇ ಯುಕ್ತಾಯುಕ್ತವನ್ನು ವಿಮರ್ಶಿಸದೇ ನನ್ನ ಸೈನ್ಯವನ್ನೇಕೆ ಸಂಹರಿಸಿದೆ? ॥೪೯೫॥

ಪ್ರಾಯಶಃ ಪುಣ್ಯವಾನೇವ ಭವಿಷ್ಯತ್ಯಯಮೀದೃಶಃ ।
ಯತಃ ಶೈವೋತ್ತಮೇನಾತ್ರ ಸನ್ನಿಧಾನಂ ಕೃತಂ ತ್ವಯಾ ॥೯೬॥

ಶಿವಲಿಂಗಾರ್ಚಕಾಃ ಶೈವಾಃ ರುದ್ರಾಕ್ಷಭಸಿತಾವೃತಾಃ ।
ಬಹುಪುಣ್ಯಫಲೇ ಪೂರ್ಣೇ ದೃಶ್ಯಂತೇ ಶಿವಸಂಮತಾಃ ॥೯೭॥

ಯಸ್ಮಿನ್ದೇಶೇ ಮಹಾಶೈವಾಸ್ತಿಷ್ಠಂತಿ ಶಿವಪೂಜಕಾಃ ।
ತದ್ದೇಶವಾಸಿನಃ ಸರ್ವೇ ಕೃತಾರ್ಥಾ ನಾತ್ರ ಸಂಶಯಃ ॥೯೮॥

ಶೈವಾಂಗಸಂಗಮಾತ್ರೇಣ ಪಿಶಾಚಃ ಪೂರ್ವಮುದ್ಧೃತಃ ।
ಸ್ವಪಿಶಾಚತನುಂ ತ್ಯಕ್ತ್ವಾ ಗಂಧರ್ವೋಽಭವದುತ್ತಮಃ ॥೯೯॥

ಯಸ್ಮಿಂಸ್ತುಷ್ಯತಿ ಶೈವೇಂದ್ರಸ್ತಸ್ಮಿಂಸ್ತುಷ್ಯತಿ ಶಂಕರಃ ।
ಶಿವಭಕ್ತ ಪ್ರಸಾದೋಽಯಂ ಪ್ರಸಾದಃ ಶಂಕರೋದ್ಭವಃ ॥೫೦೦॥

---

ಈಶ್ವರಭಕ್ತಾಗ್ರೇಸರನಾದ ನೀನು ಈ ಸ್ಥಳಕ್ಕೆ ಬಂದಿರುವುದರಿಂದ ಈ ಬ್ರಾಹ್ಮಣನು ಪ್ರಾಯಶಃ ಪುಣ್ಯವಂತನೇ ಆಗಿರಬೇಕು. ॥೯೬॥

ಶಿವಲಿಂಗವನ್ನು ಆರಾಧಿಸುವವರೂ, ರುದ್ರಾಕ್ಷ ಮತ್ತು ಭಸ್ಮದಿಂದ ಭೂಷಿತರೂ, ಈಶ್ವರಾನುಗ್ರಹಕ್ಕೆ ಪಾತ್ರರೂ ಆದ ಭಕ್ತರು ಅನೇಕ ಜನ್ಮಗಳಲ್ಲಿ ಸಂಗ್ರಹಿಸಿದ ಪುಣ್ಯಗಳ ಪರಿಪಾಕದಿಂದಲೇ ಕಾಣಿಸುವರು. ॥೯೭॥

ಯಾವ ಸ್ಥಳದಲ್ಲಿ ಈಶ್ವರಾರಾಧಕರೂ, ಈಶ್ವರಭಕ್ತಾಗ್ರೇಸರರೂ ಆದ ಜನರು ಇರುವರೋ ಆ ಸ್ಥಳದಲ್ಲಿ ವಾಸವಾಗಿರುವವರೆಲ್ಲರೂ ಪುಣ್ಯಶಾಲಿಗಳೇ ಆಗಿರುವರು. ಇದರಲ್ಲಿ ಸಂಶಯವಿರುವುದಿಲ್ಲ. ॥೯೮॥

ಹಿಂದೆ ಪೈಶಾಚದೇಹವನ್ನು ಪಡೆದವನೊಬ್ಬನು ಒಬ್ಬ ಈಶ್ವರಭಕ್ತನ ಅಂಗ ಸ್ಪರ್ಶವಾದೊಡನೆಯೇ ತನ್ನ ಪಿಶಾಚಕ ಶರೀರವನ್ನು ಬಿಟ್ಟು, ದಿವ್ಯವಾದ ಗಂಧರ್ವ ಶರೀರವನ್ನು ಧರಿಸಿದನು. ॥೯೯॥

ಈಶ್ವರಭಕ್ತನು ಯಾರಲ್ಲಿ ಸಂತೋಷಗೊಳ್ಳುವನೋ ಈಶ್ವರನೂ ಅವನ ಲ್ಲಿಯೇ ಪ್ರಸನ್ನನಾಗುವನು. ಈಶ್ವರಭಕ್ತನ ಈ ಅನುಗ್ರಹವು ಶಿವನಿಂದಲೇ ಉಂಟಾಗಿರುವುದು. ॥೫೦೦॥

ಯತ್ರ ಶೈವೋತ್ತಮಸ್ಯಾಸ್ತಿ ಸನ್ನಿಧಾನಮಘಾಪಹಂ ।
ತತ್ರಾಸ್ತಿ ಶಂಕರಸ್ಯೈವ ಸಂನಿಧಾನಂ ನ ಸಂಶಯಃ ॥೫೦೧॥

ಶೈವಃ ಶಿವಕರಃ ಶಾಂತಃ ಶಿವಸ್ಯಾಪರವಿಗ್ರಹಃ ।
ತಸ್ಮಿನ್ದೃಷ್ಟೇ ಮಹಾದೇವೋ ದೃಷ್ಟ ಏವ ನ ಸಂಶಯಃ ॥೫೦೨॥

ಅಯಂ ತು ಭಾಗ್ಯವಾನ್ಧನ್ಯಃ ಪುಣ್ಯವಾನಿತಿ ಸರ್ವಥಾ ।
ತ್ವತ್ಸಂನಿಧಾನಲೇಶೇನ ಸಮ್ಯಗೇವಾನುಮೀಯತೇ ॥೫೦೩॥

ಕ್ಷಮಾಂ ಕುರು ಜಗದ್ವಂದ್ಯ ಶೈವೋತ್ತಮ ಶಿವಾರ್ಚಕ ।
ನತೋಽಸ್ಮಿ ತ್ವತ್ಪದದ್ವಂದ್ವೇ ಕೋಪಂ ಸಂಹರ ಸಂಹರ ॥೫೦೪॥

ಇತಿ ತದ್ವಚನಂ ಶ್ರುತ್ವಾ ಸ ಶೈವೋ ವೀತಮತ್ಸರಃ ।
ನಿಜಗಾದ ತತೋ ವಾಕ್ಯಂ ಯಮಮುದ್ದಿಶ್ಯ ಕೋವಿದಃ ॥೫೦೫॥

---

ಈಶ್ವರಭಕ್ತಾಗ್ರಣಿಯು ನೆಲಸಿರುವಲ್ಲಿ ಎಲ್ಲೆಲ್ಲಿಯೂ ಶಿವನು ಪ್ರಕಾಶಿಸುವನು. ಇದರಲ್ಲಿ ಸಂಶಯಪಡಬೇಕಾದುದಿಲ್ಲ. ||೫೦೧||

ನಿರಂತರವೂ ಶಿವಧ್ಯಾನಾಸಕ್ತನಾದ ಈಶ್ವರಭಕ್ತನು ಶಿವನ ಅಪರಮೂರ್ತಿಯೇ ಆಗಿರುವನು. ಆದುದರಿಂದ ಅವನನ್ನು ನೋಡಿದರೆ ಶಿವನನ್ನು ನೋಡಿದಂತೆಯೇ ಆಗುವುದು. ಇದು ನಿಜ. ||೫೦೨||

ನೀನು ಈ ಮೃತನಾದ ಬ್ರಾಹ್ಮಣನ ಸಮೀಪಕ್ಕೆ ಬಂದಿರುವೆ. ನಿನ್ನ ಸನ್ನಿಧಾನಮಾತ್ರದಿಂದಲೇ ಈತನು ಸರ್ವಪ್ರಕಾರಗಳಿಂದಲೂ, ಅದೃಷ್ಟಶಾಲಿಯೂ, ಕೃತಕೃತ್ಯನೂ, ಪುಣ್ಯವಂತನೂ ಆಗಿರುವನೆಂದು ಚೆನ್ನಾಗಿ ಊಹಿಸುವೆನು. ||೫೦೩||

ಓ ಈಶ್ವರಭಕ್ತಾಗ್ರೇಸರನೇ, ಈಶ್ವರಾರಾಧಕನೇ, ಲೋಕವಂದ್ಯನೇ, ನಿನ್ನ ಅಡಿಗಳಿಗೆ ನಮಸ್ಕರಿಸಿರುವೆನು. ಕೋಪವನ್ನು ಉಪಸಂಹರಿಸು. ||೫೦೪||

ಈ ಮಾತನ್ನು ಕೇಳಿ ನಿರ್ಮಲಚಿತ್ತನಾದ ಶಿವದೂತನು ಸಿಟ್ಟಿನಿಂದ ಶಾಂತನಾಗಿ, ಯಮನನ್ನು ಕುರಿತು ಹೀಗೆಂದನು. ||೫೦೫||

ಅನೇನ ಬ್ರಹ್ಮಹತ್ಯಾದಿ ಕೃತಂ ತತ್ಸತ್ಯಮುಚ್ಯತೇ ।
ತತ್ಪಾತಕಮಭೂನ್ನಷ್ಟಮಂತಕಾಲೇ ಶಿವಸ್ಮೃತೇಃ ॥೫೦೬॥

ಅಯಂ ಶಿವ ಶಿವೇತ್ಯುಕ್ತ್ವಾ ಜಹೌ ಪ್ರಾಣಾನಿಹಾಧುನಾ ।
ಆದ್ಯೋಕ್ತಶಿವಶಬ್ದೇನ ದಗ್ಧಂ ಪಾತಕಕಾನನಂ ॥೫೦೭॥

ತದನಂತರಮುಕ್ತೇನ ಶಿವಶಬ್ದೇನ ಸರ್ವಥಾ ।
ಅಯಂ ಶಿವಪ್ರಸಾದೇನ ಭವಿಷ್ಯತಿ ಗಣಾಧಿಪಃ ॥೫೦೮॥

ಇತಿ ತದ್ವಚನಂ ಶ್ರುತ್ವಾ ಕಂಪಮಾನೋ ಯಮಸ್ತತಃ ।
ಪೂಜಯಾಮಾಸ ವಿಧಿವಚ್ಛೈವಂ ಮೃತಮಪಿ ದ್ವಿಜಂ ॥೫೦೯॥

ತದಾನೀಮೇವ ವಿಶ್ವಾಸಪ್ರೇಷಿತಾಃ ಶಿವಕಿಂಕರಾಃ ।
ದಿವ್ಯರತ್ನವಿಮಾನಾನಿ ಸಮಾರುಹ್ಯ ಯಯುರ್ಮುದಾ ॥೫೧೦॥

---

ಇವನು ಬ್ರಹ್ಮಹತ್ಯೆಯೇ ಮುಂತಾದ ಅನೇಕ ಮಹಾಪಾತಕಗಳನ್ನು ಆಚರಿಸಿರುವನು. ಇದು ನಿಜ. ಆದರೆ ಈತನು ತನ್ನ ಮರಣಕಾಲದಲ್ಲಿ ಶಿವನಾಮಾಮೃತವನ್ನು ಸ್ಮರಿಸಿದುದರಿಂದ ಆ ಪಾಪಗಳೆಲ್ಲವೂ ನಾಶವಾಗಿರುವುವು. ॥೫೦೬॥

ಈತನು ಇದೀಗ "ಶಿವ ಶಿವ" ಎಂದು ಶಿವನಾಮವನ್ನುಚ್ಚರಿಸಿ, ಈ ಸ್ಥಳದಲ್ಲಿ ಪ್ರಾಣಗಳನ್ನು ಬಿಟ್ಟನು. ಅವುಗಳಲ್ಲಿ ಮೊದಲು ಉಚ್ಚರಿಸಿದ ಶಿವಶಬ್ದದಿಂದ ಇವನ ಪಾತಕಗಳೆಲ್ಲವೂ ಕ್ಷಯಿಸಿದುವು. ತರುವಾಯ ಎರಡನೆಯ ಬಾರಿ ಉಚ್ಚರಿಸಿದ ಶಿವಶಬ್ದದಿಂದ ಈತನು ಈಶ್ವರಾನುಗ್ರಹಕ್ಕೆ ಪಾತ್ರನಾಗಿ ಪ್ರಮಥಗಣಗಳ ಆಧಿಪತ್ಯವನ್ನು ಪಡೆಯುವನು. ॥೫೦೭-೫೦೮॥

ಶಿವದೂತನ ಆ ಮಾತನ್ನು ಕೇಳಿ, ಯಮನು ಗಡಗಡನೆ ನಡುಗುತ್ತಾ ಶಿವದೂತನನ್ನೂ ಮತ್ತು ಮೃತನಾದ ಆ ಬ್ರಾಹ್ಮಣನನ್ನೂ ಪೂಜಿಸಿದನು. ॥೫೦೯॥

ಆಗಲೇ ಶಿವನು ಪ್ರೀತಿಯಿಂದ ತನ್ನ ಕಿಂಕರರನ್ನು ಈ ಬ್ರಾಹ್ಮಣನ ಬಳಿಗೆ ಕಳುಹಿಸಲು, ಅವರು ರತ್ನಖಚಿತವಾದ ವಿಮಾನಗಳನ್ನೇರಿ ಮೃತನಾದ ಈ ಬ್ರಾಹ್ಮಣನಿದ್ದಲ್ಲಿಗೆ ಬಂದರು. ॥೫೧೦॥

ತದಾನೀಂ ಪುಷ್ಪವೃಷ್ಟಿಶ್ಚ ಬಭೂವ ಶಿವನಿರ್ಮಿತಾ ।
ನೇದುರ್ದುಂದುಭಯೋ ದಿವ್ಯಾಃ ಪ್ರಸನ್ನಾಶ್ಚ ದಿಶಸ್ತತಃ ॥೫೧೧॥

ತತಸ್ತಾನಾಗತಾನ್ದೃಷ್ಟ್ವಾ ಶಮನಃ ಶಿವಕಿಂಕರಾನ್ ।
ಪೂಜಯಾಮಾಸ ವಿಧಿವದ್ಭಕ್ತಿಶ್ರದ್ಧಾಸಮನ್ವಿತಃ ॥೫೧೨॥

ತತೋ ಮೃತಂ ದ್ವಿಜಂ ಶೈವಂ ಪಸ್ಪರ್ಶುಃ ಶಿವಕಿಂಕರಾಃ ।
ತತಃ ಸಮಭವದ್ವಿಪ್ರೋ ದಿವ್ಯರೂಪಧರಸ್ತದಾ ॥೫೧೩॥

ತತೋ ವಿಮಾನೇ ತಂ ವಿಪ್ರಂ ಸ್ಥಾಪಯಿತ್ವಾ ಶಿವಾರ್ಚಕಾಃ ।
ಯಯುಶ್ಚ ವಾಯುವೇಗೇನ ಕೈಲಾಸಂ ಪ್ರತಿ ಶಾಂಕರಾಃ ॥೫೧೪॥

ತತಸ್ತಸ್ಮೈ ಮಹೇಶೇನ ಗಾಣಾಪತ್ಯಮನಾಮಯಂ ।
ದತ್ತಂ ತದೈವ ನಾಗೇಂದ್ರ ತತ್ರ ತಿಷ್ಠತಿ ಸೋಽಧುನಾ ॥೫೧೫॥

---

ಆಗ ಶಿವನು ಪುಷ್ಪವೃಷ್ಟಿಯನ್ನು ಕರೆದನು. ದೇವದುಂದುಭಿಗಳು ಮೊಳೆದವು. ದಿಕ್ಕುಗಳು ಪ್ರಸನ್ನವಾದುವು. ॥೫೧೧॥

ಬಳಿಕ ಅಲ್ಲಿಗೆ ಬಂದ ಆ ಶಿವದೂತರನ್ನು ನೋಡಿ ಯಮನು ಭಕ್ತಿಶ್ರದ್ಧೆಗಳಿಂದ ಕೂಡಿ ಅವರನ್ನು ಶಾಸ್ತ್ರೋಕ್ತವಿಧಾನದಿಂದ ಪೂಜಿಸಿದನು. ॥೫೧೨॥

ಬಳಿಕ ಶಿವದೂತರು ಮೃತನಾದ ಆ ಬ್ರಾಹ್ಮಣನ ಕಳೇಬರವನ್ನು ಮುಟ್ಟಲು ಒಡನೆಯೇ ಆ ಬ್ರಾಹ್ಮಣನು ತನ್ನ ಪೂರ್ವದೇಹವನ್ನು ತ್ಯಜಿಸಿ ದಿವ್ಯವಾದ ದೇವಶರೀರವನ್ನು ಧರಿಸಿದನು. ॥೫೧೩॥

ಅನಂತರ ಈಶ್ವರಾರಾಧಕರಾದ ಆ ಶಿವದೂತರು ಬ್ರಾಹ್ಮಣನನ್ನು ವಿಮಾನದಲ್ಲಿ ಕುಳ್ಳಿರಿಸಿಕೊಂಡು ವಾಯುವೇಗದಿಂದ ಕೈಲಾಸಕ್ಕೆ ನಡೆದರು. ॥೫೧೪॥

ಎಲೈ ಕಾರ್ಕೋಟಕನೇ, ಅಲ್ಲಿ ಶಿವನು ಆ ಬ್ರಾಹ್ಮಣನಿಗೆ ಶಾಶ್ವತವಾದ ಪ್ರಮಥಗಣಗಳ ಆಧಿಪತ್ಯವನ್ನು ಕೊಟ್ಟನು. ಈಗ ಅವನು ಅಲ್ಲಿ ಶಾಶ್ವತವಾದ ಗಾಣಾಪತ್ಯ ಪದವಿಯನ್ನು ಅನುಭವಿಸುತ್ತಿರುವನು. ॥೫೧೫॥

ಈದೃಶಾ ಬಹವಃ ಪೂರ್ವಂ ಮಹಾಪಾತಕಿನೋ ಜನಾಃ ।
ಮೃತಿಕಾಲೀನವಿಶ್ವೇಶಸ್ಮರಣಾನ್ಮೋಕ್ಷಮಾಯಯುಃ ॥೫೧೬॥

ನೃಣಾಂ ಮರಣಕಾಲೇ ತು ಶಿವ ಇತ್ಯಕ್ಷರದ್ವಯಂ ।
ನಾಯಾತಿ ಸಹಸಾ ನೂನಂ ಶಂಕರಾನುಗ್ರಹಂ ವಿನಾ ॥೫೧೭॥

ಶಿವನಾಮಸ್ಮೃತಿಫಲಂ ವಕ್ತುಮೇವ ನ ಶಕ್ಯತೇ ।
ಮಾದೃಶೈರಸ್ಥಿರಸ್ವಾಂತೈಃ ಶಂಕರೇಣ ವಿನಾ ಧ್ರುವಂ ॥೫೧೮॥

ಅತಃ ಪಂಚಾಕ್ಷರಃ ಶೈವೋ ಜಪನೀಯಸ್ತ್ವಯಾ ಸದಾ ।
ಶೈವಃ ಪಂಚಾಕ್ಷರೋ ಭವ್ಯೋ ಮುಕ್ತಿದೋ ಜಪ್ಯತೇ ಮಯಾ॥೫೧೯॥

ಶೈವಃ ಪಂಚಾಕ್ಷರೋ ಮಂತ್ರಃ ಶಿವರೂಪಃ ಶಿವಪ್ರದಃ ।
ಕಾಶ್ಯಾಮಂತರ್ಗೃಹೇ ಸ್ಥಿತ್ವಾ ಜಪನೀಯಃ ಪ್ರಯತ್ನತಃ ॥೫೨೦॥

---

ಹಿಂದೆ ಇದೇ ರೀತಿಯಲ್ಲಿ ಮಹಾಪಾತಕಗಳನ್ನಾಚರಿಸಿದ ಅನೇಕ ಜನರು ಮರಣಕಾಲದಲ್ಲಿ ಶಿವನನ್ನು ಸ್ಮರಿಸಿ ಆದರ ಮಹಿಮೆಯಿಂದ ಮುಕ್ತಿಯನ್ನು ಪಡೆದರು. ||೫೧೬||

ಈಶ್ವರಾನುಗ್ರಹವೊಂದಿಲ್ಲದಿದ್ದರೆ ಮನುಷ್ಯರಿಗೆ ಮರಣಕಾಲದಲ್ಲಿ 'ಶಿ' 'ವ' ಎಂಬ ಈ ಎರಡು ಅಕ್ಷರಗಳ ಉಚ್ಚಾರಣೆಯು ಸುಲಭವಾಗುವುದಿಲ್ಲ. ||೫೧೭||

ಶಿವನಾಮಸ್ಮರಣೆಯಿಂದ ಸಂಭವಿಸುವ ಫಲವನ್ನು ಹೇಳಲು ಶಿವನೇ ಸಮರ್ಥನಾಗಿರುವನಲ್ಲದೇ ಚಿತ್ತಚಾಂಚಲ್ಯವುಳ್ಳ ನಮ್ಮಂತಹವರು ಅದನ್ನು ಹೇಳಲಾರರು. ||೫೧೮||

ಆದುದರಿಂದ ನೀನು ನಿರಂತರವೂ ಶಿವಪಂಚಾಕ್ಷರಮಂತ್ರವನ್ನೇ ಜಪಿಸುತ್ತಿರಬೇಕು. ನಾನು ಮೋಕ್ಷದಾಯಕವೂ ಅದ್ಭುತವೂ ಆದ ಶಿವಪಂಚಾಕ್ಷರಿಯನ್ನು ಜಪಿಸುತ್ತಿರುವೆನು. ||೫೧೯||

ಈಶ್ವರಸ್ವರೂಪವೂ ಕಲ್ಯಾಣಪ್ರದವೂ ಆದ ಶಿವಪಂಚಾಕ್ಷರಮಂತ್ರವನ್ನು ಕಾಶೀಕ್ಷೇತ್ರದಲ್ಲಿ ಅಂತರ್ಗೃಹದಲ್ಲಿ ವಾಸವಾಗಿದ್ದು ಜಪಿಸಬೇಕು. ||೫೨೦||

ನ ಕಾಶೀಸದೃಶಂ ಕ್ಷೇತ್ರಂ [1] ತತ್ರಾಪ್ಯಂತರ್ಗೃಹಂ ವರಂ ।
ತತ್ರಾಪ್ಯತ್ಯುತ್ತಮಂ ಜ್ಞೇಯಂ [2] ಜ್ಞಾನವಾಪೀತಟಂ ಶುಭಂ ॥೫೨೦॥

ತತ್ರ ಜಪ್ಯೋ ಮಹಾಮಂತ್ರಃ ಶೈವೋಽಯಂ ಮೋಕ್ಷದಾಯಕಃ ।
ತಸ್ಮಾನ್ಮಂತ್ರವರಃ ಶೈವಸ್ತತ್ರ ಜಪ್ಯೋ ಮನುಃ ಸದಾ ॥೫೨೨॥

ಪಂಚವಕ್ತ್ರೋ ದಶಭುಜಃ ಸರ್ವದೇವೋತ್ತಮಃ ಪ್ರಭುಃ ।
ವೇದೋಪಗೀತಃ ಸರ್ವಜ್ಞಃ ಸೋಮಸೂರ್ಯಾಗ್ನಿಲೋಚನಃ ॥೫೨೩॥

ಗೌರೀಭೂಷಿತವಾಮಾಂಗಃ ಕಲ್ಯಾಣಗುಣಸಾಗರಃ ।
ಸರ್ವಲೋಕಪತಿಃ ಶ್ರೀಮಾನ್ಸರ್ವಲೋಕಾರ್ಚಿತಪ್ರಭುಃ ॥೫೨೪॥

---

ಕಾಶೀಕ್ಷೇತ್ರಕ್ಕೆ ಸದೃಶವಾದ ಇನ್ನೊಂದು ಕ್ಷೇತ್ರವಿರುವುದಿಲ್ಲ. ಆದರಲ್ಲಿಯೂ ಅಂತರ್ಗೃಹವು ಶ್ರೇಷ್ಠ. ಆದಕ್ಕಿಂತಲೂ ಜ್ಞಾನವಾಪಿಯು ದಡವು ಅತ್ಯುತ್ತಮವಾದುದು. ॥೫೨೧॥

ಪವಿತ್ರವಾದ ಆ ಕಾಶೀಕ್ಷೇತ್ರದಲ್ಲಿ ಶಿವಪಂಚಾಕ್ಷರವೆಂಬ ಈ ಮಹಾಮಂತ್ರವನ್ನು ಜಪಿಸಿದರೆ ಅದು ಮೋಕ್ಷವನ್ನು ಕೊಡುವುದು. ಆದುದರಿಂದಲೇ ಶಿವಪಂಚಾಕ್ಷರೀ ಮಂತ್ರವನ್ನು ಕಾಶೀಕ್ಷೇತ್ರದಲ್ಲಿ ಜಪಿಸಬೇಕು. ॥೫೨೨॥

(ಇವು ಧ್ಯಾನಶ್ಲೋಕಗಳು) ಶ್ಲೋಕಾರ್ಥ— ಶಿವನು ಐದು ಮುಖಗಳುಳ್ಳವನೂ, ಹತ್ತು ಭುಜಗಳಿಂದ ಶೋಭಿಸುವವನೂ, ಸಕಲ ದೇವತೆಗಳಲ್ಲಿ ಶ್ರೇಷ್ಠನೂ, ಜಗತ್ಪ್ರಭುವೂ, ವೇದಗಳಿಂದ ಸ್ತುತಿಸಲ್ಪಡುವವನೂ, ಸರ್ವಜ್ಞನೂ ಆಗಿರುವನು. ಚಂದ್ರ, ಸೂರ್ಯ ಮತ್ತು ಅಗ್ನಿ ಇವೇ ಅವನ ಕಣ್ಣುಗಳು. ಅಲ್ಲದೇ ಎಡಪಾರ್ಶ್ವದಲ್ಲಿ ಗೌರಿಯನ್ನು ಕುಳ್ಳಿರಿಸಿಕೊಂಡಿರುವನು. ಅನಂತಕಲ್ಯಾಣಗುಣಗಳಿಂದ ಶೋಭಿಸುವವನು. ಸಕಲ ಲೋಕಗಳಿಗೂ ಒಡೆಯನು. ಸಂಪದ್ಭರಿತನೂ ಆಗಿರುವನು. ಸಕಲ

---

1 ಕಾಶೀಕ್ಷೇತ್ರದಲ್ಲಿ ವಿಶ್ವನಾಥದೇವಾಲಯಕ್ಕೆ ಉತ್ತರದಿಕ್ಕಿನಲ್ಲಿ ಸ್ವಲ್ಪ ದೂರದಲ್ಲಿ ಒಂದಾನೊಂದು ಗುಹೆಯಿರುವುದು. ಆ ಗುಹೆಗೆ ಅಂತರ್ಗೃಹವೆಂದು ಹೆಸರು. ಯಾತ್ರಿಕರು ಮತ್ತು ತಪಸ್ವಿಗಳೂ ಆ ಗುಹೆಯಲ್ಲಿ ಕುಳಿತು ಜಪವನ್ನಾಚರಿಸುವರು.

2 ವಿಶ್ವೇಶ್ವರದೇವಾಲಯದ ಎಡಭಾಗದಲ್ಲಿರುವ ಒಂದಾನೊಂದು ಕೊಳಕ್ಕೆ ಜ್ಞಾನವಾಪಿಯೆಂದು ಸಂಜ್ಞೆಯಿರುವುದು. ಆದರಲ್ಲಿ ಸ್ನಾನವನ್ನಾಚರಿಸಿದರೆ ಜ್ಞಾನಾಭಿವೃದ್ಧಿಯುಂಟಾಗುವುದೆಂದು ಈ ಹಿಂದೆಯೇ ಹೇಳಲ್ಪಟ್ಟಿರುತ್ತದೆ

ನಿಷ್ಕಲೋ ನಿರ್ಗುಣೋ ನಿತ್ಯೋ ನಿರ್ಲಿಪ್ತೋ ನಿರುಪಾಧಿಕಃ ।
ನಿರಂಜನೋ ನಿರಾಕಾರೋ ನಿರವದ್ಯೋ ನಿರಾಮಯಃ ॥೫೨೫॥

ಜ್ಯೋತಿಃ ಸ್ವರೂಪೋ ವಿಮಲಶ್ಚಿದ್ಘನಃ ಸಕಲಾತ್ಮಕಃ ।
ಏಕಃ ಪೂರ್ಣಃ ಶಿವಃ ಶಾಂತೋ ಮಾಯಾತೀತೋಽಕ್ಷರಃ ಪರಃ ॥೫೨೬॥

ಇತಿ ಧ್ಯೇಯಃ ಸದಾ ಶಂಭುರಪ್ರಮತ್ತೈರಹರ್ನಿಶಂ ।
ಪೂಜನೀಯಃ ಪ್ರಯತ್ನೇನ ಪ್ರತ್ಯಹಂ ವಿಧಿವಜ್ಜನೈಃ ॥೫೨೭॥

ಗಂಡಕೀ ನಾಮ ವಿಮಲಾ ನದೀ ಯತ್ರ ಮನೋಹರಾ ।
ತತ್ರ ಸೋಮೇಶ್ವರಂ ನಾಮ ಕ್ಷೇತ್ರಮಸ್ತ್ಯೇಕಮುತ್ತಮಂ ॥೫೨೮॥

---

ದೇವತೆಗಳೂ ಅವನನ್ನು ಪೂಜಿಸುವರು. ಅವನು ವ್ಯಾಪಕನೂ ಮತ್ತು ಪ್ರಾಣಾದಿ ಷೋಡಶಕಲೆಗಳಿಲ್ಲದವನೂ, ರೂಪಾದಿ ಗುಣಹೀನನೂ, ಸುಖ, ದುಃಖ, ಶೋಕ, ಮೋಹಗಳೆಂಬ ಅಂತಃಕರಣಧರ್ಮಗಳ ಸಂಸರ್ಗವಿಲ್ಲದಿರುವವನೂ, ಆಶ್ರಯ ರಹಿತನೂ (ಎಂದರೆ ಸಕಲ ಜಗತ್ತಿಗೂ ಶಿವನೇ ಆಶ್ರಯನಾಗಿರುವುದರಿಂದ ಶಿವನಿಗೆ ತನಗಿಂತಲೂ ಭಿನ್ನವಾದ ಇನ್ನೊಂದು ಆಶ್ರಯವಿರುವುದಿಲ್ಲವೆಂದರ್ಥವು.) ಪಾಪರಹಿತನೂ, ಅಶರೀರಿಯೂ, ಶುದ್ಧನೂ, ಆಧ್ಯಾತ್ಮಿಕ, ಆಧಿದೈವಿಕ, ಆಧಿಭೌತಿಕವೆಂಬ ತಾಪತ್ರಯಗಳಿಂದ ರಹಿತನೂ ಆಗಿರುವನು. ॥೫೨೩-೫೨೪-೫೨೫॥

ಇವನು ಘಟಪಟಾದಿವಸ್ತುಗಳಂತೆ ಜಡನಲ್ಲ, ಪ್ರಕಾಶಸ್ವರೂಪನು. ಅವಿದ್ಯೆಯ ಕಾರ್ಯಗಳಾದ ಸುಖ, ದುಃಖ, ಪುಣ್ಯ, ಪಾಪ ಮೊದಲಾದ ದೋಷಗಳು ಇವನಿಗಿರದೆ ಶುದ್ಧನಾಗಿರುವನು. ನಿರಂತವೂ ಜ್ಞಾನಸ್ವರೂಪನೇ ಆಗಿರುವನು. (ಎಂದರೆ ಉಪ್ಪಿನ (ಲವಣಪಿಂಡ) ಹರಳು ಒಳಗಡೆಯೂ, ಹೊರಗಡೆಯೂ ಎಲ್ಲೆಲ್ಲಿಯೂ ಉಪ್ಪಾಗಿಯೇ ಹೇಗೆ ಇರುವುದೋ ಅದರಂತೆಯೇ ಶಿವನೂ ಸಹ ಸರ್ವಪ್ರಕಾರದಿಂದಲೂ ಜ್ಞಾನಸ್ವರೂಪನೇ ಆಗಿರುವನು. ಜ್ಞಾನಕ್ಕಿಂತಲೂ ವ್ಯತಿರಿಕ್ತವಾದ ಸ್ವರೂಪವೇ ಅವನಿಗಿರುವುದಿಲ್ಲ. ಎಂದರ್ಥವು. ಚಿದ್ಘನಃ ಎಂಬ ಶಬ್ದವು ಇದೇ ಅರ್ಥವನ್ನು ಕೊಡುವುದು.) ॥೫೨೬॥

ಶಿವನನ್ನು ಧ್ಯಾನಿಸುವವರು ಅತ್ಯಂತ ಜಾಗರೂಕರಾಗಿ ಚಿತ್ತೈಕಾಗ್ರ್ಯದಿಂದ ಹಗಲಿರುಳೂ ಈ ರೀತಿಯಲ್ಲಿ ಧ್ಯಾನಿಸಿ ಪ್ರತಿದಿನವೂ ತಪ್ಪದೇ ಪೂಜಿಸಬೇಕು.

॥ ಶಿವನಾಭಿಲಕ್ಷಣಂ ಮಹಿಮಾಚ ॥

ತತ್ರೈವ ಶಿವನಾಭಾಖ್ಯಾಃ ಶಿಲಾಃ ಸಂತಿ ಶಿವಾತ್ಮಿಕಾಃ ।
ಶಿಲಾಶ್ಚ ತಾದೃಶಾಃ ಸಂತಿ ವಿವಿಧಾಃ ಶಿವಸಂಮತಾಃ ॥೩೨೯॥

ತಾಃ ಸರ್ವಾ ಅಪಿ ಸಂಪೂಜ್ಯಾ ಲಿಂಗಾಕಾರಾಃ ಶಿವಾತ್ಮಿಕಾಃ ।
ತತ್ಪೂಜಯಾ ಮಹಾದೇವಃ ಸ ಸಾಕ್ಷಾತ್ಪೂಜಿತೋ ಭವೇತ್॥೩೩೦॥

ಉನ್ಮತ್ತಮಹಿಷಾಕ್ಷಾಖ್ಯಾಃ ಶಿಲಾಃ ಸಂತಿ ಶಿವಾತ್ಮಿಕಾಃ ।
ತಾಸ್ತು ಯತ್ನೇನ ಲಬ್ಧವ್ಯಾಃ ಸಾಕ್ಷಾನ್ಮೋಕ್ಷಪ್ರದಾಯಕಾಃ ॥೩೩೧॥

ತತ್ರೈವ ಶಿವಕುಂಡಾಖ್ಯಮೇಕಮಸ್ತಿ ಶಿವಾಲಯಂ ।
ತತ್ರೈವ ಶಿವರೂಪಾಸ್ತಾಃ ಶಿಲಾಃ ಸಂತ್ಯಮಿತಾಃ ಶುಭಾಃ ॥೩೩೨॥

---

ಗಂಡಕೀ ನದಿಯ ತೀರದಲ್ಲಿ ಸೋಮೇಶ್ವರವೆಂಬ ಒಂದು ಕ್ಷೇತ್ರವಿರುವುದು. ||೩೨೭-೩೨೮||

ಅಲ್ಲಿಯೇ "ಶಿವನಾಭ" ಎಂಬ ಹೆಸರಿನಿಂದ ಪ್ರಸಿದ್ಧವಾದ ಕೆಲವು ಶಿಲೆಗಳಿರುವುವು. ಅವು ಶಿವಸ್ವರೂಪಗಳೇ ಆಗಿರುವುವು. ಅದರಂತೆಯೇ ಇನ್ನೂ ಈಶ್ವರನಿಗೆ ಪ್ರಿಯವಾದ ನಾನಾಬಗೆಯ ಶಿಲೆಗಳಿರುವುವು. ||೩೨೯||

ಲಿಂಗಾಕಾರವಾಗಿರುವ ಆ ಶಿಲೆಗಳೆಲ್ಲವೂ ಪೂಜಿಸಲು ಯೋಗ್ಯವಾಗಿರುವುವು. ಅವು ಶಿವನ ಸ್ವರೂಪಗಳೇ ಆಗಿರುವುವು. ಆದುದರಿಂದ ಆ ಶಿಲೆಗಳನ್ನು ಪೂಜಿಸಿದರೆ ಸಾಕ್ಷಾತ್ಪರಶಿವನನ್ನು ಪೂಜಿಸಿದಂತೆಯೇ ಆಗುವುದು. ||೩೩೦||

"ಉನ್ಮತ್ತಮಹಿಷಾಕ್ಷ" ಎಂಬ ಹೆಸರುಳ್ಳ ಇನ್ನೊಂದು ಬಗೆಯ ಶಿಲೆಗಳಿರುವುವು. ಆ ಶಿಲೆಗಳೂ ಈಶ್ವರನಿಗೆ ಪ್ರಿಯವಾಗಿರುವುವು. ಮತ್ತು ಅವು ಮೋಕ್ಷವನ್ನು ದಯಪಾಲಿಸುವ ಸಾಮರ್ಥ್ಯವುಳ್ಳವುಗಳಾಗಿರುವುವು. ಆದುದರಿಂದ ಅವುಗಳನ್ನು ಶ್ರಮವಹಿಸಿ ಸಂಪಾದಿಸಬೇಕು. ||೩೩೧||

ಆ ಗಂಡಕೀನದಿಯ ತೀರದಲ್ಲಿ ಶಿವಕುಂಡವೆಂಬ ಹೆಸರುಳ್ಳ ಒಂದು ಈಶ್ವರ ದೇವಾಲಯವಿರುವುದು. ಮತ್ತು ಆ ನದಿಯ ತೀರದಲ್ಲಿಯೇ ಉನ್ಮತ್ತಮಹಿಷಾಕ್ಷವೆಂಬ ಶ್ರೇಷ್ಠವಾದ ಈ ಶಿಲೆಗಳು ಹೇರಳವಾಗಿರುವುವು. ||೩೩೨||

ಕಪಿಲಂ ತಚ್ಛಿಲಾಮೂಲಂ ಪಾರ್ಶ್ವೇ ಶ್ಯಾಮೈವ ಸಾ ಶಿಲಾ ।
ಉಪರ್ಯುನ್ಮತ್ತಮಹಿಷನೇತ್ರಸನ್ನಿಭಮುತ್ಕಟಂ ॥೫೩॥

॥ ಶಿಲಾ ಲಕ್ಷಣಂ ॥

ಸೈವೇಷದರುಣಾ ಭವ್ಯಲಿಂಗದೇಶೇ ಮನೋಹರೇ ।
ತತ್ರ ಶಂಕರಸಾನ್ನಿಧ್ಯಂ ಭವಾನ್ಯಾಶ್ಚ ಸದಾ ಧ್ರುವಂ ॥೫೪॥

ತಾದೃಶೀ ಯತ್ನತಃ ಸಾಧ್ಯಾ ಶಿಲಾ ಶಂಕರಸಂಶ್ರಯಾ ।
ತತ್ರಾರ್ಚಿತೋ ಮಹಾದೇವಃ ಪ್ರೀತೋ ಭವತಿ ಸರ್ವಥಾ ॥೫೫॥

ತತ್ರಾಲ್ಪಾಪಿ ಕೃತಾ ಪೂಜಾ ಶ್ರದ್ಧಯಾ ತು ಶಿವಾರ್ಚಕೈಃ ।
ಸರ್ವಪಾಪಹರಾ ಭವ್ಯಾ ಸೈವಾನಂತಾಯ ಕಲ್ಪತೇ ॥೫೬॥

---

ಆ ಶಿಲೆಗಳ ಕೆಳಭಾಗವು [1]ಕಪಿಲವರ್ಣದಿಂದ ಕೂಡಿರುವುದು. ಅವುಗಳ ಪಾರ್ಶ್ವಗಳು ಅಚ್ಚಕಪ್ಪಾಗಿರುವುವು. ಮೇಲ್ಭಾಗವು ಮಹಿಷದ ಕಣ್ಣುಗಳಂತೆ ಕೆಂಪಾಗಿರುವುದು. ॥೫೩॥

ಮತ್ತು ಆ ಶಿಲೆಯು ಮಧ್ಯಭಾಗದಲ್ಲಿ ಸ್ವಲ್ಪ ಕೆಂಪುವರ್ಣದಿಂದ ಕೂಡಿರುವುದು. ಆ ಮಧ್ಯಪ್ರದೇಶದಲ್ಲಿಯೇ ಶಿವನು ಪಾರ್ವತೀಸಮೇತನಾಗಿ ನಿರಂತರವೂ ವಾಸವಾಗಿರುವನು. ॥೫೪॥

ಹಿಂದೆ ಹೇಳಿದ ಸಕಲ ಲಕ್ಷಣಗಳಿಂದಲೂ ಕೂಡಿರುವ ಆ ಶಿಲೆಯನ್ನು ಶ್ರಮವಹಿಸಿ ಸಂಪಾದಿಸಬೇಕು. ಅಂತಹ ಶಿಲೆಯಲ್ಲಿ ಶಿವನನ್ನು ಆರಾಧಿಸಿದರೆ ಮಹಾದೇವನು ಸುಪ್ರೀತನಾಗುವನು. ॥೫೫॥

ಆ ಶಿಲೆಯಲ್ಲಿ ಅಲ್ಪವಾದ ಪೂಜೆಯನ್ನಾಚರಿಸಿದರೂ ಅದನ್ನು ಶ್ರದ್ಧೆಯಿಂದ ಆಚರಿಸಬೇಕು. ಆ ಪೂಜೆಯು ಅಲ್ಪವಾಗಿದ್ದರೂ ಸಹ ಸಕಲ ಪಾಪಗಳನ್ನು ಹೋಗಲಾಡಿಸಲು ಸಮರ್ಥವಾಗಿ ಶ್ರೇಷ್ಠವೂ ಮೋಕ್ಷಪ್ರದವೂ ಆಗುವುದು. ॥೫೬॥

---

1 ಕಪಿಲವರ್ಣ—ಕನ್ನಡದಲ್ಲಿ ಕೌಲುಬಣ್ಣವೆಂದು ವ್ಯವಹರಿಸುವರು.

ಶುದ್ಧೇನ ಭಸ್ಮನಾ ನಿತ್ಯಂ ನವಬಿಲ್ವದಲೈರಪಿ ।
ಪೂಜಾ ಕಾರ್ಯಾ ಪ್ರಯತ್ನೇನ ತತ್ರ ಶೈವೈಃ ಶಿವಾರ್ಚಕೈಃ ॥೫೩೭॥

ತತ್ಸದಾ ಶಿವನಾಭಾಖ್ಯಮಿತಿ ವೇದೈಶ್ಚ ಗೀಯತೇ ।
ತದೇವ ವಿಮಲಂ ಲಿಂಗಂ ಮಯಾ ಸಂಪೂಜ್ಯತೇ ಸದಾ ॥೫೩೮॥

ಯಸ್ತ್ವೇತಲ್ಲಿಂಗಪೂಜಾಯಾಂ ಪ್ರಯತೋಽತ್ರ ವಸೇನ್ನರಃ ।
ನ ತಸ್ಯ ಯಾತನಾ ಘೋರಾ ಭೈರವೀ ಸಾ ಭವಿಷ್ಯತಿ ॥೫೩೯॥

ಕಾಶ್ಮೀರಲಿಂಗಪ್ರಮುಖಾನ್ಯನೇಕಾನ್ಯಮಲಾನಿ ಚ ।
ಸಂತಿ ತಾನ್ಯಪಿ ಪೂಜ್ಯಾನಿ ಮುಕ್ತಿಕಾಮೈರ್ಯಥೋಚಿತಂ ॥೫೪೦॥

ಮಮ ತತ್ರೈವ ಸತತಂ ಪ್ರೀತಿಸ್ತಿಷ್ಠತ್ಯನಾಮಯಾ ।
ಮಯ್ಯೈತದೇವ ವಿಮಲಂ ಪೂಜ್ಯತೇ ಲಿಂಗಮುತ್ತಮಂ ॥೫೪೧॥

---

ಈಶ್ವರಾರಾಧಕರೂ, ಭಕ್ತರೂ ಆದ ಜನರು ಆ ಶಿಲೆಯಲ್ಲಿ ಶುದ್ಧವಾದ ಭಸ್ಮ, ಕೋಮಲವಾದ ಬಿಲ್ವಪತ್ರೆಗಳು ಇವುಗಳಿಂದ ಶಿವನನ್ನು ಶ್ರದ್ಧೆಯಿಂದ ಪೂಜಿಸಬೇಕು. ॥೫೩೭॥

ಆ ಲಿಂಗವೇ "ಶಿವನಾಭ" ಎಂಬ ಹೆಸರಿನಿಂದ ವೇದಗಳಲ್ಲಿ ಪ್ರಸಿದ್ಧವಾಗಿರುವುದು. ನಾನು ಅದನ್ನೇ ಪೂಜಿಸುತ್ತಿರುವೆನು. ॥೫೩೮॥

ಯಾವ ಮನುಜನು ಈ ಕಾಶೀಕ್ಷೇತ್ರದಲ್ಲಿ ಶಿವನಾಭವೆಂಬ ಶಿಲಾಲಿಂಗವನ್ನು ಪೂಜಿಸುತ್ತಾ ವಾಸವಾಗಿರುವನೋ, ಅವನು ಭೈರವನ ಕ್ರೂರವಾದ ಯಾತನೆಗೆ ಗುರಿಯಾಗುವುದಿಲ್ಲ. ॥೫೩೯॥

ಇದಲ್ಲದೇ ಕಾಶ್ಮೀರ ಶಿಲೆಯಿಂದ ನಿರ್ಮಿಸಿದ ಅನೇಕ ಪವಿತ್ರವಾದ ಶಿವಲಿಂಗಗಳಿರುವುವು. ಮೋಕ್ಷವನ್ನು ಬಯಸುವವರು ಆ ಲಿಂಗಗಳನ್ನೂ ಸಹ ಯಥಾಯೋಗ್ಯವಾಗಿ ಪೂಜಿಸಬೇಕು. ॥೫೪೦॥

ನಾನು ಸತತವೂ ಆ ಲಿಂಗವನ್ನೇ ಪ್ರೀತಿಸುವೆನು. ಮತ್ತು ಪವಿತ್ರವೂ ಶ್ರೇಷ್ಠತಮವೂ ಆದ ಆ ಲಿಂಗವನ್ನೇ ನಾನು ಪೂಜಿಸುವೆನು. ॥೫೪೧॥

ನ ತಸ್ಯ ಪೂಜ್ಯತೇ ಲಿಂಗಮುತ್ತಮಂ ಸರ್ವಪೂಜಿತಂ ।
ಈದೃಶಂ ದುರ್ಲಭಂ ಲೋಕೇ ಲಿಂಗಂ ಮೋಕ್ಷಪ್ರದಾಯಕಂ ॥೫೪೨॥

ಮಯಾಪ್ಯೇತತ್ಪ್ರಯತ್ನೇನ ಲಬ್ಧಂ ಲಿಂಗಮಿದಂ ಪುರಾ ।
ಈದೃಶಂ ಪ್ರಾಪ್ಯತೇ ಲೋಕೇ ಕೇನಚಿತ್ತಪಸೋ ಬಲಾತ್ ॥೫೪೩॥

ಈದೃಶಾನಿ ತು ಲಿಂಗಾನಿ ದುರ್ಲಭಾನ್ಯೇವ ಸರ್ವಥಾ ।
ಏತಲ್ಲಿಂಗಸ್ಯ ಪೂಜಾಯಾಮಧಿಕಾರೀ ಜಿತೇಂದ್ರಿಯಃ ॥೫೪೪॥

ಶಿವೈಕಶರಣಃ ಶೈವಃ ತದನ್ಯೋ ನೈವ ಸರ್ವಥಾ ।
ಅತ್ರಾಭಿಷೇಕಃ ಕರ್ತವ್ಯೋ ರುದ್ರಸೂಕ್ತೈರಘಾಪಹೈಃ ॥೫೪೫॥

ಬಿಲ್ವಪತ್ರೈರ್ನವೈಃ ಶುದ್ಧೈಃ ಪೂಜಾ ಕಾರ್ಯಾ ಪ್ರಯತ್ನತಃ ।
ಧೂಪದೀಪಾದಿಕಂ ಸರ್ವಂ ಶಕ್ತ್ಯಾ ಕಾರ್ಯಂ ಪ್ರಯತ್ನತಃ ॥೫೪೬॥

ಪೂಜಾಂತೇ ಜಪನೀಯೋಽಯಂ ಶೈವಃ ಪಂಚಾಕ್ಷರಃ ಸದಾ ।
ಈದೃಶಂ ಲಿಂಗಮಭ್ಯರ್ಚ್ಯ ಯತ್ರ ತಿಷ್ಠತಿ ಶಾಂಕರಃ ॥೫೪೭॥

---

ಹಿಂದೆ ನಾನು ಬಹು ಕಷ್ಟಪಟ್ಟು ಈ ಲಿಂಗವನ್ನು ಸಂಪಾದಿಸಿರುವೆನು. ಲೋಕದಲ್ಲಿ ಈ ರೀತಿಯಾದ ಶಿವಲಿಂಗವನ್ನು ತಪಸ್ಸಿನ ಮಹಿಮೆಯಿಂದಲೇ ಪಡೆಯಬಹುದಾಗಿದೆ. ॥೫೪೩॥

ಇಂತಹ ಪವಿತ್ರವಾದ ಲಿಂಗಗಳು ಅತ್ಯಂತ ದುರ್ಲಭಗಳಾಗಿವೆ. ಜಿತೇಂದ್ರಿಯನೂ, ನಿರಂತರವೂ ಶಿವನನ್ನೇ ಮರೆಹೊಕ್ಕಿರುವವನೂ, ಶೈವದೀಕ್ಷೆಯನ್ನು ಕೈಗೊಂಡವನೂ ಆದ ಶಿವನ ಏಕಾಂತ ಭಕ್ತನೇ, ಈ ಲಿಂಗವನ್ನು ಪೂಜಿಸುವುದರಲ್ಲಿ ಅಧಿಕಾರಿಯು. ಹಾಗಿಲ್ಲದಿದ್ದವರು ಎಂದಿಗೂ ಅಧಿಕಾರಿಗಳಾಗಲಾರರು.॥೪೪೩-೪೪೪॥

ಪವಿತ್ರವಾದ ರುದ್ರಸೂಕ್ತವನ್ನು ಪಠಿಸುತ್ತಾ ಶಿವಲಿಂಗದಲ್ಲಿ ಶಿವನನ್ನು ಅಭಿಷೇಚಿಸಬೇಕು. ಕೋಮಲವಾದ ಬಿಲ್ವಪತ್ರೆಗಳಿಂದ ಪೂಜಿಸಿ ಧೂಪದೀಪಾದಿಗಳಿಂದ ಯಥಾಶಕ್ತಿ ಅರ್ಚಿಸಬೇಕು. ॥೫೪೫-೫೪೬॥

ಪೂಜೆಯು ಮುಗಿದ ಬಳಿಕ ಈ ಶಿವಪಂಚಾಕ್ಷರೀಮಂತ್ರವನ್ನು ಜಪಿಸಬೇಕು. ಈಶ್ವರಾರಾಧಕನು ಪವಿತ್ರವಾದ ಇಂತಹ ಲಿಂಗವನ್ನು ಆರಾಧಿಸಿ ಯಾವ

ತತ್ರ ವಿಶ್ವೇಶ್ವರೋ ನಿತ್ಯಂ ನೃತ್ಯತ್ಯಂಬಾಸಮನ್ವಿತಃ ।
ಏವಂ ವಿಷ್ಣುವಚಃ ಶ್ರುತ್ವಾ ನಾಗಃ ಕಾರ್ಕೋಟಕಾಧಿಪಃ ॥೫೪೮॥

ಯಯೌ ಸೋಮೇಶ್ವರಸ್ಥಾನಂ ಶಿವನಾಭಿಶಿಲಾಶ್ರಯಂ ।
ಶಿವಕುಂಡೇ ತತಃ ಶುದ್ಧೇ ಪ್ರವಿಶ್ಯ ತಪಸೋ ಬಲಾತ್ ॥೫೪೯॥

ಬಹುಕಾಲಂ ಸಮಾಲೋಚ್ಯ ಶ್ರಾಂತೋ ನಾಗಾಧಿಪಸ್ತದಾ ।
ಅಲಬ್ಧ್ವಾ ತಾದೃಶಂ ಲಿಂಗಮುಕ್ತಲಕ್ಷಣಸಂಯುತಂ ॥೫೫೦॥

ಚಕಾರೋಗ್ರಂ ತಪಸ್ತತ್ರ ಮಾಮೇವೋದ್ದಿಶ್ಯ ಸಾದರಂ ।
ತತಶ್ಚ ಮತ್ಪ್ರಸಾದೇನ ಲಿಂಗಂ ಲಬ್ಧ್ವೈವ ತಾದೃಶಂ ॥೫೫೧॥

ಆಜಗಾಮ ಪುನಃ ಕಾಶೀಂ ನಾಗಃ ಪೂರ್ಣಮನೋರಥಃ ॥೫೫೨॥

ತತಃ ಸ ವಿಷ್ಣುನಾ ಸಾಕಮಾಗತ್ಯಾಂತರ್ಗೃಹೇ ಶುಭೇ ।
ತಪಃ ಕರ್ತುಂ ಸಮಾರೇಭೇ ಪಂಚಾಕ್ಷರಪರಾಯಣಃ ॥೫೫೩॥

---

ಪ್ರದೇಶದಲ್ಲಿ ನೆಲಸುವನೋ ಆ ಪ್ರದೇಶದಲ್ಲಿ ಶಿವನು ಗೌರೀಸಮೇತನಾಗಿ ಅನವರತವೂ ನೃತ್ಯವನ್ನಭಿನಯಿಸುವನು. ॥೫೪೭॥

ವಿಷ್ಣುವಿನ ಆ ಮಾತನ್ನು ಕೇಳಿ ನಾಗರಾಜನಾದ ಕರ್ಕೋಟಕನು ಶಿವನಾಭಿಶಿಲೆಗಳಿಂದ ಕೂಡಿದ ಸೋಮೇಶ್ವರಕ್ಷೇತ್ರಕ್ಕೆ ನಡೆದನು. ॥೫೪೮॥

ಅಲ್ಲಿ ನಾಗರಾಜನು ತನ್ನ ತಪಃಶಕ್ತಿಯಿಂದ ಪವಿತ್ರವಾದ ಆ ಶಿವಕುಂಡದಲ್ಲಿ ಪ್ರವೇಶಿಸಿ ವಿಷ್ಣುವು ಹೇಳಿದ ಸಕಲ ಲಕ್ಷಣಗಳಿಂದ ಕೂಡಿದ ಲಿಂಗವನ್ನು ಹುಡುಕಲಾರದೇ ನಿರಾಶನಾಗಿ ಬಹುಕಾಲದವರೆಗೆ ಯೋಚಿಸಿ ಬಳಲಿ ಬೆಂಡಾಗಿ ಬಳಿಕ ನನ್ನನ್ನು ಕುರಿತು ಭಕ್ತಿಯಿಂದ ತಪಸ್ಸನ್ನಾಚರಿಸಿದನು. ॥೫೪೯-೫೫೦॥

ತರುವಾಯ ಕರ್ಕೋಟಕನು ನನ್ನ ಅನುಗ್ರಹದಿಂದ ಸರ್ವ ಲಕ್ಷಣಗಳಿಂದಲೂ ಶೋಭಿಸುವ ಉನ್ಮತ್ತ ಮಹಿಷಾಕ್ಷನೆಂಬ ಆ ಲಿಂಗವನ್ನು ಸಂಪಾದಿಸಿ, ಸಂತೋಷದಿಂದ ಕಾಶೀಕ್ಷೇತ್ರಕ್ಕೆ ಹಿಂತಿರುಗಿದನು. ॥೫೫೧-೫೫೨॥

ಬಳಿಕ ಅವನು ವಿಷ್ಣುವಿನೊಂದಿಗೆ ಅಂತರ್ಗೃಹಕ್ಕೆ ಬಂದು ಶಿವಪಂಚಾಕ್ಷರೀ ಮಂತ್ರವನ್ನು ಜಪಿಸುವುದರಲ್ಲಿ ಆಸಕ್ತನಾಗಿ, ತಪಸ್ಸನ್ನು ಆಚರಿಸತೊಡಗಿದನು. ॥೫೫೩॥

ವೀರೇಶಾದ್ದಕ್ಷಿಣೇ ಭಾಗೇ ವಿಷ್ಣುರ್ಬಲಸಮನ್ವಿತಃ ।
ಚಕಾರ ಚಾಮಲಂ ಕುಂಡಂ ನಿರ್ಮಲೋದಕಮುತ್ತಮಂ ॥೫೫೪॥

ಸೋಪಾನಾನಿ ಚಕಾರಾತ್ರ ರತ್ನೈರೇವ ಮನೋಹರೈಃ ।
ತತಸ್ತೇನೈವ ತತ್ತೀರೇ ಕೃತಾ ಚ ಮಣಿವೇದಿಕಾ ॥೫೫೫॥

ತತ್ರ ರತ್ನಮಯಂ ಲಿಂಗಂ ಸರ್ವಾಘೌಘವಿನಾಶಕಂ ।
ವಿಧಿವತ್ಸ್ಥಾಪಯಾಮಾಸ ವಿಷ್ಣುಃ ಶಿವಪರಾಯಣಃ ॥೫೫೬॥

ತತಸ್ತತ್ರೈವ ವಿಮಲೇ ಲಿಂಗಪಾರ್ಶ್ವೇ ಜನಾರ್ದನಃ ।
ಪಂಚಾಗ್ನಿಮಧ್ಯೇ ಸತತಂ ತಪಃ ಕರ್ತುಂ ಸಮಾರಭೇ ॥೫೫೭॥

ಷಟ್ಕೋಟಿಯುಗಪರ್ಯಂತಂ ಚಕಾರೋಗ್ರತರಂ ತಪಃ ।
ತಲ್ಲಿಂಗಪಾರ್ಶ್ವೇ ಸಂವಿಶ್ಯ ನಿರಾಹಾರೋ ದೃಢಾಸನಃ ॥೫೫೮॥

---

ಬಲಶಾಲಿಯಾದ ವಿಷ್ಣುವು ವೀರೇಶ್ವರನಿಗೆ ದಕ್ಷಿಣ ಭಾಗದಲ್ಲಿ ಪವಿತ್ರವೂ ಉತ್ಕೃಷ್ಟವೂ ಆದ ನಿರ್ಮಲವಾದ ಉದಕದಿಂದ ಕೂಡಿದ ಒಂದು ಕುಂಡವನ್ನು ನಿರ್ಮಿಸಿದನು. ॥೫೫೪॥

ಆ ಕುಂಡವಿರುವ ಪ್ರದೇಶದಲ್ಲಿಯೇ ರತ್ನಖಚಿತವಾದ ಸೋಪಾನಗಳನ್ನು ನಿರ್ಮಿಸಿ, ಬಳಿಕ ಅದರ ತೀರದಲ್ಲಿ ರತ್ನಖಚಿತವಾದ ವೇದಿಕೆಯನ್ನೂ ರಚಿಸಿದನು. ॥೫೫೫॥

ಆ ವೇದಿಕೆಯಲ್ಲಿ ಸಕಲ ಪಾಪಗಳನ್ನು ಹೋಗಲಾಡಿಸುವುದೂ, ರತ್ನಖಚಿತವೂ ಆದ ಶಿವಲಿಂಗವನ್ನು ಶಾಸ್ತ್ರೋಕ್ತರೀತಿಯಿಂದ ಸ್ಥಾಪಿಸಿದನು. ॥೫೫೬॥

ಬಳಿಕ ವಿಷ್ಣುವು ಆ ಲಿಂಗದ ಸಮೀಪದಲ್ಲಿ ಪಂಚಾಗ್ನಿಗಳನ್ನಿರಿಸಿ ಅವುಗಳ ನಡುವೆ ನಿಂತು ತಪಸ್ಸನ್ನಾಚರಿಸಲಾರಂಭಿಸಿದನು. ॥೫೫೭

ಈ ಪ್ರಕಾರವಾಗಿ ಅವನು ಆಸನವನ್ನು ಸ್ಥಿರಪಡಿಸಿಕೊಂಡು ಆ ಲಿಂಗದ ಸಮೀಪದಲ್ಲಿ ಕುಳಿತು ನಿರಾಹಾರವ್ರತವನ್ನು ಕೈಗೊಂಡು ಆರು ಕೋಟಿ ಯುಗಗಳು ಕಳೆಯುವ ವರೆಗೂ ಭಯಂಕರವಾದ ತಪಸ್ಸನ್ನಾಚರಿಸಿದನು. ॥೫೫೮॥

ಪುನರೇಕಾಂಘ್ರಿಣಾ ಸ್ಥಿತ್ವಾ ಪ್ರಜ್ವಾಲ್ಯ ಚ ಸ ಪಾವಕಾನ್ ।
ಷಟ್ಕೋಟಿಯುಗಪರ್ಯಂತಂ ತಪಶ್ಚಕ್ರೇ ಬಲಾನ್ವಿತಃ ॥೫೫೯॥

ತತೋಽಧೋಮುಖಮಾಸಾದ್ಯ ತಪಸ್ತಪ್ತಂ ದುರಾಸದಂ ।
ಷಷ್ಟಿವತ್ಸರಪರ್ಯಂತಂ ಬ್ರಹ್ಮಮಾನೇನ ವಿಷ್ಣುನಾ ॥೫೬೦॥

ತತಸ್ತತ್ಸ್ಥಾಪಿತೇ ಲಿಂಗೇ ಪ್ರಾದುರ್ಭೂತೋಽಸ್ಮ್ಯಹಂ ಶಿವೇ ।
ತತೋ ಮಾಂ ಪೂಜಯಿತ್ವೈವ ಸ್ತೋತ್ರಮೇತಚ್ಚಕಾರ ಸಃ ॥೫೬೧॥

॥ ವಿಷ್ಣುರುವಾಚ ॥

ನಮಾಮಿ ವಿಶ್ವೇಶ್ವರಮಾದಿದೇವಂ
ನಮಾಮಿ ವಿಶ್ವೋತ್ತಮುಮೀಶಮೇಕಂ ।
ನಮಾಮಿ ಸರ್ವಾಧಿಕಮಪ್ರಮೇಯಂ
ನಮಾಮಿ ಶಂಭುಂ ಗಿರಿಜಾಸಹಾಯಂ ॥೫೬೨॥

---

ಅದಾದ ಬಳಿಕ ಪ್ರಾಣಾಯಾಮ ಬಲದಿಂದ ಕೂಡಿದ ಆವನು ಪುನಃ ಒಂದೇ ಪಾದದಿಂದ ಪಂಚಾಗ್ನಿಗಳ ನಡುವೆ ನಿಂತು ಆರು ಕೋಟಿ ಯುಗಗಳು ಕಳೆಯುವ ವರೆಗೂ ತಪಸ್ಸನ್ನಾಚರಿಸಿದನು. ॥೫೫೯॥

ಬಳಿಕ ಅಧೋಮುಖನಾಗಿ ನಿಂತು ಅರುವತ್ತು ಬ್ರಹ್ಮಸಂವತ್ಸರಗಳು ಕಳೆಯುವ ವರೆಗೆ ಉಗ್ರವಾದ ತಪಸ್ಸನ್ನು ಕೈಗೊಂಡನು.

ಎಲೌ ಪಾರ್ವತಿಯೇ, ತರುವಾಯ ಅವನು ಸ್ಥಾಪಿಸಿದ ಆ ಶಿವಲಿಂಗದಲ್ಲಿ ನಾನು ಪ್ರತ್ಯಕ್ಷನಾಗಿ ಆವಿರ್ಭವಿಸಿದೆನು. ಬಳಿಕ ಅವನು ನನ್ನನ್ನು ಪೂಜಿಸಿ ಈ ಪ್ರಕಾರವಾಗಿ ಸ್ತುತಿಸಿದನು. ॥೫೬೧॥

ಜಗತ್ಪ್ರಭುವೂ ದೇವತೆಗಳಲ್ಲೆಲ್ಲಾ ಪ್ರಥಮನೂ, ಸರ್ವೋತ್ಕೃಷ್ಟನೂ, ಜಗದ್ರಕ್ಷಕನೂ, ಸಜಾತೀಯ ವಿಜಾತೀಯ ಸ್ವಗತ ಭೇದರಹಿತನೂ, ಸಕಲ ಪ್ರಾಣಿಗಳಿಗಿಂತಲೂ ಮೇಲ್ಪಟ್ಟವನೂ, ವ್ಯಾಪಕನೂ, ಗಿರಿಜಾರಮಣನೂ ಆದ ಶಿವನಿಗೆ ನಮಸ್ಕಾರವು. ॥೫೬೨॥

ನಮಾಮಿ ಕಾಲಾಂತಕಮುಗ್ರಮೀಶಂ
ನಮಾಮಿ ಖಟ್ವಾಂಗಧರಂ ಮಹೇಶಂ ।
ನಮಾಮಿ ಸೋಮಾನಲಭಾಸ್ಕರಾಕ್ಷಂ
ನಮಾಮಿ ವಾಹೀಕೃತಸನ್ಮಹೋಕ್ಷಂ ॥೫೬೩॥

ನಮಾಮಿ ಸರ್ಪಾಧಿಪಕಂಠಭೂಷಂ
ನಮಾಮಿ ನಾನಾವಿಧದಿವ್ಯವೇಷಂ ।
ನಮಾಮಿ ಶುದ್ಧೋತ್ತಮಭೂತಿಭೂಷಂ
ನಮಾಮಿ ಸಂರಕ್ಷಿತಭೂತಶೇಷಂ ॥೫೬೪॥

ನಮಾಮಿ ಸರ್ವಾಂಗಮವೇದ್ಯಮಾದ್ಯಂ
ನಮಾಮಿ ಮಾಯಾರಹಿತಂ ವಿಶುದ್ಧಂ ।
ನಮಾಮಿ ಲೋಕೈಕನಿದಾನಭೂತಂ
ನಮಾಮಿ ನಾನಾವಿಧಸೃಷ್ಟಿಹೇತುಂ ॥೫೬೫॥

ನಮಾಮಿ ನಾಗೇಶವರಾರ್ಚಿತಾಂಘ್ರಿಂ
ನಮಾಮಿ ಶುದ್ಧೇಂದುಕಲಾವತಂಸಂ ।

---

ಮೃತ್ಯುಂಜಯನೂ, ಭಯಂಕರನೂ, ಜಗದ್ರಕ್ಷಕನೂ, ಖಟ್ವಾಂಗಧಾರಿಯೂ ಆದ ಶಿವನನ್ನು ವಂದಿಸುವೆನು. ಯಾವ ದೇವನಿಗೆ ಚಂದ್ರ, ಸೂರ್ಯ, ಅಗ್ನಿ ಇವೇ ಕಣ್ಣುಗಳಾಗಿವೆಯೋ, ವೃಷಭಾರೂಢನಾದ ಅಂತಹ ದೇವನನ್ನು ವಂದಿಸುವೆನು. ॥೫೬೩॥

ಸರ್ಪಭೂಷಣನೂ, ನಾನಾ ಬಗೆಯ ವೇಷವನ್ನು ಧರಿಸುವವನೂ, ಭಸ್ಮಧಾರಿಯೂ, ಭೂತರಕ್ಷಕನೂ ಆದ ದೇವನಿಗೆ ನಮಿಸುವೆನು. ॥೫೬೪॥

ವೇದಾಂತವೇದ್ಯನೂ, ಜಗತ್ಸೃಷ್ಟಿಗಿಂತಲೂ ಮೊದಲು ಇರುವವನೂ, ಅಜ್ಞಾನದಿಂದ ಬಿಡಲ್ಪಟ್ಟವನೂ, ಶುದ್ಧನೂ, ಜಗತ್ಕಾರಣನೂ, ನಾನಾಬಗೆಯ ಸೃಷ್ಟಿಯನ್ನು ರಚಿಸುವವನೂ ಆದ ಶಿವನಿಗೆ ನಮಸ್ಕಾರವು. ॥೫೬೫॥

ಆದಿಶೇಷನಿಂದ ಪೂಜಿಸಲ್ಪಟ್ಟ ಪಾದಗಳುಳ್ಳವನೂ, ಚಂದ್ರಶೇಖರನೂ,

ನಮಾಮ್ಯನೇಕೇಂದುರವಿಪ್ರಭಾಸಂ
ನಮಾಮಿ ನಿತ್ಯಂ ಕರುಣಾರ್ದ್ರಭಾವಂ ॥೫೫೬॥

ನಮಾಮಿ ರಮ್ಯೋತ್ತಮವಕ್ತ್ರಚಂದ್ರಂ
ನಮಾಮಿ ದೀರ್ಘೋರುಹಿರಣ್ಯಬಾಹುಂ।
ನಮಾಮಿ ಶಾಂತಾಚ್ಛಹಿರಣ್ಯರೂಪಂ
ನಮಾಮಿ ದಿವ್ಯೋರುಹಿರಣ್ಯವರ್ಣಂ ॥೫೬೭॥

ನಮಾಮಿ ಸೋಮಂ ವೃಷರಾಜಕೇತುಂ
ನಮಾಮಿ ಶರ್ವಂ ವರಧರ್ಮಸೇತುಂ।
ನಮಾಮಿ ಭೀಮಂ ಜಗದೇಕನಾಥಂ
ನಮಾಮಿ ರುದ್ರಂ ಜನಮೋಕ್ಷಹೇತುಂ ॥೫೬೮॥

ನಮಾಮಿ ವೀರೇಶ್ವರಮುಗ್ರವೀರ್ಯಂ
ನಮಾಮಿ ದೇವಂ ಪಟುನೀಲಕಂಠಂ।
ನಮಾಮಿ ಸರ್ವಾರ್ತಿಹರಂ ಸುರೇಶಂ
ನಮಾಮಿ ದೀರ್ಘೋರುಜಟಾಕಲಾಪಂ ॥೫೬೯॥

---

ಅನೇಕ ಸೂರ್ಯಚಂದ್ರರಂತೆ ಪ್ರಕಾಶಮಾನನೂ, ನಿತ್ಯನೂ, ಭಕ್ತವತ್ಸಲನೂ ಆದ ಶಿವನಿಗೆ ನಮಸ್ಕಾರವು. ॥೫೬೬॥

ಚಂದ್ರನಂತೆ ಮನೋಹರವೂ, ಶ್ರೇಷ್ಠವೂ ಆದ ಮುಖದಿಂದ ಶೋಭಿಸುವ ಪರಶಿವನನ್ನು ವಂದಿಸುವೆನು. ಅವನ ಬಾಹುಗಳು ದೀರ್ಘವಾಗಿಯೂ, ದೊಡ್ಡದಾಗಿಯೂ ಸುವರ್ಣದಂತೆ ಥಳಥಳಿಸುತ್ತಿರುವುವು. ದೇಹಕಾಂತಿಯು ಶುದ್ಧವಾದ ಸುವರ್ಣದ ಛಾಯೆಯಂತಿರುವುದು. ತೊಡೆಗಳು ಸುವರ್ಣದಂತೆ ಮಿಣುಗುತ್ತಿರುವುವು. ಅಂತಹ ದೇವನನ್ನು ವಂದಿಸುವೆನು. ॥೫೬೭॥

ವೃಷಭಾರೂಢನೂ, ಸುಖಕರನೂ, ಧರ್ಮಾಧರ್ಮಗಳ ನಿಯಾಮಕನೂ, ಉಗ್ರನೂ, ಜಗನ್ನಾಥನೂ, ಮೋಕ್ಷದಾಯಕನೂ ಆದ ದೇವನನ್ನು ವಂದಿಸುವೆನು. ॥೫೬೮॥

ವೀರೇಶ್ವರನೂ, ಪರಾಕ್ರಮಿಯೂ, ನೀಲಕಂಠನೂ, ವಿಪತ್ಪರಂಪರೆಗಳನ್ನು

ಶಿವ ಏವ ಶರಣ್ಯಪುಣ್ಯಮೂರ್ತಿಃ
ಶಿವ ಏವಾಖಿಲದೇವಚಕ್ರವರ್ತೀ ।
ಶಿವ ಏವ ವಿದೂರಿತಾಮರಾರ್ತಿಃ
ಶಿವ ಏವಾಮಿತವೇದಗೀತಕೀರ್ತಿಃ ॥೫೭೦॥

ತ್ವದನ್ಯಂ ಶರಣ್ಯಂ ವರೇಣ್ಯಂ ನ ಜಾನೇ
ನ ಜಾನೇ ಶಿವಾಮೇಯ ಕುಧ್ರೇಂದ್ರಜಾನೇ ।
ತ್ವದನ್ಯೋ ನ ದೇವಸ್ತ್ವದನ್ಯೋ ನ ದೇವಃ
ತ್ವದನ್ಯೋ ನ ದೇವಸ್ತ್ವದನ್ಯೋ ನ ದೇವಃ ॥೫೭೧॥

ತ್ವಮೇವ ಪ್ರಭುಃ ಸರ್ವಲೋಕೈಕನಾಥಃ
ತ್ವಮೀಶಸ್ತ್ವಮಾದ್ಯಸ್ತ್ವಮಾರಾಧ್ಯಭೂತಃ ।
ತ್ವದನ್ಯೋ ನ ಪೂಜ್ಯಸ್ತ್ವದನ್ಯೋ ನ ಸೇವ್ಯಃ
ತ್ವಮೇವಾಸಿ ಪೂಜ್ಯಸ್ತ್ವಮೇವಾಸಿ ಸೇವ್ಯಃ ॥೫೭೨॥

---

ಹೋಗಲಾಡಿಸುವವನೂ, ದೇವೇಶನೂ, ದೀರ್ಘವಾಗಿಯೂ ವಿಶಾಲವಾಗಿಯೂ ಇರುವ ಜಟೆಯಿಂದ ಶೋಭಿಸುವವನೂ ಆದ ಶಿವನಿಗೆ ನಮಸ್ಕಾರವು. ॥೫೬೯॥

ಶಿವನೇ, ಶರಣಾಗತರಕ್ಷಕನೂ, ಮಂಗಳಮೂರ್ತಿಯೂ, ದೇವತೆಗಳ ಸಾರ್ವಭೌಮನೂ, ಆಗಿರುವನು. ದೇವತೆಗಳ ತೊಂದರೆಗಳನ್ನು ಹೋಗಲಾಡಿಸುವವನೂ ಶಿವನೇ. ವೇದಗಳು ಶಿವನ ಕೀರ್ತಿಯನ್ನೇ ಸದಾ ಸ್ತುತಿಸುತ್ತಿರುವುವು. ॥೫೭೦॥

ಓ ಶಿವನೇ, ಶರಣಾಗತರಾದ ಭಕ್ತರನ್ನು ರಕ್ಷಿಸುವವನು ನೀನೊಬ್ಬನೇ. ಇತರರಾರೂ ಇರುವುದಿಲ್ಲವೆಂದು ತಿಳಿದಿರುವೆನು. ಓ ಅಪ್ರಮೇಯನೇ, ಗಿರಿಜಾರಮಣನೇ, ನೀನೇ ನನ್ನ ದೇವನು. ನಿನಗಿಂತಲೂ ಪೂಜ್ಯನಾದ ಇನ್ನೊಬ್ಬ ದೇವತೆಯು ಕಾಣುವುದಿಲ್ಲ. ॥೫೭೧॥

ನೀನೇ ಪ್ರಭುವು, ನೀನೇ ಜಗದ್ರಕ್ಷಕನು, ಸಕಲ ಪ್ರಾಣಿಗಳ ಒಡೆಯನೂ ನೀನೇ, ದೇವತೆಗಳಲ್ಲೆಲ್ಲಾ ಪ್ರಥಮನೂ ನೀನೇ, ನನಗೆ ಪೂಜ್ಯನೂ ನೀನೇ ಆಗಿರುವೆ. ನಿನ್ನನ್ನಲ್ಲದೇ ಇನ್ನಾರನ್ನೂ ಪೂಜಿಸಲಾರೆ, ಭಜಿಸಲಾರೆ. ನೀನೇ ಪೂಜ್ಯನೂ, ಸೇವ್ಯನೂ ಆಗಿರುವೆ. ॥೫೭೨॥

ತ್ವದನ್ಯತ್ಪರಂ ವಸ್ತು ನಾಸ್ತ್ಯೇವ ಲೋಕೇ
ತ್ವದನ್ಯೋ ನ ವೇದಾಂತವೇದ್ಯಃ ಪರೇಶಃ ।
ತ್ವಮೇವಾಸಿ ಸರ್ವಂ ತ್ವದನ್ಯನ್ನ ಕಿಂಚಿ
ದ್ಧ್ರುವಂ ಸತ್ಯಮೇತದ್ಧ್ರುವಂ ಸತ್ಯಮೇತತ್ ॥೫೭೩॥

ಶಿವಾತ್ಪರಂ ನೇತಿ ವದಂತಿ ವೇದಾಃ
ಶಿವಾತ್ಪರಂ ನೇತಿ ವದಂತಿ ದೇವಾಃ ।
ಶಿವಾತ್ಪರಂ ನೇತಿ ವದಂತಿ ಸಿದ್ಧಾಃ
ಶಿವಾತ್ಪರಂ ನೇತಿ ವದಂತಿ ಸಿದ್ಧಾಃ ॥೫೭೪॥

ಶಿವ ಏವಾಖಿಲಾರಾಧ್ಯಃ ಶಿವ ಏವ ಜಗತ್ಪ್ರಭುಃ ।
ನ ಶಿವಾತ್ಪರಮಸ್ತ್ಯೇಕಂ ಸತ್ಯಂ ಸತ್ಯಂ ಮಯೋಚ್ಯತೇ ॥೫೭೫॥

ಶಿವಾಜ್ಞಯೈವ ಸೂರ್ಯೋಽಯಂ ತಪತಿ ಪ್ರತಿವಾಸರಂ ।
ಶಿವಾಜ್ಞಯೈವ ಚಂದ್ರೋಽಯಂ ದೀಪಯತ್ಯಖಿಲಾದಿಶಃ ॥೫೭೬॥

---

ಲೋಕದಲ್ಲಿ ನಿನಗಿಂತಲೂ ಭಿನ್ನವಾದ ಇನ್ನೊಂದು ವಸ್ತುವು ಪಾರಮಾರ್ಥಿಕವಾಗಿ ಇರುವುದೇ ಇಲ್ಲ. ವೇದಾಂತಗಳು ಪರಶಿವನಾದ ನಿನ್ನನ್ನೇ ಬಾರಿಬಾರಿಗೂ ತಿಳಿಯಪಡಿಸುವುವು. ನೀನೇ ಲೋಕದಲ್ಲಿರುವ ಸಕಲ ಚರಾಚರ ವಸ್ತುಗಳ ಸ್ವರೂಪದಿಂದ ವ್ಯವಸ್ಥಿತನಾಗಿರುವೆ. ಈ ಪ್ರಪಂಚಕ್ಕೆ ನಿನ್ನ ಸ್ವರೂಪಕ್ಕಿಂತಲೂ ಭಿನ್ನವಾದ ಸ್ವರೂಪವಿರುವುದಿಲ್ಲ. ಇದು ನಿಜ. ॥೫೭೩॥

ವೇದಗಳು, ದೇವತೆಗಳು, ಸಿದ್ಧರು ಮತ್ತು ಜೀವನ್ಮುಕ್ತರು ಇವರು ಶಿವನಿಗಿಂತಲೂ ಭಿನ್ನವೂ, ನಿತ್ಯವೂ, ವ್ಯಾಪಕವೂ, ಅಂತರತಮವೂ ಆದ ಇನ್ನೊಂದು ವಸ್ತುವೇ ಇರುವುದಿಲ್ಲವೆಂದು ಹೇಳುವರು. ॥೫೭೪॥

ಶಿವನೇ ಸಕಲ ಜನರಿಗೂ ಪೂಜ್ಯನಾಗಿರುವವನು. ಜಗನ್ನಾಥನೂ ಶಿವನೇ ಆಗಿರುವನು. ಶಿವನಿಗಿಂತಲೂ ಸತ್ಯವಾದ ಇನ್ನೊಂದು ವಸ್ತುವಿರುವುದಿಲ್ಲ. ಇದು ಸತ್ಯ. ॥೫೭೫॥

ಶಿವನ ಆಜ್ಞೆಯಿಂದಲೇ ಸೂರ್ಯನು ಪ್ರತಿದಿನವೂ ಪ್ರಕಾಶಿಸುವನು. ಚಂದ್ರನು ಸಕಲ ದಿಕ್ಕುಗಳನ್ನು ಬೆಳಗಿಸುವುದೂ ಆ ಶಿವನ ಆಜ್ಞೆಯಿಂದಲೇ. ॥೫೭೬॥

ಶಿವಾಜ್ಞಯೈವ ಶೈಲೇಂದ್ರಾಃ ಫಣಿದಿಕ್ಕರಿಣಃ ಸದಾ ।
ಧೃತ್ವಾ ತಿಷ್ಠಂತಿ ಪೃಥಿವೀಂ ಕಂಪಮಾನಾಂದಿಶಂ ಬತ ॥೫೭೭॥

ಶಿವಾಜ್ಞಯೈವ ಸಕಲಂ ಪ್ರಜ್ವಲತ್ಯನಲಃ ಸದಾ ।
ಶಿವಾಜ್ಞಯೈವ ವಾಂತ್ಯೇತೇ ವಾಯವಃ ಸುಖಹೇತವಃ ॥೫೭೮॥

ಶಿವಸ್ಯೈವ ಪ್ರಸಾದೇನ ದೇವೇಂದ್ರಃ ಸ್ವರ್ಗಪಾಲಕಃ ।
ಶಿವಸ್ಯೈವ ಪ್ರಸಾದೇನ ಸರ್ಜಕೋಽಭೂತ್ಪ್ರಜಾಪತಿಃ ॥೫೭೯॥

ಶಿವಸ್ಯೈವ ಪ್ರಸಾದೇನ ಮಯಾ ಪ್ರಾಪ್ತಂ ಪರಂ ಪದಂ ।
ಶಿವಸ್ಯೈವ ಪ್ರಸಾದೇನ ಶಂಭುಃ ಶಂಭುತ್ವಮಾಗತಃ ॥೫೮೦॥

ಏವಂ ಸ್ತುತ್ವಾ ಹರಿಃ ಶಂಭುಂ ಮಾಮೇವ ಶಿವಮವ್ಯಯಂ ।
ಭೂಯಃ ಪ್ರಣಮ್ಯ ಬಹುಧಾ ತಸ್ಥೌ ಸ ನತಕಂಧರಃ ॥೫೮೧॥

---

ಹಿಮವತ್ಪರ್ವತವೇ ಮೊದಲಾದ ಪರ್ವತಗಳು, ಆದಿಶೇಷನು, ಮತ್ತು ಅಷ್ಟದಿಗ್ಗಜಗಳು ಶಿವನ ಆಜ್ಞೆಯಿಂದಲೇ ಭೂಮಿಯು ಅತ್ತಿತ್ತ ಚಲಿಸದಂತೆ ಅದನ್ನು ಹೊತ್ತಿರುವುವು. ॥೫೭೭॥

ಶಿವನ ಆಜ್ಞೆಯಿಂದಲೇ ಅಗ್ನಿಯು ಪ್ರಜ್ವಲಿಸುತ್ತಿರುವನು. ಸುಖಕಾರಿಯಾದ ವಾಯುವು ತಂಪಾಗಿ ಬೀಸುತ್ತಿರುವುದು ಶಿವನ ಆಜ್ಞೆಯಿಂದಲೇ. ॥೫೭೮॥

ಪರಶಿವನ ಅನುಗ್ರಹದಿಂದಲೇ ದೇವೇಂದ್ರನು ಸ್ವರ್ಗಲೋಕವನ್ನು ರಕ್ಷಿಸುತ್ತಿರುವನು. ಬ್ರಹ್ಮನು ಜಗತ್ಸೃಷ್ಟಿಯನ್ನು ಮಾಡುವುದೂ ಈಶ್ವರಾನುಗ್ರಹದಿಂದಲೇ. ॥೫೭೯॥

ಈಶ್ವರಾನುಗ್ರಹದಿಂದಲೇ ನನಗೆ ಈ ವಿಷ್ಣುಪದವಿಯು ದೊರಕಿರುವುದು. ಶಿವನ ಅನುಗ್ರಹದಿಂದಲೇ ಶಂಭುವು ಶಿವಪದವಿಯನ್ನೇರಿದುದು. ॥೫೮೦॥

ವಿಷ್ಣುವು ನನ್ನನ್ನು ಹೀಗೆಂದು ಸ್ತುತಿಸಿ, ಪುನಃ ಅನೇಕ ಬಾರಿ ನನಗೆ ನಮಸ್ಕರಿಸಿ ಕತ್ತನ್ನು ಬಗ್ಗಿಸಿ ನನ್ನ ಮುಂದೆ ನಿಂತನು. ॥೫೮೧॥

ತತಶ್ಚ ಬಹುಕಾಲೀನಘೋರೋಗ್ರತಪಸಾ ಕೃಶಂ ।
ವಿಷ್ಣುಂ ಪ್ರತ್ಯುಕ್ತಮುಮಲಮೇತದೇವ ವಚೋಮಮ ॥೫೮೨॥

ತ್ವತ್ಕೃತೇನೋಗ್ರತಪಸಾ ಸಂತುಷ್ಟೋಽಸ್ಮಿ ಜನಾರ್ದನ ।
ವೃಣು ದಾಸ್ಯೇ ವರಂ ಶ್ರೇಷ್ಠಂ ಸ್ತೋತ್ರೇಣಾನೇನ ಚಾಧುನಾ॥೫೮೩॥

ಇತಿ ಪೃಷ್ಟಸ್ತತೋ ವಿಷ್ಣುಃ ಪ್ರಣಮ್ಯೇಶಂ ಕೃತಾಂಜಲಿಃ ।
ಯಯಾಚೇ ವರಮುತ್ಕೃಷ್ಟಂ ಶಿವೇ ಭಕ್ತಿರ್ದೃಢಾಸ್ತ್ವಿತಿ ॥೫೮೪॥

ವರೋತ್ತಮಂ ವರಂ ದೇಹಿ ವರದೋತ್ತಮ ಶಂಕರ ।
ಅಚಂಚಲಾ ಶಿವೇ ಭಕ್ತಿರ್ಮಮಾಸ್ತ್ವಿತಿ ಪುನಃ ಪುನಃ ॥೫೮೫॥

ಅಶಕ್ತೇನ ಮಯಾ ದೇವ ಸ್ವಲ್ಪಮೇವ ತಪಃಕೃತಂ ।
ಪ್ರಸನ್ನೋಽಪಿ ಕಥಂ ಶಂಭೋ ಕರುಣಾಕರ ಶಂಕರ ॥೫೮೬॥

---

ಬಳಿಕ ಬಹು ಕಾಲದ ವರೆಗೆ ಭಯಂಕರವಾದ ತಪಸ್ಸನ್ನಾಚರಿಸಿ, ಅದರಿಂದ ಕೃಶನಾದ ವಿಷ್ಣುವನ್ನು ಕುರಿತು ನಾನು ಹೀಗೆಂದೆನು. ॥೫೮೨॥

ಎಲೈ ವಿಷ್ಣುವೇ, ನೀನು ಆಚರಿಸಿದ ಉಗ್ರವಾದ ಆ ತಪಸ್ಸಿನಿಂದಲೂ ಮತ್ತು ನೀನು ಮಾಡಿದ ಸ್ತೋತ್ರದಿಂದಲೂ ನಾನು ಸಂತೋಷಗೊಂಡಿರುವೆನು. ಉತ್ತಮವಾದ ಒಂದು ವರವನ್ನು ಯಾಚಿಸು, ಅದನ್ನು ಕೊಡುವೆನು. ॥೫೮೩॥

ಹೀಗೆನ್ನಲು, ತರುವಾಯ ವಿಷ್ಣುವು ಈಶ್ವರನಿಗೆ ನಮಸ್ಕರಿಸಿ, ಅಂಜಲಿ ಬದ್ಧನಾಗಿ ನಿಂತು "ತನಗೆ ಈಶ್ವರನಲ್ಲಿ ದೃಢವಾದ ಭಕ್ತಿಯುಂಟಾಗುವಂತೆ ಅನುಗ್ರಹಿಸು" ಎಂದು ವರವನ್ನು ಯಾಚಿಸಿದನು. ॥೫೮೪॥

ಆಗ ವಿಷ್ಣುವು ಹೀಗೆಂದನು.—ಓ, ಶಿವನೇ! ಭಕ್ತರಿಗೆ ಇಷ್ಟಾರ್ಥಗಳನ್ನು ನೀಡುವವನೇ! ನನಗೆ ಶ್ರೇಷ್ಠತಮವಾದ ಒಂದು ವರವನ್ನು ಕರುಣಿಸು. ನನಗೆ, ಈಶ್ವರನಲ್ಲಿ ನಿಶ್ಚಲವಾದ ಭಕ್ತಿಯುಂಟಾಗುವಂತೆ ವರವನ್ನು ಕೊಡು. ॥೫೮೫॥

ಓ, ದಯಾಸಾಗರನಾದ ಶಂಕರನೇ! ಅಸಮರ್ಥನಾದ ನಾನು, ಅಲ್ಪವಾದ ತಪಸ್ಸನ್ನು ಆಚರಿಸಿರುವೆನು. ಅಷ್ಟಕ್ಕೇ ಭಕ್ತವತ್ಸಲನಾದ ನೀನು, ನನಗೆ ಪ್ರಸನ್ನನಾದೆ. ॥೫೮೬॥

ದೀನಬಂಧೋ ದಯಾಸಿಂಧೋ ಪ್ರಸನ್ನೋಽಸಿ ಕಥಂ ಮಮ ।
ಮಯಾ ಪೂಜಾವಿಧಿಃ ಸಮ್ಯಕ್ತ್ವನ ನ ಜ್ಞಾಯತೇ ಶಿವ ॥೫೮೭॥

ತವ ಸ್ವರೂಪಂ ನ ಜ್ಞಾತಂ ತತ್ತ್ವತೋಽಮೇಯ ವಿಕ್ರಮ ।
ತಾದೃಶಸ್ಯ ಮಮಾದ್ಯೈವ ಪ್ರಸನ್ನಃ ಕಥಮೀಶ್ವರ ॥೫೮೮॥

ವೇದೈರಪಿ ನ ತೇ ತತ್ತ್ವಂ ಜ್ಞಾತಮಸ್ತಿ ಮಹೇಶ್ವರ ।
ತಾದೃಶಂ ಶಿವತತ್ತ್ವಂ ತೇ ಕಥಂ ಜ್ಞೇಯಂ ಮಯಾಧುನಾ ॥೫೮೯॥

ತ್ವದನ್ಯಃ ಕರುಣಾಸಿಂಧುರ್ಲೋಕೇ ನಾಸ್ತ್ಯೇವ ಸರ್ವಥಾ ।
ಯದಲ್ಪೇನಾಪಿ ತಪಸಾ ಪ್ರೀತೋಽಸಿ ಭಗವಂಛಿವ ॥೫೯೦॥

ತ್ವದನ್ಯಂ ಶರಣಂ ನಾಸ್ತಿ ತ್ವಮೇವ ಶರಣಂ ಮಮ ।
ರಕ್ಷ ರಕ್ಷ ಮಹಾದೇವ ರಕ್ಷ ರಕ್ಷ ಶಿವಾಪತೇ ॥೫೯೧॥

---

ಓ, ಶಿವನೇ! ದೀನಬಂಧುವೇ! ಕರುಣಾಸಿಂಧುವೇ! ನಾನು ನಿನ್ನನ್ನು ಪೂಜಿಸುವ ವಿಧಾನವನ್ನು ಅರಿತಿರುವುದಿಲ್ಲ. ಆದರೂ ನೀನು ನನ್ನಲ್ಲಿ ದಯೆದೋರಿ, ಪ್ರಸನ್ನನಾದೆ. ಇದಲ್ಲವೇ ನಿನ್ನ ಭಕ್ತವಾತ್ಸಲ್ಯ! ॥೫೮೭॥

ಓ, ಅಮಿತ ಪರಾಕ್ರಮಿಯೇ! ನಿನ್ನ ಸ್ವರೂಪವನ್ನು ನಿಜವಾಗಿಯೂ ನಾನು ತಿಳಿದಿರುವುದಿಲ್ಲ. ಹಾಗಿದ್ದರೂ, ಅಂತಹ ಅಜ್ಞಾನಿಯಾದ ನನ್ನಲ್ಲಿ ಇದೀಗಲೇ ಪ್ರಸನ್ನನಾಗಿರುವೆಯಲ್ಲ. ಇದು ನನ್ನ ಸದ್ಭಾಗ್ಯವಲ್ಲವೇ! ॥೫೮೮॥

ಓ, ಮಹೇಶ್ವರನೇ! ನಿನ್ನ ಸ್ವರೂಪವನ್ನು ವೇದಗಳೂ ಸಹ ಅರಿತಿರುವುದಿಲ್ಲ. ನಿನ್ನ ಅಗಾಧವಾದ ಅಂತಹ ತತ್ತ್ವವನ್ನು, ನಮ್ಮಂತಹ ಅಜ್ಞಾನಿಗಳು, ಅರಿಯಲು ಸಾಧ್ಯವೇ! ॥೫೮೯॥

ಲೋಕದಲ್ಲಿ ನಿನ್ನಂತೆ ದಯಾಸಾಗರನಾದ ಇನ್ನೊಬ್ಬ ದೇವತೆಯು ಇರುವುದಿಲ್ಲ. ಏಕೆಂದರೆ, ನೀನು ಅಲ್ಪವಾದ ತಪಸ್ಸಿಗೂ, ಸಹ ಮೆಚ್ಚಿ ಪ್ರಸನ್ನನಾಗಿರುವೆ. ॥೫೯೦॥

ನಿನ್ನಂತೆ ಶರಣಾಗತರನ್ನು ರಕ್ಷಿಸುವವನು, ಇನ್ನೊಬ್ಬನಿರುವುದಿಲ್ಲ. ಆದುದರಿಂದ ನಾನು ನಿನ್ನನ್ನೇ ಮರೆಹೋಗುವೆನು, ಓ, ಮಹಾದೇವನೇ, ಉಮಾರಮಣನೆ, ನನ್ನನ್ನು ರಕ್ಷಿಸು. ॥೫೯೧॥

ತ್ವದೀಯಪಾದಕಮಲಂ ನಿಧೇಹಿ ಮಮ ಮೂರ್ಧನಿ ।
ಧನ್ಯೋಽಸ್ಮಿ ಕೃತಕೃತ್ಯೋಽಸ್ಮಿ ಮತ್ತೋ ಧನ್ಯೋ ನ ವಿದ್ಯತೇ ॥೫೯೨॥

ಯನ್ನ ವೇದ ಪುರಾಣಾದ್ಯೈರ್ದೃಷ್ಟಂ ಯತ್ಪಾದಪಂಕಜಂ ।
ತದೇವಾದ್ಯ ಮಯಾ ದೃಷ್ಟಂ ಭಾಗ್ಯಸ್ಯಾಂತೋ ನ ಮೇ ಶಿವ ॥೫೯೩॥

ಯನ್ನ ಸಿದ್ಧೈರ್ಮುನಿವರ್ಯೈಃ ಕಪಿಲಾದ್ಯೈರ್ನಿರೀಕ್ಷಿತಂ ।
ತಾದೃಶಂ ಶಂಕರಸ್ಯೈತದ್ದೃಷ್ಟಂ ಪಾದಾಂಬುಜಂ ಮಯಾ ॥೫೯೪॥

ಇತ್ಯುಕ್ತ್ವಾ ಪತಿತಂ ಸಮ್ಯಕ್ಪಾದಮೂಲೇ ಜನಾರ್ದನಂ ।
ಉತ್ಥಾಪ್ಯಾಂಗಂ ವಿಮೃಶ್ಯಾಥ ದತ್ತಾಶ್ಚ ಬಹವೋ ವರಾಃ ॥೫೯೫॥

ವೈಕುಂಠಾಖ್ಯಂ ಮಹತ್ಸ್ಥಾನಂ ಸೃಷ್ಟಂ ಪೂರ್ವಂ ಮಯಾ ಶುಭೇ ।
ತದಾಧಿಪತ್ಯಂ ಸುಖದಂ ತದಾ ದತ್ತಂ ಮಯಾ ಶುಭೇ ॥೫೯೬॥

---

ನಿನ್ನ ಅಡಿದಾವರೆಯನ್ನು ನನ್ನ ಶಿರಸ್ಸಿನಮೇಲೆ ಇರಿಸು. ದೇವ! ಈಗ ನಾನೇ ಭಾಗ್ಯಶಾಲಿಯೂ ಕೃತಾರ್ಥನೂ ಆಗಿರುವೆನು. ನನ್ನಂತೆ ಭಾಗ್ಯಶಾಲಿಯಾದವನು ಇನ್ನೊಬ್ಬನಿರುವುದಿಲ್ಲ. ॥೫೯೨॥

ನಿನ್ನ ಯಾವ ಅಡಿದಾವರೆಯನ್ನು ವೇದಗಳಾಗಲಿ, ಪುರಾಣಗಳಾಗಲಿ, ನೋಡಿರುವುದಿಲ್ಲವೋ, ಅದೇ ಪಾದಕಮಲವನ್ನು ಇದೀಗ ನಾನು ನೋಡುತ್ತಿರುವೆನು. ನನ್ನ ಭಾಗ್ಯಕ್ಕೆ ಎಲ್ಲೆಯೇ ಇರುವುದಿಲ್ಲ. ॥೫೯೩॥

ಯಾವ ನಿನ್ನ ಪಾದಕಮಲವನ್ನು, ಸಿದ್ಧರೂ, ಕಪಿಲಾದಿ ಮುನಿಗಳೂ, ಇದುವರೆಗೂ ನೋಡಿರುವುದಿಲ್ಲವೋ, ಅಂತಹ, ಶಿವನ ಅಡಿದಾವರೆಯನ್ನು ನಾನು ನೋಡಿದೆನು. ॥೫೯೪॥

ಹೀಗೆಂದು ಹೇಳಿ, ಪಾದಗಳಿಗೆರಗಿದ ವಿಷ್ಣುವನ್ನು ಮೇಲಕ್ಕೆಬ್ಬಿಸಿ, ಮೈಯ್ಯನ್ನು ತಡವರಿಸಿ, ಅನೇಕ ವರಗಳನ್ನು ದಯಪಾಲಿಸಿದೆನು. ॥೫೯೫॥

ದೇವಿ! ಈ ಹಿಂದೆ ನಾನು, ವೈಕುಂಠವೆಂಬ ಹೆಸರುಳ್ಳ, ಪೂಜ್ಯವಾದ ಒಂದು ಸ್ಥಲವನ್ನು ಸೃಷ್ಟಿಸಿದ್ದೆನು. ಸುಖಕರವಾದ ಆ ಸ್ಥಲದ ಪ್ರಭುತ್ವವನ್ನು ವಿಷ್ಣುವಿಗೆ ಕೊಟ್ಟೆನು. ಇದು ಮೊದಲನೆಯ ವರ. ॥೫೯೬॥

ಲೋಕಾನ್ಧರ್ಮೇಣ ಸತತಂ ಪಾಲಯೇತಿ ವರಃ ಪರಃ ।
ದತ್ತಸ್ತದೇವ ಸಂತೋಷಾದದೇಯೋ ದುರ್ಲಭೋ ಮಯಾ॥೯೮॥

ತದಾನೀಂ ಪೂಜಯಾಮಾಸ ಕಮಲೈರಮಲೈಃ ಸ ಮಾಂ ।
ಸಹಸ್ರನಾಮಮಂತ್ರೈಸ್ತೈಃ ಪ್ರತಿತನ್ನಾಮಸಂಖ್ಯಯಾ ॥೯೯॥

ತದ್ಭಕ್ತಿದರ್ಶನಾರ್ಥಾಯ ತದೇಕಂ ಕಮಲಂ ಮಯಾ ।
ದೂರೀಕೃತಂ ತದೈಕೋನನಾಮಸಂಖ್ಯಾ ಬಭೂವ ಚ ॥೬೦೦॥

ತದಾ ವಿಚಾರ್ಯ ಕಮಲಮಲಬ್ಧ್ವೈವ ಮುದಾದರಾತ್ ।
ಸ್ವನೇತ್ರಕಮಲೇನೈವ ನಾಮಸಂಖ್ಯಾಮಪೂರಯತ್ ॥೬೦೧॥

ತದಾತ್ಯಂತಮಭೂತ್ಪ್ರೀತಿರ್ಮಮ ತಸ್ಮಿನ್ಸ್ವರಾನನೇ ।
ತತೋ ನೇತ್ರಂ ಮಯಾ ದತ್ತಂ ಪುಂಡರೀಕನಿಭಂ ತದಾ ॥೬೦೨॥

---

ಬಳಿಕ, ವೈಕುಂಠಲೋಕದಲ್ಲಿ ವಾಸವಾಗಿದ್ದು, ನಿರಂತರವೂ ಧರ್ಮನಿರತನಾಗಿ ಪ್ರಜೆಗಳನ್ನು ಪರಿಪಾಲಿಸು'' ಎಂದು ಸಂತೋಷದಿಂದ ಮತ್ತೊಂದು ವರವನ್ನಿತ್ತೆನು. ಅದು ಇತರರಿಗೆ ಅತ್ಯಂತ ದುರ್ಲಭವಾಗಿರುವುದು. ॥೯೮॥

ಆಗ ವಿಷ್ಣುವು, ಶಿವಸಹಸ್ರನಾಮಗಳನ್ನು ಪಠಿಸಿ, ಪ್ರತಿಯೊಂದು ನಾಮಕ್ಕೂ ಒಂದೊಂದು ಕಮಲದ ಪುಷ್ಪದಂತೆ, ಸಹಸ್ರಪುಷ್ಪಗಳಿಂದ ನನ್ನನ್ನು ಪೂಜಿಸಿದನು. ॥೯೯॥

ಆಗ, ನಾನು ಅವನ ಭಕ್ತಿಯನ್ನು ಪರೀಕ್ಷಿಸುವುದಕ್ಕೋಸ್ಕರ, ವಿಷ್ಣುವು ಪೂಜೆಗೋಸ್ಕರ ತಂದಿರಿಸಿದ ಸಹಸ್ರ ಕಮಲಗಳಲ್ಲಿ ಒಂದು ಕಮಲ ಪುಷ್ಪವನ್ನು, ಅವನಿಗೆ ಕಣ್ಮರೆಯಾಗುವಂತೆ ಮಾಡಿದೆನು. ಕ್ರಮವಾಗಿ ಒಂಭೈನೂರ ತೊಂಬತ್ತೊಂಬತ್ತು ನಾಮಗಳು ಮುಗಿದುವು. ॥೬೦೦॥

ಕೊನೆಯಲ್ಲಿ, ನಾಮಪೂಜೆಗೆ ಒಂದೇ ಒಂದು ಕಮಲವು ಕಡಿಮೆಯಾಗಲು, ಅದನ್ನು ಬಹುಕಾಲದವರೆಗೆ ಹುಡುಕಿ ಅದು ಸಿಕ್ಕದಿರಲು, ಆಗ, ತನ್ನದೊಂದು ಕಣ್ಣನ್ನೇ, ಕಳೆದುಹೋದ ಆ ಕಮಲದ ಸ್ಥಾನದಲ್ಲಿರಿಸಿ, ಅದರಿಂದ ನನ್ನನ್ನು ಪೂಜಿಸಿ, ಸಹಸ್ರನಾಮ ಪೂಜೆಯನ್ನು ಮುಗಿಸಿದನು. ॥೬೦೧॥

ಎಲೌ, ಸುಮುಖಿಯೇ! ಆಗ ನನಗೆ ಅವನ ಮೇಲಿದ್ದ ಪ್ರೀತಿಯು,

ಪುಂಡರೀಕಾಕ್ಷಮಿತ್ಯೇಕಂ ನಾಮ ಲಬ್ಧಂ ಚ ವಿಷ್ಣುನಾ ।
ತೇನ ಘೋರತರ ಸ್ತಪ್ತಂ ತಪಸ್ತತ್ಫಲಮೀದೃಶಂ ॥೬೦೩॥

ತೇನೈವ ವಿಷ್ಣುನಾ ತತ್ರ ಚಕ್ರಂ ಲಬ್ಧಂ ವರಾನನೇ ।
ಸುದರ್ಶನಾಖ್ಯಮಮಲಂ ಕೋಟಿಸೂರ್ಯಸಮಪ್ರಭಂ ॥೬೦೪॥

ತೇನೈವ ಸರ್ವಶತ್ರೂಣಾಂ ವಿನಾಶಂ ಸ ಕರಿಷ್ಯತಿ ।
ಪುರಾ ಮದಂಘ್ರಿಲೇಖಾಭಿಃ ಸೃಷ್ಟಂ ತಚ್ಚಕ್ರಮುತ್ತಮಂ ॥೬೦೫॥

ವರೋಽನ್ಯೋ ಯಾಚಿತಸ್ತೇನ ಸರ್ವಲೋಕಹಿತಾವಹಃ ।
ಇದಂ ಪಾಪಹರಂ ಭೂಯಃ ಕುಂಡಮಸ್ತ್ವಿತಿ ಸಾದರಂ ॥೬೦೬॥

---

ಇಮ್ಮಡಿಸಿತು. ಬಳಿಕ, ಕಮಲದಂತೆ ಸುಂದರವಾದ ಒಂದು ನೇತ್ರವನ್ನು ಅವನಿಗೆ ದಯಪಾಲಿಸಿದೆನು. ||೬೦೨||

ಆಗ ವಿಷ್ಣುವಿಗೆ ಪುಂಡರೀಕಾಕ್ಷನೆಂಬ, ಒಂದು ನಾಮಧೇಯವು ದೊರಕಿತು. ಅವನು ಅತ್ಯಂತ ಉಗ್ರವಾದ ತಪಸ್ಸನ್ನಾಚರಿಸಿದನು. ಆದುದರಿಂದಲೇ ಅವನಿಗೆ ಆ ತಪಸ್ಸಿಗೆ ಅನುಗುಣವಾದ ಫಲವು ದೊರಕಿತು. ||೬೦೩||

ಬಳಿಕ ಅವನು, ಕೋಟಿ ಸೂರ್ಯರಿಗೆ, ಸಮಾನವಾದ ತೇಜಸ್ಸಿನಿಂದ ಶೋಭಿಸುವ ಸುದರ್ಶನವೆಂಬ ಹೆಸರಿನಿಂದ ಪ್ರಸಿದ್ಧವಾದ ಒಂದು ಚಕ್ರವನ್ನೂ ನನ್ನ ಅನುಗ್ರಹದಿಂದ ಪಡೆದನು. ||೬೦೪||

ಆ ಚಕ್ರದಿಂದಲೇ ಅವನು ತನ್ನ ಸಕಲ ಶತ್ರುಗಳನ್ನೂ ಸಂಹರಿಸುವನು. ಹಿಂದೆ ನಾನು, ನನ್ನ ಪಾದರೇಖೆಗಳಿಂದ, ಶ್ರೇಷ್ಠವಾದ ಆ ಚಕ್ರವನ್ನು ಸೃಷ್ಟಿಸಿದ್ದೆನು. ||೬೦೫||

ಬಳಿಕ, ಅವನು ಲೋಕಕಲ್ಯಾಣಕರವಾದ, ಇನ್ನೊಂದು ವರವನ್ನು ಯಾಚಿಸಿದನು. ಅದು ಈ ಪ್ರಕಾರವಾಗಿದ್ದಿತು. "ನಾನು ಕಾಶೀಕ್ಷೇತ್ರದಲ್ಲಿ ನಿರ್ಮಿಸಿದ ಈ ಕೊಳವು, ಸಕಲ ಪಾಪಗಳನ್ನೂ ಹೋಗಲಾಡಿಸುವಂತೆ ಮಾಡು" ಎಂದು ಅವನು ಯಾಚಿಸಿದ ಎರಡನೆಯ ವರ. ||೬೦೬||

ಇದಂ ಮಣಿಗಣಾಕೀರ್ಣಂ ಮಣಿಕರ್ಣೀಸಮನ್ವಿತಂ ।
ಮಣಿಕರ್ಣೀತಿ ವಿಖ್ಯಾತಂ ಕುಂಡಂ ಯಾತು ಜಗತ್ಪ್ರಭೋ ॥೬೦೭॥

ಅತ್ರೈವ ಮಜ್ಜನಾದೇವ ಮುಕ್ತಾ ಯಾಂತು ಜನಾಃ ಸದಾ ।
ಸ್ಮರಣೇನಾಪಿ ಪಾಪಾನಾಂ ವಿನಾಶೋ ಭವತು ಪ್ರಭೋ ॥೬೦೮॥

ಯಃ ಕರೋತಿ ಪಿತೃಶ್ರಾದ್ಧಂ ಏತತ್ತೀರೇ ಮನೋಹರೇ ।
ಯಾಂತು ತತ್ಪಿತರಃ ಸರ್ವೇ ಬ್ರಹ್ಮಲೋಕಂ ಪ್ರತಿ ಪ್ರಭೋ ॥೬೦೯॥

ಯಸ್ತ್ವತ್ರ ಶೈವಃ ಪುಣ್ಯಾತ್ಮಾ ತನುತ್ಯಾಗಂ ಕರಿಷ್ಯತಿ ।
ಶೈವಂ ಪಂಚಾಕ್ಷರಂ ತ್ವತ್ತಃ ಸಾ ಸಮಾಪ್ನೋತು ಶಂಕರ ॥೬೧೦॥

ತತಶ್ಚ ತ್ವತ್ಪ್ರಸಾದೇನ ಸ ಮೋಕ್ಷಮಧಿಗಚ್ಛತು ।
ಅಕ್ಲೇಶೇನೈವ ದೇವೇಶ ಪುನರಾವೃತ್ತಿವರ್ಜಿತಂ ॥೬೧೧॥

---

ಆಗ ವಿಷ್ಣುವು, ಹೀಗೆಂದು ಯಾಚಿಸಿದನು.—ಓ, ಜಗತ್ಪ್ರಭುವೆ! ಮಣಿಕರ್ಣಿಕೆಯಿಂದ, ಯುಕ್ತವಾದ ಈ ಕುಂಡವು "ಮಣಿಕರ್ಣಿಕಾ" ಎಂಬ ಹೆಸರಿನಿಂದ ಪ್ರಸಿದ್ಧಿಯನ್ನು ಹೊಂದುವಂತೆ, ಅನುಗ್ರಹಿಸು. ॥೬೦೭॥

ಓ, ಸ್ವಾಮಿಯೇ! ಈ ಕುಂಡದಲ್ಲಿ ಒಂದೇ ಒಂದು ಬಾರಿ ಸ್ನಾನವನ್ನಾಚರಿಸುವವರೂ ಸಹ, ಅದರಿಂದಲೇ, ಪವಿತ್ರರಾಗಿ ಮುಕ್ತರಾಗುವಂತೆ ಮಾಡು. ಇದನ್ನು ಸ್ಮರಿಸಿದ ಮಾತ್ರದಿಂದಲೇ ಅವರ ಸಕಲ ಪಾಪಗಳೂ ನಾಶವನ್ನು ಹೊಂದುವಂತೆ ಮಾಡು. ॥೬೦೮॥

ಯಾವ ಮನುಜನು ಈ ಕುಂಡದ ತೀರದಲ್ಲಿ ಪಿತೃಶ್ರಾದ್ಧವನ್ನಾಚರಿಸುವನೋ, ಅವನ ಪಿತೃಗಳೆಲ್ಲರೂ ಬ್ರಹ್ಮಲೋಕವನ್ನು ಕುರಿತು ತೆರಳಲಿ. ॥೬೦೯॥

ಓ, ಶಂಕರನೇ! ಯಾವ ಭಾಗ್ಯಶಾಲಿಯಾದ ಮನುಷ್ಯನು ಶಿವಧ್ಯಾನಪರಾಯಣನಾಗಿ ಈ ಕ್ಷೇತ್ರದಲ್ಲಿ ಶರೀರವನ್ನು ತ್ಯಜಿಸುವನೋ ಅವನು, ನಿನ್ನ ದೆಸೆಯಿಂದ ಶಿವಪಂಚಾಕ್ಷರ ಮಂತ್ರದ ಉಪದೇಶವನ್ನು ಪಡೆಯಲಿ. ॥೬೧೦॥

ಬಳಿಕ ಅವನು ನಿನ್ನ ಅನುಗ್ರಹದಿಂದ, ನಿರ್ವಿಘ್ನವಾಗಿ, ಪುನರಾವೃತ್ತಿರಹಿತವಾದ ಮೋಕ್ಷವನ್ನು ಪಡೆಯಲಿ. ॥೬೧೧॥

ಇತಿ ಪೃಷ್ಟೋ ವರಸ್ತೇನ ಸರ್ವೇ ದತ್ತಾನುಯಾ ವರಾಃ ।
ತದಾ ಮಂದಾರಕುಸುಮ್ಯೈರಭೂದ್ವೃಷ್ಟಿರ್ಮನೋಹರಾ ॥೬೧೨॥

ವೈಕುಂಠಲೋಕಂ ಸಂಪ್ರಾಪ್ಯ ತದನುಪ್ರೀತಮಾನಸಃ ।
ಪೂಜಯಿತ್ವೈವ ಮಾಂ ಸಮ್ಯಗಭಿವಾದ್ಯ ಪುನಃ ಪುನಃ ॥೬೧೩॥

ಅಂತರ್ಗೃಹೇ ವಾಸಮನನ್ಯಲಬ್ಧಂ
ಲಬ್ಧ್ವಾ ತಪಸ್ಯಾಂ ಯದಿ ಸಾವಧಾನಂ ।
ಕರೋತಿ ಯಃ ಕಶ್ಚನ ಶೈವವರ್ಯಃ
ತಸ್ಮೈ ವರೋ ದೀಯತ ಏವಮಿಷ್ಟಃ ॥೬೧೪॥

ಇತಿ ಶ್ರೀಶಿವರಹಸ್ಯೇ ಸಪ್ತಮಾಂಶೇ ಕಾಶೀಮಾಹಾತ್ಮ್ಯೇ ವಿಷ್ಣುವರಪ್ರಾಪ್ತಿ ಕಥನಂ ನಾಮ ಏಕಾದಶೋಽಧ್ಯಾಯಃ

---

ವಿಷ್ಣುವು ಈರೀತಿಯಲ್ಲಿ ವರವನ್ನು ಯಾಚಿಸಲು ನಾನು ಅವನಿಗೆ ಸಕಲ ವರಗಳನ್ನೂ ದಯಪಾಲಿಸಿದೆನು. ಆಗ, ದೇವಲೋಕದಿಂದ ನಯನಮನೋಹರವಾದ ಮಂದಾರಪುಷ್ಪಗಳ ವೃಷ್ಟಿಯುಂಟಾಯಿತು. ॥೬೧೨॥

ಬಳಿಕ ವಿಷ್ಣುವು ನನ್ನನ್ನು ಪುನಃ ಪೂಜಿಸಿ, ಮತ್ತೆ ಮತ್ತೆ ನಮಸ್ಕರಿಸಿ, ವೈಕುಂಠಲೋಕಕ್ಕೆ ತೆರಳಿ ಅಲ್ಲಿ ಸಂತೋಷದಿಂದಿರುವನು. ॥೬೧೩॥

ಯಾವ ಭಕ್ತನು, ಕಾಶೀಕ್ಷೇತ್ರದಲ್ಲಿರುವ ಅಂತರ್ಗೃಹದಲ್ಲಿ ವಾಸವಾಗಿದ್ದು, ಚಿತ್ತೈಕಾಗ್ರ್ಯದಿಂದ ನನ್ನನ್ನು ಕುರಿತು ತಪಸ್ಸನ್ನಾಚರಿಸುವನೋ ಅಂತಹ ಭಕ್ತನಿಗೆ ನಾನು ಈ ರೀತಿಯಾದ ವರವನ್ನು ದಯಪಾಲಿಸುವೆನು. ಎಂದು ಪರಶಿವನು ಪಾರ್ವತಿಗೆ ಬೋಧಿಸಿದುದನ್ನು ಕುಮಾರಸ್ವಾಮಿಯು ಜೈಗೀಷವ್ಯಾದಿಗಳಿಗೆ ಶ್ರುತಪಡಿಸಿದನು. ॥೬೧೪॥

ಇಲ್ಲಿಗೆ ಶ್ರೀಶಿವರಹಸ್ಯದ ಏಳನೆಯ ಅಂಶದಲ್ಲಿ ಕಾಶೀಮಾಹಾತ್ಮ್ಯೆಯನ್ನು ಹೇಳುವ ಸಂದರ್ಭದಲ್ಲಿ ವಿಷ್ಣುವಿನ ವರಪ್ರಾಪ್ತಿಯ ಕಥನವೆಂಬ ಹನ್ನೊಂದನೆಯ ಅಧ್ಯಾಯವು ಮುಗಿದುದು.

ಶ್ರೀ ಶಿವಃ ಪ್ರಿಯತಾಂ